

ಶ್ರೀವಾದಿರಾಜ ಶ್ರೀಚರಣವಿರಚಿತ

# ತೀರ್ಥಪ್ರಬಂಧ

(ಮೂಲ, ಪ್ರತಿಪದಾರ್ಥ, ಅನುವಾದ, ವಿವರಣೆಗಳ ಸಮೇತ)

ಸಂಪಾದನೆ, ಅನುವಾದ :

ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯ

ಪ್ರಕಾಶನ :

ಐತರೇಯ ಪ್ರಕಾಶನ ವ್ಯಾಸನಕೆರೆ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

'ಪಾಜಕ', ೮೯/೨೪, ೩ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್

ಹನುಮಂತನಗರ, ಬೆಂಗಳೂರು - ೫೬೦ ೦೧೯.

**Thirthaprabandha** : Edited with an introduction, translation and explanatory notes by Vidyāvācaspati, Darśanaratnam, Pravacanācārya, Sacchāstra-vicakṣaṇaratnam, Śāstrapravacanakesari, Madhvamatavardhana, Vidvaccūḍāmaṇi, Vedavidyāvicakṣaṇa, Paṇḍitaratnam, Vidyāvāridhi, Sacchāstrapravacanapravīṇa, Gītāratnākara, Tattvavācaspati, Jnānaratnākara (and Recipient of Karnataka State Sanskrit Award-1999 & **Karnataka Rajyotsava Award-2002**, **Śrī Vidyāmānya Mahāpraśasti** of Śrī Pejavar Math, Udupi and **Rashtrapati Award - 2005) Dr. Vyasanakere Prabhanjanacharya**, M.A., Ph.D., D.Litt., F.I.B.R., F.U.W.A., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyasanakere**, Publication wing of **Śrī VyāsaMadhva Samśodhana Pratiṣṭhāna** Pājaka, No.87/24, Third Main, First Cross, Mount Joy Extension, Hanumanthanagar, Bangalore - 560019. Pages: 32 + 328(360)

Phone : 26602802; 26611011.

Internet : www.vyasamadhwa.org

E-mail : info@vyasamadhwa.org



Fourth Revised Edition : 2010

Price :

Typeset by :

**Śrī Vyāsa Madhva Samśodhana Pratiṣṭhāna(Regd),**

Printed at :

**Vāgartha,** N.R. Colony, Bangalore, Ph: 22427677

# ವಿಷಯಾನುಕ್ರಮಣಿಕೆ

## ೨. ಉತ್ತರ ಪ್ರಬಂಧ (೧೨೩-೧೯೬)



## ೩. ಪೂರ್ವ ಪ್ರಬಂಧ (೧೯೭- ೨೪೪)



## ೪. ದಕ್ಷಿಣ ಪ್ರಬಂಧ (೨೪೫-೨೯೯)

*****



*****

# ಮುನ್ನುಡಿ

ತೀರ್ಥಪ್ರಬಂಧಕೃತಿಯು ಭರತಖಂಡದ ಪುರಾಣಪ್ರಸಿದ್ಧವಾದ ಬಗೆಬಗೆಯ ತೀರ್ಥಕ್ಷೇತ್ರಗಳ ಬಗ್ಗೆ ಬೆಳಕು ಚೆಲ್ಲುವ ಅಪೂರ್ವ ಕೃತಿ. ಸಮಗ್ರಸಂಸ್ಕೃತಸಾಹಿತ್ಯದಲ್ಲಿಯೇ ಅನನ್ಯವೆನ್ನಿಸುವ ಹಿರಿಮೆ ಇದರದು. ಇದನ್ನು ರಚನೆ ಮಾಡಿದ ಮಹನೀಯರು ವಿಶ್ವಖ್ಯಾತಿಯ ಮಹೋನ್ನತವ್ಯಕ್ತಿತ್ವದ ಶ್ರೀವಾದಿರಾಜತೀರ್ಥಶ್ರೀಚರಣರು.

## [1]ಶ್ರೀವಾದಿರಾಜಸ್ವಾಮಿಗಳು(೧೪೮೦ - ೧೬೦೦)

[2]ಶ್ರೀವಾದಿರಾಜಸ್ವಾಮಿಗಳು ದ್ವೈತವೇದಾಂತದ ಮಹಾವಿಭೂತಿಗಳಲ್ಲಿ ಒಬ್ಬರು. ಮುನಿತ್ರಯರೆಂದು ಪ್ರಸಿದ್ಧವಾಗಿರುವ ಆಚಾರ್ಯಶ್ರೀಮಧ್ವರು (೧೧೯೯-೧೨೭೮), ಶ್ರೀಜಯತೀರ್ಥರು (೧೩೪೧-೧೩೮೮) ಮತ್ತು ಶ್ರೀವ್ಯಾಸರಾಜರ (೧೪೬೦-೧೫೩೯) ಅನಂತರದ ಅಗ್ರಮಾನ್ಯ ಗ್ರಂಥಕಾರರೆಂಬುದು ಇವರ ಪ್ರಶಸ್ತಿ.

ಒಟ್ಟು ೧೨೦ ವರ್ಷಗಳ(೧೪೮೦-೧೬೦೦) ದೀರ್ಘಬಾಳನ್ನು ಬಾಳಿದ ವೈಷ್ಣವಯತಿಗಳು ಇವರ ವಿಶೇಷ ಹಿರಿಮೆ. ಬ್ರಹ್ಮಚರ್ಯದಿಂದ ನೇರವಾಗಿ ಪರಮಹಂಸಾಶ್ರಮ ಸ್ವೀಕರಿಸಿದ ಇವರ ಸನ್ಯಾಸಜೀವನವೇ ಸುಮಾರು ೧೧೨ ವರ್ಷಗಳಷ್ಟು ದೀರ್ಘವಾಗಿತ್ತು. ಇಷ್ಟು ದೀರ್ಘಕಾಲ ಸಂನ್ಯಾಸಾಶ್ರಮ ನಿರ್ವಹಿಸಿದ ಮತ್ತೊಬ್ಬ ಯತಿಯನ್ನು ಇತಿಹಾಸ ಕಂಡಿಲ್ಲ.

ಶ್ರೀಮಧ್ವಮುನಿಗಳ ಸಹೋದರರೂ ಮಹಾತಪಸ್ವಿಗಳೂ ಆದ ಶ್ರೀವಿಷ್ಣುತೀರ್ಥರನ್ನು ಪ್ರಥಮ ಪೀಠಾಧೀಶರನ್ನಾಗಿ ಹೊಂದಿದ ಉಡುಪಿಯ ಅಷ್ಟಮಠಗಳಲ್ಲಿ ಒಂದಾದ

---

೧. ಶ್ರೀವಾದಿರಾಜಸ್ವಾಮಿಗಳ ಜೀವನ, ಕೃತಿಗಳು, ಅವರ ಕೃತಿಗಳ ಆದ್ಯಂತಶ್ಲೋಕಗಳು, ಅವರ ಸಮಗ್ರ ಸ್ತೋತ್ರಕೃತಿಗಳು, ಆಯ್ದ ಕೀರ್ತನೆ, ಸುಳಾದಿ, ಉಗಾಭೋಗಗಳು ಮೊದಲಾದವುಗಳನ್ನು ನಮ್ಮ ಪ್ರಕಾಶನದ 'ಶ್ರೀವಾದಿರಾಜಕೃತಿಮಂಜರೀ' ಎಂಬ ಬೃಹತ್ಕೃತಿಯಲ್ಲಿ ಕಾಣಬಹುದು.

೨. ಇವರ ಸಾಕ್ಷಾಚ್ಛಿಷ್ಯರಾದ ಶ್ರೀರಘುನಾಥಾಚಾರ್ಯರ 'ವೃತ್ತರತ್ನಸಂಗ್ರಹ' (೩ ಪ್ರಬಂಧಗಳು - ೧೮೭ಶ್ಲೋಕಗಳು) ಎಂಬ ಕೃತಿಯು ಇವರ ಜೀವನ ಮತ್ತು ಸಾಧನೆಗಳ ಬಗ್ಗೆ ಸಾಕಷ್ಟು ವಿವರಗಳನ್ನು ಒದಗಿಸುವ ಅಪೂರ್ವಕೃತಿ. ಅನಂತರದ ಶ್ರೀರಾಮಚಂದ್ರಾಚಾರ್ಯರೆಂಬವರ 'ಶ್ರೀವಾದಿರಾಜಗುರುವರಚರಿತಾಮೃತ' (೯ಬಿಂದುಗಳು, ೪೩೮ಶ್ಲೋಕಗಳು) ಮತ್ತು ಷಟ್ಪುರಾಚಾರ್ಯರ ಶ್ರೀವಾದಿರಾಜಗುಣರತ್ನಮಾಲಾ(೧೧ ವಿಕಾಸಗಳು ಮತ್ತು ೭೪೧ ಶ್ಲೋಕಗಳು) ಕೃತಿಗಳಲ್ಲೂ ಶ್ರೀವಾದಿರಾಜರ ಬಗ್ಗೆ ಅನೇಕ ಉಪಯುಕ್ತ ವಿವರಗಳು ಸಂಕಲಿತವಾಗಿವೆ. ಅಲ್ಲದೆ ಇವರ ಬಗ್ಗೆ ರಚಿತವಾಗಿರುವ ಶ್ರೀವೇದವೇದ್ಯರು, ಶ್ರೀವೇದನಿಧಿಗಳು, ಶ್ರೀವಾದಿವಂದ್ಯರು, ಶ್ರೀಸತ್ಯಧರ್ಮರು ಮೊದಲಾದ ಮಹನೀಯರು ಬರೆದಿರುವ ಸ್ತೋತ್ರಗಳಲ್ಲೂ ಇವರ ಕಾವ್ಯಕೃತಿಗಳ ಪ್ರಮುಖ ವ್ಯಾಖ್ಯಾತೃಗಳಾದ ಶ್ರೀನಾರಾಯಣಾಚಾರ್ಯರ ಕೃತಿಗಳ ಆದ್ಯಂತಗಳಲ್ಲೂ ಶ್ರೀವಾದಿರಾಜರ ಹಿರಿಮೆಯನ್ನು ತಿಳಿಸುವ ಸಾಕಷ್ಟು ವಿವರಗಳಿವೆ(ನಮ್ಮ ಐತರೇಯಪ್ರಕಾಶನದ ಶ್ರೀವಾದಿರಾಜಸ್ತೋತ್ರಮಂಜರಿಯಲ್ಲಿ ಇವುಗಳ ಬಗ್ಗೆ ಹೆಚ್ಚಿನ ವಿವರಗಳನ್ನು ಕಾಣಬಹುದು).

ಸೋದೆಮಠವು ಶ್ರೀವಾದಿರಾಜರು ಅಲಂಕರಿಸಿದ ಗುರುಪೀಠ. ಶ್ರೀವಾಗೀಶತೀರ್ಥರಿಂದ ಸನ್ಯಾಸಪಡೆದ ಇವರು ಆ ಪೀಠದಲ್ಲಿ ಇಪ್ಪತ್ತನೆಯವರು.

ಶ್ರೀವಿದ್ಯಾನಿಧಿಗಳು ಮತ್ತು [೧]ಶ್ರೀವ್ಯಾಸರಾಜರಂತಹ [೨]ಮಹಾವಿದ್ವನ್ಮಣಿಗಳ ಬಳಿ ವಿವಿಧಶಾಸ್ತ್ರಗಳ ಅಧ್ಯಯನದ ಹಿನ್ನೆಲೆಯ ಇವರ ಸಾಧನೆ ಲೋಕೋತ್ತರವಾದುದು. ನೂರಾರು ಶಿಷ್ಯರಿಗೆ ಪಾಠ ಪ್ರವಚನಗಳನ್ನು ಮಾಡುತ್ತಲೇ ಅಂದಿನ ವಿಷಮರಾಜಕೀಯ ಪರಿಸ್ಥಿತಿಯಲ್ಲೂ [೩]ಸಮಗ್ರಭರತಖಂಡವನ್ನು ಸಂಚರಿಸಿ ವೈದಿಕಸಂಸ್ಕೃತಿಯ ಮಹತ್ತ್ವ, ತತ್ತ್ವಜ್ಞಾನದ ಆವಶ್ಯಕತೆ ಮತ್ತು ವೈಷ್ಣವಸಿದ್ಧಾಂತದ ಹಿರಿಮೆಗಳನ್ನು ಪ್ರಚುರಪಡಿಸಿದ ಇವರ ಕರ್ತೃತ್ವಶಕ್ತಿ ಅದ್ಭುತವಾದುದು.

ತಪಶ್ಶಕ್ತಿ ಮಂತ್ರಸಿದ್ಧಿ ಮತ್ತು ತತ್ತ್ವಜ್ಞಾನಗಳ ತ್ರಿವೇಣೀಸಂಗಮವಾಗಿದ್ದ ಇವರಿಗೆ ರಾಜಮಹಾರಾಜರುಗಳು[೪] ತಲೆಬಾಗಿದರು. ವಿಜಯನಗರದ ಚಕ್ರವರ್ತಿ ಎನ್ನಿಸಿದ ಕೃಷ್ಣದೇವರಾಯ (೧೫೦೯-೧೫೨೯) ಮತ್ತು ಅನಂತರದ ಅಚ್ಯುತದೇವರಾಯ (೧೫೨೫-೧೫೪೨)ರು ಶ್ರೀವಾದಿರಾಜರ ಪರಮಭಕ್ತರೆನ್ನಿಸಿದ್ದರೆಂದು ಇತಿಹಾಸದಿಂದ ತಿಳಿಯುತ್ತದೆ. ಸೋದೆಯ ಅರಸಪ್ಪನಾಯಕನಂತೂ ಇವರ ಆಜ್ಞಾಧಾರಕನಾದ ಶಿಷ್ಯನೇ ಆಗಿದ್ದನು. ಪ್ರಸಂಗಾಭರಣತೀರ್ಥ, ಷಡ್ದರ್ಶನಷಣ್ಮುಖ, ಸರ್ವಜ್ಞಕಲ್ಪ, ಕವಿಕುಲತಿಲಕ ಮೊದಲಾದ ಮಹತ್ತ್ವದ ಬಿರುದುಗಳಿಂದ ಅಂದಿನ ವಿದ್ವದ್ವೃಂದ ಇವರನ್ನು ಗೌರವಿಸಿದೆ.

ಉಡುಪಿಯ ಶ್ರೀಕೃಷ್ಣಪೂಜೆಯ ಪರ್ಯಾಯವ್ಯವಸ್ಥೆಯನ್ನು ಎರಡು ತಿಂಗಳುಗಳಿಂದ ಎರಡು ವರ್ಷಗಳಿಗೆ ಬದಲಾಯಿಸಿದ್ದು ಇವರ ಮಹತ್ತ್ವದ ಸಾಧನೆಗಳಲ್ಲೊಂದು. ಇವರಿಗಿಂತ ಇವರ ಶಿಷ್ಯರಾದ ಶ್ರೀವೇದವೇದ್ಯತೀರ್ಥರೇ ಹೆಚ್ಚು ವೃದ್ಧಾಪ್ಯವನ್ನು ಹೊಂದಿದಾಗ ಅವರ ಅನುಕೂಲಕ್ಕಾಗಿ ತಮ್ಮ ಒಂದು ಪರ್ಯಾಯವನ್ನೇ ಅವರಿಗಾಗಿ ಬಿಟ್ಟುಕೊಟ್ಟು, ಉಡುಪಿಯ ಪ್ರತಿರೂಪದಂತೆ ಸೋದೆಯಲ್ಲಿ ಶ್ರೀತ್ರಿವಿಕ್ರಮದೇವಾಲಯ, ಧವಲಗಂಗಾಸರೋವರ ಮೊದಲಾದವುಗಳನ್ನು ನಿರ್ಮಿಸಿ, ಅಲ್ಲಿಯೇ ಆ ಬಾರಿ ಪರ್ಯಾಯ ಕೈಗೊಂಡ ಪ್ರಕರಣವು ಇವರ ಅಪೂರ್ವಶಿಷ್ಯವಾತ್ಸಲ್ಯ, ಅಪ್ರತಿಮ ಔದಾರ್ಯ ಹಾಗೂ ಉಜ್ಜ್ವಲ ತಪಶ್ಶಕ್ತಿಗಳಿಗೆ ಉತ್ತಮ ನಿದರ್ಶನ.

ಇಂದು ಮನೆಮಾತಾಗಿರುವ ಶ್ರೀರಾಘವೇಂದ್ರಸ್ವಾಮಿಗಳಿಗಿಂತ ಮುಂಚಿತವಾಗಿಯೇ ಅಸಂಖ್ಯ ಸಾತ್ತ್ವಿಕಪವಾಡಗಳ ಮೂಲಕ ನಾಸ್ತಿಕವರ್ಗವನ್ನು ಮಣಿಸಿದ ಶ್ರೇಯಸ್ಸು ಸಹ

---

೧. ಹಯಗ್ರೀವಸ್ಯ ಮಧ್ವಸ್ಯ ವಿದ್ಯಾನಿಧಿಗುರೋರ್ಗುರೋಃ -ಯುಕ್ತಿಮಲ್ಲಿಕಾ
ವಿದ್ಯಾನಿಧೇಃ - ವಿದ್ಯಾನಿಧಿಮುನ್ಯಾದೇಃ - –ಯುಕ್ತಿಮಲ್ಲಿಕಾಟೀಕಾ

೨. ಸಂತ ಶ್ರೀವಿಜಯೀಂದ್ರ ವಾದಿರಾಜರೆಂಬ ಸಚ್ಛಿಷ್ಯರನು ಪಡೆದು -ಶ್ರೀಪುರಂದರದಾಸರು
ವಿಜಯೀಂದ್ರಸಂತ ವಾದಿರಾಜಪುರಂದರರಿಂತು ಸಚ್ಛಿಷ್ಯರನು ಪಡೆದು -ಶ್ರೀವಿಜಯದಾಸರು

೩. ಗುರ್ಜರಾದಿಷು ದೇಶೇಷು ಸ್ವಶಿಷ್ಯಾನ್ ಕೃಪಯಾ ಯುತಃ।
ತತ್ರತ್ಯಾನೇವ ಕೃತವಾನ್ ವಿಷ್ಣುದೀಕ್ಷಾಪ್ರವರ್ತಕಾನ್ ॥ -ವೃತ್ತರತ್ನಸಂಗ್ರಹ

೪. ಶ್ರೀವಾದಿರಾಜಗುರುವರಚರಿತಾಮೃತ - (೩/೩೪,೩೫)

ಇವರದೇ [1]ಆಗಿದೆ. ಅದರಂತೆ, ಶ್ರೀರಾಘವೇಂದ್ರರಿಗಿಂತ ಮುಂಚೆಯೇ ಸಶರೀರವಾಗಿ ಬೃಂದಾವನಪ್ರವೇಶ ಮಾಡಿದ ಹಿರಿಮೆಯೂ ಇವರದಾಗಿದೆ.

ಸ್ವರ್ಣಕಾರರು, ಕೋಟೇಶ್ವರದವರು ಮೊದಲಾಗಿ ಅನೇಕರಿಗೆ ವೈಷ್ಣವ ದೀಕ್ಷೆಯನ್ನು ಕೊಟ್ಟು ಉದ್ಧರಿಸಿದ ಇವರ ವಿಶಾಲದೃಷ್ಟಿ ಅನನ್ಯವಾದುದು. ಪ್ರಸಿದ್ಧ ಹರಿದಾಸರಲ್ಲೊಬ್ಬರಾದ ಶ್ರೀಕನಕದಾಸರು ಶ್ರೀವಾದಿರಾಜರ ನಿಕಟವರ್ತಿಗಳೂ, ಕೃಪಾಪಾತ್ರರೂ ಆಗಿದ್ದರೆನ್ನಲು [2]ದಾಖಲೆಗಳಿವೆ. ಶ್ರೀಕನಕದಾಸರು ವೈಷ್ಣವ ಮಂಡಲಿಯಲ್ಲಿ ವಿಶೇಷವಾಗಿ ಆದರಣೀಯರಾಗಲು ಶ್ರೀವಾದಿರಾಜರ ಪಾತ್ರ ಅತ್ಯಂತ ಪ್ರಮುಖವಾದುದು. ವಿಷ್ಣುಭಕ್ತಿಯೇ ಮಾನ್ಯತೆಯ ಪ್ರಮುಖ ಮಾನದಂಡ ಎಂಬ ಆಚಾರ್ಯಶ್ರೀಮಧ್ವರ ಸಂದೇಶವನ್ನು ಶ್ರೀವ್ಯಾಸರಾಜರು ಮತ್ತು ಶ್ರೀವಾದಿರಾಜರು ಅನುಸರಣ ಮಾಡಿದ ರೀತಿ ಅನನ್ಯವಾದುದು.

ಜೀವನದುದ್ದಕ್ಕೂ ಆರ್ತರ ಸಂಕಷ್ಟವನ್ನು ಸಮರ್ಥವಾಗಿ ಪರಿಹರಿಸಿದ ಇವರು ಬೃಂದಾವನವನ್ನು ಪ್ರವೇಶಿಸಿ ಶತಕಗಳೇ ಉರುಳಿದ್ದರೂ ಭಕ್ತರಿಗೆ ಇನ್ನೂ ಆಶ್ರಯದಾಯಕರಾದ ಕಲ್ಪವೃಕ್ಷ, ಕಾಮಧೇನು ಎನ್ನಿಸಿರುವರು ಎನ್ನಲು ಸೋದೆಯಲ್ಲಿ ಅವರ ಬೃಂದಾವನದ ಬಳಿ ಎಡೆಬಿಡದೆ ನೆರೆದಿರುವ ಭಕ್ತಸಮೂಹ [3]ಸಾಕ್ಷಿಯಾಗಿದೆ.

ಧರ್ಮಸ್ಥಳ, ಸೋದೆ ಮೊದಲಾದ ಅನೇಕಸ್ಥಳಗಳಲ್ಲಿ ಶಿವಲಿಂಗಗಳನ್ನು ಸಹ ಪ್ರತಿಷ್ಠಾಪಿಸಿದ ಇವರ ಮತ್ತೊಂದು ಸಾಧನೆ; ಅವರ ಈ ಕಾರ್ಯ ವೈಷ್ಣವರು ಶಿವದ್ವೇಷಿಗಳೆಂಬ ಕೆಲವರ ತಪ್ಪು ತಿಳುವಳಿಕೆಯನ್ನು ಸಂಪೂರ್ಣವಾಗಿ ಹೋಗಲಾಡಿಸುತ್ತದೆ. ಶೈವವೈಷ್ಣವರ ಸುಮಧುರ ಬಾಂಧವ್ಯಕ್ಕೆ ಶ್ರೀವಾದಿರಾಜರ ಕೊಡುಗೆ ಲೌಕಿಕವಾಗಿ ಅತ್ಯಂತ ಮಹತ್ತ್ವಪೂರ್ಣವಾದುದು.

ಶ್ರೀಹಯಗ್ರೀವೋಪಾಸಕರಾಗಿದ್ದ ಶ್ರೀವಾದಿರಾಜರು ವಿದ್ಯಾಪ್ರಪಂಚಕ್ಕೆ ಸಲ್ಲಿಸಿರುವ ಸೇವೆಯಂತೂ ಯಾವುದೇ ಅಳತೆಗೋಲಿನಿಂದಲೂ ಅಗ್ರಮಾನ್ಯವೇ ಆಗಿದೆ. ಜೀವನವಿಡೀ ಇವರು ನಡೆಸಿದ ಪಾಠಪ್ರವಚನಗಳಿಗೆ ಸಾಕ್ಷಿಯಾಗಿ ಇವರ ಸೋದರರೂ, ಅನಂತರ ಭಂಡಾರ- ಕೆರೆ ಪೀಠವನ್ನಲಂಕರಿಸಿದರೂ, ಇವರ ಯುಕ್ತಿಮಲ್ಲಿಕಾ ಮತ್ತು ಪಾಷಂಡಮತಖಂಡನಗ್ರಂಥಕ್ಕೆ ಟೀಕೆ ಬರೆದವರೂ ಆದ [4]ಶ್ರೀಸುರೋತ್ತಮತೀರ್ಥರು,

---

೧. ಅವರ ಅಂತಹ ಕೆಲವು ಪ್ರಮುಖ ಪವಾಡಗಳನ್ನು ಶ್ರೀಜಗನ್ನಾಥದಾಸರು ಒಂದು ಕೀರ್ತನೆಯಲ್ಲಿ ಸಂಗ್ರಹಿಸಿದ್ದು, ಅದನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

೨. ತ್ರಿವಿಕ್ರಮದಾಸಸ್ಯ ದಾಸ - ಶ್ರೀಕನಕದಾಸರ ಮೋಹನತರಂಗಿಣೀ

೩. ಕಾಮಧೇನುರ್ಯಥಾ ಪೂರ್ವಂ ಸರ್ವಾಭೀಷ್ಟಫಲಪ್ರದಾ ।
ತಥಾ ಕಲೌ ವಾದಿರಾಜಶ್ರೀಪಾದೋಽಭೀಷ್ಟದಃ ಸತಾಮ್ ॥ - ಶ್ರೀವಾದಿರಾಜಕವಚ

೪. ಶ್ರೀಸುರೋತ್ತಮತೀರ್ಥರು ಶ್ರೀಮಧ್ವಾಚಾರ್ಯರ 'ಸದಾಚಾರಸ್ಮೃತಿ'ಗೂ ಶ್ರೀವಿಷ್ಣುತೀರ್ಥರ ಸನ್ನ್ಯಾಸಪದ್ಧತಿಗೂ ಸಹ ಟೀಕೆಗಳನ್ನು ರಚಿಸಿರುವರೆಂದು ಪ್ರತೀತಿ. ತಾವು ಯುಕ್ತಿಮಲ್ಲಿಕೆಗೆ ಬರೆದ ಟೀಕೆಯು ಮೂಲತಃ ಶ್ರೀವಾದಿರಾಜರದೇ; ಹೆಸರು ಮಾತ್ರ ತಮ್ಮದು' ಎಂಬ ಇವರ

ಇವರ ಉತ್ತರಾಧಿಕಾರಿಗಳಾಗಿ ಪೀಠವೇರಿದ ಶ್ರೀವೇದವೇದ್ಯತೀರ್ಥರು, ಇವರ ರುಗ್ಮಿಣೀಶವಿಜಯ, ತೀರ್ಥಪ್ರಬಂಧಗಳಿಗೆ ಉತ್ಕೃಷ್ಟವ್ಯಾಖ್ಯಾನಗಳನ್ನು ಬರೆದಿರುವ ನಾರಾಯಣಾಚಾರ್ಯರು, ಇವರ ಜೀವನಚರಿತ್ರೆಯನ್ನು ಹೃದಯಂಗಮವಾಗಿ ಚಿತ್ರಿಸಿರುವ ವೃತ್ತರತ್ನಸಂಗ್ರಹಕಾರ ರಘುನಾಥಾಚಾರ್ಯರು ಮೊದಲಾದ ಮಹನೀಯರನ್ನು ಇಲ್ಲಿ ಉಲ್ಲೇಖಿಸಬಹುದು.

ಆ ಕಾಲದಲ್ಲಿ ತುಂಬಾ ಪ್ರಬಲರಾಗಿದ್ದ ಅದ್ವೈತ, ಶೈವ ಮತ್ತು ಜೈನ ಎಂಬ ಮೂರು ಪಂಗಡಗಳ ವಾದಿಗಳನ್ನು ತುಂಬಾ ಸಮರ್ಥವಾಗಿ ಎದುರಿಸಿದ್ದು ಇವರ ಶಿಖರಪ್ರಾಯವಾದ ಸಾಧನೆ; ಅದರಿಂದಾಗಿ ಇವರಿಗೆ 'ವಾದಿರಾಜ' ಎಂಬ ಹೆಸರು ತುಂಬಾ ಅನ್ವರ್ಥವಾದುದು; ಇವರ ವಾದಕೌಶಲಕ್ಕೆ ಬೆರಗಾಗದ, ತಲೆಬಾಗದ ಪ್ರತಿವಾದಿಯೇ ಇರಲಿಲ್ಲ. ಹಯಗ್ರೀವೋಪಾಸಕರಾದ ಶ್ರೀವಾದಿರಾಜರು ಹಯವದನ ಅಂಕಿತದಿಂದ ಕನ್ನಡಭಾಷೆಯಲ್ಲಿ ಅಸಂಖ್ಯಕೃತಿಗಳನ್ನು ರಚನೆ ಮಾಡಿದಂತೆ, ಶ್ರೀಹಯಗ್ರೀವನ ವಿಶೇಷಸ್ಮರಣೆ ಪಾಮರರಿಗೂ ಎಟಕುವಂತೆ ಭೋಜನಕಾಲದಲ್ಲೂ ಸ್ಮರಣೆಗೆ ಬರುವಂತೆ ಮಾಡಿದ ಮತ್ತೊಂದು ಮಹತ್ಕಾರ್ಯ ಹಯಗ್ರೀವ ಎಂಬ ಭಕ್ಷ್ಯವೊಂದನ್ನೇ ಜಾರಿಗೆ ತಂದದ್ದು. ಅದು ಭಗವತ್ಸ್ಮರಣೆಗೆ ಕಾರಣವಾಗುವುದು ಮಾತ್ರವಲ್ಲದೇ ವಿಶೇಷವಾದ [೧]ಜ್ಞಾನವೃದ್ಧಿಗೂ ಕಾರಣವಾಗುವಂತೆ ಮಾಡಿದರು; ಹಯಗ್ರೀವರೂಪ ವಿಶೇಷವಾಗಿ ಜ್ಞಾನಪ್ರದಾಯಕ ರೂಪವೇ ಆಗಿದೆಯಲ್ಲವೆ. ಅದರಂತೆ ಶ್ರೀಹರಿನೈವೇದ್ಯಕ್ಕೆ ವಿಹಿತವಾಗುವ ವಾದಿರಾಜಗುಳ್ಳ ಎಂಬ ಮತ್ತೊಂದು ಬಗೆಯ ಸಸ್ಯವನ್ನು ಒದಗಿಸಿದ್ದು ಅವರ ಮತ್ತೊಂದು ಹಿರಿಮೆ.

ಗ್ರಂಥಕಾರರಾಗಿಯಂತೂ ಶ್ರೀವಾದಿರಾಜರ ಸಾಧನೆ ಅತ್ಯಂತ ಮಹತ್ತರವಾದುದು, ಸಂಖ್ಯೆ ಹಾಗು ಸತ್ತ್ವ ಎರಡರ ದೃಷ್ಟಿಯಿಂದಲೂ ಇವರ ಗ್ರಂಥರಚನೆ ಅಪಾರವಾದುದು. ಅಷ್ಟಮಠಗಳ ಯತಿಗಳಲ್ಲಿ ಗ್ರಂಥರಚನೆಯ ದೃಷ್ಟಿಯಲ್ಲೂ ಇವರದೇ [೨]ಅಗ್ರಸ್ಥಾನ[೩].

---

ಮಾತಿನಲ್ಲಿ ಎದ್ದು ಕಾಣುವ ಗುರುಭಕ್ತಿ ಅನ್ಯಾದೃಶವಾದುದು :

ಕೃತಿಮೇತಾಂ ಸ್ವಯಂ ಕೃತ್ವಾ ವಾದಿರಾಜೋ ಬುಧಾಗ್ರಣೀಃ ।
ಖ್ಯಾಪಯಾಮಾಸ ಮನ್ನಾಮ್ನಾ ಸಂತೋ ಹ್ಯಾಶ್ರಿತವತ್ಸಲಾಃ ॥- ಯುಕ್ತಿಮಲ್ಲಿಕಾವ್ಯಾಖ್ಯಾಭಾವವಿಲಾಸಿನೀ

ಸ್ವಕೃತಗ್ರಂಥರಾಜಸ್ಯ ಯುಕ್ತಿಸಾರಸ್ಯ ವಾದಿರಾಟ್ ।
ಟೀಕಾಂ ಕೃತ್ವಾ ಸ್ವಯಂ ತಸ್ಯ ನಾಮ್ನಾ ಖ್ಯಾಪಿತವಾನಹೋ ॥ – ವೃತ್ತರತ್ನಸಂಗ್ರಹ

೧. ಹಯಗ್ರೀವ ಹಯಗ್ರೀವ ಹಯಗ್ರೀವೇತಿ ಯೋ ವದೇತ್ ।
ತಸ್ಯ ನಿಸ್ಸರತೇ ವಾಣೀ ಜಹ್ನುಕನ್ಯಾಪ್ರವಾಹವತ್ ॥ -ಹಯಗ್ರೀವಸಂಪದಾಸ್ತೋತ್ರ

೨. ಸುಶ್ರಾವ್ಯಕಾವ್ಯಸ್ತುತಿಯುಕ್ತಿಸಾರಂ ಗಾಥಾಶ್ಚ ನಾನಾವಿಧಶಬ್ದಹೃದ್ಯಾಃ ।
ಜ್ಞಾನಾದಿದಾಶ್ಚಾಪ್ರತಿಮಾಃ ಕವೀಂದ್ರಃ ಶ್ರೀವಾದಿರಾಜೋ ವ್ಯತನೋದಸಂಖ್ಯಾನ್ ॥
-ವೃತ್ತರತ್ನಸಂಗ್ರಹ(೩/೩೧)

೩. ಶ್ರೀಸೋದೆಮಠದಲ್ಲಿ ಗ್ರಂಥಕಾರರೆಂದು ಪ್ರಸಿದ್ಧವಾಗಿರುವ ಇತರ ಕೆಲವು ಪೀಠಾಧೀಶರ ವಿವರ ಹೀಗಿದೆ:

[1]'ಯುಕ್ತಿಮಲ್ಲಿಕೆ'ಯು ಇವರ ಕೃತಿರಾಜ; ಗುಣ,ಶುದ್ಧಿ,ಭೇದ, ವಿಶ್ವ ಮತ್ತು ಫಲ ಎಂಬ ಐದು ಸೌರಭಗಳಲ್ಲಿ ಒಟ್ಟು ೫೩೭೯ ಶ್ಲೋಕಗಳಲ್ಲಿ ಶ್ರೀಮದಾಚಾರ್ಯರ ಅನುವ್ಯಾಖ್ಯಾನದ ಮೇಲ್ಪಂಕ್ತಿಯಲ್ಲಿ ಬ್ರಹ್ಮಸೂತ್ರಭಾಷ್ಯದ ಪ್ರಮೇಯಗಳನ್ನು ಅನೇಕತೆರನಾದ ಸುಂದರವೂ, ಪ್ರಬಲವೂ ಆದ ಯುಕ್ತಿಗಳಿಂದ ನಿರೂಪಿಸುವ ಈ ಗ್ರಂಥವು ಸಮಗ್ರತತ್ತ್ವಶಾಸ್ತ್ರದ ಇತಿಹಾಸದಲ್ಲೇ ಅಪೂರ್ವವೆನ್ನಿಸುವ ಶ್ಲೋಕರೂಪದ ಸ್ವತಂತ್ರ 'ವಾದಗ್ರಂಥ'. ಶಾಸ್ತ್ರನ್ಯಾಯ ಮತ್ತು ಲೋಕನ್ಯಾಯ ಗಳನ್ನು ಅಸಂಖ್ಯವಾಗಿ ಉಪಯೋಗಿಸಿಕೊಂಡು ವೈಷ್ಣವವೇದಾಂತದ ಪ್ರಮುಖ ತತ್ತ್ವಗಳನ್ನು ಜಿಜ್ಞಾಸುಗಳಿಗೆ ತುಂಬಾ ಪರಿಣಾಮಕಾರಿಯಾಗಿ ತಲುಪಿಸುವ ಇಂತಹ ಸ್ವತಂತ್ರಗ್ರಂಥ ಮತ್ತೊಂದಿಲ್ಲ ಎನ್ನಬಹುದು.

ನ್ಯಾಯರತ್ನಾವಲಿ(೯೦೧ಶ್ಲೋಕಗಳು), ಹರಿಭಕ್ತಿಲತಾ (೩೯೪ಶ್ಲೋಕಗಳು), ಶ್ರುತಿತತ್ತ್ವ ಪ್ರಕಾಶಿಕಾ(೫೦೭ಶ್ಲೋಕಗಳು), ಏಕಾದಶೀನಿರ್ಣಯ(೫೫ಶ್ಲೋಕಗಳು) ಮತ್ತು ಪಾಷಂಡ ಮತಖಂಡನ(೧೨೯ಶ್ಲೋಕಗಳು) ಇವು ಅವರ ಇತರ ಪದ್ಯರೂಪದ ಪ್ರಮುಖ ಶಾಸ್ತ್ರಗ್ರಂಥಗಳು[2].

ನ್ಯಾಯಸುಧಾಗುರ್ವರ್ಥದೀಪಿಕಾ(೬೦೦೦ಗ್ರಂಥಗಳು), ತತ್ತ್ವಪ್ರಕಾಶಿಕಾಗುರ್ವರ್ಥ-ದೀಪಿಕಾ (೩೫೦೦ಗ್ರಂಥಗಳು), ಮಹಾಭಾರತತಾತ್ಪರ್ಯನಿರ್ಣಯಭಾವಪ್ರಕಾಶಿಕಾ ಮತ್ತು ಮಹಾಭಾರತಲಕ್ಷಾಲಂಕಾರ; ಇವು ಇವರ ಪ್ರಮುಖ ವ್ಯಾಖ್ಯಾನಗ್ರಂಥಗಳು.

---

೧. ಶ್ರೀವಿಷ್ಣುತೀರ್ಥರು-(ಮಠದಮೂಲಪುರುಷರು) ಸಂನ್ಯಾಸಪದ್ಧತಿ, ಶ್ರವಣದ್ವಾದಶೀನಿರ್ಣಯ, ವಿಷ್ಣುಪಂಚಕನಿರ್ಣಯ, ಪಂಚಸಂಸಾರಸಂಗ್ರಹ.
೨. ಶ್ರೀವೇದಾತ್ಮತೀರ್ಥರು - ನಖಸ್ತುತಿಟೀಕಾ ಮತ್ತು ವಾಯುಸ್ತುತಿಟೀಕಾ.
೩. ಶ್ರೀರತ್ನಗರ್ಭತೀರ್ಥರು - ಮಹಾಭಾರತತಾತ್ಪರ್ಯನಿರ್ಣಯಟೀಕಾ
೪. ಶ್ರೀವೇದಾಂಗತೀರ್ಥರು - ವಾಯುಸ್ತುತಿಟೀಕಾ, ಮಹಾಭಾರತತಾತ್ಪರ್ಯನಿರ್ಣಯಟೀಕಾ, ಸುಮಧ್ವವಿಜಯಟೀಕಾ, ಪಾರಿಜಾತಹರಣಟೀಕಾ, ಗೀತಾಟಿಪ್ಪಣೀ, ಭಜಮಧ್ವೇಶಂ (ಶಂಕರಾ-ಚಾರ್ಯರ 'ಭಜ ಗೋವಿಂದಂ' ಕೃತಿಯ ಖಂಡನರೂಪ) ಮತ್ತು ಅಣುಮಧ್ವವಿಜಯಟೀಕಾ.
೫. ಶ್ರೀವೇದವೇದ್ಯತೀರ್ಥರು - ತಂತ್ರಸಾರಟೀಕಾ ಮತ್ತು ಶ್ರೀವಾದಿರಾಜಸ್ತುತಿ
೬. ಶ್ರೀವಾದಿವಂದ್ಯತೀರ್ಥರು - ಶ್ರೀವಾದಿರಾಜಾಷ್ಟಕ, ಶ್ರೀವಾದಿರಾಜಸ್ತುತಿ, ಜಯಸ್ತೋತ್ರ ಹಾಗೂ ಶ್ರೀವಾದಿ ರಾಜಧ್ಯಾನಪ್ರಕಾರ.
೭. ಶ್ರೀವಿಬುಧವರ್ಯತೀರ್ಥರು-ವಿಷ್ಣುಸಹಸ್ರನಾಮಟೀಕಾ(ಶ್ಲೋಕರೂಪ) ಮತ್ತು ಸುಭದ್ರಾ-ಹರಣ (ಕಾವ್ಯ).

೧. ಇದರಲ್ಲಿ ಗುಣಸೌರಭ(೧೦೧೯), ಶುದ್ಧಿಸೌರಭ(೫೩೨), ಭೇದಸೌರಭ (೧೫೫೧), ವಿಶ್ವಸೌರಭ(೧೨೩೭) ಮತ್ತು ಫಲಸೌರಭ(೧೦೦೦) ಎಂಬ ಐದು ಪರಿಚ್ಛೇದಗಳಿದ್ದು ಒಟ್ಟು ೫೩೭೯ ಶ್ಲೋಕಗಳಿವೆ.
೨. ಇವರ ಪದ್ಯಕೃತಿಗಳಲ್ಲಿ ದಶಾವತಾರಸ್ತೋತ್ರ(೨)ಗಳು, ಕೃಷ್ಣಸ್ತೋತ್ರ(೭)ಗಳು, ಹಯಗ್ರೀವಸ್ತೋತ್ರಗಳು(೧೨), ವ್ಯಾಸಸ್ತೋತ್ರಗಳು(೨), ನರಸಿಂಹಸ್ತೋತ್ರಗಳು(೨), ಲಕ್ಷ್ಮೀಸ್ತೋತ್ರಗಳು(೩) ಮತ್ತು ಮಧ್ವಸ್ತೋತ್ರಗಳು(೪) ಮೊದಲಾದ ಅನೇಕ ಸ್ತೋತ್ರಗಳು ಸೇರಿವೆ.

ವಿವರಣವ್ರಣ(೨೫೦೦ ಗ್ರಂಥಗಳು-ಪ್ರಕಾಶಾತ್ಮಕೃತ ಪಂಚಪಾದಿಕಾವಿವರಣ ಮತ್ತು 'ತತ್ತ್ವದೀಪನ' ಎಂಬ ವ್ಯಾಖ್ಯಾನಗಳ ಖಂಡನೆ) ಮತ್ತು ಕಲ್ಪಲತಾ (ವಾದಿರಾಜಸೂರಿ ಎಂಬ ಜೈನಪಂಡಿತನ ಪ್ರಮಾಣಮಂಜರೀ ಎಂಬ ಕೃತಿಯ ಖಂಡನ) ಇವು ಇವರ ಪ್ರಮುಖ ಖಂಡನಗ್ರಂಥಗಳು.

ರುಗ್ಮಿಣೀಶವಿಜಯ (೧೯ ಸರ್ಗಗಳು - ಒಟ್ಟು ೧೨೪೧ ಶ್ಲೋಕಗಳು), ಸರಸಭಾರತೀವಿಲಾಸ (೧೨ವಿಲಾಸಗಳು - ೭೦೦ ಶ್ಲೋಕಗಳು), ತೀರ್ಥಪ್ರಬಂಧ (೪ಪ್ರಬಂಧಗಳು - ೨೩೫ ಶ್ಲೋಕಗಳು) ಮತ್ತು ಕವಿಕದಂಬಕಂಠಭೂಷಾ(೧೫ ಶ್ಲೋಕಗಳು) ಇವು ಇವರ ಪ್ರಮುಖ ಕಾವ್ಯಕೃತಿಗಳು, ದಶಮಸ್ಕಂಧ ಭಾಗವತೋಕ್ತ ಶ್ರೀಕೃಷ್ಣಕಥೆಯನ್ನು ಶ್ರೀಮದಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯ ಮತ್ತು ಭಾಗವತತಾತ್ಪರ್ಯನಿರ್ಣಯಗ್ರಂಥಗಳ ಹಿನ್ನೆಲೆಯಲ್ಲಿ ಅಪೂರ್ವವಾಗಿ ವರ್ಣಿಸುವ 'ರುಗ್ಮಿಣೀಶವಿಜಯ'ವು ನವರಸಭರಿತವಾದ ಒಂದು [1]ಸುಂದರಮಹಾಕಾವ್ಯ. ಮಾಘಕಾವ್ಯಕ್ಕಿಂತ ಮಿಗಿಲಾದ ಮಹಾಕಾವ್ಯವೆಂದು ಅಂದಿನ ಕಾಲದಲ್ಲೇ ರಾಜಮನ್ನಣೆಗೆ ಪಾತ್ರವಾದ ಕೃತಿ[2]. ಒಂದರ್ಥದಲ್ಲಿ ಇದನ್ನು ಭಾಗವತ ದಶಮಸ್ಕಂಧದ ಕೃಷ್ಣಲೀಲಾಭಾಗದ ಶ್ಲೋಕರೂಪ - ಆಧ್ಯಾತ್ಮಿಕವ್ಯಾಖ್ಯಾನ ಎನ್ನಬಹುದು.

---

೧. ರುಗ್ಮಿಣೀಶವಿಜಯವು ನಾರಾಯಣಾಚಾರ್ಯರ ವ್ಯಾಖ್ಯಾನಸಮೇತ ನನ್ನ ಸಂಪಾದನೆಯಲ್ಲಿ ಪ್ರಕಟಿತವಾಗಿದೆ. (ಪ್ರ:ಶ್ರೀಮನ್ಮಧ್ವಸಿದ್ಧಾಂತೋನ್ನಾಹಿನೀಸಭಾ, ತಿರುಚಾನೂರು, ೧೯೯೬)

೨. ತತಃ ಪುಣ್ಯಪುರೀಂ ಪ್ರಾಪ್ತೋ ಭೇರೀತಾಡನಪೂರ್ವಕಮ್ ।
ಕಾವ್ಯಶ್ರೇಷ್ಠಂ ಮಾಘಕಾವ್ಯಂ ಗಜಮೂರ್ಧನಿ ಪೂಜ್ಯತೇ ॥
ಇತ್ಯಾಘೋಷಿತಮಾಕರ್ಣ್ಯ ಸಭಾಪತಿಮುವೋಚತ ।
ಅಸ್ಮತ್ಪುರೇ ಮಹಾಕಾವ್ಯಮೇಕಂ ಶ್ರೇಷ್ಠಂ ಪ್ರಕಾಶತೇ ॥
ದೀಯತೇ ಸಮಯಃ ಕಶ್ಚಿದ್ದರ್ಶಯಿಷ್ಯೇ ಪರೀಕ್ಷ್ಯತಾಮ್।
ಅಂಗೀಕುರ್ವತಿ ವಿಜ್ಞೌಘೇ ಗುರುರೇಕೋನವಿಂಶತಾ ॥
ದಿವಸೈರೇಕದಿವಸೇ ಹ್ಯೇಕಸರ್ಗಕ್ರಮೇಣ ಸಃ ।
ರುಗ್ಮಿಣೀಶಮಹಾಕಾವ್ಯಂ ನಿರ್ಮಮೇ ಸುರಸಾಕರಮ್ ॥
ಅವೇಕ್ಷಣಾಯ ವಿದುಷಾಂ ಸಂಸದಂ ಪ್ರೈಷಯತ್ ಸುಧೀಃ ।
ಪರಿಷತ್ ಸಾ ಪರೀಕ್ಷಾಯ ವಿಸ್ಮಿತಾऽऽನಂದಪೂರಿತಾ ॥
ರುಗ್ಮಿಣೀಶಮಹಾಕಾವ್ಯಮುತ್ತಮಂ ಮಾಘತೋऽಪಿ ಚ ।
ಇತ್ಯಾಘೋಷ್ಯ ಚ ಸಮ್ಮಾನ್ಯ ಪ್ರಾರ್ಚಯತ್ ಕವಿಸತ್ತಮಮ್ ॥
ಕವೀನಾಂ ಕುಲಮಧ್ಯೇ ಹಿ ತಿಲಕೋऽಯಮಿತಿ ಪ್ರಥಾಮ್ ।
ಸಂಖ್ಯಾಪಯಾಮಾಸ ವಿದುಷಾಂ ಪರಿಷದ್ಗುಣಮೋದಿನೀ ॥
-ಶ್ರೀವಾದಿರಾಜಗುರುವರಚರಿತಾಮೃತ (೩-೪-೧೦)

ಸೋದಾಭೂಪೋऽಪಿ ಮಾಘಾದೇರ್ಮತ್ವಾ ಕೋಟಿಗುಣಾಧಿಕಮ್ ।
ಆರೋಪ್ಯ ಕರಿಣಃ ಪೃಷ್ಠೇऽಮಾನಯತ್ ಪ್ರತಿಪತ್ತನಮ್ ।
ಸುಪರ್ವಾಣಃ ಸುಪರ್ಣಾದ್ಯಾ ಗಂಧರ್ವಾ ಮುನಯೋऽಪಿ ಹಿ ।
ಸ್ವಸ್ವಲೋಕಸಭಾಸ್ವೇತತ್ಪೂಜಯಾಮಾಸುರಾದರಾತ್ ॥ - ವಾದಿರಾಜಗುಣರತ್ನಮಾಲಾ (೫-೪೯-೫೦)

ಇವರ ನ್ಯಾಯಸುಧಾಗುರ್ವರ್ಥದೀಪಿಕೆಯು ಇಂದು ನ್ಯಾಯಸುಧೆಗೆ ಉಪಲಬ್ಧವಿರುವ ಟಿಪ್ಪಣಿಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದುದು. ಅವರ ತತ್ತ್ವಪ್ರಕಾಶಿಕಾಗುರ್ವರ್ಥ-ದೀಪಿಕೆಯು ಸಹ ಒಂದರ್ಥದಲ್ಲಿ ತತ್ತ್ವಪ್ರಕಾಶಿಕೆಗೆ ದೊರೆತಿರುವ ಅತ್ಯಂತ ಪ್ರಾಚೀನ ಟಿಪ್ಪಣಿಯಾಗಿದೆ.

ಶ್ರೀಲಕ್ಷ್ಮೀ, ಬ್ರಹ್ಮ(ವಾಯು) ಮತ್ತು ಸರಸ್ವತಿ(ಭಾರತೀ)ಯರ ಪರಶುಕ್ಲತ್ರಯವನ್ನು ನಿರೂಪಿಸುವ ಅವರ ಸರಸಭಾರತೀವಿಲಾಸವು ಒಂದರ್ಥದಲ್ಲಿ ಶ್ರೀಮದಾಚಾರ್ಯರ 'ಪರಶುಕ್ಲತ್ರಯಂ ಸ್ಮೃತಂ'(೧೮/೨೮)ಎಂಬ ಮಹಾಭಾರತತಾತ್ಪರ್ಯನಿರ್ಣಯದ ವಾಕ್ಯಕ್ಕೆ ವಿಸ್ತೃತ ಶ್ಲೋಕರೂಪವ್ಯಾಖ್ಯಾನವಾಗಿದೆ. ಶ್ರೀವಾಯುಜೀವೋತ್ತಮತ್ವವನ್ನು ಈ ತೆರನಾಗಿ ವಿವರವಾಗಿ ವಿವೇಚಿಸಿರುವ ಮತ್ತೊಂದು ಗ್ರಂಥವೇ ವೈಷ್ಣವಸಾಹಿತ್ಯದಲ್ಲಿಲ್ಲವೆನ್ನಬಹುದು. ಇದು ಅವರೇ ಕರೆದಿರುವಂತೆ 'ಭಾರತೀಶವಿಜಯ'ವೇ ಆಗಿದ್ದು, ಮತ್ತೊಂದು ಸುಮಧ್ವವಿಜಯದಂತೆ ಮಾನ್ಯವಾಗಿದೆ. ಶ್ರೀರುದ್ರದೇವರ ಅಸಾಮಂಜಸ್ಯವನ್ನು ಸಹ ವಿವರವಾಗಿ ತಿಳಿಸಿರುವುದು ಈ ಕೃತಿಯ ಮತ್ತೊಂದು ವೈಶಿಷ್ಟ್ಯ. ಅವರ 'ಹರಿಭಕ್ತಿಲತಾ'ದ ಬಹುಭಾಗವು ಇದಕ್ಕೆ ಪೂರಕರೂಪವಾಗಿದೆ ಎಂಬುದನ್ನು ಗಮನಿಸಬೇಕು.

ಇವರ ಮಹಾಭಾರತತಾತ್ಪರ್ಯನಿರ್ಣಯಭಾವಪ್ರಕಾಶಿಕೆಯು ನಿಜವಾದ ಅರ್ಥದಲ್ಲಿ ನಿರ್ಣಯದ ಭಾವಪ್ರಕಾಶಿಕೆಯೇ ಆಗಿದೆ. ಕೆಲವು ಸ್ಥಳಗಳಲ್ಲಂತೂ ಅದರಲ್ಲಿಯ ವಿವರಗಳು ತಮ್ಮ ಅಪೂರ್ವತೆಯಿಂದ ಅಚ್ಚರಿಪಡಿಸುತ್ತವೆ. ತಾತ್ಪರ್ಯನಿರ್ಣಯದ ಉಪಲಬ್ಧ ಟಿಪ್ಪಣಿಗಳಲ್ಲೆಲ್ಲ ಒಂದು ವಿನೂತನಶೈಲಿಯ ಕೃತಿ ಎಂಬುದು ಇದರ ಮತ್ತೊಂದು ವೈಶಿಷ್ಟ್ಯ. ಅವರ ಮಹಾಭಾರತಲಕ್ಷಾಲಂಕಾರವು ಇಂದು ಸಮಗ್ರಮಹಾಭಾರತಕ್ಕೆ ಉಲಪಲ್ಧವಿರುವ ವೈಷ್ಣವಪರಂಪರೆಯ ಏಕೈಕ ಮಹಾಭಾರತಟಿಪ್ಪಣಿಯಾಗಿದೆ. ಶ್ರೀಮದಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯದ ಹಿನ್ನೆಲೆಯಲ್ಲಿ ಮಹಾಭಾರತದ ಶ್ಲೋಕಗಳನ್ನು ಹೇಗೆ ಅರ್ಥೈಸಬೇಕು ಎಂಬುದನ್ನು ಅರಿಯಲು 'ದಾರಿದೀಪ'ವಾಗಿರುವ ಈ ಕೃತಿ ಮಹಾಭಾರತ ವ್ಯಾಖ್ಯಾನ ಪರಂಪರೆಗೇ ಒಂದು 'ಅಲಂಕಾರ'.

ಅಪಾರಸಂಖ್ಯೆಯ ಇಂತಹ [೧]ಸಂಸ್ಕೃತಕೃತಿಗಳನ್ನಲ್ಲದೆ ಕನ್ನಡದಲ್ಲಿ ಶ್ರೀಕೃಷ್ಣಬಾಲಲೀಲೆ, ಕೇಶವನಾಮ, ಅವತಾರತ್ರಯಸುವ್ವಾಲಿ, ಭ್ರಮರಗೀತೆ, ನಾರಾಯಣಕವಚ, ವೈಕುಂಠವರ್ಣನೆ, ಲಕ್ಷ್ಮೀಶೋಭನಹಾಡು, ಗುಂಡಕ್ರಿಯೆ, ಸ್ವಪ್ನಪದ ಮೊದಲಾದ ದೀರ್ಘಪದ್ಯಕೃತಿಗಳನ್ನೂ, ನೂರಾರು ಕೀರ್ತನೆ, ಉಗಾಭೋಗ, ಸುಳಾದಿಗಳನ್ನೂ

---

೧. ಅವರ ಕೃತಿಗಳು ಎಂದು ಕೆಲವು ಕಡೆ ಮುದ್ರಿತವಾಗಿರುವ ಹಿತೋಪದೇಶ ಮತ್ತು ಹಯಗ್ರೀವದಂಡಕ ಕೃತಿಗಳು ವಾಸ್ತವವಾಗಿ ಕ್ರಮವಾಗಿ ಶ್ರೀಅಕ್ಷೋಭ್ಯತೀರ್ಥರು, ಮತ್ತು ಶ್ರೀಮುಷ್ಣಂಕೋನೇರ್ಯಾಚಾರ್ಯರ ರಚನೆಗಳೆಂದು ಅನೇಕ ಆಧಾರಗಳಿಂದ ಸ್ಥಿರಪಟ್ಟಿದೆ(ನಮ್ಮ ಪ್ರಕಾಶನದ ಕನ್ನಡ ಅನುವಾದ ಸಮೇತ ಪದ್ಯಮಾಲಾ ಕೃತಿಯ ಪರಿಶಿಷ್ಟ ಹಾಗೂ ಸ್ತೋತ್ರಮಾಲಿಕಾ ಭಾಗ-೨ ಕೃತಿಗಳನ್ನು ನೋಡಬಹುದು) ಮಂಗಳಾಷ್ಟಕವು ಹೆಚ್ಚಾಗಿ ಶ್ರೀರಾಜರಾಜೇಶ್ವರತೀರ್ಥಕರ್ತೃಕ ಎಂಬುದಾಗಿಯೇ ಹೆಚ್ಚು ಪ್ರಸಿದ್ಧ.

ಹಯವದನ ಎಂಬ ಅಂಕಿತದಿಂದ ರಚಿಸಿ, ಹರಿದಾಸಸಾಹಿತ್ಯವನ್ನು ಸಹ ಅಪಾರವಾಗಿ ಶ್ರೀಮಂತವನ್ನಾಗಿಸಿದ್ದಾರೆ. ಕನ್ನಡದಲ್ಲಿ ಅಪಾರಕೃತಿಗಳನ್ನು ರಚಿಸಿದ (ಶ್ರೀಶ್ರೀಪಾದರಾಜರು, ಶ್ರೀವ್ಯಾಸರಾಜರು ಮತ್ತು ಶ್ರೀವಾದಿರಾಜರು ಎಂಬ) ಪರಮಹಂಸತ್ರಯರಲ್ಲಿ ಒಬ್ಬರು ಎಂಬುದು ಇವರ ಹಿರಿಮೆ. ತುಳುಭಾಷೆಯಲ್ಲೂ ದಶಾವತಾರಸ್ತವನಪರವಾದ 'ಪಾಡ್ದನ'ವೆಂಬ ಕೃತಿಗಳನ್ನು ರಚಿಸಿ ಆ ಪ್ರಾಂತದ ದಲಿತಜನಾಂಗದಲ್ಲೂ ವಿಷ್ಣುಭಕ್ತಿಯ ಪ್ರಸಾರವನ್ನು ಮಾಡಿರುವರು. ಅವುಗಳಲ್ಲಿ ಕೆಲವು ಪ್ರಕಟವಾಗಿವೆ[೧].

ಅತಿಹೆಚ್ಚಿನಸಂಖ್ಯೆಯಲ್ಲಿ ಸ್ತೋತ್ರಕೃತಿಗಳನ್ನು ಬರೆದಿರುವ ವೈಷ್ಣವಗ್ರಂಥಕಾರರೆಂಬುದು ಇವರ ಮತ್ತೊಂದು ಪ್ರಶಸ್ತಿ. 'ದಶಾವತಾರಸ್ತುತಿ', 'ಕೃಷ್ಣಾಷ್ಟಕ' ಮೊದಲಾದ ಇಂದು ಉಪಲಬ್ಧವಿರುವ ನಲವತ್ತಕ್ಕೂ ಹೆಚ್ಚಿನ ಇವರ ಸ್ತೋತ್ರಕೃತಿಗಳು ಛಂದೋವೈವಿಧ್ಯ, ರಚನಾಕೌಶಲ, ಶ್ಲೇಷ, ಯಮಕ, ಅನುಪ್ರಾಸಾದಿ ಅಲಂಕಾರ ವೈಭವ, ಗೇಯತೆ, ಅರ್ಥವಿಸ್ತಾರ ಮೊದಲಾದ ಗುಣಗಳಿಂದಾಗಿ ಆ ಮಾಧ್ಯಮಕ್ಕೆ ಸಂದಿರುವ ಉತ್ಕೃಷ್ಟ ಕೊಡುಗೆಗಳಾಗಿದ್ದು, ಅವುಗಳ ಶ್ರವಣ ಪಠನಗಳು ವಿನೂತನ ಪ್ರಪಂಚವನ್ನೇ ಸೃಷ್ಟಿಸಿಬಿಡುತ್ತವೆ.

ಕಾವ್ಯದ ಮಾಧುರ್ಯ ಮತ್ತು ಶಾಸ್ತ್ರದ ಅರ್ಥಗೌರವ ಈ ಎರಡೂ ವಾದಿರಾಜರ ಕೃತಿಗಳಲ್ಲಿ ಓತಪ್ರೋತವಾಗಿವೆ. ಮನಸೆಳೆಯುವ ಸರಸಸುಂದರಯುಕ್ತಿಗಳು ಮತ್ತು ಅನುಪ್ರಾಸ ಭೂಯಿಷ್ಠವಾದ ಶೈಲಿ, ಇವು ಶ್ರೀವಾದಿರಾಜರ ಕೃತಿಗಳಲ್ಲಿ ಉದ್ದಕ್ಕೂ ಗೋಚರಿಸುವ ಅಂಶಗಳು.[೨] ಸಂಸ್ಕೃತಭಾಷೆಯನ್ನು ಶಾಸ್ತ್ರ, ಕಾವ್ಯ, ಖಂಡನೆ, ಮಂಡನೆ, ಟೀಕೆ, ಟಿಪ್ಪಣಿ, ಗದ್ಯ, ಪದ್ಯ ಮೊದಲಾದ ಎಲ್ಲಾ ಮಾಧ್ಯಮಗಳಿಗೂ ಪರಿಣಾಮಕಾರಿಯಾಗಿ ಅಳವಡಿಸಿಕೊಂಡಿರುವ ಗ್ರಂಥಕಾರರಲ್ಲಿ ಆಚಾರ್ಯ ಶ್ರೀಮಧ್ವರ ಅನಂತರದ ಅಗ್ರಸ್ಥಾನ ಇವರದೇ ಆಗಿದೆ. ಸಾರ್ವಕಾಲಿಕಮಹತ್ತ್ವದ ಇವರಂಥ ಗ್ರಂಥಕಾರರು ಇತಿಹಾಸದಲ್ಲಿ ಅಪೂರ್ವ. ಶಾಸ್ತ್ರವೈದುಷ್ಯ, ಸಿದ್ಧಾಂತನಿಷ್ಠೆ ಮತ್ತು ಕಾವ್ಯಪ್ರತಿಭೆಗಳೊಂದಿಗೆ ಆನಂದತೀರ್ಥಭಗವತ್ಪಾದರ ಬಗ್ಗೆ ತುಂಬಿತುಳುಕುವ[೩] ಭಕ್ತಿಭಾವ ಇವರ ಕೃತಿಗಳಲ್ಲೆಲ್ಲ ಗೋಚರಿಸುವ ಮತ್ತೊಂದು ವಿಶಿಷ್ಟಗುಣ. ಮನಸ್ಸನ್ನು ಅರಳಿಸುವ ಕಾವ್ಯಮಾಧುರ್ಯ, ವಿಚಾರಗಳನ್ನು ಕೆರಳಿಸುವ ಯುಕ್ತಿಕೌಶಲ ಇವುಗಳನ್ನು ಹಾಸುಹೊಕ್ಕಾಗಿ ಹೊಂದಿರುವ ಇವರ ಗ್ರಂಥರಚನೆಯ ಸಿದ್ಧಿ ಅಸಾಮಾನ್ಯವಾದುದು. ಭಾಷೆ, ಶೈಲಿ, ವಿಷಯ, ನಿರೂಪಣೆ ಮೊದಲಾದ ಅನೇಕ ದೃಷ್ಟಿಯಿಂದ ಇಷ್ಟು ಪರಿಪಕ್ವವಾದ ರಚನೆಗಳು ಜಗತ್ತಿನ ಯಾವುದೇ

---

೧. 'ಸ್ವಾಪ್ನವೃಂದಾವನಾಖ್ಯಾನ' ಎಂಬ ಮತ್ತೊಂದು ಗ್ರಂಥವೂ ಇವರ ರಚನೆ ಎಂದು ಪ್ರತೀತಿ.

೨. ಸವಿನೋದಂ ಸಾಟ್ಟಹಾಸಂ ಸಸ್ಮಿತಂ ಸುಸ್ವರಾನ್ವಿತಮ್ ।
ಸರಹಸ್ಯಂ ಸಪ್ರಮಾಣಂ ವಾದಿರಾಜವಚೋಽಮೃತಮ್ ॥ -ವೃತ್ತರತ್ನಸಂಗ್ರಹ

೩. ಆನಂದತೀರ್ಥಮತಮುಜ್ಝಿತದೋಷಜಾತಂ
ಸ್ವಾನಂದದಾಯಿ ಶಿಥಿಲೀಕೃತಮತ್ತಮಾಯಿ ।
ಮಾನೌಘಶೋಭಿ ಮಮ ದುರ್ಜನಪುಂಜತೋಽಭೀ -
ರ್ಯೇನೇದೃಶೀ ಮತಿರಭೂತ್ ಕವಿತೋಲ್ಲಸದ್ಭ್ಯಃ ॥ – ರುಗ್ಮಿಣೀಶವಿಜಯ (೨/೬೦)

ಭಾಷೆಯ ಸಾಹಿತ್ಯದಲ್ಲೂ ವಿರಳವೇ ಸರಿ. ಇಂತಹ ಅನೇಕ ವೈಶಿಷ್ಟ್ಯದಿಂದಾಗಿ ಶ್ರೀವಾದಿರಾಜರು ಒಂದರ್ಥದಲ್ಲಿ ಅಭಿನವಮಧ್ವಾಚಾರ್ಯರೇ ಆಗಿರುವರು.

## ಶ್ರೀವಾದಿರಾಜರ ಕೃತಿಗಳು

### ೧. ಟೀಕೆಗಳು

೧. ಮಹಾಭಾರತಲಕ್ಷಾಲಂಕಾರ[೧]
೨. ಮ.ಭಾ.ತಾ.ನಿರ್ಣಯಭಾವಪ್ರಕಾಶಿಕಾ[೨]
೩. ತಲವಕಾರೋಪನಿಷದ್ಭಾಷ್ಯಟೀಕಾ★
೪. ತೈತ್ತಿರೀಯೋಪನಿಷದ್ಭಾಷ್ಯಟೀಕಾ★
೫. ಕಾಠಕೋಪನಿಷದ್ಭಾಷ್ಯಟೀಕಾ
೬. ಆಥರ್ವಣೋಪನಿಷದ್ಭಾಷ್ಯಟೀಕಾ★
೭. ಮಾಂಡೂಕೋಪನಿದ್ಭಾಷ್ಯಟೀಕಾ★
೮. ತಂತ್ರಸಾರಟೀಕಾ★
೯. ಸನತ್ಸುಜಾತೀಯವ್ಯಾಖ್ಯಾನ[೩]
೧೦. ಪುರುಷಸೂಕ್ತವ್ಯಾಖ್ಯಾನ

### ೨. ಟಿಪ್ಪಣಿಗಳು

೧. ನ್ಯಾಯಸುಧಾಗುರ್ವರ್ಥದೀಪಿಕಾ★
೨. ತತ್ತ್ವಪ್ರಕಾಶಿಕಾಗುರ್ವರ್ಥದೀಪಿಕಾ★
೩. ಈಶಾವಾಸ್ಯೋಪನಿಷದ್ಭಾಷ್ಯಟಿಪ್ಪಣಿ★
೪. ಷಟ್ಪ್ರಶ್ನೋಪನಿಷದ್ಭಾಷ್ಯಟೀಕಾಟಿಪ್ಪಣಿ★
೫. ಗೀತಾಭಾಷ್ಯಟಿಪ್ಪಣಿ[೪]
೬. ಪ್ರಮಾಣಪದ್ಧತಿ ಟಿಪ್ಪಣಿ[೫]

### ೩. ಸ್ವತಂತ್ರಗ್ರಂಥಗಳು(ಶಾಸ್ತ್ರಕೃತಿಗಳು)

೧. ಯುಕ್ತಿಮಲ್ಲಿಕಾ★★(ಶ್ಲೋ. ಸಂ. ೫೩೭೯)
೨. ನ್ಯಾಯರತ್ನಾವಲೀ[೬] (೯೦೧)
೩. ಚಕ್ರಸ್ತುತಿ★ (೭೬)
೪. ಉಪನ್ಯಾಸರತ್ನಮಾಲಾ★
೫. ಹರಿಭಕ್ತಿಲತಾ (೩೯೪)
೬. ಶ್ರುತಿತತ್ತ್ವಪ್ರಕಾಶಿಕಾ೧ (೫೦೭)
೭. ಸದಾಚಾರಸ್ಮೃತಿ★ (೬)
೮. ಸಂಕಲ್ಪಪದ್ಧತಿ★ (೬)
೯. ಏಕಾದಶೀನಿರ್ಣಯ★ (೫೫)
೧೦. ಭೂಗೋಲನಿರ್ಣಯ★(೫೫)
೧೧. ತಾರತಮ್ಯ (೮೧)
೧೨. ಚಿಂತಾಖಂಡನ★ (೧೫)
೧೩. ಪಾಷಂಡಖಂಡನವ್ಯಾಸಸ್ತೋತ್ರ (೩೦)
೧೪. ಪಾಷಂಡಮತಖಂಡನ[೭] (೧೨೯)

---

೧. ಪ್ರಕಾಶಿತ: ಶ್ರೀಸೋದಾವಾದಿರಾಜಮಠ, ಉಡುಪಿ
೨. ★ಪ್ರಕಾಶಿತ: ಶ್ರೀವಾದಿರಾಜಗ್ರಂಥಪ್ರಕಾಶನ ಸಮಿತಿ, ಉಡುಪಿ
೩. ★★ಪ್ರಕಾಶಿತ: ಟಿ.ಆರ್. ಕೃಷ್ಣಾಚಾರ್ಯ, ಕುಂಭಕೋಣಂ
೪. ಅನುಪಲಬ್ಧ ಕೃತಿ
೫. ಇದರ ಉಲ್ಲೇಖ ಪ್ರಮಾಣಪದ್ಧತಿಯ ಜನಾರ್ದನಭಟ್ಟೀಯ ಟಿಪ್ಪಣಿಯಲ್ಲಿ ಬಂದಿದೆ. – ಅತ್ರ ವಾದಿರಾಜತೀರ್ಥಾ ಆಶಂಕ್ಯ ಸಮಾದಧತೇ । ತಥಾ ಹಿ .... ।
(ಪ್ರತ್ಯಕ್ಷಪರಿಚ್ಛೇದ ಪು. ೯೮ )
೬. ಪ್ರಕಾಶಿತ : ಶ್ರೀಸೋದೆ ವಾದಿರಾಜಮಠ, ಉಡುಪಿ.
೭. ಪ್ರಕಾಶಿತ: ಚಿಕ್ಕೇರೂರು ಗೋವಿಂದಾಚಾರ್ಯರು, ಹರಪನಹಳ್ಳಿ

೧೫.ಕಲ್ಪಲತಾ★

೧೬.ವಿವರಣವ್ರಣ★

೧೭.ಶಕುನಮಾಲಾ[೧]

೧೮.ಮುಹೂರ್ತರಾಜ[೧]

೧೯.ಮಾಧ್ವವಾಗ್ವಜ್ರಾವಲಿ

೨೦.ಸಂಸ್ಕೃತ(ಬ್ರಹ್ಮ)ಸೂತ್ರಾರ್ಥ

೨೧.ನಯಸಿದ್ಧಾಂತಸಂಗ್ರಹ

೨೨.ಅಧಿಕರಣನಾಮವಲಿ★

೨೩.ಶ್ರೀಮದ್ಭಾಗವತಾನುಕ್ರಮಣಿಕಾ[೨] (೧೧೮)

೨೪.ವಾಯುಸ್ತುತಿಪುರಶ್ಚರಣವಿಧಿ[೧]

೨೫. ಪೂಜಾಕಲ್ಪ★

## ೪. ಸ್ವತಂತ್ರಗ್ರಂಥಗಳು(ಕಾವ್ಯಗಳು)

೧. ರುಗ್ಮಿಣೀಶವಿಜಯ[೩](೧೨೪೧)

೨. ಸರಸಭಾರತೀವಿಲಾಸ (೭೦೦)

೩. ತೀರ್ಥಪ್ರಬಂಧ (೨೧೫)

೪. ಕವಿಕದಂಬಕಂಠಭೂಷಾ (೧೫)

೫. ಭಾಗವತಸಂಗ್ರಹ[೪]

೬. ಸನತ್ಸುಜಾತೀಯವ್ಯಾಖ್ಯಾ

## ೫. ಸ್ವತಂತ್ರಗ್ರಂಥಗಳು(ಸ್ತೋತ್ರಗಳು)

೧. ರಮೇಶಸ್ತುತಿ (೪)

೨. ವಿಷ್ಣುಸ್ತುತಿ (೯)

೩. ದಶಾವತಾರಸ್ತೋತ್ರ (೯)

೪. ದಶಾವತಾರಸ್ತುತಿ (೩೪)

೫. ಚತುರ್ವಿಂಶತಿ ಮೂರ್ತಿಸ್ತೋತ್ರ (೮)

೬. ವರಾಹಹಯವದನ ಸ್ತೋತ್ರ(೬)

೭. ವರಾಹಪಂಚಕ (೫)

೮. ನರಹರ್ಯಷ್ಟಕ (೯)

೯. ತ್ರಿವಿಕ್ರಮಸ್ತೋತ್ರ (೧೮)

೧೦. ಶ್ರೀರಾಮದಶಕ (೨೪)

೧೧. ಶ್ರೀರಾಮಪಂಚಕ (೬)

೧೨. ಶ್ರೀರಾಮಕವಚ (೧೧)

೧೩. ರೂಪ್ಯಪೀಠಕೃಷ್ಣಸ್ತುತಿ (೯)

೧೪. ಶ್ರೀಕೃಷ್ಣಸ್ತವ (೯)

೧೫. ಶ್ರೀಕೃಷ್ಣಸ್ತುತಿ (೯)

೧೬. ಅಷ್ಟಮಹಿಷೀಕೃತಕೃಷ್ಣಸ್ತುತಿ (೯)

೧೭. ಶ್ರೀಕೃಷ್ಣಸ್ತೋತ್ರ (೯)

೧೮. ಶ್ರೀಕೃಷ್ಣ ಆಪಾದಸ್ತೋತ್ರ (೧೧)

೧೯. ಹರ್ಯಷ್ಟಕ (೯)

೨೦. ಹಯಾಸ್ಯದಶಕ (೧೧)

೨೧. ಹಯವದನಾಷ್ಟಕ (೯)

೨೨. ಹಯಾಸ್ಯನುತಿಪಂಚಕ (೬)

೨೩.ಹಯಗ್ರೀವಧ್ಯಾನಪ್ರಕರಣ (೩೯)

೨೪. ಹಯಗ್ರೀವಸ್ತುತಿ (೧೮)

---

೧. ಹಸ್ತಪ್ರತಿ : ಶ್ರೀಜಯತೀರ್ಥಸಂಸ್ಕೃತಹಸ್ತಲಿಖಿತ ಗ್ರಂಥಾಲಯ, ವ್ಯಾಸನಕೆರೆ.

೨. ಪ್ರಕಾಶಿತ

೩. ಇದು ಶ್ರೀನಾರಾಯಣಾಚಾರ್ಯರ ಸಂಸ್ಕೃತ ವ್ಯಾಖ್ಯಾನದೊಂದಿಗೆ ತಿರುಚಾನೂರಿನ ಶ್ರೀಮನ್ಮಧ್ವ ಸಿದ್ಧಾಂತೋನ್ನಾಹಿನೀಸಭಾದಿಂದ ಪ್ರಕಾಶಿತವಾಗಿದೆ(೧೯೯೦).

೪. ಇದರ ಹಸ್ತಪ್ರತಿಯು ಉಡುಪಿ ಶ್ರೀಸೋದೆಮಠದ ಗ್ರಂಥಾಗಾರದಲ್ಲಿದೆ :
ಶ್ರೀಭಾಗವತದುಗ್ಧಾಬ್ಧೇರುದ್ಧೃತಂ ಸಂಗ್ರಹಾಮೃತಮ್ ।
ವಾದಿರಾಜಾಖ್ಯಯತಿನಾ ಮಾಧ್ವಭೂದೇವತೃಪ್ತಯೇ ॥
- ಎಂಬುದು ಈ ಗ್ರಂಥದ ಕೊನೆಯ ಶ್ಲೋಕ.

೨೫. ಹಯಗ್ರೀವಸಂಪದಾಸ್ತೋತ್ರ (೪)
೨೭. ಶ್ರೀಹಯಗ್ರೀವಸ್ತೋತ್ರ (೧೬)
೨೯. ಶ್ರೀವ್ಯಾಸವರ್ಣನ (೨)
೩೧. ವೇಂಕಟೇಶಮಂಗಲಾಷ್ಟಕ (೯)
೩೩. ಉಕ್ತಿಪ್ರತ್ಯುಕ್ತಿಸ್ತೋತ್ರ (೩)
೩೫. ಪ್ರಾರ್ಥನಾದಶಕ (೧೨)
೩೭. ಶ್ಲೋಕತ್ರಯ(ನೈವೇದ್ಯವಿಧಿ)(೪)
೩೯. ಋಣಮೋಚನಸ್ತೋತ್ರ (೯)
೪೧. ಸಪ್ತರಾತ್ರೋತ್ಸವಪ್ರಕಾರ (೨೩)
೪೩. ಶ್ರೀತ್ರೀಶಗುಣದರ್ಪಣ (೧೯)
೪೫. ದುರ್ಗಾಸ್ತವ (೧೫)
೪೭. ಮಧ್ವಾಷ್ಟಕ (೯)
೪೯. ಮಧ್ವಮುನಿಪ್ರತಾಪಾಷ್ಟಕ (೯)
೫೧. ಶ್ರೀಪಾದರಾಜಷಟ್ಕ (೯)
೫೩. ಕುರುಸ್ತುತಿ (೧೫)
೫೫. ಶ್ರೀಕೃಷ್ಣರಾಮಾವತಾರಚರಿತರತ್ನಸಂಗ್ರಹ
೫೭. ಶ್ರೀ ವೇಂಕಟೇಶ ಮಂಗಳಾಷ್ಟಕ-೨★

೨೬. ಹಯಗ್ರೀವಸ್ತೋತ್ರ (೧೧)
೨೮. ಶ್ರೀವೇದವ್ಯಾಸಾಷ್ಟಕ (೯)
೩೦. ವೇಂಕಟೇಶಸ್ತುತಿಃ (೨)
೩೨. ಅಕ್ಷಪಂಚಕ (೬)
೩೪. ಧೀಶುದ್ಧಿಸ್ತೋತ್ರ (೧೨)
೩೬. ದೇವತಾಹ್ವಾನಪ್ರಕಾರ(ಗದ್ಯ)★
೩೮. ಪರಮಸ್ತುತಿ (೯)
೪೦. ಸ್ವಪ್ನಪದ್ಯ (೧)
೪೨. ಅಭಯಸಂಸ್ತವ (೧೩)
೪೪. ಲಕ್ಷ್ಮ್ಯಾರ್ಯಾವೃತ್ತ (೧೩)
೪೬. ಅವತಾರತ್ರಯಸ್ತೋತ್ರ (೩)
೪೮. ವಾಯುಸ್ತುತಿ (೧೫)
೫೦. ನವಗ್ರಹಸ್ತೋತ್ರ (೫)
೫೨. ಸಹಸ್ರಾರಸ್ತುತಿ(ಚಕ್ರಸ್ತುತಿ)(೧೩)
೫೪. ಹರಿಭಕ್ತ್ಯಾಷ್ಟಕ (೯)
೫೬. ಶ್ರೀವೇಂಕಟೇಶಸ್ತೋತ್ರ
೫೮. ಶ್ರೀಪೂರ್ಣಪ್ರಜ್ಞಗ್ರಂಥಮಾಲಿಕಾ★

## ೬. ಸ್ವತಂತ್ರಕೃತಿಗಳು(ಕನ್ನಡ ಕೃತಿಗಳು)

೧. ವೈಕುಂಠವರ್ಣನೆ
೨. ಲಕ್ಷ್ಮೀಶೋಭನ
೩. ಸ್ವಪ್ನಪದ
೪. ಗುಂಡಕ್ರಿಯೆ
೫. ಭ್ರಮರಗೀತೆ
೬. ನಮಸ್ಕಾರಸ್ತೋತ್ರ
೭. ಕೇಶವನಾಮ
೮. ನೇವೇದ್ಯಪ್ರಕರಣ
೯. ಅವತಾರತ್ರಯಸುವಾಲಿ
೧೦. ನೂರಾರು ದೇವರನಾಮಗಳು
೧೧. ಉಗಾಭೋಗಗಳು
೧೨. ಸುಳಾದಿಗಳು
೧೩.ಶ್ರೀಕೃಷ್ಣಬಾಲಲೀಲೆ
೧೪. ರಾಗಮಾಲಿಕೆ

ಯುಕ್ತಿವೈಭವದ ದೃಷ್ಟಿಯಿಂದ ಅವರ ಸಕಲಕೃತಿಗಳೂ ಯುಕ್ತಿಮಲ್ಲಿಕೆಗಳಾಗಿವೆ. ಶೈಲಿಯ ರಮ್ಯತೆಯಿಂದ 'ಸರಸಭಾರತೀವಿಲಾಸ'ಗಳಾಗಿವೆ; ಕಾವ್ಯದ ದೃಷ್ಟಿಯಿಂದ ರುಗ್ಮಿಣೀಶ-ವಿಜಯವಾಗಿವೆ; ವ್ಯಾಖ್ಯಾನಕೌಶಲದ ದೃಷ್ಟಿಯಿಂದ 'ಗುರ್ವರ್ಥದೀಪಿಕೆ'ಗಳಾಗಿವೆ;

---

೧. ಶ್ರೀವಾದಿರಾಜರಿಂದ ರಚಿತವಾದ ಈ ಎರಡು ಕೃತಿಗಳು ನನ್ನ ಸಂಗ್ರಹ (ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ ವ್ಯಾಸನಕೆರೆ)ದಲ್ಲಿ ಇತ್ತೀಚೆಗೆ ದೊರೆತಿವೆ.

★ ಇವೆಲ್ಲವೂ ನಮ್ಮ ಪ್ರಕಾಶನದ 'ಪೂಜಾಕಲ್ಪ' ಎಂಬ ಕೃತಿಯಲ್ಲೂ 'ಸ್ತೋತ್ರಮಾಲಿಕಾ ಭಾಗ-೨' ಕೃತಿಯಲ್ಲೂ ಪ್ರಕಾಶಿತವಾಗಿವೆ.

ಮೂಲಗ್ರಂಥಗಳ 'ಭಾವಪ್ರಕಾಶಿಕೆ'ಗಳಾಗಿವೆ. ಒಟ್ಟಾಗಿ ಮಹಾಭಾರತಾದಿ ಮೂಲಗ್ರಂಥಗಳಿಗೆ ಅಪೂರ್ವ 'ಅಲಂಕಾರ' ಪೂಜೆಯಾಗಿವೆ; ಪರಮತವಿಮರ್ಶೆಯ ದೃಷ್ಟಿಯಿಂದ 'ಪಾಷಂಡಮತಖಂಡನ'ವಾಗಿವೆ; ಕವಿಕದಂಬಕ್ಕೆ 'ಕಂಠಭೂಷ'ವಾಗಿವೆ; ಹಯಗ್ರೀವ, ಕೃಷ್ಣಾದಿಭಗವದ್ರೂಪಗಳ ದಿವ್ಯಸ್ತೋತ್ರವಾಗಿವೆ; 'ಲಕ್ಷ್ಮೀಸ್ತೋತ್ರ'ಗಳಾಗಿ ಸಂಪತ್ಕರವೂ 'ಮಧ್ವಸ್ತುತಿ'ಗಳಾಗಿ ತತ್ತ್ವಜ್ಞಾನಜನಕವೂ ಆಗಿವೆ. ಅವರ ಚಿಂತನೆ ತತ್ತ್ವಶಾಸ್ತ್ರವಾದರೆ, ರಚನೆ ಮಹಾಕಾವ್ಯವಾಗಿದೆ.

## ತೀರ್ಥಪ್ರಬಂಧ

ತೀರ್ಥಪ್ರಬಂಧವು ಕ್ರಮವಾಗಿ ಪಶ್ಚಿಮ, ಉತ್ತರ, ಪೂರ್ವ ಮತ್ತು ದಕ್ಷಿಣ ಎಂಬ ಹೆಸರುಗಳುಳ್ಳ ನಾಲ್ಕು ಭಾಗಗಳನ್ನೊಳಗೊಂಡಿರುವ ಒಂದು ಅಪೂರ್ವ (ಪ್ರಬಂಧ)ಕಾವ್ಯ; ಇದರಲ್ಲಿನ ಒಟ್ಟು ಶ್ಲೋಕಗಳ ಸಂಖ್ಯೆ ೨೩೫ (೯೯+೪೬+೪೩+೪೭). ಇದು ಶ್ರೀವಾದಿರಾಜರು ತಾವು ಸಂಚಾರಕಾಲದಲ್ಲಿ ಸ್ವತಃ ಸಂದರ್ಶಿಸಿದ್ದ ಭರತಖಂಡದ ವೈಷ್ಣವತೀರ್ಥಕ್ಷೇತ್ರಗಳ ಪರಿಚಯಾತ್ಮಕವಾದ ಕೃತಿ. ಅನುಷ್ಟುಪ್,ಸ್ರಗ್ಧರಾ, ಶಾರ್ದೂಲವಿಕ್ರೀಡಿತ ವಸಂತತಿಲಕ ಮೊದಲಾದ ಬಗೆಬಗೆಯ ವೃತ್ತಗಳಿಂದ ಕೂಡಿದೆ. ಶಬ್ದಾಲಂಕಾರ ಅರ್ಥಾಲಂಕಾರಗಳಿಂದ ಶೋಭಿಸುತ್ತಿದೆ. ಪಾಪಸಮೂಹವನ್ನು ತೊಡೆದುಹಾಕುವಂತಹ ಶ್ಲಾಘನೀಯವಾದ ಅರ್ಥಗಳನ್ನು ಹೊಂದಿ ಮನೋಹರವಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ ಹಯವದನನ ಕೃಪಾಸಮುದ್ರದಿಂದ ಹೊರಹೊಮ್ಮಿರುವ ಅಮೋಘರತ್ನವಾಗಿದೆ. :

> ನಾನಾವೃತ್ತಂ ಸ್ವಯಾತ್ರಾಕ್ರಮಪರಿಚಿತಸುಕ್ಷೇತ್ರಮಾಹಾತ್ಮ್ಯಯುಕ್ತಂ
> ಶಬ್ದಾಲಂಕಾರಬದ್ಧಂ ಶಮಲಕುಲಹರಶ್ಲಾಘನೀಯಾರ್ಥಹೃದ್ಯಮ್ ।
> ಶ್ರೀನಾಥಪ್ರೀತಿಹೇತೋರ್ಹಯವದನಕೃಪಾಂಬೋಧಿಸಂಭೂತರತ್ನ
> ಚಕ್ರೇ ತೀರ್ಥಪ್ರಬಂಧಂ ಬಹುಗುಣಭರಿತಂ ವಾದಿರಾಜೋ ಯತೀಂದ್ರಃ ॥(೪- ೪೬)

ಅವುಗಳ ಹೆಸರೇ ಸೂಚಿಸುವಂತೆ, ಇಲ್ಲಿಯ ನಾಲ್ಕು ಪ್ರಬಂಧಗಳಲ್ಲಿ ಪಶ್ಚಿಮಾದಿ ದಿಕ್ಕುಗಳಲ್ಲಿರುವ ತೀರ್ಥಕ್ಷೇತ್ರಾದಿಗಳ ಮತ್ತು ಅವುಗಳ ಅಧಿಪತಿಗಳ ಬಗ್ಗೆ ಸಂಕ್ಷಿಪ್ತವೂ, ಅಧಿಕೃತವೂ ಆದ ವಿವರಗಳು ಸಂಕಲಿತವಾಗಿವೆ. :

> ತೀರ್ಥಕ್ಷೇತ್ರತದೀಶಾನಾಂ ಮಾಹಾತ್ಮ್ಯಾನಿ ಯಥಾಮತಿ ।
> ವಾದಿರಾಜೋಯತಿಃ ಸ್ತೌತಿ ಪದ್ಯೈಃ ಕತಿಪಯೈಃ ಕವಿಃ ॥ (೧-೫)

ತೀರ್ಥಕ್ಷೇತ್ರಗಳ ವೈದಿಕ, ಐತಿಹಾಸಿಕ ಹಾಗು ಪೌರಾಣಿಕ ಹಿನ್ನೆಲೆಗಳನ್ನು ಸೂಚ್ಯವಾಗಿ ತಿಳಿಸುತ್ತ ಅವುಗಳ ಆಧ್ಯಾತ್ಮಿಕಮಹತ್ತ್ವವನ್ನು ತಿಳಿಸಿಕೊಡುವುದು ಈ ಕೃತಿಯ ವೈಶಿಷ್ಟ್ಯ. ನಿರೂಪಣೆಯು ಎಲ್ಲಿಯೂ ಯಾಂತ್ರಿಕವಾಗದೆ, ನೀರಸವೆನ್ನಿಸದೆ ತನ್ನ ಕಾವ್ಯಶೈಲಿಯಿಂದ ಮೆರೆದಿದೆ. ಯಾವುದೇ ತೀರ್ಥಕ್ಷೇತ್ರವನ್ನು ಪರಿಚಯಿಸುವಾಗಲೂ ಅಲ್ಲಿಯ ಅತ್ಯಂತ ಮುಖ್ಯವಿವರಗಳನ್ನು, ದೇವತಾಮಹತ್ತ್ವವನ್ನು ಸರ್ವಸಂಗ್ರಾಹಕವಾಗುವಂತೆ ನಿರೂಪಿಸುವ

ಕೌಶಲದಿಂದಾಗಿ ಗಾತ್ರದಲ್ಲಿ ಚಿಕ್ಕದಾಗಿ ತೋರುವ ಈ ಕೃತಿಯು ತನ್ನ ಅರ್ಥಗಾಂಭೀರ್ಯದಿಂದಾಗಿ ಪ್ರೌಢಗ್ರಂಥದ ಸೊಬಗನ್ನು ಪಡೆದಿದೆ. ತನ್ನ ಕಾವ್ಯದ ಸೊಬಗಿನಿಂದಾಗಿ ಹೃದಯವನ್ನು ತಟ್ಟುವ ಈ ಕೃತಿ, ತಾತ್ತ್ವಿಕಮಹತ್ತ್ವದಿಂದಾಗಿ ಬುದ್ಧಿಯನ್ನು ಅರಳಿಸುತ್ತದೆ. ಪ್ರತಿಯೊಂದು ಶ್ಲೋಕವೂ ಒಂದಲ್ಲ ಒಂದು ರೀತಿಯಲ್ಲಿ ಸ್ತೋತ್ರಚ್ಛಾಯೆಯನ್ನು ಉಳಿಸಿಕೊಂಡಿರುವುದರಿಂದ ಇಡೀ ಗ್ರಂಥವು ಆಯಾ ತೀರ್ಥಕ್ಷೇತ್ರಗಳಲ್ಲಿನ ದೇವತಾಸ್ತೋತ್ರವಾಗಿಯೂ ಮಾನ್ಯವಾಗುತ್ತದೆ. ಶ್ರೀವಾದಿರಾಜರ ಇತರಕೃತಿಗಳಂತೆ ಇದರಲ್ಲೂ ಅನುಪ್ರಾಸಾಲಂಕಾರವು ಪ್ರತಿಶ್ಲೋಕದಲ್ಲೂ ತುಂಬಿದೆ; ಶ್ಲೇಷಯಮಕಗಳೆಂಬ ಇತರ ಶಬ್ದಾಲಂಕಾರಗಳು ಅನೇಕ ಕಡೆ ಬಂದಿವೆ. ಉಪಮಾ, ರೂಪಕ, ಉತ್ಪ್ರೇಕ್ಷೆ ಮೊದಲಾದ ಅರ್ಥಾಲಂಕಾರಗಳಂತೂ ಯಥೋಚಿತವಾಗಿ ಕೃತಿಯ ಉದ್ದಕ್ಕೂ ಕಂಡುಬರುತ್ತವೆ. ಶ್ರೀಕೃಷ್ಣ, ವಿಠಲ, ಶ್ರೀನಿವಾಸ, ರಂಗನಾಥ, ಅನಂತಪದ್ಮನಾಭ ಮೊದಲಾದ ಭಗವದ್ರೂಪಗಳ ವರ್ಣನೆಯಲ್ಲಿನ ಉತ್ಪ್ರೇಕ್ಷೆ ಮೂಲತಃ ಶಾಸ್ತ್ರತತ್ತ್ವದ ಹಿನ್ನೆಲೆಯಿಂದಾಗಿ ಮನಸ್ಸಿನಲ್ಲಿ ಮೂಡಿಸುವ ಚಿತ್ರ ಅಪೂರ್ವ; ಹರಿಹರರ ಭೇದ, ಶ್ರೀರಾಮನ ಬ್ರಹ್ಮಹತ್ಯಾದಿಸಕಲದೋಷದೂರತ್ವ ಮೊದಲಾದವುಗಳನ್ನು ಸಮರ್ಥಿಸುವಾಗ ಕಾಣುವ ಯುಕ್ತಿಕೌಶಲ ಅವರ ಯುಕ್ತಿಮಲ್ಲಿಕಾಗ್ರಂಥವನ್ನು ಜ್ಞಾಪಿಸುತ್ತವೆ. ಶ್ರೀವಾದಿರಾಜರು ತಮ್ಮ 'ಕಾಲು ತೊಳೆದವನೊಬ್ಬ' ಎಂಬ ಹದಿನೇಳು ನುಡಿಗಳ ರಾಗಮಾಲಿಕೆಯ ಕೃತಿಯೊಂದರಲ್ಲಿ ಶ್ರೀರಾಮದೇವರಿಗೆ ರಾವಣವಧನಿಮಿತ್ತವಾದ ಬ್ರಹ್ಮದೋಷಪ್ರಸಕ್ತಿ ಸರ್ವಥಾ ಇಲ್ಲ ಎಂಬುದನ್ನು ತುಂಬ ವಿವರವಾಗಿ ಪ್ರತಿಪಾದಿಸಿರುವರು.

ಮಹಾಕವಿ ಕಾಳಿದಾಸನನ್ನು ಕೌಶಲದಿಂದ ಖಂಡಿಸುವ (೪/೭) ಈ ಕೃತಿಯಲ್ಲಿನ ಮಂಗಲದಿಂದ ಉಪಸಂಹಾರದವರೆಗಿನ ಒಟ್ಟು ೨೩೫ ಶ್ಲೋಕಗಳಲ್ಲಿ ಒಂದೂ ನೀರಸವಾಗಿಲ್ಲ; ತತ್ತ್ವಶೂನ್ಯವಾಗಿಲ್ಲ ಎಂಬುದು ಅತ್ಯಪೂರ್ವ ಸಾಧನೆ; ಪ್ರತಿಪಾದ್ಯವಸ್ತುವು ತೀರ್ಥವಾಗಿರಲಿ, ಕ್ಷೇತ್ರವಾಗಿರಲಿ, ನದಿಯಾಗಿರಲಿ, ದೇವತೆಯಾಗಿರಲಿ, ಹರಿಯಾಗಿರಲಿ, ಹರನಾಗಿರಲಿ, ನರಸಿಂಹನಾಗಿರಲಿ ಅವುಗಳನ್ನು ಸದಾ ಮನನೀಯವಾಗಿಸುವಂತೆ ವರ್ಣಿಸಿರುವುದು ಇಲ್ಲಿಯ ಅಸಾಮಾನ್ಯ ಸಾಧನೆ.

## ತೀರ್ಥಪ್ರಬಂಧ ಪ್ರಶಸ್ತಿ

ಅಟನ್ ಸ್ವಯಂ ತೀರ್ಥಸಮೂಹಮುರ್ವ್ಯಾಂ ತೀರ್ಥಪ್ರಬಂಧಂ ಕೃತವಾನ್ ದಯಾಲುಃ ।
ಜನಾಂಸ್ತದಾವರ್ತನಶೀಲಿನಶ್ಚ ಚಕಾರ ತೀರ್ಥಾಟನಪುಣ್ಯಭಾಜಃ ॥

– ವೃತ್ತರತ್ನಸಂಗ್ರಹ (೧/೩೪)

ಸ್ವದೃಷ್ಟಕ್ಷೇತ್ರತೀರ್ಥಾದಿಮಾಹಾತ್ಮ್ಯಸ್ಯಾವಬೋಧಕಮ್ ।
ತೀರ್ಥಪ್ರಬಂಧಂ ಕೃತವಾನ್ ಪಠತಾಮಘನಾಶನಮ್ ॥
ಪಠನಾದ್ಯಸ್ಯ ತೀರ್ಥಾದಿಸೇವನಾಲ್ಲಭ್ಯಮಂಜಸಾ ।
ಸುಕೃತಂ ಜನತಾಯಾಃ ಸ್ಯಾತ್ತಂ ಸ್ತೋತುಂ ಕೋ ನು ಶಕ್ನುಯಾತ್ ।

- ಶ್ರೀವಾದಿರಾಜಗುರುವರಚರಿತಾಮೃತ (೨/೧೬,೧೭)

ಅರ್ಥಿಗಳಿಗೆ ಪರಮಾರ್ಥವ ತೋರುವ
ತೀರ್ಥಪ್ರಬಂಧವ ಕೀರ್ತನೆಗೈದೇ - ವಾದಿರಾಜ। -ಶ್ರೀಜಗನ್ನಾಥದಾಸರು

ಮೊದಲಾದ ಮಾತುಗಳಲ್ಲಿ ತೀರ್ಥಪ್ರಬಂಧದ ಹಿರಿಮೆ ವ್ಯಕ್ತವಾಗಿದೆ; ಇದರ ಶ್ರವಣ, ಪಠಣಗಳು ಸಹ ತೀರ್ಥಯಾತ್ರೆಯ ಫಲವನ್ನು ತಂದುಕೊಡುತ್ತವೆ ಎಂಬುದು ಇದರ ಫಲಶ್ರುತಿ. ಇದನ್ನು ಓದಿ ಮತ್ತು ಓದುತ್ತ ತೀರ್ಥಯಾತ್ರೆ ಮಾಡುವುದು ಇನ್ನೂ ಶ್ರೇಯಸ್ಕರ; ಇದನ್ನು ಓದದೇ ಸಮಗ್ರತೀರ್ಥಕ್ಷೇತ್ರ ಸಂಚರಿಸುವವನಿಗಿಂತ ಇದನ್ನು ಓದುವವನಿಗೆ ಬರುವ ಪುಣ್ಯ ತುಂಬಾ ಹೆಚ್ಚು ಎಂಬುದು ನಿಃಸಂಶಯ; ಮನೆಯಲ್ಲಿ ಕುಳಿತೇ ಇದನ್ನು ಓದುವ ಮೂಲಕ ಸಕಲತೀರ್ಥಯಾತ್ರೆಗಳ ಫಲವನ್ನು ಕರುಣಿಸುವ ಇಂತಹ ಗ್ರಂಥವನ್ನು ಸಜ್ಜನವರ್ಗಕ್ಕೆ ನೀಡಿರುವ ಶ್ರೀವಾದಿರಾಜರ ಉಪಕಾರ ಅವಿಸ್ಮರಣೀಯವಾದುದು. ಶ್ರೀಜಗನ್ನಾಥದಾಸರು ತಿಳಿಸಿರುವಂತೆ ಇದು ಅರ್ಥಿಗಳಿಗೆ ಪರಮಾರ್ಥವನ್ನು ತೋರುವ ಅಪೂರ್ವಕೃತಿ. ವೃತ್ತರತ್ನಸಂಗ್ರಹ ಉಲ್ಲೇಖಿಸುವಂತೆ ಅದರ ಶ್ರವಣಮನನಗಳನ್ನು ಮಾಡುವ ಜನಗಳಿಗೂ ತೀರ್ಥಯಾತ್ರೆಯ ಪುಣ್ಯವನ್ನು ಕರುಣಿಸುವ ಮಹೋನ್ನತ ಕೃತಿ. ಶ್ರೀವಾದಿರಾಜಗುರುವರಚರಿತಾಮೃತ ತಿಳಿಸುವಂತೆ ತೀರ್ಥಕ್ಷೇತ್ರಗಳ ಮಾಹಾತ್ಮ್ಯೆಯ ಪರಿಜ್ಞಾನದೊಂದಿಗೆ ಪಾಪನಾಶನಕ್ಕೂ ಕಾರಣವಾಗುವ ಪಾವನ ಕೃತಿ.

ಇದು ಶ್ರೀವಾದಿರಾಜರ ವ್ಯಾಪಕ ಸಂಚಾರದ ಐತಿಹಾಸಿಕದಾಖಲೆಯಾಗಿ ಅವರ ವ್ಯಕ್ತಿತ್ವದ ಹಿರಿಮೆಯನ್ನೂ, ಉಪದೇಶಗಳ ತಾತ್ತ್ವಿಕದಾಖಲೆಯಾಗಿ ಅವರು ನಂಬಿ ಬದುಕಿದ ಸಿದ್ಧಾಂತದ ಉಪಾದೇಯತ್ವವನ್ನೂ ಸಾರುತ್ತದೆ. ಪರಿಶುದ್ಧ ವೈಷ್ಣವತತ್ತ್ವಗಳ ಹಿನ್ನೆಲೆಯಲ್ಲಿ ಎಂತಹ ಉಜ್ಜ್ವಲಕಾವ್ಯ ಕೃತಿ ಹೊರಹೊಮ್ಮಬಲ್ಲದು ಎಂಬುದಕ್ಕೆ ತೀರ್ಥಪ್ರಬಂಧವು ಒಂದು ಜ್ವಲಂತ ನಿದರ್ಶನ. ಅವರ ರುಗ್ಮಿಣೀಶವಿಜಯದ '**ರೋಮ್ಣಾಂ ಹರ್ಷಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ**' ಎಂಬ ಮಾತುಗಳು ಯಥೋಚಿತವಾಗಿ ಅವರ ಇತರ ಕೃತಿಗಳಿಗೂ,ಇದಕ್ಕೂ ಅನ್ವಯಿಸುತ್ತವೆ.

ಸಂದರ್ಶಿಸಿದ ನದೀ, ನಗರಗಳ ಹಿರಿಮೆಯನ್ನು ಸಾರುವ 'ಪ್ರವಾಸಸಾಹಿತ್ಯ'ವೆಂಬ ಸಾಹಿತ್ಯಪ್ರಕಾರಕ್ಕೆ ಸೇರುವ ಕೃತಿಗಳು ಸಮಗ್ರಸಂಸ್ಕೃತಸಾಹಿತ್ಯದಲ್ಲೇ ವಿರಳ. ವೇಂಕಟಾಧ್ವರಿಯ 'ವಿಶ್ವಗುಣಾದರ್ಶಚಂಪೂ' ಕೃತಿಯು ಒಂದರ್ಥದಲ್ಲಿ ಪ್ರವಾಸಸಾಹಿತ್ಯವಾದರೂ ಸಾಮಾಜಿಕ ವಿವೇಚನೆಯ ಮಟ್ಟಿಗೆ ಸೀಮಿತವಾಗುವುದರಿಂದಾಗಿ ಅದು ಮನಸ್ಸನ್ನು ತಾತ್ತ್ವಿಕವಾಗಿ ತಟ್ಟುವಲ್ಲಿ ಸೋಲುತ್ತದೆ. ಸಮೃದ್ಧ ತಾತ್ತ್ವಿಕಚಿಂತನೆಯ ಅಭಾವ ಅದರ ಮತ್ತೊಂದು ಗಮನಾರ್ಹ ಇತಿಮಿತಿಯಾಗಿದೆ; ಸಮರಪುಂಗವದೀಕ್ಷಿತ(೧೫೭೪-೧೬೩೦)ನ ಯಾತ್ರಾಪ್ರಬಂಧವೆಂಬ ಮತ್ತೊಂದು ಕೃತಿಯೂ ಇಂತಹುದೇ ಆಗಿದೆ. '**ವಿಶ್ವಗುಣಾದರ್ಶಚಂಪೂ**' ಅದರ ಹೆಸರೇ ತಿಳಿಸುವಂತೆ ಗದ್ಯಪದ್ಯಾತ್ಮಕವಾದ ಕೃತಿ. ಯಾತ್ರಾಪ್ರಬಂಧ ಪ್ರಧಾನವಾಗಿ ಗದ್ಯಕೃತಿ. ಆದರೆ ಕೇವಲ ಪದ್ಯಾತ್ಮಕವಾದ ಕೃತಿ ಎಂಬುದು ತೀರ್ಥಪ್ರಬಂಧದ ಹಿರಿಮೆ. ಅವೆರಡೂ ಪ್ರಧಾನವಾಗಿ ಲೌಕಿಕಹಿನ್ನೆಲೆಯ

ಯಾತ್ರಾವಿವರಗಳನ್ನು ನೀಡಿದರೆ ತೀರ್ಥಪ್ರಬಂಧ ಮೂಲತಃ ತಾತ್ತ್ವಿಕಕೃತಿ. ಆದರಿಂದಾಗಿಯೇ ಅವೆರಡರಿಂದ ಅತ್ಯಂತಭಿನ್ನವಾಗಿ ಕಾಣುವ ಅತ್ಯಂತ ರೋಚಕ ಕೃತಿ. ಆಧ್ಯಾತ್ಮಿಕ ಪ್ರವಾಸಕಥನವಾಗಿ 'ತೀರ್ಥಪ್ರಬಂಧ'ವು ಪೌರಾಣಿಕ ಕಾಲದ ಅನಂತರ ಶ್ರೀವಾದಿರಾಜರೇ ಹೇಳಿರುವಂತೆ. 'ಅಪ್ರತಿದ್ವಂದ್ವ' ಕೃತಿ; ಮಹಾಭಾರತದ ವನಪರ್ವದಲ್ಲಿ, ಪದ್ಮಪುರಾಣ, ಸ್ಕಂದಪುರಾಣ, ಮತ್ಸ್ಯಪುರಾಣ ಮೊದಲಾದ ಪುರಾಣಗಳಲ್ಲಿ ವಿಪುಲವಾಗಿರುವ ಈ ಪ್ರಕಾರವು ಅನಂತರದ ಸಂಸ್ಕೃತಸಾಹಿತ್ಯದಲ್ಲಿ ಮಹಾಕವಿಗಳೆನ್ನಿಸಿದ ಕಾಳಿದಾಸ, ಬಾಣಾದಿಗಳ ಕೃತಿಗಳಲ್ಲಿ ಪ್ರಾಸಂಗಿಕವಾಗಿ ರಾಜಧಾನಿಗಳ, ಆಶ್ರಮಗಳ ವರ್ಣನೆಗಳ ಮಟ್ಟಿಗೆ ಮಾತ್ರ ಸೀಮಿತಗೊಂಡಿತು. ಹೀಗಾಗಿ ತೀರ್ಥಪ್ರಬಂಧ ಸಂಸ್ಕೃತಸಾಹಿತ್ಯದ ವಿರಳಾತಿವಿರಳ ಕೃತಿ ಎನ್ನಿಸಿ ಅದ್ವಿತೀಯ ಎಂದು ಮಾನ್ಯವಾಗಿದೆ.

## ಶ್ರೀವಾದಿರಾಜರ ಶೈಲಿಯ ಅಪೂರ್ವತೆ

ಶ್ರೀವಾದಿರಾಜರದು ಸಂಸ್ಕೃತ ಸಾಹಿತ್ಯದಲ್ಲಿಯೇ ಅತ್ಯಂತ ಅಪೂರ್ವವೆನ್ನಿಸುವ ರಮ್ಯಶೈಲಿ. ಅವರ ರಚನೆ ಗದ್ಯವಿರಲಿ, ಪದ್ಯವಿರಲಿ ಅನುಪ್ರಾಸಾದಿ ಅಲಂಕಾರಗಳಿಂದ ತುಂಬಿ ಮನಸ್ಸಿಗೆ ಮುದನೀಡುತ್ತವೆ. ತತ್ತ್ವಶಾಸ್ತ್ರದ ಗಹನವಿಚಾರಗಳನ್ನು ರಮಣೀಯವಾದ ಶಬ್ದಜಾಲದಲ್ಲಿ ಅಪೂರ್ವಯುಕ್ತಿಗಳೊಂದಿಗೆ ನಿರೂಪಿಸುವ ಅವರ ಶೈಲಿ ದಾರ್ಶನಿಕಸಾಹಿತ್ಯದಲ್ಲೇ ತೀರ ವಿನೂತನ. ಅದು ಪಾಮರರಂಜಕ, ಪಂಡಿತಬೋಧಕ; ಎಂತಹ ಅರಸಿಕನ ಮನಸ್ಸಿಗೂ ದಿವ್ಯರಸಾನುಭೂತಿಯನ್ನು ನೀಡುವ ಮಾಂತ್ರಿಕಶಕ್ತಿ ಅದರದು :

ವಾದಿರಾಜಮುಖಾಂಭೋಜನಿಃಸೃತಾ ವಾಕ್‌ಸರಸ್ವತೀ ।
ಅಶ್ವಗ್ರೀವಯಶೋಗಂಗಾಸಂಗಾಽಸ್ಮಾನ್ ಪಾವಯತ್ವಲಮ್ ॥
ಚಿತ್ರಾಲಂಕಾರರಮ್ಯಾ ಮೃದುಪದವಿಲಸನ್ನರ್ಮಗಂಭೀರಭಾವಾ
ಸತ್ಸರ್ಗಾಶ್ಚರ್ಯಬಂಧಾ ನವರಸಭರಿತಾ ಸ್ತುತ್ಯಸಂಸ್ಥಾನಯುಕ್ತಾ ।
ಕಾವ್ಯಶ್ರೀರಾವಿರಾಸೀತ್ ಯದಮಲಹೃದಯಾಚ್ಛ್ರೀಪತೇರ್ಯತ್ರ ವಾಸಃ
ಸೋಽವ್ಯಾಚ್ಛ್ರೀವಾದಿರಾಜಾಮೃತಮಯಜಲಧಿರ್ಯುಕ್ತಿರತ್ನಾಕರೋ ನಃ ॥

- ಶ್ರೀನಾರಾಯಣಾಚಾರ್ಯರು (ರುಗ್ಮಿಣೀಶವಿಜಯ ವ್ಯಾಖ್ಯಾನ)

ಸವಿನೋದಂ ಸಾಟ್ಟಹಾಸಂ ಸಸ್ಮಿತಂ ಸುಸ್ವರಾನ್ವಿತಮ್ ।
ಸರಹಸ್ಯಂ ಸಪ್ರಮಾಣಂ ವಾದಿರಾಜವಚೋಽಮೃತಮ್ ॥
ಸಂಪ್ರದಾಯಯುತಂ ತತ್ತ್ವನಿರ್ಣಯಾಢ್ಯಂ ವಿಸಂಶಯಮ್ ।
ಅವಾರ್ಯಂ ಪಂಡಿತಾಗ್ರ್ಯೈಶ್ಚ ಪ್ರತಿಚೋದ್ಯನಿವಾರಕಮ್ ॥
ಸಸುಂದರಶಿರಃಕಂಪಂ ಪ್ರಹರ್ಷಿತಸಭಾಜನಮ್ ।
ವಿಕಾಸಿತಶ್ರೋತ್ರಮುಖಂ ವಿಕಸ್ವರವಿಲೋಚನಮ್ ॥
ಹೃಷ್ಟತನೂರುಹಂ ಗಾತ್ರೇ ಸ್ವರ್ಪಿತಶ್ರೋತ್ರಮಾನಸಮ್ ।
ಸುಖಬೋಧಕರಂ ಶ್ರೋತುರ್ಗ್ರಾಹ್ಯಂ ಸದ್ಭಿಃ ಪುಮರ್ಥದಮ್ ॥

ವಾಗೀಶ್ವರೇಶಕಾರುಣ್ಯವಾರ್ಧಿಜಾತಂ ಸುಕೋಮಲಮ್ ।
ನಿರ್ದುಷ್ಟಂ ರಸವತ್ಸ್ಪಷ್ಟಂ ನಾನಂದಯತಿ ಕಂ ಜನಮ್ ॥

- ಶ್ರೀರಘುನಾಥಾಚಾರ್ಯರು(ವೃತ್ತರತ್ನಸಂಗ್ರಹ)

ಸರಸಭಾರತೀವಿಲಾಸಕ್ಕೆ ಅವರು ಮಾಡಿರುವ ಬಣ್ಣನೆ ಅವರ ಎಲ್ಲ ಗ್ರಂಥಗಳಿಗೂ ಒಟ್ಟಾಗಿ ಅನ್ವಯಿಸುವ ಅಪೂರ್ವ ಹಿರಿಮೆ :

ಚಾರ್ವಪೂರ್ವಪದಶ್ರೇಣೀಂ ದುರ್ವಾಗ್ಗರ್ವಾಪಹಾರಿಣೀಮ್ ।
ಸರ್ವೇಷ್ಟಕಾರಿಣೀಂ ಉರ್ವೀಂ ಕುರ್ವೇ ಸರಸಭಾರತೀಮ್ ॥ (೧-೪)

## ತೀರ್ಥಯಾತ್ರೆಯ ಮಹತ್ತ್ವ

ಸಕಲರೂ ಅಪೇಕ್ಷಿಸುವ 'ನಿತ್ಯಸುಖರೂಪ'ವಾದ ಮೋಕ್ಷಕ್ಕೆ ಭಗವಂತನ ಪರಮಾನುಗ್ರಹವೂ, ಅದಕ್ಕೆ ನಿರ್ಮಲಭಕ್ತಿಯೂ, ಅದಕ್ಕೆ ಅಪರೋಕ್ಷಜ್ಞಾನವೂ ಸಾಧನವಾಗಿವೆ. ಅಪರೋಕ್ಷಜ್ಞಾನಕ್ಕೆ ಸ್ವವಿಹಿತ ಕರ್ತವ್ಯವನ್ನು ಕೃಷ್ಣಾರ್ಪಣಬುದ್ಧಿಯಿಂದ ತಪ್ಪದೆ ಆಚರಿಸಬೇಕಾದ ನಿಷ್ಕಾಮಕರ್ಮ- ಯೋಗವೇ ಮುಖ್ಯಸಾಧನ. ಅಂತಹ ವಿಹಿತಕರ್ಮಗಳಲ್ಲಿ ತೀರ್ಥಯಾತ್ರೆಯೂ ಒಂದು; ಇಂತಹ ತೀರ್ಥಯಾತ್ರೆಯ ಆತ್ಯಂತಿಕ ಗುರಿ ಇತರ ಧರ್ಮಗಳ ಸಾರ್ಥಕ್ಯದಂತೆ ತತ್ತ್ವನಿಶ್ಚಯ ದ್ವಾರಾ 'ಅಪರೋಕ್ಷಜ್ಞಾನ'ವೇ ಆಗಿದೆ. ಈ ಹಿನ್ನೆಲೆಯಲ್ಲಿ ಆಚರಿಸಲ್ಪಟ್ಟಾಗ ಮಾತ್ರವೇ ತೀರ್ಥಯಾತ್ರೆಯು ಒಂದು ಕರ್ಮಯೋಗವೆನ್ನಿಸಿ ಶ್ರೀಹರಿಪ್ರೀತಿಗೆ ಸಾಧನವಾಗುವುದು :

ದಾನತೀರ್ಥತಪೋಯಜ್ಞಪೂರ್ವಾಃ ಸರ್ವೇಽಪಿ ಸರ್ವದಾ ।
ಅಂಗಾನಿ ಹರಿಸೇವಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ ॥ -ಮ.ಭಾ.ತಾ.ನಿ. (೧/೯೯)

ತೀರ್ಥಯಾತ್ರೆ ಎಂಬ ಪದಕ್ಕೆ ತೀರ್ಥಕ್ಷೇತ್ರ ಸಂದರ್ಶನ ಎಂಬ ಸಾಮಾನ್ಯ ಅರ್ಥವು ಪ್ರಚಾರದಲ್ಲಿದ್ದರೂ, ವಿಧ್ಯುಕ್ತವಾಗಿ ಮಾಡಲ್ಪಡುವ ವೈಷ್ಣವತೀರ್ಥಕ್ಷೇತ್ರಗಳ ಶಾಸ್ತ್ರೋಕ್ತಸ್ಮರಣ, ಚಿಂತನ, ಸ್ನಾನಪಾನಾದಿ ರೂಪಸೇವಾ ಎಂಬುದೇ ಮುಖ್ಯಾರ್ಥ. ನಿಷಿದ್ಧವಾದ ಸ್ಥಳವು ಎಷ್ಟೇ ಸುಂದರವಾಗಿದ್ದರೂ ತೀರ್ಥಕ್ಷೇತ್ರವೆನ್ನಿಸದು; ವಿಧ್ಯುಕ್ತವಲ್ಲದ ತೀರ್ಥಕ್ಷೇತ್ರಸಂದರ್ಶನವೂ ತೀರ್ಥಯಾತ್ರೆಯಾಗದು; ಈ ಹಿನ್ನೆಲೆ ಇಲ್ಲದ 'ತೀರ್ಥಯಾತ್ರೆ'ಯು ಆಧುನಿಕ ಪರಿಭಾಷೆಯ ಮನೋರಂಜನೆಯ 'ಪಿಕ್‌ನಿಕ್' ಆದೀತೇ ಹೊರತು ಮನೋವಿಕಾಸದ ಯಾತ್ರೆ ಎನ್ನಿಸುವುದಿಲ್ಲ. ಇತರಸ್ಥಳಗಳಲ್ಲಿ ಮಾಡಿದ ಪಾಪವು ಪುಣ್ಯಕ್ಷೇತ್ರದಲ್ಲಿ ನಾಶಹೊಂದುತ್ತದೆ. ಆದರೆ ಪುಣ್ಯಕ್ಷೇತ್ರದಲ್ಲಿ ಮಾಡಿದ ಪಾಪವು ವಜ್ರಲೇಪದಂತಾಗುತ್ತದೆ ಎಂಬಮಾತಿನಲ್ಲಿ ಶಾಸ್ತ್ರವಿಹಿತವಲ್ಲದ ಯಾತ್ರೆಯ ಅಪಾಯ ಪರಿಣಾಮಕಾರಿಯಾಗಿ ನಿರೂಪಿತವಾಗಿದೆ :

ಅನ್ಯಕ್ಷೇತ್ರೇ ಕೃತಂ ಪಾಪಂ ಪುಣ್ಯಕ್ಷೇತ್ರೇ ವಿನಶ್ಯತಿ ।
ಪುಣ್ಯಕ್ಷೇತ್ರೇ ಕೃತಂ ಪಾಪಂ ವಜ್ರಲೇಪೋ ಭವಿಷ್ಯತಿ ॥-ಸ್ಮೃತಿ

ಶ್ರೀವಿಷ್ಣುತೀರ್ಥರ 'ಭಾಗವತಸಾರೋದ್ಧಾರ'ದಲ್ಲಿ 'ತೀರ್ಥಯಾತ್ರೆ' ಎಂಬುದಕ್ಕೆ ತಾತ್ತ್ವಿಕಅರ್ಥವು ಉಕ್ತವಾಗಿದೆ; ಅದರಂತೆ ಸಚ್ಛಾಸ್ತ್ರಗಳನ್ನು ಗುರುಮುಖೇನ ಯಥೋಚಿತವಾಗಿ ಅಧ್ಯಯನ ಮಾಡುವುದೇ ಮುಖ್ಯವಾದ 'ತೀರ್ಥಯಾತ್ರೆ' ಎನ್ನಿಸುತ್ತದೆ; ಎಂದರೆ ಶ್ರೀಮದಾನಂದತೀರ್ಥರ ಶಾಸ್ತ್ರವನ್ನು ಓದುವುದು, ಹಾಗೆ ಓದಲು ಸರಿಯಾದ ಪ್ರಯತ್ನ ಮಾಡುವುದು ಎಂಬುದೇ 'ತೀರ್ಥಯಾತ್ರೆ'ಯ ಮುಖ್ಯಾರ್ಥವಾಗುತ್ತದೆ.

'ತೀರ್ಥಶಬ್ದೋ ಮುಖ್ಯತಃ ಪಾವನೇಷು ವರ್ತತೇ । ನಾನ್ಯತ್ರ । ತತ್ರ ಪ್ರಯೋಗಸ್ತು ನ ತತ್ತ್ವವಿದಾಂ ಮನೋಜ್ಞಃ । ತಾದೃಶಾಸ್ತು ಭಗವತ್ತತ್ತ್ವವಿದೋ ಭಾಗವತಾ ಏವ । ಅತಸ್ತೇಭ್ಯಃ ಉಪದೇಶಾದ್ಯರ್ಥಂ ತದನ್ವೇಷಣಾಯ ಅಟನಮೇವ ತೀರ್ಥಾಟನಂ ನಾಮ । ತದೇವ ಕರ್ತವ್ಯಂ ಕುಶಲೇನ, ನ ತು ಮೂಢಾಭಿಮತತೀರ್ಥಾಟನಮಿತಿ ॥

ಸಾಮಾನ್ಯ 'ತೀರ್ಥಯಾತ್ರೆ'ಯೇ ಮುಕ್ತಿಸಾಧನ ಎಂಬರ್ಥದ ಮಾತು ಪುರಾಣಗಳಲ್ಲಿ ಅಲ್ಲಲ್ಲಿ ಬಂದಿರುವುದುಂಟು.

ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ ।
ಅಥವಾ ಸ್ನಾನಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧೌ ॥

(ಬ್ರಹ್ಮಜ್ಞಾನ, ಪ್ರಯಾಗ ಮರಣ ಅಥವಾ ಕೃಷ್ಣಸನ್ನಿಧಾನದಲ್ಲಿ ಗೋಮತಿನದಿಯಲ್ಲಿ ಮಾಡುವ ಸ್ನಾನ - ಇವು ಮುಕ್ತಿಗೆ ಸಾಧನ)

- ಇಂತಹ ಮಾತುಗಳಿಗೆ [೧]ಬ್ರಹ್ಮಜ್ಞಾನದಿಂದಲೇ ಮುಕ್ತಿ; ಆದರೆ ಪ್ರಯಾಗಮರಣ; ಗೋಮತಿಸ್ನಾನ ಮೊದಲಾದವುಗಳು ಕೆಲವು ಪಾಪಗಳಿಂದ ಮುಕ್ತಿಯನ್ನು ಕೊಡುತ್ತವೆ; ಅಥವಾ ಅವುಗಳಿಂದ ಅಂತಃಕರಣಶುದ್ಧಿಯಾಗಿ ಕ್ರಮವಾಗಿ ಅಪರೋಕ್ಷಜ್ಞಾನವು ಲಭಿಸಿ ಅನಂತರ ಮುಕ್ತಿ ಲಭಿಸುವುದು ಎಂದು ಅರ್ಥಮಾಡಬೇಕು ಎಂಬುದಾಗಿ ಶ್ರೀಮದಾಚಾರ್ಯರು [೨]ಗೀತಾಭಾಷ್ಯಾದಿ ಗ್ರಂಥಗಳಲ್ಲಿ ತಿಳಿಸಿರುವರು. ಅದರಂತೆ

---

೧. ಹಿಂದೊಮ್ಮೆ ರಂಗೋಜಿಭಟ್ಟನೆಂಬ ವಾದಿಯೊಂದಿಗೆ ಶ್ರೀವಿದ್ಯಾಧೀಶತೀರ್ಥರಿಗೂ, ರಂಗೋಜಿಭಟ್ಟನ ಶಿಷ್ಯ ವಾದೀಂದ್ರನೆಂಬವನೊಂದಿಗೆ ಶ್ರೀವಿದ್ಯಾಧೀಶರ ಅನುಜ ಶ್ರೀಕೇಶವಾಚಾರ್ಯಪಾಂಡುರಂಗಿ ಅವರಿಗೂ ಈ ವಿಷಯದಲ್ಲಿ ವಾದ ನಡೆದು ಕೊನೆಗೆ ಶ್ರೀವಿದ್ಯಾಧೀಶರು ಮತ್ತು ಕೇಶವಾಚಾರ್ಯರು ಶ್ರೀಮಧ್ವಾಚಾರ್ಯರ ನಿರ್ಣಯದ ಆಧಾರದ ಮೇಲೆ ಮೇಲ್ಕಂಡಂತೆ ತಿಳಿಸಿ, ಅವರನ್ನು ಪರಾಭವಗೊಳಿಸಿದರು ಎಂಬ ಮಾತು ವಿದ್ಯಾಧೀಶ-ವಿಜಯ ಮೊದಲಾದ ಗ್ರಂಥಗಳಲ್ಲಿ ಬಂದಿದೆ. ಆ ವಾದಗಳ ವಿವರಗಳನ್ನು ತಿಳಿಸುವ ರಂಗೋಜಿಭಟ್ಟಧಿಕ್ಕಾರ, ರಂಗೋಜಿಭಟ್ಟಶಿಷ್ಯವಾದೀಂದ್ರಧಿಕ್ಕಾರ ಎಂಬ ಗ್ರಂಥಗಳು ಪ್ರೊ॥ ಕೆ.ಟಿ. ಪಾಂಡುರಂಗಿ ಅವರ ಶ್ರೀವಿದ್ಯಾಧೀಶಸಂಸ್ಕೃತ ಹಸ್ತಲಿಖಿತ ಗ್ರಂಥಾಲಯದಲ್ಲಿ ಉಪಲಬ್ಧವಿವೆ.

೨. ಯತ್ರ ಚ ತೀರ್ಥಾದ್ಯೇವ ಮುಕ್ತಿಸಾಧನಮುಚ್ಯತೇ –
ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ ।
ಅಥವಾ ಸ್ನಾನಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧೌ ॥

'ತೀರ್ಥಯಾತ್ರೆ' ಎಂಬುದಕ್ಕೆ ಶಾಸ್ತ್ರಾಧ್ಯಯನ ಎಂಬ ಅರ್ಥ ಇರಿಸಿಕೊಂಡರೆ ಮಾತ್ರ ಮುಖ್ಯಾರ್ಥದಲ್ಲೂ ಅದು ಸಾರ್ಥಕವಾಗುತ್ತದೆ.

ತೀರ್ಥಯಾತ್ರೆಗೆ ಹೊರಡುವವರು ಮೊದಲು ಆಯಾ ತೀರ್ಥಕ್ಷೇತ್ರಗಳ ಮಹತ್ತ್ವ, ಪೌರಾಣಿಕ ಹಿನ್ನೆಲೆ, ಸ್ನಾನಾದಿಗಳಿಗೆ ವಿಹಿತಮಂತ್ರಸ್ತೋತ್ರಗಳು, ಅನುಷ್ಠಾನಕ್ರಮ ಮೊದಲಾದವುಗಳನ್ನು ತಿಳಿದುಕೊಂಡಿರಬೇಕು; ಅದಕ್ಕೆ ತಕ್ಕ ಮಾನಸಿಕಸಿದ್ಧತೆಯನ್ನು ಹೊಂದಿರಬೇಕು; ಸಂಧ್ಯಾ, ಪೂಜಾ, ಅಧ್ಯಯನಾದಿ ವಿಹಿತಕಾರ್ಯಗಳನ್ನು ಅಲ್ಲಿ ಎಂದೂ ತ್ಯಾಗ ಮಾಡದೆ ಇನ್ನೂ ವಿಶೇಷರೀತಿಯಲ್ಲಿ ಆಚರಿಸಿ ಕೃತಾರ್ಥರಾಗಬೇಕು. ವಿಹಿತಸ್ಥಳಗಳನ್ನು ಸಂದರ್ಶಿಸದೆ ಇರಬಾರದು; ನಿಷಿದ್ಧಸ್ಥಳಗಳು ಅವು ಎಷ್ಟೇ ಆಕರ್ಷಕವಾಗಿದ್ದರೂ ಅವುಗಳನ್ನು ಸಂದರ್ಶಿಸಬಾರದು; ಏಕಾದಶ್ಯುಪವಾಸ, ಕೃಷ್ಣಾಷ್ಟಮೀವ್ರತ, ಚಾತುರ್ಮಾಸ್ಯವ್ರತ, ತ್ರಿಕಾಲಸಂಧ್ಯಾವಂದನ ಮೊದಲಾದವುಗಳನ್ನು ಆಚರಿಸದೆ ತೀರ್ಥಯಾತ್ರೆ ಮಾಡುವುದು ಎಂದೂ ಸಫಲವೆನ್ನಿಸಲಾರದು.

ಕೃಷಿಗೆ ಯೋಗ್ಯವಾದ ಉತ್ತಮಭೂಮಿಯನ್ನು 'ಕ್ಷೇತ್ರ' ಎನ್ನುವರು; ಜ್ಞಾನ'ಕೃಷಿ'ಗೆ ನೆರವಾಗುವ ಅಂತಃಕರಣಶುದ್ಧಿಯ ಸಾಧನವಾದ್ದರಿಂದಲೇ ತೀರ್ಥಕ್ಷೇತ್ರಗಳಿಗೆ ಆ ಹೆಸರು ಸಾರ್ಥಕವಾಗಿದೆ. ಧಾನ್ಯದ ಬೆಳೆಗೆ ಕೃಷಿ ಕ್ಷೇತ್ರಗಳಿರುವಂತೆ, ಜ್ಞಾನದ ಬೆಳೆಗೆ ಈ ತೀರ್ಥಕ್ಷೇತ್ರಗಳು ಇವೆ. ತೀರ್ಥಯಾತ್ರೆಗೆ ಮುಂಚಿನ ಸಿದ್ಧತೆಯಂತೆಯೇ, ಯಾತ್ರೆ ಪೂರೈಸಿದ ಮೇಲೂ ನಿತ್ಯನೈಮಿತ್ತಿಕ ವಿಹಿತಕರ್ಮಗಳನ್ನು ತಪ್ಪದೆ ಆಚರಿಸಿ ಸಂಪಾದಿಸಿದ ಪುಣ್ಯವನ್ನು ಉಳಿಸುವ, ಬೆಳೆಸುವ ಪ್ರವೃತ್ತಿಯನ್ನು ಎಂದೂ ತಪ್ಪಬಾರದು. ಅನ್ಯತ್ರ ಮಾಡುವ ನಿಷಿದ್ಧಕಾರ್ಯಗಳು ತೀರ್ಥಕ್ಷೇತ್ರಗಳಲ್ಲಿ ಮಾಡಲ್ಪಟ್ಟಾಗ ಒದಗುವ ಪಾಪವು ವಜ್ರಲೇಪದಂತೆ ಭಯಂಕರ ಎಂಬ ಎಚ್ಚರವಿದ್ದಲ್ಲಿ, ತೀರ್ಥಯಾತ್ರೆಯು ಒಂದು ಅಪೂರ್ವ ಸಾಧನವೆನ್ನಿಸುತ್ತದೆ. ಯಾತ್ರೆಗೆ ಮುಂಚೆ ತಿಂಡಿತಿನಿಸುಗಳ ಸಿದ್ಧತೆಗೆ ಎಚ್ಚರವಹಿಸುವ ಜನ

---

- ಇತ್ಯಾದೌ, ತತ್ರ ಪಾಪಾದಿಮುಕ್ತಿಃ । ಸ್ತುತಿಪರತಾ ಚ । ತತ್ರಾಪಿ ಕುತ್ರಚಿತ್ ಜ್ಞಾನಸಾಧನ-
ತ್ವಮೇವೋಚ್ಯತೇಽನ್ಯಥಾ ಮುಕ್ತಿಂ ನಿಷಿಧ್ಯ ಬ್ರಹ್ಮಜ್ಞಾನಂ ವಿನಾ ಮುಕ್ತಿರ್ನ ಕಥಂಚಿದ-
ಪೀಷ್ಯತೇ ।
ಪ್ರಯಾಗಾದೇಸ್ತು ಯಾ ಮುಕ್ತಿರ್ಜ್ಞಾನೋಪಾಯತ್ವಮೇವ ಹಿ ॥ ಇತ್ಯಾದೌ ।
ನಚ ತೀರ್ಥಸ್ತುತಿವಾಕ್ಯಾನಿ ತತ್ತ್ರಸ್ತಾವೇಽಪ್ಯುಕ್ತಂ ಜ್ಞಾನನಿಯಮಂ ಘ್ನಂತಿ ।
ಯಥಾ ಕಂಚಿದ್ದಕ್ಷಂ ಭೃತ್ಯಂ ಪ್ರತ್ಯುಕ್ತಾನಿ 'ಅಯಮೇವ ಹಿ ರಾಜಾ ಕಿಂ ರಾಜ್ಞಾ' ಇತ್ಯಾದೀನಿ ।
ಯಥಾಽಽಹ ಭಗವಾನ್ –
ಯಾನಿ ತೀರ್ಥಾದಿವಾಕ್ಯಾನಿ ಕರ್ಮಾದಿವಿಷಯಾಣಿ ಚ ।
ಸ್ತಾವಕಾನ್ಯೇನ ತಾನಿ ಸ್ಯುರಜ್ಞಾನಾಂ ಮೋಹಕಾನಿ ವಾ ॥
ಭವೇನ್ಮೋಕ್ಷಸ್ತು ಮದ್ದೃಷ್ಟೇರ್ನಾನ್ಯತಸ್ತು ಕಥಂಚನ ॥ ಇತಿ ನಾರದೀಯೇ ॥
ಅತೋಽಪರೋಕ್ಷಜ್ಞಾನಾದೇವ ಮೋಕ್ಷಃ ।
ಕರ್ಮ ತು ತತ್ಸಾಧನಮೇವ ॥ -ಗೀತಾಭಾಷ್ಯ(೩/೨೦)

ಯಾತ್ರೆಯ ವಿಧಿವಿಧಾನಗಳ ಬಗ್ಗೆ ಎಷ್ಟೂ ಗಮನಹರಿಸುವುದಿಲ್ಲ ಎಂಬುದರಲ್ಲಿ ನಿಜವಾದ ದುರಂತ ಅಡಗಿದೆ. ಯಾತ್ರೆಗೆ ಸತ್ಪಾತ್ರರ ಸಂಗಡ ಹೊರಡಬೇಕು :

ಪಾತ್ರರ ಸಂಗಡ ಯಾತ್ರೆಯ ಚರಿಸಿ ವಿಧಾತೃಪಿತನ ಗುಣಸ್ತೋತ್ರಗಳ ।
ಶ್ರೋತ್ರದಿ ಸವಿದು ವಿಚಿತ್ರಾನಂದದಿ ಗಾತ್ರವ ಮರೆದು ಪರತ್ರವ ಪಡೆವುದೇ ॥

(ಫಲವಿದು ಬಾಳ್ದುದಕೆ) – ಶ್ರೀಜಗನ್ನಾಥದಾಸರು

ಯಾತ್ರಾಕಾಲದಲ್ಲಿ ಉದ್ದಕ್ಕೂ ಶಾಸ್ತ್ರಾಧ್ಯಯನ, ಶಾಸ್ತ್ರಶ್ರವಣಾದಿಗಳನ್ನು ತಪ್ಪದೆ ನಡೆಸಬೇಕು.

ಶ್ರೀರುದ್ರದೇವರ ವರದಿಂದ ಅವಧ್ಯರಾಗಿ ವಿವಿಧತೀರ್ಥಗಳಲ್ಲಿ ನೆಲೆಸಿ ಸಜ್ಜನರ ತೀರ್ಥಯಾತ್ರಾಕಾರ್ಯಕ್ಕೆ ವಿಘ್ನಕರರಾಗಿದ್ದ ಮೂರುಕೋಟಿ ಸಂಖ್ಯೆಯ ರಾಕ್ಷಸರನ್ನು ಶ್ರೀಭೀಮಸೇನನು ವನವಾಸಕಾಲದಲ್ಲಿ ಸಂಹರಿಸಿ ಅಗಮ್ಯವಾಗಿದ್ದ ತೀರ್ಥಗಳನ್ನು ಸುಗಮ್ಯವಾಗಿಸಿದ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿ (೨೪/೪ -೬) ಬಂದಿದೆ :

ಯಥಾ ಚ ರುದ್ರವಚನಾದವಧ್ಯಾ ರಾಕ್ಷಸಾಧಿಪಾಃ ।
ತೀರ್ಥವಿಘ್ನಕರಾಃ ಸರ್ವತೀರ್ಥಾನ್ಯಾಚ್ಛಾದ್ಯ ಸಂಸ್ಥಿತಾಃ ।
ತಿಸ್ರಃ ಕೋಟ್ಯೋ ಮಹಾವೀರ್ಯಾ ಭೀಮೇನೈವ ನಿಷೂದಿತಾಃ ।
ಭ್ರಾತೄಣಾಂ ಬ್ರಾಹ್ಮಣಾನಾಂ ಚ ಲೋಕಾನಾಂ ಚ ಹಿತೈಷಿಣಾ ॥
ತತೋ ಹಿ ಸರ್ವತೀರ್ಥಾನಿ ಗಮ್ಯಾನ್ಯಾಸನ್ ನೃಣಾಂ ಕ್ಷಿತೌ ॥

## ತೀರ್ಥಯಾತ್ರೆಯ ಪ್ರಯೋಜನ

ಅನೇಕ ವಿಧವಾದ ಪುಣ್ಯಕ್ಷೇತ್ರಗಳ ದರ್ಶನ ಅವುಗಳ ಹಿನ್ನೆಲೆಯಾದ ಶ್ರೀಹರಿಸರ್ವೋತ್ತಮಾದಿ ತತ್ತ್ವಗಳ ಶ್ರವಣ ಮನನಗಳಿಂದ ತತ್ತ್ವಜ್ಞಾನವು ವೃದ್ಧಿಸುವಂತೆ, ಲೋಕಜ್ಞಾನವೂ ಹೆಚ್ಚಿ ಜಗತ್ತಿನ ವೈಶಾಲ್ಯ ಮತ್ತು ಸತ್ಯತೆಗಳು ಮನವರಿಕೆಯಾಗಿ 'ಕೂಪಮಂಡೂಕ ದೃಷ್ಟಿ' ಮರೆಯಾಗುತ್ತದೆ. ವಿಭಿನ್ನ ದೇಶಭಾಷೆಗಳ ಜನಗಳ ದರ್ಶನದಿಂದ ಜಗತ್ತಿನ ಪರಿಜ್ಞಾನವೂ ಹೆಚ್ಚುತ್ತದೆ; ಸತತಸಂಚಾರ, ಪ್ರದಕ್ಷಿಣ, ನಮಸ್ಕಾರಗಳಿಂದ ದೇಹಕ್ಕೆ ವಿಶಿಷ್ಟರೀತಿಯ ವ್ಯಾಯಾಮವು ಲಭಿಸುವುದರಿಂದ ಹೃದಯದೌರ್ಬಲ್ಯ ಮೊದಲಾದ ಅನೇಕ ರೋಗಗಳಿಂದ ರಕ್ಷಣೆ ದೊರೆಯುತ್ತದೆ; ವಿಭಿನ್ನನದೀಸಮುದ್ರಜಲಗಳಲ್ಲಿನ ಸ್ನಾನದಿಂದ ಒಂದು ರೀತಿಯ ಜಲಚಿಕಿತ್ಸೆ (Hydro-therapy) ಲಭಿಸಿ ಅನೇಕ ತೆರನಾದ ರೋಗಗಳೂ ಗುಣ ಹೊಂದುತ್ತವೆ. ಶ್ರೀರಾಮ ಶ್ರೀಕೃಷ್ಣಾದಿ ಭಗವದ್ರೂಪಗಳು ಶ್ರೀಹನುಮದ್ಭೀಮಮಧ್ವಾದಿ ವಾಯುರೂಪಗಳು ಮಿಂದು ಪವಿತ್ರವೆನ್ನಿಸಿದ ತೀರ್ಥಗಳ ಸ್ನಾನ ಮುಂದೊಮ್ಮೆ ವಿರಜಾಸ್ನಾನಕ್ಕೆ ಕಾರಣವಾಗಿ ಮುಕ್ತಿಸಾಧನವೆನ್ನಿಸುವುದರಲ್ಲಿ ಆಶ್ಚರ್ಯವೇನಿಲ್ಲ. ಕಾಳಿದಾಸನ ಮೇಘದೂತದ ಜನಕತನಯಾಸ್ನಾನಪುಣ್ಯೋದಕೇಷು ಎಂಬ ಮಾತು ಆ ಕಾಲದಲ್ಲಿ ಪುಣ್ಯತೀರ್ಥಗಳ ಸ್ನಾನಕ್ಕಿದ್ದ ಮಹತ್ತ್ವಕ್ಕೆ ಸೂಚಕವಾಗಿದೆ. ವಿವಿಧ ಆಕೃತಿ ವರ್ಣಗಳ ಮೂರ್ತಿಗಳ ದರ್ಶನವು ಒಂದು ರೀತಿಯಲ್ಲಿ ವರ್ಣಚಿಕಿತ್ಸೆ

(Colour-therapy)ಯೂ ಆಗುತ್ತದೆ. ನಡೆಯುವುದು, ಪರ್ವತಗಳನ್ನು ಹತ್ತುವುದು ಮೊದಲಾದವುಗಳಿಂದ Accupressure ಚಿಕಿತ್ಸೆಯೂ ತಾನಾಗಿ ಲಭಿಸುತ್ತದೆ. ಹೀಗೆ ವಿಭಿನ್ನ ದೇಶ, ಭಾಷೆ, ಜನಗಳ ಸಂಪರ್ಕ, ನದಿಗಳ ಸತತಗಮನ, ತೀರ್ಥಗಳ ಪಾವಿತ್ರ್ಯ, ಸಮುದ್ರದ ವೈಶಾಲ್ಯ, ಮೂರ್ತಿಗಳ ಭವ್ಯತೆ, ಪರ್ವತಗಳ ಔನ್ನತ್ಯ ಮೊದಲಾಗಿ ಸಕಲವೂ ಮೈಮನಸ್ಸುಗಳ ವಿಕಾಸಕ್ಕೂ, ತಾತ್ತ್ವಿಕಚಿಂತನೆಗೂ ನೆರವಾಗಿ ಜೀವನದ ಸಾರ್ಥಕ್ಯದಲ್ಲಿ ಪರ್ಯಾವಸಾನವಾಗುವ ತೀರ್ಥಯಾತ್ರೆಗೆ ಮಾನವನ ಜೀವನದಲ್ಲಿರುವ ಸ್ಥಾನವು ತುಂಬಾ ಅಮೂಲ್ಯವಾಗಿದೆ. **ಸ್ಥಾವರಾಣಾಂ ಹಿಮಾಲಯಃ, ಸ್ರೋತಸಾಮಸ್ಮಿ ಜಾಹ್ನವೀ, ಸರಸಾಮಸ್ಮಿ ಸಾಗರಃ** ಎಂಬ ಭಗವದ್ಗೀತೆಯ ವಿಭೂತಿಯೋಗದ ಮಾತುಗಳಲ್ಲಿ ತೀರ್ಥಕ್ಷೇತ್ರಗಳ ಸಂದರ್ಶನದ ಹಿಂದಿನ ಅನುಸಂಧಾನದ ನಿರೂಪಣೆಯೂ ಪ್ರತಿಪಾದಿತವಾಗಿದೆ ಎಂದು ತಿಳಿಯಬಹುದು.

## ವೈಷ್ಣವತೀರ್ಥಕ್ಷೇತ್ರಸಾಹಿತ್ಯ

ವೈಷ್ಣವಪರಂಪರೆಯ ಇತಿಹಾಸದಲ್ಲಿ ಕಲಿಯುಗದಲ್ಲಿ ಅತ್ಯಂತ ವ್ಯಾಪಕವಾಗಿ ಸಂಚರಿಸಿದ ಮಹನೀಯರುಗಳಲ್ಲಿ ದ್ವೈತಮತಪ್ರವರ್ತಕರಾದ ಶ್ರೀಮಧ್ವಾಚಾರ್ಯರದೇ ಅಗ್ರಸ್ಥಾನ. ಆಸೇತುಹಿಮಾಚಲಪರ್ಯಂತ ಎರಡು ಬಾರಿ ಸಂಚರಿಸಿ, ಎರಡು ಬಾರಿ ಉತ್ತರಬದರಿಯನ್ನೂ ಸಂದರ್ಶಿಸಿದ ಅಪೂರ್ವಹಿರಿಮೆ ಅವರದು; 'ಜೀವೋತ್ತಮ'ರೆಂಬ ಮಾತು ಅವರಿಗೆ ಈ ಅರ್ಥದಲ್ಲೂ ಸಾರ್ಥಕವೇ ಆಗಿದೆ; ಅನಂತರದ ಕಾಲದಲ್ಲಿ ಶ್ರೀಟೀಕಾಕೃತ್ಪಾದರೆಂದು ಪ್ರಸಿದ್ಧರಾಗಿರುವ ಶ್ರೀಜಯತೀರ್ಥರು, ಚಂದ್ರಿಕಾಚಾರ್ಯರೆಂದು ಪ್ರಸಿದ್ಧವಾಗಿರುವ ಶ್ರೀವ್ಯಾಸರಾಜರು, ಪರಿಮಳಾಚಾರ್ಯರೆಂದು ಪ್ರಸಿದ್ಧರಾಗಿರುವ ಶ್ರೀರಾಘವೇಂದ್ರಸ್ವಾಮಿಗಳು, ವಾಕ್ಯಾರ್ಥಚಂದ್ರಿಕಾಕಾರರಾದ ಶ್ರೀವಿದ್ಯಾಧೀಶತೀರ್ಥರು, ತತ್ತ್ವಪ್ರಸಾರಕ್ಕಾಗಿ ವ್ಯಾಪಕವಾಗಿ ಸಂಚರಿಸಿದ ಮಹನೀಯರು; 'ದಾಸಚತುಷ್ಟಯ'ರೆಂದು ಪ್ರಸಿದ್ದವಾಗಿರುವ ಶ್ರೀಪುರಂದರದಾಸರು, ಶ್ರೀವಿಜಯದಾಸರು, ಶ್ರೀಗೋಪಾಲದಾಸರು ಮತ್ತು ಶ್ರೀಜಗನ್ನಾಥದಾಸರು ಸಹ ವ್ಯಾಪಕವಾಗಿ ತೀರ್ಥಾಟನ ಮಾಡಿರುವರು ಎನ್ನಲು ವಿವಿಧತೀರ್ಥಕ್ಷೇತ್ರಗಳನ್ನು ಕುರಿತು ಅವರು ರಚಿಸಿರುವ ವಿಪುಲಕೃತಿಗಳೇ ಸಾಕ್ಷಿ. ಶ್ರೀಪುರಂದರದಾಸರು ತೀರ್ಥಕ್ಷೇತ್ರಗಳನ್ನು ಕುರಿತು ಒಂದೂಕಾಲು ಲಕ್ಷ ಕೃತಿಗಳನ್ನು ರಚಿಸಿರುವುದಾಗಿ ಅವರೇ ತಿಳಿಸಿರುವರು; ಇಂದು ಉಪಲಬ್ಧವಿರುವ ತೀರ್ಥಕ್ಷೇತ್ರ - ಪರಕೃತಿಗಳಲ್ಲಿ ಶ್ರೀವಿಜಯದಾಸರ ಕೃತಿಗಳ ಸಂಖ್ಯೆ ಅಪಾರವಾಗಿದೆ(ಅವುಗಳ ಸಂಗ್ರಹವನ್ನು ಲಿಂಗಸುಗೂರಿನ ಗೊರಬಾಳ ಹನುಮಂತರಾಯರು ಶ್ರೀವರದೇಂದ್ರ ಹರಿದಾಸಸಾಹಿತ್ಯ ಮಂಡಲದಿಂದ ಪ್ರಕಟಿಸಿರುವರು). ಈ ಅರ್ಥದಲ್ಲಿ ತೀರ್ಥಕ್ಷೇತ್ರಮಾಹಾತ್ಮ್ಯವರ್ಣನ-ಸಾಹಿತ್ಯಕ್ಕೆ ಶ್ರೀವಾದಿರಾಜರ ತೀರ್ಥಪ್ರಬಂಧದ ಅನಂತರದ ಮಹತ್ತ್ವಪೂರ್ಣ ಕೊಡುಗೆ ಶ್ರೀವಿಜಯದಾಸರದೇ ಆಗಿದೆ ಎನ್ನಬಹುದು. ವ್ಯಾಪಕವಾಗಿ ಸಮಗ್ರಭರತಖಂಡವನ್ನು ಸಂಚರಿಸುವುದರೊಂದಿಗೆ, ಪ್ರಮುಖ ತೀರ್ಥಕ್ಷೇತ್ರಗಳ ಮಾಹಾತ್ಮ್ಯವನ್ನು ಒಂದೆಡೆ(ಈ

ತೀರ್ಥಪ್ರಬಂಧ ಕೃತಿಯಲ್ಲಿ) ಸಂಸ್ಕೃತದಲ್ಲಿ ಸಂಗ್ರಹಸಿಕೊಟ್ಟ ಏಕಮಾತ್ರ ವೈಷ್ಣವ ಉದ್ಗ್ರಂಥಕಾರರು ಎಂಬುದು ಶ್ರೀವಾದಿರಾಜಗುರುರಾಜರ ವೈಶಿಷ್ಟ್ಯ.

ತೀರ್ಥಪ್ರಬಂಧದಲ್ಲಿ ಉಲ್ಲೇಖಿಸಲ್ಪಟ್ಟಿರುವ ಭಗವದ್ರೂಪಗಳ, ಇತರ ದೇವತೆಗಳ, ತೀರ್ಥಕ್ಷೇತ್ರಗಳ, ನದಿ ಮೊದಲಾದವುಗಳ ವಿವರ :

## ಶ್ರೀಹರಿ

| | | | |
|---|---|---|---|
| ಶ್ರೀಹಯಗ್ರೀವ | ೧/೨ | ಉಡುಪಿ ಶ್ರೀಕೃಷ್ಣ | ೧/೧೧,೧೨,೧೩ |
| ಅನಂತೇಶ್ವರ (ಅನಂತಾಸನ) | ೧/೧೪,೧೫ | ಶ್ರೀವೇದವ್ಯಾಸ (ಮಧ್ಯವಾಟಮಠ) | ೧/೨೮,೨೯ |
| ಚಿಂತಾಮಣಿ ನರಸಿಂಹ | ೧/೩೦,೩೧ | ಶ್ರೀವೇದವ್ಯಾಸ ಸಂಪುಟ | ೧/೪೩,೪೪ |
| ಅಶ್ವತ್ಥ ನಾರಾಯಣ (ಬಿದರಹಳ್ಳಿ) | ೧/೬೪,೬೫ | ಬಂಕಾಪುರದ ಕೇಶವ | ೧/೬೯ |
| ತ್ರಿವಿಕ್ರಮ (ಸೋದಾ ಕ್ಷೇತ್ರ) | ೧/೭೬ | ವೇಂಕಟೇಶ (ಮಂಜುಗುಣಿ) | ೧/೭೭,೭೮ |
| ತ್ರಿವಿಕ್ರಮ (ದ್ವಾರಕಾ) | ೧/೯೧,೯೨ | ಶ್ರೀವಿಠಲ (ಪುಂಡರೀಕಕ್ಷೇತ್ರ) | ೨/೬-೮ |
| ಪ್ರಯಾಗ ಮಾಧವ (ಪ್ರಯಾಗ ಕ್ಷೇತ್ರ) | ೨/೧೪ | ಬಿಂದು ಮಾಧವ (ಕಾಶೀಕ್ಷೇತ್ರ) | ೨/೨೪ |
| ಗದಾಧರ (ಗಯಾಕ್ಷೇತ್ರ) | ೨/೨೮ | ವಿಷ್ಣುಪಾದ (ಗಯಾ) | ೨/೨೯ |
| ಬದರೀ ನಾರಾಯಣ | ೨/೪೨ | ಬದರೀನಾರಾಯಣ | ೨/೪೩ |
| ಶ್ರೀಹಯಗ್ರೀವ (ಬದರಿಕಾಶ್ರಮ) | ೨/೪೪ | ಹಯಗ್ರೀವ | ೨/೪೫ |
| ಜಗನ್ನಾಥ (ಪುರೀಕ್ಷೇತ್ರ) | ೩/೨ | ಅಹೋಬಲ ನರಸಿಂಹ | ೩/೪-೮ |
| ಶ್ರೀವಿಠಲ(ಹಂಪೆ) | ೩/೧೩ | ಶ್ರೀವೇಂಕಟೇಶ (ತಿರುಪತಿ) | ೩/೧೯-೨೯ |
| ವರದರಾಜ (ಕಂಚೀಕ್ಷೇತ್ರ) | ೩/೩೧-೩೩ | ತ್ರಿವಿಕ್ರಮ (ತಿರುಕೋಯಿಲೂರು) | ೩/೩೮ |
| ಶ್ರೀಭೂವರಾಹ (ಶ್ರೀಮುಷ್ಣಕ್ಷೇತ್ರ) | ೩/೪೧ | ಶಾರ್ಙ್ಗಪಾಣಿ (ಕುಂಭಕೋಣ) | ೩/೪೨, ೪೩ |
| ರಂಗನಾಥ (ಶ್ರೀರಂಗಕ್ಷೇತ್ರ) | ೪/೧-೮ | ಶ್ರೀಹರಿ - ವೃಷಭಾಚಲ | ೪/೧೨ |
| ಶ್ರೀರಾಮ (ದರ್ಭಶಯನ ಕ್ಷೇತ್ರ) | ೪/೧೪ | ಶ್ರೀರಾಮದೇವರು(ರಾಮೇಶ್ವರ) | ೪/೨೦ |
| ಶ್ರೀರಾಮಪಾದ | ೪/೨೮,೨೯ | ಅನಂತಶಯನ | ೪/೩೭,೩೯-೪೫ |

## ಮಹಾಲಕ್ಷ್ಮಿ

| | |
|---|---|
| ದುರ್ಗಾದೇವಿ - ವಿಮಾನಗಿರಿ (ಪಾಜಕಕ್ಷೇತ್ರ) | ೧/೧೭-೨೦ |
| ಮಹಾಲಕ್ಷ್ಮೀ (ಕೊಲ್ಹಾಪುರ) | ೧/೮೪,೮೫ |
| ಮಹಾಲಕ್ಷ್ಮಿ - ಕನ್ಯಾಕುಮಾರಿ ಕ್ಷೇತ್ರ | ೪/೩೨-೩೪ |

## ರುದ್ರದೇವರು

| | | | |
|---|---|---|---|
| ವಿಶ್ವನಾಥ (ಎಲ್ಲೂರು) | ೧/೨೧-೨೫ | ಕೋಟೇಶ್ವರ (ಕ್ಷೇತ್ರ) | ೧/೩೦ |
| ಶಂಕರನಾರಾಯಣ (ಕ್ರೋಡ ಕ್ಷೇತ್ರ) | ೧/೩೧-೩೫ | ಹರಿಹರ (ಕ್ಷೇತ್ರ) | ೧/೫೯-೬೩ |
| ಸೋಮೇಶ್ವರ (ಬಿದರಹಳ್ಳಿ) | ೧/೬೮ | ಮಧುಕೇಶ್ವರ (ಬನವಾಸಿ) | ೧/೭೧ |
| ಭೈರವ (ಏಣಭೈರವ ಕ್ಷೇತ್ರ) | ೧/೭೯ | ರುದ್ರದೇವರು (ಗೋಕರ್ಣ) | ೧/೮೦-೮೨ |

## ಪಾರ್ವತೀ



## ಇತರ ದೇವತೆಗಳು



## ಗುರುಪರಂಪರೆ



## ನದಿಗಳು

## ತೀರ್ಥಗಳು

| | | | |
|---|---|---|---|
| ಬಾಣಗಂಗಾ (ಪ್ರಭಾಸ ಕ್ಷೇತ್ರ) | ೧/೬೯ | ಚಕ್ರತೀರ್ಥ (ದ್ವಾರಕಾಕ್ಷೇತ್ರ) | ೧/೯೫ |
| ಬಿಂದುಸರೋವರ (ಸಿದ್ಧಪುರೀ ಕ್ಷೇತ್ರ) | ೧/೯೮ | ಪುಷ್ಕರ (ತೀರ್ಥಕ್ಷೇತ್ರ) | ೧/೯೯ |
| ವಿಶ್ರಾಂತಿ ತೀರ್ಥ(ಮಧುರಾ) | ೨/೩೨,೩೩ | ಚಂದ್ರಪುಷ್ಕರಿಣೀ (ತೀರ್ಥ) | ೪/೯ |
| ನೂಪುರಗಂಗಾ(ತೀರ್ಥ) | ೪/೧೩ | ಕನ್ಯಾತೀರ್ಥ(ಕನ್ಯಾಕುಮಾರಿ | ೪/೩೨ |

## ಸಂಗಮಗಳು

| | | | |
|---|---|---|---|
| ನೇತ್ರಾವತೀ - ಕುಮಾರಧಾರಾ ಸಂಗಮ | ೧/೩೪ | ಗಂಗಾಸಾಗರ ಸಂಗಮ | ೩/೧ |
| ತ್ರಿವೇಣೀ ಸಂಗಮ(ಪ್ರಯಾಗ ಕ್ಷೇತ್ರ) | ೨/೧೩ | ನಿವೃತ್ತಿ ಸಂಗಮ | ೩/೧೦ |

ಶ್ರೀವಾದಿರಾಜರು ಮಧುರಾ, ವಿಶ್ರಾಂತಿತೀರ್ಥ, ವೃಂದಾವನ, ದ್ವಾರಾವತೀ ಮತ್ತು ಯಮುನಾ ಇವುಗಳನ್ನು ತಮ್ಮ ರುಗ್ಮಿಣೀಶವಿಜಯದಲ್ಲೂ ಗಂಗಾ, ತುಂಗಾ ಮತ್ತು ತಿರುವನಂತಪುರಗಳನ್ನು ಸರಸಭಾರತೀವಿಲಾಸಕೃತಿಯಲ್ಲೂ ವರ್ಣಿಸಿರುವರು;

ಪುಣ್ಯನದಿಗಳೆಂದು ಪ್ರಸಿದ್ಧವಾಗಿರುವ [೧]ಏಳು ಮಹಾನದಿಗಳಲ್ಲಿ 'ಸಿಂಧು' ನದಿಯ ಉಲ್ಲೇಖವು ತೀರ್ಥಪ್ರಬಂಧದಲ್ಲಿ ಬಂದಿಲ್ಲ. ಈ ಸಿಂಧೂನದಿಯು ಹಿಮಾಲಯದ ಮಾನಸಸರೋವರದಲ್ಲಿ ಹುಟ್ಟಿ ಸುಮಾರು ೨೦೦೦ ಮೈಲುಗಳಷ್ಟು ಹರಿದು ಕೊನೆಗೆ ಅರಬ್ಬೀಸಮುದ್ರವನ್ನು ಸೇರುತ್ತದೆ. ಆ ಸ್ಥಳದಲ್ಲಿರುವ ನಾರಾಯಣಸರೋವರವು ಪ್ರಚೇತಸರೆಂಬ ಪ್ರಾಚೀನಬರ್ಹಿಃಪುತ್ರರು ಮತ್ತು ಹರ್ಯಶ್ವರು ಮತ್ತು ಶಬಲಾಶ್ವರು ಎಂಬ ದಕ್ಷಪ್ರಜಾಪತಿಯ ಪುತ್ರರು ತಪಸ್ಸು ಮಾಡಿದ ಪವಿತ್ರಸ್ಥಳ. ಇದು ರುದ್ರಗೀತವು ಶ್ರೀರುದ್ರದೇವರಿಂದ ಪ್ರಚೇತಸರಿಗೆ ಉಪದಿಷ್ಟವಾದ ಸ್ಥಳವೂ ಆಗಿದೆ ಎಂದು ಭಾಗವತಪುರಾಣದಿಂದ ತಿಳಿಯುತ್ತದೆ. ಭರತಖಂಡದ ಪುರಾತನಪಟ್ಟಣಗಳೆಂದು ಇಂದಿನ ಇತಿಹಾಸತಜ್ಞರು ಹೇಳುವ ಹರಪ್ಪ ಮತ್ತು ಮೊಹಂಜೊದಾರೊ ಪಟ್ಟಣಗಳು ಈ ನದಿಯ ತೀರದ ಪಟ್ಟಣಗಳೇ ಆಗಿವೆ.

ತೀರ್ಥಪ್ರಬಂಧದಲ್ಲಿ ಭರತಖಂಡದ ಮೋಕ್ಷದಾಯಕ ಮಹಾಕ್ಷೇತ್ರಗಳೆಂದು ಪ್ರಸಿದ್ಧವಾಗಿರುವ [೨]ಏಳು ಕ್ಷೇತ್ರಗಳಲ್ಲಿ 'ಮಾಯಾ'(ಹರಿದ್ವಾರ) ಮತ್ತು ಆವಂತಿ(ಉಜ್ಜೈನಿ) ಎಂಬ ಕ್ಷೇತ್ರಗಳ ಉಲ್ಲೇಖ ಬಂದಿಲ್ಲ. ಮಾಯಾಪುರಿಯು(ಹರಿದ್ವಾರವು) ಮೈತ್ರೇಯರು ಮತ್ತು ವಿದುರನಿಗೆ ಭಾಗವತವನ್ನು ಉಪದೇಶಿಸಿದ ಸ್ಥಳ, ಅಜಾಮಿಳನು ತಪಸ್ಸು ಮಾಡಿ ಸದ್ಗತಿ ಪಡೆದ ಸ್ಥಳ, ದಕ್ಷಪ್ರಜಾಪತಿಯು ಬೃಹಸ್ಪತಿಸವ ಎಂಬ ಯಜ್ಞವನ್ನು ಮಾಡಿದ ಸ್ಥಳ (ಸತೀದೇವಿಯು ದೇಹತ್ಯಾಗ ಮಾಡಿದರೆಂದು ಹೇಳಲಾಗುವ ಸ್ಥಳವೂ ಇದರ

---

೧. ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥

೨. ಆಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ ।
ಪುರೀ ದ್ವಾರಾವತೀ ಚೈವ ಸಪ್ತೈತಾ ಮೋಕ್ಷದಾಯಕಾಃ ॥

ಸಮೀಪದಲ್ಲುಂಟು) ಮೊದಲಾದ ಪೌರಾಣಿಕ ಮಹತ್ತ್ವವನ್ನು ಹೊಂದಿರುವ ಮಹಾಕ್ಷೇತ್ರ. ಗಂಗೆಯು ಹಿಮಾಲಯಪರ್ವತದಿಂದ ಪೂರ್ಣವಾಗಿ ಕೆಳಕ್ಕಿಳಿದು ಭೂಸ್ಪರ್ಶವನ್ನು ಮಾಡುವ ಸ್ಥಳ ಎಂಬುದು ಇದರ ಹಿರಿಮೆ. ಇದರಲ್ಲಿಯ 'ಮಾಯಾ'ದೇವಿಯ ಮೂರ್ತಿಯಿಂದಾಗಿ ಇದಕ್ಕೆ 'ಮಾಯಾಪುರಿ' ಎಂಬ ಹೆಸರು ಬಂದಿದೆ; ಗಂಗಾದ್ವಾರವೆಂಬುದು ಇದರ ನಾಮಾಂತರ. ಯಾತ್ರಿಕರು ಗಂಗೆಯನ್ನು ಕಲಶದಲ್ಲಿ ತುಂಬಿಸಿಕೊಂಡು ಬರಬೇಕಾದ ಸ್ಥಳವೂ ಸಹ ಇದೇ ಆಗಿದೆ.

ಉಜ್ಜೈನಿಯು ಮಧ್ಯಪ್ರದೇಶದಲ್ಲಿ ಭೂಪಾಲ್‌ನಿಂದ ೧೮೨ ಕಿ.ಮೀ. ದೂರದಲ್ಲಿರುವ ಪುಣ್ಯಕ್ಷೇತ್ರ; ವಿಷ್ಣು ಶರೀರದಿಂದ ಉದ್ಭವಿಸಿದ್ದೆಂದು ಪ್ರಸಿದ್ಧವಿರುವ ಸಿಪ್ರಾ ನದಿಯ ತೀರದಲ್ಲಿರುವ ಈ ಕ್ಷೇತ್ರವು ಮಹಾಕಾಲ(ಓಂಕಾರೇಶ್ವರ) ಎಂಬ ಈಶ್ವರನ ಕ್ಷೇತ್ರವಾಗಿದೆ. ಶ್ರೀಕೃಷ್ಣನು ಲೋಕವಿಡಂಬನೆ ಮತ್ತು ಅಸುರಮೋಹನಕ್ಕಾಗಿ ಸಾಂದೀಪನ್ಯಾಚಾರ್ಯರ ಬಳಿ ಗುರುಕುಲವಾಸ ಮಾಡಿದನೆಂದು ಹೇಳಲಾಗುವ 'ಆವಂತಿ'ಪುರವು ಇದೇ ಆಗಿದೆ. (ಆವಂತಿಪುರವಾಸಿನಮೇತ್ಯ ವಿಪ್ರಂ - ಮ.ಭಾ.ತಾ.ನಿ.(೪/೩)[೧].

---

೧. ಇದರಲ್ಲಿ ಉಲ್ಲೇಖಿಸಲ್ಪಡದೇ ಇರುವ ಇನ್ನೂ ಕೆಲವು ಮುಖ್ಯಕ್ಷೇತ್ರಗಳು ಹೀಗಿವೆ :
ದಕ್ಷಿಣಕನ್ನಡದಲ್ಲಿ ದಂಡತೀರ್ಥ(ಶ್ರೀಮದಾಚಾರ್ಯರು ಲೋಕಶಿಕ್ಷಣಕ್ಕಾಗಿ ಗುರುಕುಲವಾಸ ಮಾಡಿದ ಸ್ಥಳ.) ಅವರು ಬಾಲ್ಯದಲ್ಲಿ ಸಂದರ್ಶಿಸಿದ 'ಕೊಡವೂರು' ಮತ್ತು ತಾಳೆಕುಡೆ' ಎಂಬ ಎರಡು ಶಿವಾಲಯಗಳು. ಕೃಷ್ಣಾಮೃತಮಹಾರ್ಣವವನ್ನು ರಚಿಸಿದ ಕೊಕ್ಕಡ, ಮಳೆ ತರಿಸಿದ ಸರಿದಂತರ (ಎರ್ಕಿಮಠ,ಇಡೆತುದೆ), ಪಾರಂತೀಶಸದನ(ಕೇವುದದೇವಲ), ತಮ್ಮ ಗ್ರಂಥಗಳನ್ನು ಮರಳಿ ಬರಲಿರುವ ಶ್ರೀವಿಷ್ಣುತೀರ್ಥರಿಗೋಸ್ಕರ ಭೂಗತ ಮಾಡಿರುವ ಸೇತುತಿಲ(ಕಟ್ಟಿಲ), ಚಾತುರ್ಮಾಸ್ಯಕ್ಕೆ ಕುಳಿತಿದ್ದ(ಅನಂತರ ಶ್ರೀವಿಜಯಧ್ವಜರು ಭಾಗವತಟೀಕೆ ರಚಿಸಿದ, ಬೃಂದಾವನಸ್ಥರಾದ) ಕಣ್ವತೀರ್ಥ, ಬಹುಕಾಲ ನೆಲೆಸಿ, ಒಮ್ಮೆ ಚಾತುರ್ಮಾಸ್ಯಕ್ಕೂ ಕುಳಿತಿದ್ದ ವಿಷ್ಣುಮಂಗಲ, ತ್ರಿವಿಕ್ರಮಪಂಡಿತರ ವಾಸಸ್ಥಾನವಾದ ಕಾವುಮಠ, ಶ್ರೀವಾದಿರಾಜರು ಅವತರಿಸಿದ ಹೂವಿನಕೆರೆ ಮತ್ತು ಧರ್ಮಸ್ಥಳ ಮೊದಲಾದ ಇನ್ನೂ ಅನೇಕ ಕ್ಷೇತ್ರಗಳು.

ಆಂಧ್ರಪ್ರದೇಶದಲ್ಲಿ ಪ್ರಸಿದ್ಧ ನರಸಿಂಹಕ್ಷೇತ್ರವಾದ ಸಿಂಹಾಚಲ, ಶ್ರೀನರಹರಿತೀರ್ಥರು ಪ್ರತಿಷ್ಠಾಪಿಸಿರುವ ಶ್ರೀಕೂರ್ಮಂ ನೃಸಿಂಹ, ವಿಜಯವಾಡದ ಬಳಿಯ ಪಾನಕನರಸಿಂಹ, ಕದರಿಯ ಖಾದ್ರಿನೃಸಿಂಹ ಮೊದಲಾದ ಅನೇಕ ಕ್ಷೇತ್ರಗಳು.

ಕರ್ನಾಟಕದಲ್ಲಿ ಛಾಯಾಭಗವತೀ(ನಾರಾಯಣಪುರ ಅಣೆಕಟ್ಟಿನ ಬಳಿ) ಮತ್ತು ಹಂಪೆಯ ಬಳಿ ಶ್ರೀವ್ಯಾಸರಾಜಪ್ರತಿಷ್ಠಿತ ಯಂತ್ರೋದ್ಧಾರಕ ಪ್ರಾಣದೇವರು, (ಶ್ರೀವಿಜಯದಾಸರ ಜನ್ಮಸ್ಥಳವಾದ ತುಂಗಭದ್ರಾತೀರದ ಚೀಕಲಪರಿವಿಯ) ಶ್ರೀಶ್ರೀಪಾದರಾಜ ಪ್ರತಿಷ್ಠಿತ ಅಶ್ವತ್ಥನರಸಿಂಹ, ಕೃಷ್ಣಾತೀರದ ಕೊಪ್ಪರ ನರಸಿಂಹ, ಮಣ್ಣೂರಿನ ಧ್ರುವನಿರ್ಮಿತ ಚೆನ್ನಕೇಶವ, ವಿಜಾಪುರದ ಬಳಿಯ ತೊರವಿಯ ನರಸಿಂಹ, ಶೂರ್ಪಾಲಿಯ ನರಸಿಂಹ, ಮುಳಬಾಗಿಲು ಬಳಿಯ ಶ್ರೀಅಕ್ಷೋಭ್ಯತೀರ್ಥಪ್ರತಿಷ್ಠಿತ ನರಸಿಂಹ, ದೇವರಾಯನದುರ್ಗದ ಯೋಗಾನರಸಿಂಹ ಮತ್ತು ಭೋಗಾನೃಸಿಂಹರು, ಮಹಾರಾಷ್ಟ್ರದಲ್ಲಿ ಕರಾಡದಿಂದ ೧೬ಕಿ.ಮೀ.ದೂರದಲ್ಲಿರುವ ಶ್ರೀಪರಶುರಾಮ ಪ್ರತಿಷ್ಠಿತವಾದ ಷೋಡಶಬಾಹು ನೃಸಿಂಹದೇವರಮೂರ್ತಿ ಮೊದಲಾದ ಇನ್ನೂ ಅನೇಕ ಕ್ಷೇತ್ರಗಳು.

ಸ್ವಯಂವ್ಯಕ್ತಸ್ಥಳಗಳಲ್ಲಿ 'ತೋತಾದ್ರಿ[೧]'ಯು ತೀರ್ಥಪ್ರಬಂಧದಲ್ಲಿ ವರ್ಣಿತವಾಗಿಲ್ಲ[೨].

ಸಂಸ್ಕೃತಭಾಷೆಯನ್ನು ಕಾವ್ಯಮಾಧ್ಯಮಕ್ಕೆ ತುಂಬಾ ಸಮರ್ಥವಾಗಿ ಉಪಯೋಗಿಸಿಕೊಂಡ ವೈಷ್ಣವ ಯತಿಶೇಖರರಲ್ಲಿ ಶ್ರೀಮಧ್ವಾಚಾರ್ಯರ ಅನಂತರದ ಅಗ್ರಸ್ಥಾನ ಶ್ರೀವಾದಿರಾಜರದೇ ಆಗಿದೆ. ಶ್ರೀವಿಜಯೀಂದ್ರತೀರ್ಥರು, ಶ್ರೀಸುಧೀಂದ್ರತೀರ್ಥರು, ಶ್ರೀಸುಮತೀಂದ್ರತೀರ್ಥರು ಮತ್ತು ಶ್ರೀಸತ್ಯಧರ್ಮತೀರ್ಥರು ಅನಂತರದ ಪರಂಪರೆಯ ಇಂತಹ ಮಹನೀಯರಲ್ಲಿ ಪ್ರಮುಖರು[೩].

## ತೀರ್ಥಪ್ರಬಂಧದ ವ್ಯಾಖ್ಯಾನ

'ತೀರ್ಥಪ್ರಬಂಧ' ಕೃತಿಗೆ ಶ್ರೀವಾದಿರಾಜಸ್ವಾಮಿಗಳ ಸಾಕ್ಷಾಚ್ಛಿಷ್ಯರಾದ ಶ್ರೀನಾರಾಯಣಾ-ಚಾರ್ಯರೆಂಬವರ ಸುಂದರವಾದ (ಗುರು)ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನವುಂಟು[೪].

---

೧. ಆದ್ಯಂ ಸ್ವಯಂವ್ಯಕ್ತಮಿದಂ ವಿಮಾನಂ ರಂಗಸಂಜ್ಞಿತಮ್ ।
ಶ್ರೀಮುಷ್ಣಂ ವೇಂಕಟಾದ್ರಿಶ್ಚ ಶಾಲಗ್ರಾಮಶ್ಚ ನೈಮಿಷಮ್ ॥
ತೋತಾದ್ರಿಃ ಪುಷ್ಕರಂ ಚೈವ ನರನಾರಾಯಣಾಶ್ರಮಮ್ ।
ಅಷ್ಟ ಮೇ ಮೂರ್ತಯಃ ಸಂತಿ ಸ್ವಯಂ ವ್ಯಕ್ತಾ ಮಹೀತಲೇ ॥ — ಪುರಾಣವಚನ

೨. ವಿರುದ್ಧೋಕ್ತಿಯು ದೋಷವೇ ಹೊರತು ಅನುಕ್ತಿಯಲ್ಲ ಎಂಬ ಶಾಸ್ತ್ರವಚನವಿರುವುದರಿಂದ ಈ ಅನುಕ್ತಿಗಳು ಯಾವುದೇ ರೀತಿಯಲ್ಲೂ ದೋಷವಲ್ಲ ಎಂಬುದನ್ನು ಗಮನಿಸಬೇಕು. ಕಾರಣಾಂತರದಿಂದ ಅವುಗಳನ್ನು ವರ್ಣಿಸಿಲ್ಲವೆಂದು ಭಾವಿಸಬೇಕೇ ಹೊರತು ಶ್ರೀವಾದಿರಾಜ-ತೀರ್ಥರು ಈ ಕ್ಷೇತ್ರಗಳನ್ನು ಸಂದರ್ಶಿಸಿರಲಿಲ್ಲವೆಂದಾಗಲೀ, ಇದರಲ್ಲಿ ಉಕ್ತವಾಗದ ತೀರ್ಥಕ್ಷೇತ್ರಗಳಿಗೆ ಮಹತ್ತ್ವವಿಲ್ಲ ಎಂದಾಗಲೀ ಭಾವಿಸಕೂಡದು.

೩. ಇವರಲ್ಲಿ ಶ್ರೀಸತ್ಯಧರ್ಮತೀರ್ಥರ ಕೃತಿಗಳ ಪರಿಚಯವನ್ನು ನನ್ನ 'ಸತ್ಯಧರ್ಮತೀರ್ಥ-ಕೃತಿಮಂಜರಿ'ಯಲ್ಲೂ ಉಳಿದ ಮೂವರ ಗ್ರಂಥಗಳ ಮಾಹಿತಿಯನ್ನು ನನ್ನ 'ದ್ವೈತವಾಙ್ಮಯಕ್ಕೆ ಶ್ರೀರಾಘವೇಂದ್ರಮಠದ ಕೊಡುಗೆ' ಎಂಬ ಗ್ರಂಥದಲ್ಲೂ ಕೊಡಲಾಗಿದೆ.

೪. ಈ ವ್ಯಾಖ್ಯಾನದ ಆದ್ಯಂತಶ್ಲೋಕಗಳು ಹೀಗಿವೆ :

ಆದಿ : ತಪೋವಿದ್ಯಾವಿರಕ್ತ್ಯಾದಿಸದ್ಗುಣೌಘಾಕರಾನಹಮ್ ।
ವಾದಿರಾಜಗುರೂನ್ ವಂದೇ ಹಯಗ್ರೀವದಯಾಶ್ರಯಾನ್ ॥೧॥
ವಾಜಿರಾಜಮುಖಾಂಭೋಜನಿಃಸೃತಾ ವಾಕ್ಸರಸ್ವತೀ ।
ಹಯಗ್ರೀವಯಶೋಗಂಗಾಸಂಗಾಽಸ್ಮಾನ್ ಪಾವಯತ್ವಲಮ್॥೨॥

ವಾದಿರಾಜಮುನೀಂದ್ರೇಣ ರಚಿತಂ ಸಜ್ಜನಾಮೃತಮ್ ।
ತೀರ್ಥಪ್ರಬಂಧಮದ್ವಂದ್ವಂ ವ್ಯಾಕುರ್ವೇಽಹಂ ಯಥಾಮತಿ ॥೩॥

ವಾದಿರಾಜೋಕ್ತಿಚಾತುರ್ಯಮಶಕ್ಯಂ ಜ್ಞಾತುಮಂಜಸಾ ।
ತಥಾಽಪಿ ವಕ್ಷ್ಯೇ ತಚ್ಛಿಕ್ಷಾಮನುಸೃತ್ಯೈವ ಲೇಶತಃ ॥೪॥

ಅಂತ್ಯ : ಯತ್ಸನ್ನಿಧಾನತಸ್ತೀರ್ಥಕ್ಷೇತ್ರಾಣಿ ಭುವನತ್ರಯೇ ।
ಮಹತಾಂ ಮಹಿತಾನ್ಯಾಸಂಸ್ತಸ್ಮೈ ಶ್ರೀಪತಯೇ ನಮಃ ॥೧॥

ಇವರು ಲಕ್ಷ್ಮೀಪತಿಭಟ್ಟ ಎಂಬವರ ಮಕ್ಕಳು; ಇವರು ಶ್ರೀವಾದಿರಾಜರ ರುಗ್ಮಿಣೀಶವಿಜಯಕ್ಕೂ (ಗುರು)ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನವನ್ನು ರಚಿಸಿರುವರು. ಗ್ರಂಥಕರ್ತೃಗಳ ಸಾಕ್ಷಾಚ್ಛಿಷ್ಯರ ವ್ಯಾಖ್ಯಾನ ಎಂಬ ಕಾರಣಕ್ಕಾಗಿ ಇವರ ಕೃತಿಗಳಿಗೆ ಮಹತ್ತ್ವವುಂಟು. ತಮ್ಮ ವ್ಯಾಖ್ಯಾನವು ಮೂಲಕಾರರ ಉಪದೇಶವೇ ಆಗಿದೆ ಎಂದು ಅವರೇ ತಿಳಿಸಿರುವರು : ತಥಾಪಿ ವಕ್ಷ್ಯೇ ತಚ್ಛಿಕ್ಷಾಮನುಸೃತ್ಯೈವ ಲೇಶತಃ. ಅಲ್ಲದೆ ಗುರುಗಳು ತಿಳಿಸಿದ್ದನ್ನೆಲ್ಲ ತಾವು ಸಮಗ್ರವಾಗಿ ಬರೆದಿಲ್ಲ ಎಂಬ ಮಾತನ್ನು ಅವರೇ ಅಲ್ಲಲ್ಲಿ ತಿಳಿಸಿರುವರು:

ವಿಸ್ತರಸ್ತ್ವಸ್ಯ ಪದ್ಯಸ್ಯ ಗುರುಮುಖಾದೇವ ಶ್ರೋತವ್ಯಃ । ತದೀಯಕೌಶಲಸಮುದ್ರಾ-ಲ್ಲೇಶಮಾತ್ರಂ ಪ್ರದರ್ಶಿತಂ । ತದಪಿ ತಚ್ಛಿಕ್ಷಯೈವ ನೋತ್ಪ್ರೇಕ್ಷಯಾ ॥ (೧/೧೨)

ಅಸ್ಮಿನ್ ಪದ್ಯೇ ಗುರುಭಿರುಕ್ತೋ ಭಾವೋ ಭೂಯಾಂಸ್ತಿಷ್ಠತಿ । ಗ್ರಂಥಗೌರವಭಯಾನ್ಮಯಾ ನ ಲಿಖ್ಯತೇ ॥ -(೩/೧೩)

ಶ್ರೀವಾದಿರಾಜಸ್ವಾಮಿಗಳ ಕಾವ್ಯಕೃತಿಗಳ ವ್ಯಾಖ್ಯಾನಕಾರರು ಎಂಬ ದೃಷ್ಟಿಯಿಂದ ಶ್ರೀನಾರಾಯಣಾಚಾರ್ಯರ ಕೃತಿಗಳಿಗೆ ತುಂಬಾ ಮಹತ್ತ್ವವುಂಟು.

ತೀರ್ಥಪ್ರಬಂಧಕೃತಿಯ ಹೆಸರಿನ ಹಿಂದಿರುವ ಅರ್ಥ ಹಾಗೂ ಸ್ವಾರಸ್ಯವನ್ನು ವ್ಯಾಖ್ಯಾನಕಾರರಾದ ಶ್ರೀನಾರಾಯಣಾಚಾರ್ಯರು ಹೀಗೆ ವಿವರಿಸಿರುವರು :

ತೀರ್ಥಪ್ರಬಂಧಂ – ತೀರ್ಥಾನಾಂ ಪ್ರಬಂಧಃ ಪ್ರತಿಪಾದ್ಯತಯಾ ಬಂಧನಂ ಯಸ್ಮಿನ್ ಕಾವ್ಯೇ ತತ್ತೀರ್ಥಪ್ರಬಂಧಾಖ್ಯಂ ಕಾವ್ಯಮ್ ... । (೪/೪೬)

ಪ್ರಕೃತ ಅನುವಾದವು ಪ್ರಮುಖವಾಗಿ ಈ ಸಂಸ್ಕೃತವ್ಯಾಖ್ಯಾನವನ್ನು ಆಧರಿಸಿ ಸಿದ್ಧವಾಗಿದೆ. ಅಭ್ಯಾಸಿಗಳ ಅನುಕೂಲಕ್ಕಾಗಿ ಅನ್ವಯಾನುಸಾರಿಯಾದ ಪ್ರತಿಪದಾರ್ಥವನ್ನೂ, ಪ್ರತಿ-ಶ್ಲೋಕದ ಭಾವಾನುವಾದವನ್ನೂ, ವಿಶೇಷ ವಿವರಣೆಗಳನ್ನೂ ಕೊಡಲಾಗಿದೆ. ತೀರ್ಥಕ್ಷೇತ್ರಗಳ ಬಗ್ಗೆ ಯಥೋಚಿತ ಮಾಹಿತಿಗಳನ್ನು ಸಂಗ್ರಹಿಸಿ ಕೊಡಲಾಗಿದೆ. ತೀರ್ಥಾರ್ಥಿಗಳಿಗೆ ಅನುಕೂಲವಾಗಲೆಂದು ಸ್ನಾನಮಂತ್ರಗಳನ್ನು, ಅರ್ಘ್ಯಮಂತ್ರಗಳನ್ನು, ಚಿಂತಿಸಬೇಕಾದ ಭಗವದ್ರೂಪಗಳ ಪಟ್ಟಿಯನ್ನು ಶ್ರೀರಾಘವೇಂದ್ರಸ್ವಾಮಿಗಳ ನದೀತಾರತಮ್ಯಸ್ತೋತ್ರವನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ. ಇದರೊಂದಿಗೆ ಶ್ರೀವಿಜಯದಾಸರ ತೀರ್ಥಾಭಿಮಾನಿ-ದೇವತಾಸ್ತೋತ್ರ, ಪುಣ್ಯಕ್ಷೇತ್ರಸ್ಮರಣೆ, ನದನದೀಸ್ಮರಣೆಗಳನ್ನೂ, ಶ್ರೀಜಗನ್ನಾಥದಾಸರ ತೀರ್ಥಕ್ಷೇತ್ರಸ್ಮರಣೆ, ನದೀತಾರತಮ್ಯಗಳನ್ನೂ ಹಾಗೂ ಶ್ರೀಪ್ರಾಣೇಶದಾಸರ ನದೀತಾರತಮ್ಯ ಮೊದಲಾದ ಕೃತಿಗಳನ್ನು ಸಹ ಕೊಡಲಾಗಿದೆ. ಸಮಗ್ರ ತೀರ್ಥಪ್ರಬಂಧದ

---

ಯಶ್ಚಕ್ರೇ ಚಕ್ರಮೀಮಾಂಸಾಂ ಯಶ್ಚಕ್ರೇ ಯುಕ್ತಿಮಲ್ಲಿಕಾಮ್ ।
ಮುಕುಂದಲೀಲಾಂ ಯಶ್ಚಕ್ರೇ ತಸ್ಮೈ ಕಾವ್ಯಕೃತೇ ನಮಃ ॥೨॥

ತಪೋವಿದ್ಯಾವಿರಕ್ತ್ಯಾದಿಸದ್ಗುಣೌಘಾಕರಾನಹಮ್ ।
ವಾದಿರಾಜಗುರೂನ್ ವಂದೇ ಹಯಗ್ರೀವದಯಾಶ್ರಯಾನ್ ॥೩॥

ಶ್ಲೋಕಾರ್ಥಾನುಕ್ರಮಣಿಕೆಯನ್ನು ಅಳವಡಿಸಲಾಗಿದೆ. ಯಾತ್ರಿಕರಿಗೆ ಅನುಕೂಲವಾಗಲೆಂದು ಪ್ರಮುಖತೀರ್ಥಕ್ಷೇತ್ರಗಳಲ್ಲಿನ ವೈಷ್ಣವ ಮಠ-ಮಂದಿರಗಳ ದೂರವಾಣಿ ಸಂಖ್ಯೆಗಳನ್ನೂ ಸಹ ಕೊನೆಯಲ್ಲಿ ಸಂಗ್ರಹಿಸಿಕೊಡಲಾಗಿದೆ[೧].

## ಪ್ರಸ್ತುತ ಆವೃತ್ತಿ

ಇದರ ಪ್ರಥಮಾವೃತ್ತಿ ೧೯೯೧ರಲ್ಲಿ ಪ್ರಕಟವಾಗಿತ್ತು. ಅನಂತರದ ಮೂರು ಆವೃತ್ತಿಗಳು ಅದರ ಪುನರ್ಮುದ್ರಣವಾಗಿದ್ದವು. ಪ್ರಸ್ತುತ ಆವೃತ್ತಿ ಪರಿಷ್ಕೃತ ಆವೃತ್ತಿಯಾಗಿದ್ದು ಪ್ರತಿಶ್ಲೋಕದ ಭಾವಾನುವಾದವನ್ನು ಒಳಗೊಂಡಿರುವುದು ಇದರ ವಿಶೇಷ. ಹಿಂದಿನ ಮುದ್ರಣದ ಪ್ರತಿಗಳು ಮುಗಿದು ಅನೇಕ ವರ್ಷಗಳೇ ಕಳೆದಿದ್ದರೂ, ಇತರ ಅನೇಕ ಕೃತಿಗಳ ರಚನೆ, ಸಂಪಾದನೆ, ಅನುವಾದ ಮುಂತಾದ ಕಾರಣಗಳಿಂದ ಇದರ ಮುದ್ರಣ ಸಾಧ್ಯವಾಗಿರಲಿಲ್ಲ. ಮಾರ್ಚ್ ೨೦೦೮ರಲ್ಲಿ ಪ್ರಾರಂಭವಾದ ನಮ್ಮ ಪ್ರಕಾಶನದ 'ಶ್ರೀ ವ್ಯಾಸಮಧ್ವ' ಮಾಸಪತ್ರಿಕೆಯ ಸಂಪಾದನೆಯ ಕಾರ್ಯವೂ ಇದಕ್ಕೆ ಮತ್ತೊಂದು ಕಾರಣ.

ಹಿಂದಿನ ಆವೃತ್ತಿಗಳನ್ನು ಪ್ರಕಾಶನಪಡಿಸಿದ್ದ ಶ್ರೀವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗವಾದ ಐತರೇಯ ಪ್ರಕಾಶನವೇ ಇದನ್ನೂ ಪ್ರಕಾಶನಗೊಳಿಸುತ್ತಿದೆ. ಪ್ರಸ್ತುತ ಆವೃತ್ತಿಗೆ ಪ್ರಾಯೋಜಕರಾಗಿ ಸೇವೆ ಸಲ್ಲಿಸಿದವರು ಶ್ರೀಹರಿವಾಯುಗುರುಗಳ ವಿಶೇಷಭಕ್ತರು, ತತ್ವಪ್ರಸಾರಕಾರ್ಯದಲ್ಲಿ ತುಂಬಾ ಆಸಕ್ತರೂ ಆದ **ಶ್ರೀಮತಿ ಶ್ರುತಿ ಮತ್ತು ಶ್ರೀ ವೈ.ಆರ್. ಪ್ರದೀಪ್**, ದಂಪತಿಗಳು. ಇವರಿಗೆ ಸಕಲರೀತಿಯ ಶ್ರೇಯಸ್ಸನ್ನು ಕರುಣಿಸಲಿ ಎಂದು ಶ್ರೀಹರಿವಾಯುಗುರುಗಳಲ್ಲಿ ನಮ್ಮ ಪ್ರತಿಷ್ಠಾನ ಪ್ರಾರ್ಥಿಸುತ್ತದೆ. ಇದರ ಡಿ.ಟಿ.ಪಿ.ಕಾರ್ಯ ನಮ್ಮ ಪ್ರತಿಷ್ಠಾನದ್ದು. ಸಹಕಾರ ಚಿ॥ ಅನಂದಪದ್ಮನಾಭ(ಸುದರ್ಶನ), ಚಿ॥ ವಿ. ಮಾರುತಿ ರಾವ್ ಹಾಗೂ ಶ್ರೀಮತಿ ಬಿ.ಎನ್. ಶಶಿಕಲಾ ಅವರದ್ದು. ಕರಡು ತಿದ್ದುವ ಕಾರ್ಯ ನನ್ನ ಪುತ್ರ ಚಿ॥ ಜಯಂತನದು; ಮುದ್ರಣ ಬೆಂಗಳೂರಿನ ವಾಗರ್ಥ ಅವರದ್ದು; ಎಲ್ಲರಿಗೂ ನಮ್ಮ ಪ್ರತಿಷ್ಠಾನ ಋಣಿ.

ಬೆಂಗಳೂರು **ವ್ಯಾಸನಕೆರೆ ಪ್ರಭಂಜನಾಚಾರ್ಯ**
೦೪.೧೨.೨೦೧೦
ವಿಕೃತಿ - ಶ್ರೀ ಪದ್ಮನಾಭತೀರ್ಥರ ಆರಾಧನೆ

೧. ನಿತ್ಯ ಸ್ನಾನ ಹಾಗೂ ತೀರ್ಥಸ್ನಾನಗಳಿಗೆ ವಿಹಿತವಾದ ಮಂತ್ರಗಳನ್ನೂ, ಗ್ರಹಣಕಾಲ ಮೊದಲಾದ ವಿಶೇಷ ಪರ್ವಕಾಲಗಳಲ್ಲಿ ವಿಹಿತವಾದ ಸ್ನಾನಾದಿಗಳ ವಿಧಿವಿಧಾನಗಳನ್ನೂ ನಮ್ಮ ಪ್ರಕಾಶನದ 'ಸದಾಚಾರವಿನೋದ ಭಾಗ - ೧' ರಲ್ಲಿ ಕೊಡಲಾಗಿದೆ.

॥ ಶ್ರೀಃ ॥

ಶ್ರೀವಾದಿರಾಜತೀರ್ಥಶ್ರೀಚರಣವಿರಚಿತ

# ತೀರ್ಥಪ್ರಬಂಧಃ

(ಕನ್ನಡ ಅನುವಾದ ಸಮೇತ)

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ ಶ್ರೀಲಕ್ಷ್ಮೀಹಯಗ್ರೀವಾಯ ನಮಃ ॥

## ಪಶ್ಚಿಮ ಪ್ರಬಂಧಃ

[ಮಂಗಳಾಚರಣೆ - ವಾಗೀಶತೀರ್ಥರ ಪ್ರಾರ್ಥನೆ - ಗ್ರಂಥದ ವಿಷಯ - ಜನ್ಮಭೂಮಿ (ಪರಶುರಾಮಕ್ಷೇತ್ರ) - ರಜತಪೀಠಪುರ(ಉಡುಪಿ) - ಉಡುಪಿಯ ಅಷ್ಟಮಠಾಧೀಶರ ವರ್ಣನೆ - ಉಡುಪಿಯ ಹಿರಿಮೆ(೨) - ಉಡುಪಿ ಶ್ರೀಕೃಷ್ಣನ ವರ್ಣನೆ - ಅನಂತೇಶ್ವರ (ಅನಂತಾಸನ) - ಪಾಜಕಕ್ಷೇತ್ರ - ವಿಮಾನಗಿರಿಯಲ್ಲಿನ ದುರ್ಗಾದೇವಿ - ಎಲ್ಲೂರಿನ ವಿಶ್ವನಾಥ - ಎಲ್ಲೂರಿನ ನಂದಿಕೇಶ್ವರ - ಮಧ್ಯವಾಟ ಮಠ - ಚಿಂತಾಮಣಿ ನರಸಿಂಹ - ನೇತ್ರಾವತೀ (ನದೀ) - ನೇತ್ರಾವತೀ - ಕುಮಾರಧಾರಾ ಸಂಗಮ - ಕುಮಾರಧಾರಾ (ನದೀ) - ಸುಬ್ರಹ್ಮಣ್ಯ (ಕ್ಷೇತ್ರ) - ಶ್ರೀವೇದವ್ಯಾಸ ಸಂಪುಟ - ಪಯಸ್ವಿನೀ (ನದಿ) - ಸುವರ್ಣಾ (ನದೀ) - ಕುಂಭಾಸಿ (ಕ್ಷೇತ್ರ) - ಕೋಟೀಶ್ವರ (ಕ್ಷೇತ್ರ) - ಕ್ರೋಡ ಶಂಕರನಾರಾಯಣ (ಕ್ಷೇತ್ರ) - ಮೂಕಾಂಬಿಕಾ(ಕೊಲ್ಲೂರು-ಕ್ಷೇತ್ರ) - ಸಹ್ಯ (ಪರ್ವತ) - ಹರಿಹರ (ಕ್ಷೇತ್ರ) - (ಬಿದರಹಳ್ಳಿ)ಅಶ್ವತ್ಥನಾರಾಯಣ - ಬಿದರಹಳ್ಳಿ (ಅಶ್ವತ್ಥ ವೃಕ್ಷ) - ಬಿದರಹಳ್ಳಿ ಸೋಮೇಶ್ವರ - ಬಂಕಾಪುರದ ಕೇಶವ - (ವರದಾತೀರದ) ಮಧುಕೇಶ್ವರ - ಶಾಲ್ಮಲೀ(ನದೀ) - ತ್ರಿವಿಕ್ರಮಃ (ಸೋದಾ ಕ್ಷೇತ್ರ) - ವೇಂಕಟೇಶ (ಮಂಜುಗುಣಿ ಕ್ಷೇತ್ರ) - ಭೈರವ (ಏಣಭೈರವ ಕ್ಷೇತ್ರ) - ಶ್ರೀರುದ್ರದೇವರು (ಗೋಕರ್ಣಕ್ಷೇತ್ರ) - ವಿಘ್ನೇಶ್ವರ (ಗೋಕರ್ಣ ಕ್ಷೇತ್ರ) - ಮಹಾಲಕ್ಷ್ಮೀ (ಕೊಲ್ಹಾಪುರ) - ತಾಪಾ (ನದೀ) - ನರ್ಮದಾ (ನದೀ) - ಪ್ರಭಾಸ ಕ್ಷೇತ್ರ - ಬಾಣಗಂಗಾ (ಪ್ರಭಾಸ ಕ್ಷೇತ್ರ) - ದ್ವಾರಕಾ (ಕ್ಷೇತ್ರ) - ತ್ರಿವಿಕ್ರಮ (ದ್ವಾರಕಾ) - ಗೋಮತೀ (ನದೀ) - ಚಕ್ರತೀರ್ಥ (ದ್ವಾರಕಾಕ್ಷೇತ್ರ) - ಶಂಖೋದ್ಧಾರ ಕ್ಷೇತ್ರ - ಗೋಪೀಚಂದನ (ದ್ವಾರಕಾಕ್ಷೇತ್ರ) - ಸಿದ್ಧಪುರೀ (ಕ್ಷೇತ್ರ) - ಪುಷ್ಕರ (ತೀರ್ಥ- ಕ್ಷೇತ್ರ)]

### ಮಂಗಳಾಚರಣೆ

ಹರಿಕ್ಷೀರಾಂಬುಧೇಃ ಸ್ವೈರಂ ಭವಘರ್ಮರಿಪೋರ್ಮನಃ[೧] ।
ವಿಹರಾಹರಹಶ್ಚಿತ್ರಚಾರಿತ್ರಚತುರೋರ್ಮಿಷು ॥ ೧ ॥

ಅನ್ವಯಾರ್ಥ: (ಹೇ)ಮನಃ = ಎಲೈ ಮನಸ್ಸೇ(ನೀನು) ಭವಘರ್ಮರಿಪೋಃ = ಸಂಸಾರವೆಂಬ ತಾಪಕ್ಕೆ ವೈರಿಯಾದ; ಹರಿಕ್ಷೀರಾಂಬುಧೇಃ = ಶ್ರೀಹರಿ ಎಂಬ ಕ್ಷೀರಸಮುದ್ರದ;

೧. ಹೇ ಚಿತ್ತ ಚಿಂತಯಸ್ವೇಹ ವಾಸುದೇವಮಹರ್ನಿಶಮ್।
ನೂನಂ ಯಶ್ಚಿಂತಿತಃ ಪುಂಸಾಂ ಹಂತಿ ಸಂಸಾರಬಂಧನಮ್ ॥ - ಕೃಷ್ಣಾಮೃತಮಹಾರ್ಣವ

ಚಿತ್ರಚಾರಿತ್ರಚತುರೋರ್ಮಿಷು = ಆಶ್ಚರ್ಯತಮವಾದ ಜಗತ್ಸೃಷ್ಟಿ ಮೊದಲಾದ ವ್ಯಾಪಾರಗಳೆಂಬ ನಿಪುಣತರಂಗಗಳಲ್ಲಿ; ಅಹರಹಃ = ಪ್ರತಿದಿನವೂ; ಸ್ವೈರಂ = ಯಥೇಷ್ಟವಾಗಿ; ವಿಹರ = ವಿಹರಿಸು.

ಅನುವಾದ : ಎಲೈ ಮನಸ್ಸೇ, ಸಂಸಾರವೆಂಬ ತಾಪವನ್ನು ಹೋಗಲಾಡಿಸುವ ಶ್ರೀಹರಿ ಎಂಬ ಕ್ಷೀರಸಮುದ್ರದ ಚಿತ್ರವಿಚಿತ್ರವಾದ ನಿಪುಣತರಂಗಗಳಲ್ಲಿ ಪ್ರತಿದಿನದಲ್ಲೂ ಯಥೇಚ್ಛವಾಗಿ ವಿಹರಿಸು.

ವಿ: ೧. ತೀರ್ಥಪ್ರಬಂಧವೆಂಬ ಅಪೂರ್ವಕೃತಿಯನ್ನು ರಚಿಸಲು ಹೊರಟಿರುವ ಶ್ರೀವಾದಿರಾಜತೀರ್ಥಶ್ರೀಚರಣರು ಸಕಲಶುಭಕಾರ್ಯಗಳಲ್ಲೂ ಅವಶ್ಯಕರ್ತವ್ಯವೂ ನಿರ್ವಿಘ್ನಪರಿಸಮಾಪ್ತಿಸಾಧನವೂ ಆದ ಶ್ರೀನಾರಾಯಣಸ್ಮರಣರೂಪ ಮಂಗಲವನ್ನು ಗ್ರಂಥಾರಂಭದಲ್ಲಿ ಈ ಶ್ಲೋಕದಿಂದ ಮಾಡಿರುವರು.

೨. ಸಮುದ್ರದ ಅಲೆಗಳು ಬಿಸಿಲಿನ ತಾಪವನ್ನು ಪರಿಹರಿಸುವಂತೆ, ಶ್ರೀಹರಿ ಎಂಬ ಕ್ಷೀರಸಮುದ್ರದ ಲೀಲಾರೂಪದ ಅಲೆಗಳು ಸಂಸಾರತಾಪವನ್ನು ಹೋಗಲಾಡಿಸಿ ಮುಕ್ತಿ ನೀಡುವವು. ಆದ್ದರಿಂದ ತಮ್ಮ ಮನಸ್ಸಿನಂತೆ ಇರುವ ಸಕಲ ಸಜ್ಜನರ ಮನಸ್ಸುಗಳು ಸಹ ಶ್ರೀಹರಿಯ ಮಾಹಾತ್ಮ್ಯವನ್ನು ಸದಾ ಚಿಂತಿಸಿ ಉದ್ಧೃತವಾಗಬೇಕು ಎಂದು ಭಾವ.

೩. ಮನಃ : ತಾವು ವಿಷ್ಣುಭಕ್ತರಾದ್ದರಿಂದ, ತಮ್ಮಂತೆ ವಿಷ್ಣುಭಕ್ತರಾದ ಸಕಲಸಜ್ಜನರ ಮನಸ್ಸುಗಳು ಸಹ ತಮ್ಮ ಮನಸ್ಸಿನಂತೆ ಶ್ರೀಹರಿಯ ಚರಿತ್ರೆಯಲ್ಲಿ ವಿಹರಿಸಲು ಅರ್ಹವಾಗಿವೆ ಎಂಬುದನ್ನು ಗ್ರಂಥಕಾರರು 'ಮನಃ' ಎಂಬ ಪದದಿಂದ ಸೂಚಿಸಿರುವರು.

೪. ಭವಘರ್ಮರಿಪೋಃ : ಸಂಸಾರವೇ ಒಂದು ತಾಪ; ಕ್ಷೀರಾಂಬುಧಿಯು ಬಿಸಿಲಿನ ಬೇಗೆಯನ್ನು ಪರಿಹರಿಸುತ್ತದೆ; ಶ್ರೀಹರಿಯೆಂಬ ಕ್ಷೀರಸಮುದ್ರವು ಸಂಸಾರವೆಂಬ ತಾಪವನ್ನು ಪರಿಹರಿಸುತ್ತದೆ;[೧] ಹೀಗೆ ಎರಡಕ್ಕೂ ಸಾಮ್ಯವನ್ನು ತೋರಿಸುವ ಮೂಲಕ ವಿಷ್ಣುಕಥಾರೂಪವಾದ ಈ ಪ್ರಬಂಧಕ್ಕೆ ಮೋಕ್ಷವೇ ಫಲ ಎಂಬ ಸೂಚನೆಯನ್ನೂ ಮಾಡಿರುವರು.

೫. ಹರಿಕ್ಷೀರಾಂಬುಧೇಃ : ಗಾಂಭೀರ್ಯಾದಿ ಗುಣಯೋಗದಿಂದಾಗಿ ಶ್ರೀಹರಿಯು ಕ್ಷೀರಾಂಬುಧಿ ಎಂಬುದು ಯುಕ್ತವಾಗಿದೆ; 'ಹರತೀತಿ ಹರಿಃ' ಎಂಬ ವ್ಯುತ್ಪತ್ತಿಯಿಂದ ಭವಹಾರಿತ್ವವು ಶ್ರೀಹರಿಗೆ ಯುಕ್ತವಾಗಿದೆ ಎಂಬುದು 'ಹರಿ' ಎಂಬ ಪದದಿಂದ ಧ್ವನಿತವಾಗಿದೆ.

೬. ಚಿತ್ರಚಾರಿತ್ರಚತುರೋರ್ಮಿಷು : 'ಚಿತ್ರ' ಎಂದರೆ ಅಘಟಿತಘಟನಾ ಶಕ್ತಿಯುಕ್ತವಾದವುಗಳಾದ ಕಾರಣ 'ಆಶ್ಚರ್ಯತಮ' ಎಂದು ಅರ್ಥ. ಚಾರಿತ್ರ ಎಂದರೆ ಜಗತ್ಸೃಷ್ಟ್ಯಾದಿ

---

೧. ಸಂಸಾರವಿಷಪಾನೇನ ಯೇ ಮೃತಾಃ ಪ್ರಾಣಿನೋ ಭುವಿ ।
ಅಮೃತಾಯ ಸ್ಮೃತಸ್ತೇಷಾಂ ಕೃಷ್ಣಾಮೃತಮಹಾರ್ಣವಃ ॥
ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್ ।
ವಕ್ಷ್ಯಾಮಿ ಶಾಂತಯೇ ತಸ್ಯ ಕೃಷ್ಣಾಮೃತಮಹಾರ್ಣವಮ್ ॥
— ಎಂಬ ಶ್ರೀಮದಾಚಾರ್ಯರ ಕೃಷ್ಣಾಮೃತಮಹಾರ್ಣವದ ಮಾತುಗಳು ಇಲ್ಲಿ ಗಮನಾರ್ಹ.

ವ್ಯಾಪಾರಗಳು; ಸಮುದ್ರದ ಅಲೆಗಳಲ್ಲಿ ಹೆಚ್ಚು ಸಮಯ ವಿಹರಿಸಿದರೆ ಆರೋಗ್ಯ ಕೆಡುವ ಅಪಾಯ ಉಂಟು; ಆದರೆ ಶ್ರೀಹರಿಯ ಮಾಹಾತ್ಮ್ಯರೂಪ ತರಂಗಗಳಲ್ಲಿ ಸತತ ವಿಹರಿಸುತ್ತಿದ್ದರೂ ಯಾವ ಅಪಾಯವೂ ಇಲ್ಲದೆ, ವಿಶೇಷವಾದ ಆನಂದವೇ ಉಂಟಾಗುವುದು ಎಂಬುದು 'ಚತುರ' ಎಂಬ ಪದದಿಂದ ತಿಳಿಯುತ್ತದೆ. ಶ್ರೀಹರಿಯ ಚರಿತ್ರೆಗಳು ಅನಂತ ಎಂಬುದನ್ನೂ, ಅಲೆಗಳು ಒಮ್ಮೆ ಕಂಡು ಮತ್ತೊಮ್ಮೆ ಕಾಣದೆ ಇರುವಂತೆ ಶ್ರೀಹರಿಯ ಸೃಷ್ಟ್ಯಾದಿ ವ್ಯಾಪಾರಗಳು ಶಕ್ತ್ಯಾತ್ಮನಾ ಅಭಿನ್ನವೂ, ನಿತ್ಯವೂ ಆಗಿವೆ ಎಂಬುದನ್ನೂ, ಸಮುದ್ರಕ್ಕೂ, ಅದರ ತರಂಗಗಳಿಗೂ ಅಭೇದವಿರುವಂತೆ ಶ್ರೀಹರಿಗೂ ಅವನ ಚರಿತ್ರೆಗಳಿಗೂ ಅಭೇದವಿದೆ ಎಂಬುದನ್ನೂ, 'ಊರ್ಮಿ' ಎಂಬ ಪದದಿಂದ ತಿಳಿಸಿರುವರು. ಶ್ರೀಹರಿಗೂ ಅವನ ಸೃಷ್ಟ್ಯಾದಿ ವ್ಯಾಪಾರಗಳಿಗೂ ಅಭೇದವಿದ್ದರೂ, ಭೇದವಿಲ್ಲದಾಗಲೂ ಭೇದವ್ಯಾಪಾರವನ್ನು ನಿರ್ವಹಿಸುವ [೧] ವಿಶೇಷವು ಉಂಟು ಎಂಬುದನ್ನು ಸಹ 'ಚಿತ್ರ' ಪದವು ತಿಳಿಸುತ್ತದೆ.

೭. ಅಹರಹಃ : 'ಶ್ರೀಹರಿಯನ್ನು ಸದಾ ಸ್ಮರಿಸಬೇಕು; ಎಂದೂ ಮರೆಯಕೂಡದು [೨]' ಎಂಬ ಶಾಸ್ತ್ರದ ಸಂದೇಶವು ಇದರಲ್ಲಿ ಅಡಗಿದೆ. ಸ್ವೈರಂ - ಎಂದರೆ 'ಯಥೇಷ್ಟವಾಗಿ' ಎಂದರ್ಥ; ಸಮುದ್ರದ ಅಲೆಗಳಲ್ಲಿ ಯಥೇಷ್ಟ ವಿಹರಿಸುವುದು ಅಪಾಯಕರ; ಆದರೆ ಶ್ರೀಹರಿಯ ಮಾಹಾತ್ಮ್ಯರೂಪತರಂಗಗಳಲ್ಲಿ ಯಥೇಷ್ಟವಾಗಿ ವಿಹರಿಸುವ ಅವಕಾಶ ಉಂಟು; ಹಾಗೆ ವಿಹರಿಸಿದಂತೆಲ್ಲ ಸಂಸಾರದ ಅಪಾಯವು ತಪ್ಪುತ್ತದೆ ಎಂದು ಭಾವ.

೮. ವಿಹರ : ಸಮುದ್ರದ ಅಲೆಗಳಲ್ಲಿ ಮೀಯುವುದು ಪುಣ್ಯಪ್ರಾಪಕವಾದರೂ, ಮೀಯುವ ಕಾರ್ಯವು ವಿಹಾರದ ಆನಂದವನ್ನು ಕೊಡಬೇಕೆಂದು ನಿಯಮವಿಲ್ಲ; ಆದರೆ ಶ್ರೀಹರಿಯ ಮಾಹಾತ್ಮ್ಯಚಿಂತನೆಯು ಸಹ ಅದರಿಂದ ದೊರೆಯುವ ಫಲದಂತೆಯೇ ವಿಶೇಷ ಆಹ್ಲಾದಕರ ಎಂಬ ವೈಶಿಷ್ಟ್ಯದಿಂದ ಕೂಡಿದೆ ಎಂದು ಭಾವ. ಸ್ಮರಣಜನ್ಯಸುಖಾನುಭವವು ಸ್ಮರಣೆಗೆ ಕರಣವಾದ ಮನಸ್ಸಿಗಲ್ಲ; ಸ್ಮರಣಕರ್ತೃವಾದ ಜೀವನಿಗೆ ಎಂಬುದು 'ವಿಹರ' ಎಂಬ ಪರಸ್ಮೈಪದ ಪ್ರಯೋಗದಿಂದ ಸೂಚಿತವಾಗಿದೆ. ಸ್ಮರಣೆಗೆ [೩] ಸ್ವತಂತ್ರವಾದ ಸಾಧನ ಎಂಬ ವಿವಕ್ಷೆಯಿಂದ ಮನಸ್ಸನ್ನೇ 'ಕರ್ತೃ' ಎಂದು ಔಪಚಾರಿಕವಾಗಿ ಕರೆದಿರುವರು - 'ಎಲೈ ನಾಲಿಗೆಯೇ ನುಡಿ' [೪] ಎಂಬಂತೆ.

---

೧. ಸರ್ವೇಷಾಂ ಬ್ರಹ್ಮಧರ್ಮಾಣಾಂ ಬ್ರಹ್ಮಣಾ ಸವಿಶೇಷೋಽತ್ಯಂತಾಭೇದಃ । ಕ್ರಿಯಾದೀನಾಂ ನಿತ್ಯತಾ ಶಕ್ತಿವ್ಯಕ್ತಿರೂಪತಾ ವ್ಯಕ್ತಿರೂಪಸ್ಯಾಪಿ ನಿತ್ಯತಾ ಶಕ್ತಿರೂಪಸ್ಯಾಪ್ಯಭಿನ್ನತಾ ಸವಿಶೇಷಸ್ಯಾಭೇದಃ ಸ್ವನಿರ್ವಾಹಕತಾ ಚೇತಿ। ನ ಹ್ಯೇತೇಷ್ವನ್ಯತಮಸ್ಯಾಪ್ಯ ಕಲ್ಪನಾಯಾಮುದಾಹೃತೋಭಯವ್ಯಪದೇಶ-ವಿರೋಧ ಶಾಂತಿರ್ಭವತೀತಿ ॥ – ನ್ಯಾಯಸುಧಾ (೩/೨/೧೫)

೨. ಸ್ಮರ್ತವ್ಯಃ ಸತತಂ ವಿಷ್ಣುರ್ವಿಸ್ಮರ್ತವ್ಯೋ ನ ಜಾತುಚಿತ್ ।
ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ ॥ –ಪದ್ಮಪುರಾಣ
(ಮ. ಭಾ. ತಾ. ನಿ ಮತ್ತು ಸದಾಚಾರಸ್ಮೃತಿಗಳಲ್ಲಿ ಉದ್ಧೃತ)

೩. ಸ್ವಾತಂತ್ರ್ಯೇಣ ಸ್ಮರಣಸಾಧನಂ ಮನಃ । – ಪ್ರಮಾಣಪದ್ಧತಿ

೪. ಹೇ ಜಿಹ್ವೇ ಮಮ ನಿಃಸ್ನೇಹೇ ಹರಿಂ ಕಿಂ ನು ನ ಭಾಷಸೇ ।
ಹರಿಂ ವದಸ್ವ ಕಲ್ಯಾಣಿ ಸಂಸಾರೋದಧಿನೌರ್ಹರಿಃ ॥ – ಕೃಷ್ಣಾಮೃತ ಮಹಾರ್ಣವ ೨೦

೯. ವರ್ಣಿಸಲ್ಪಡುವ ತೀರ್ಥಗಳಿಗೆಲ್ಲ ಸಮುದ್ರವು ಅಧಿಪತಿಯಾಗಿರುವಂತೆ, ಶ್ರೀಹರಿಯು ಸಕಲತೀರ್ಥಗಳಿಗೂ ಮುಖ್ಯಸ್ವಾಮಿಯಾಗಿರುವನು[೧] ಎಂಬ ಭಾವವು ಸಹ 'ಹರಿಕ್ಷೀರಾಂಬುಧೇಃ' ಎಂಬಲ್ಲಿ ಸೂಚಿತವಾಗಿದೆ.

೧೦. ಈ [೨]ಕೃತಿಯಲ್ಲಿನ ಸಕಲಶ್ಲೋಕಗಳಲ್ಲೂ ಒಂದಲ್ಲ ಒಂದು ತೀರ್ಥ(ಕ್ಷೇತ್ರ)ದ ವರ್ಣನೆಯು ಬಂದಿದೆ; ಆದ್ದರಿಂದ ಇದರ ಮೊದಲ ಶ್ಲೋಕದಲ್ಲೂ ಶ್ರೀಹರಿಯನ್ನು ತೀರ್ಥರಾಜನಾದ 'ಕ್ಷೀರಸಮುದ್ರ' ಎಂಬ ರೂಪಕದಿಂದ ವರ್ಣಿಸಲಾಗಿದೆ.

೧೧. ತೀರ್ಥವರ್ಣನೆಯ ಪ್ರಸಂಗದಲ್ಲಿ ಆರಂಭದಲ್ಲೇ ಶ್ರೀಹರಿಯನ್ನು ಸ್ತುತಿಸಿದ್ದರಿಂದ 'ತೀರ್ಥಪಾದ'[೩]ನಾದ ಅವನ ಸನ್ನಿಧಿಯಿಂದಾಗಿಯೇ ಸಕಲ ತೀರ್ಥಗಳೂ 'ತೀರ್ಥ'- (ಪಾವನ) ವಾಗಿವೆ ಎಂಬ ಭಾವವೂ ಬಂದಿದೆ.

೧೨. ಪರಮಮಂಗಲಕರವಾದ[೪] 'ಹರಿ' ಎಂಬ ಶಬ್ದವನ್ನು ಆರಂಭದಲ್ಲೇ ಪ್ರಯೋಗಿಸಿ-ರುವುದರಿಂದ, ಇತರ ಗುಣಗಳೊಂದಿಗೆ 'ವರ್ಣಗಣಶುದ್ಧಿ' ಎಂಬ ಮತ್ತೊಂದು ಮಹತ್ತ್ವವೂ ಇಲ್ಲಿ ಸೂಚಿತವಾಗಿದೆ. ಇಲ್ಲಿಯ 'ಕ್ಷೀರಾಂಬುಧೇಃ' 'ಭವಘರ್ಮಾರಿಪೋಃ' 'ಚಿತ್ರಚಾರಿತ್ರ-ಚತುರೋರ್ಮಿಷು' ಎಂಬ ಪದಗಳಲ್ಲಿ ರೂಪಕವೆಂಬ ಅಲಂಕಾರವಿದೆ; ಶ್ರೀವಾದಿರಾಜಸ್ವಾಮಿಗಳ ಇತರ ಎಲ್ಲಾ ಕೃತಿಗಳಲ್ಲೂ ತಪ್ಪದೆ ಕಂಡುಬರುವ 'ಅನುಪ್ರಾಸ' ಎಂಬ ಶಬ್ದಾಲಂಕಾರವು ಇಲ್ಲಿ ಪ್ರತಿಯೊಂದು ಶ್ಲೋಕದಲ್ಲೂ ಉಂಟು.

೧೩. 'ಹರಿ' ಎಂಬ ಪದವು ಜೀವರುಗಳ ಬಿಂಬರೂಪವನ್ನು ಸೂಚಿಸುವ ವಿಶಿಷ್ಟ ಪದ; ಆದ್ದರಿಂದಲೇ ಅದರ ಬಳಕೆಗೆ ವಿಶೇಷ ಮಹತ್ತ್ವ ಉಂಟು: 'ಪ್ರಾದುರ್ಭೂತೋ ಹರಿಃ' (ಅನುವ್ಯಾಖ್ಯಾನ), 'ವನಂಗತೋ ಯದ್ಧರಿಮಾಶ್ರಯೇತ', 'ಹರಿರಿತರತ್ರ ಗೀಯತೇ ನೋ ಹ್ಯಭೀಕ್ಷ್ಣಂ' (ಭಾಗವತ), 'ನಮೋಽಶೇಷಾಮ್ನಾಯ ಸ್ಮೃತಿಹೃದಯ ದೀಪ್ತಾಯ ಹರಯೇ' (ನ್ಯಾಯಸುಧಾ) ಮೊದಲಾದ ವಾಕ್ಯಗಳು ಇದಕ್ಕೆ ಪೋಷಕವಾಗಿವೆ. 'ಹರಿಕಥಾಮೃತಸಾರ' ಎಂಬ ಹೆಸರಿನ ಶ್ರೀಜಗನ್ನಾಥದಾಸರ ಮೇರುಕೃತಿಯನ್ನು ಇಲ್ಲಿ ಸ್ಮರಿಸಬಹುದು; 'ಹರಿಭಜನೆ ಮಾಡೋ ನಿರಂತರ' ಎಂಬ ಶ್ರೀವಾದಿರಾಜರ ಕನ್ನಡಕೃತಿಯೊಂದು ಈ ಶ್ಲೋಕದ ವಿಶೇಷ ವಿವರಣೆಯಂತಿದೆ.

---

೧. ಅಭಿವರ್ಣ್ಯಮಾನತೀರ್ಥಾನಾಂ ಸಮುದ್ರಸ್ಯಾಧಿಪತಿತ್ವೇನ ಹರೇ
ಸಕಲತೀರ್ಥಸ್ವಾಮಿತ್ವದ್ಯೋತನಾಯ ಸಮುದ್ರತ್ವೋಕ್ತಿಃ ॥ -ವ್ಯಾಖ್ಯಾನ
ತಥಾ ತತ್ರ ತೀರ್ಥಾನಾಂ ಪವಿತ್ರೀಕರಣಶಕ್ತಿರಪಿ ಹರಿಸನ್ನಿಧಾನಾದೇವೇತಿ ದ್ಯೋತ್ಯತೇ ।
-ವ್ಯಾಖ್ಯಾನ

೨. ಕಾವ್ಯಸ್ಥಿತಸಕಲಪದ್ಯಾನಾಂ ತೀರ್ಥವರ್ಣನರೂಪತ್ವಾದಾದ್ಯಪದ್ಯೇಽಪಿ ತದಾವಶ್ಯಕಮಿತಿ
ಮನ್ವಾನೋ ಗ್ರಂಥಕಾರಃ ಹರಿಮಪಿ ತೀರ್ಥರಾಜಕ್ಷೀರಸಮುದ್ರತ್ವೇನ ವರ್ಣಿತವಾನ್ । – ವ್ಯಾ

೩. ಪುಣ್ಯಶ್ಲೋಕಸ್ತೀರ್ಥಪಾದೋ ವೇದವೇದ್ಯೋ ದಯಾನಿಧಿಃ ॥
-ಶ್ರೀಕೃಷ್ಣಾಷ್ಟೋತ್ತರಶತನಾಮ ಸ್ತೋತ್ರ

೪. ಅತ್ರ ಪರಮಮಂಗಲರೂಪದೇವತಾವಾಚಕಹರಿಶಬ್ದಪ್ರಯೋಗಾದೇವ ಸರ್ವಸಾಮಂಜಸ್ಯೇಽಪಿ
ವರ್ಣಗಣಶುದ್ಧಿರಧಿಕಾ । – ವ್ಯಾಖ್ಯಾನ

೧೪. 'ಹರಿಕ್ಷೀರಾಂಬುಧೇಃ' ಎಂಬ ಪದವು ಶ್ರೀಮದಾಚಾರ್ಯರ 'ಕೃಷ್ಣಾಮೃತ-ಮಹಾರ್ಣವ' ಎಂಬ ಕೃತಿಯ ಹೆಸರಿನಿಂದಲೂ, 'ಸ್ಮರಾಮಿ ಭವಸಂತಾಪಹಾನಿದಾಮೃತ ಸಾಗರಂ' ಎಂಬ ಶ್ಲೋಕಭಾಗ(ದ್ವಾದಶಸ್ತೋತ್ರ)ದಿಂದಲೂ ಪ್ರಭಾವಿತವಾಗಿರುವುದು ಸ್ಪಷ್ಟ

೧೫. ತೀರ್ಥಪ್ರಬಂಧವೆಂಬ ಈ ಕೃತಿಗೆ ಸಜ್ಜನರೇ ಅಧಿಕಾರಿಗಳು. ಶ್ರೀಹರಿಯ ಚಿತ್ರಚಾರಿತ್ರಗಳೇ (ವರ್ಣನೆ) ವಿಷಯ, ಮೋಕ್ಷವೇ ಫಲ ಮತ್ತು ಯಥಾಯೋಗ್ಯ ಸಂಬಂಧ; ಆದ್ದರಿಂದ ಯಾವುದೇ ಗ್ರಂಥದ ಉಪಾದೇಯತ್ವಕ್ಕೆ ಅವಶ್ಯಕವಾದ ಅನುಬಂಧ ಚತುಷ್ಟಯವನ್ನು ಈ ಕೃತಿಯು ಹೊಂದಿದೆ ಎಂದು ಭಾವ; ಗ್ರಂಥಾರಂಭದಲ್ಲಿ ಅದರ ವಿಷಯ ಪ್ರಯೋಜನಾದಿ ಅನುಬಂಧಚತುಷ್ಟಯದ ಪರಿಜ್ಞಾನವು ವಿಶೇಷ ಫಲದಾಯಕ ಎಂಬ ಶ್ರೀಮದಾಚಾರ್ಯರ ಮಾತು ಸಹ ಇಲ್ಲಿ ಗಮನಾರ್ಹ[೧].

## ಶ್ರೀಹಯಗ್ರೀವ ಪ್ರಾರ್ಥನೆ

**ಹಯಗ್ರೀವದಯಾಸಿಂಧುರಂಧೂಕೃತಭವಾಂಬುಧಿಃ ।**
**ಪ್ರಬಂಧಮಪ್ರತಿದ್ವಂದ್ವಂ ಕರೋತ್ವೇನಮನೇನಸಮ್ ॥ ೨ ॥**

ಅ: **ಅಂಧೂಕೃತಭವಾಂಬುಧಿಃ** = ಭವಸಾಗರವನ್ನು ಒಂದು ಕೂಪ(ಮಾತ್ರ) ವನ್ನಾಗಿಸಿರುವ; **ಹಯಗ್ರೀವ ದಯಾಸಿಂಧುಃ** = ಶ್ರೀಹಯಗ್ರೀವನ ದಯೆಯೆಂಬ ಸಾಗರವು; **ಅನೇನಸಂ** = ನಿರ್ದುಷ್ಟವಾಗಿರುವ; **ಏನಂ** = ನಾವು ರಚಿಸ ಹೊರಟಿರುವ ಈ; **ಪ್ರಬಂಧಂ** = ತೀರ್ಥಪ್ರಬಂಧವನ್ನು; **ಅಪ್ರತಿದ್ವಂದ್ವಂ** = ಅಸದೃಶವನ್ನಾಗಿ; **ಕರೋತು** = ಮಾಡಲಿ.

**ಭವಸಾಗರವನ್ನು ಒಂದು ಕೂಪಮಾತ್ರವನ್ನಾಗಿಸುವ ಹಯಗ್ರೀವನ ದಯೆಯೆಂಬ ಸಾಗರವು ನಿರ್ದೋಷವಾಗಿರುವ ಈ ತೀರ್ಥಪ್ರಬಂಧಕೃತಿಯನ್ನು ಅಪ್ರತಿಮ-ವನ್ನಾಗಿಸಲಿ.**

ವಿ: ೧. ಅನುಪಮವಾಗಿರುವ ಶ್ರೀಹಯಗ್ರೀವದೇವರ ದಯೆಯು ತಮ್ಮ ಗ್ರಂಥವನ್ನು ಸಹ ಯಥೋಚಿತವಾಗಿ ಅನುಪಮವನ್ನಾಗಿಸಲಿ ಎಂಬುದಾಗಿ ಈ ಶ್ಲೋಕದಲ್ಲಿ ಪ್ರಾರ್ಥಿಸಿರುವರು.

೨. **ಹಯಗ್ರೀವದಯಾಸಿಂಧುಃ** - 'ಶ್ರೀಹರಿಯ ಕರುಣೆ ಎಂಬ ಸಮುದ್ರದ ಮುಂದೆ ಸಂಸಾರ ಸಮುದ್ರವು ಒಂದು ಭಾವಿ ಇದ್ದಂತೆ' ಎಂದು ಭಾವ; ಅಪಾರವಾದ ಈ ಸಂಸಾರ ಸಮುದ್ರವನ್ನು ಶ್ರೀಹರಿಯು ಒಲಿದರೆ ಒಂದು ಭಾವಿಯನ್ನು ಹೇಗೋ ಹಾಗೆ ಲೀಲಾಜಾಲವಾಗಿ ದಾಟಿಸುವನು[೨] ಎಂದು ಭಾವ. ಸಕಲ ದೋಷಗಳಿಗೂ ನೆಲೆಯಾದ ಸಂಸಾರ ಸಮುದ್ರದಿಂದ ತನ್ನ

---

೧. ಅಧಿಕಾರಂ ಫಲಂ ಚೈವ ಪ್ರತಿಪಾದ್ಯಂ ಚ ವಸ್ತು ಯತ್ ।
ಸ್ಮೃತ್ವಾ ಪ್ರಾರಭತೋ ಗ್ರಂಥಂ ಕರೋತೀಶೋ ಮಹತ್ಫಲಮ್ ॥ವಾಮನಪುರಾಣ (ಭಾ.ತಾ.ನಿ. ೧/೧/೨)

೨. ಅನಂಧುಃ ಅಂಧುಃ ಸಂಪದ್ಯಮಾನಃ ಕೃತಃ ಅಂಧೂಕೃತಃ ಅಂಧೂಕೃತಃ ಭವಾಂಬುಧಿಃ ಯೇನ ಸಃ - ಅಂಧೂಕೃತಭವಾಂಬುಧಿಃ । ಹಯಗ್ರೀವದಯಾಸಿಂಧುಃ ಹಯಗ್ರೀವದಯೈವ ಸಿಂಧುಃ ।ನ ವಿದ್ಯತೇ ಏನಃ ಯಸ್ಯ ಸಃ ತಂ -ಅನೇನಸಂ । – ವ್ಯಾಖ್ಯಾನ

ಭಕ್ತರನ್ನು ಮೇಲೆತ್ತಿ ನಿರ್ಮಲರನ್ನಾಗಿಸುವ ಶ್ರೀಹಯಗ್ರೀವನು ಸ್ವತಃ ಅಶೇಷ ದೋಷರಹಿತನಾಗಿರುವನು ಎಂಬುದು ಸ್ಪಷ್ಟ. ಅಂತಹ ಶ್ರೀಹರಿಯು ತಮ್ಮ ಈ ಕೃತಿಯನ್ನು ಸಹ ನಿರ್ದುಷ್ಟವನ್ನಾಗಿ ಮಾಡಲಿ ಎಂಬುದಾಗಿ ಶ್ರೀವಾದಿರಾಜರು ಈ ಶ್ಲೋಕದಿಂದ ಪ್ರಾರ್ಥಿಸಿರುವರು. ಇಲ್ಲಿ ಹಯಗ್ರೀವನೆಂಬ ದಯಾಸಿಂಧುವಿನ ಮುಂದೆ ಸಂಸಾರವು ಒಂದು ಕೂಪ ಎಂಬುದಾಗಿ ಸಹ ಅರ್ಥ ಮಾಡಬಹುದು.

೩. ಹಿಂದಿನ ಶ್ಲೋಕದಂತೆ, ಇದೂ ಸಹ ಶ್ರೀಹಯಗ್ರೀವರೂಪಿ ಪರಮಾತ್ಮನ ವರ್ಣನೆಯಾಗಿರುವುದರಿಂದ ತೀರ್ಥವರ್ಣನರೂಪವೂ ಆಗಿದೆ. ತೀರ್ಥಪ್ರಬಂಧದಂತಹ ತೀರ್ಥಕ್ಷೇತ್ರವರ್ಣನರೂಪವಾದ ಮತ್ತೊಂದು ತಾತ್ವಿಕ ಕೃತಿಯು ಈವರೆಗೂ ಸಮಗ್ರ ಸಂಸ್ಕೃತ ಸಾಹಿತ್ಯದಲ್ಲೇ ಕಂಡುಬಂದಿಲ್ಲ; ಆದ್ದರಿಂದ ಶ್ರೀವಾದಿರಾಜರ ಪ್ರಾರ್ಥನೆಯಂತೆ ಶ್ರೀಹರಿಯು ಅದನ್ನು ಮೇಲ್ನೋಟಕ್ಕೂ ಅಸದೃಶವನ್ನಾಗಿಯೇ ಮಾಡಿರುವನು.

೪. ಶ್ರೀರಾಮದೇವರಿಗೆ ಅಂಜಿ ಸಮುದ್ರವು ಶರಣಾದ ರಾಮಾಯಣದ ಪ್ರಸಂಗವು, ಗುಣಸಮುದ್ರನಾದ ಭಗವಂತನ ಮುಂದೆ ಭವಸಮುದ್ರವು ನಾಶವಾಗುವ ತತ್ತ್ವಕ್ಕೆ ದ್ಯೋತಕವಾಗಿದೆ[೧].

೫. 'ವಾಸುದೇವನ ಗುಣಸಮುದ್ರದೊಳೀಸಬಲ್ಲವ ಭವಸಮುದ್ರಾಯಾಸ ವಿಲ್ಲದೆ ಶೀಘ್ರದಲಿ ದಾಟುವನು ಜಗದೊಳಗೆ' ಎಂಬ ಶ್ರೀಜಗನ್ನಾಥದಾಸರ (ಹರಿಕಥಾಮೃತಸಾರ ೧೩/೫) ಮಾತಿನಲ್ಲೂ ಇದೇ ಭಾವ ತುಂಬಿದೆ. ಈ ಶ್ಲೋಕದಲ್ಲಿ ಹೇತುಗರ್ಭವೆಂಬ ಅಲಂಕಾರವಿದೆ.

## ಶ್ರೀಮದಾನಂದತೀರ್ಥ ಪ್ರಾರ್ಥನೆ

ಆಜನ್ಮಭೂಮೇರಟತೋಽಖಿಲೇಷು
ತೀರ್ಥೇಷು ತದ್ವರ್ಣನಭಾರಮೂಢ್ವಾ ।
ಆಯಾಸಮಸ್ಮನ್ಮೃದುಮಾನಸಸ್ಯ
ವಾಯುರ್ಮಹಃ ಕೃಂತತು ಮಧ್ವರೂಪೀ ॥೩॥

ಅ: ಆಜನ್ಮಭೂಮೇಃ = (ನಮ್ಮ) ಜನ್ಮಭೂಮಿಯಾದ ಶ್ರೀಪರಶುರಾಮ ಕ್ಷೇತ್ರದಿಂದ ಪ್ರಾರಂಭಿಸಿ; ಅಖಿಲೇಷು = ಸಕಲ; ತೀರ್ಥೇಷು = ತೀರ್ಥ(ಕ್ಷೇತ್ರ)ಗಳಲ್ಲಿ; ತದ್ವರ್ಣನ-ಭಾರಂ = ಆಯಾತೀರ್ಥಕ್ಷೇತ್ರಗಳ ಮಾಹಾತ್ಮ್ಯವರ್ಣನರೂಪಭಾರವನ್ನು; ಊಢ್ವಾ = ಹೊತ್ತು; ಅಟತಃ = ಸಂಚಾರ ಮಾಡುತ್ತಿರುವ; ಅಸ್ಮನ್ಮೃದುಮಾನಸಸ್ಯ = ನಮ್ಮ

---

ಸ ಪ್ರೀಯತಾಂ ಪರತಮಃ ಪರಮಾದನಂತಃ ಸಂತಾರಕಃ ಸಕಲಸಂಸೃತಿದುಸ್ತರಾರ್ಣಾತ್ ॥
ಯತ್ಪಾದಪದ್ಮಮಕರಂದಜುಷೋ ಹಿ ಪಾರ್ಥಾಃ ಸ್ವಾರಾಜ್ಯಮಾಪುರುಭಯತ್ರ ಸದಾ ವಿನೋದಾತ್ ॥
– ಮ. ಭಾ. ತಾ. ನಿ. (೨/೧೮೮)

೧. ಸಕ್ರೋಧದೀಪ್ತನಯನಾಂತಹತಃ ಪರಸ್ಯ ಶೋಷಂ ಕ್ಷಣಾದುಪಗತೋ ದನುಜಾದಿಸತ್ತ್ವೈಃ ॥
–ಮಹಾಭಾರತತಾತ್ಪರ್ಯನಿರ್ಣಯ (೮/೧೦)

ಕೋಮಲವಾದ ಮನಸ್ಸಿನ; ಆಯಾಸಂ = ಆಯಾಸವನ್ನು; ಮಧ್ವರೂಪೀ = ಶ್ರೀಮಧ್ವಾಚಾರ್ಯರೂಪದ; ವಾಯುಃ = ಶ್ರೀವಾಯುದೇವರು, ಮುಹುಃ = ಹೆಜ್ಜೆಹೆಜ್ಜೆಗೂ; ಕೃಂತತು = ಪರಿಹರಿಸಲಿ.

ನಮ್ಮ ಜನ್ಮಭೂಮಿಯಾದ ಪರಶುರಾಮಕ್ಷೇತ್ರದಿಂದ ಪ್ರಾರಂಭಿಸಿ ಆಯಾ ತೀರ್ಥಕ್ಷೇತ್ರಗಳ ವರ್ಣನರೂಪವಾದ ಭಾರವನ್ನು ಹೊತ್ತು ತೀರ್ಥಯಾತ್ರೆ ಕೈಗೊಂಡಿರುವ ನನ್ನ ಕೋಮಲಮನಸ್ಸಿನ ಆಯಾಸವನ್ನು ಶ್ರೀಮಧ್ವರೂಪದ ವಾಯುದೇವರು ಹೆಜ್ಜೆಹೆಜ್ಜೆಗೂ ಪರಿಹರಿಸಲಿ.

ವಿ: ೧. ಭಾರವಾದ ವಸ್ತುವನ್ನು ಹೊತ್ತು ಬಹುದೂರ ನಡೆಯುವುದು ವಿಶೇಷವಾಗಿ ಶ್ರಮದ ಕೆಲಸ; ಸಕಲ ತೀರ್ಥಗಳ ವರ್ಣನೆಯ ಭಾರವನ್ನು ತಲೆಯಲ್ಲಿ ತುಂಬಿಸಿಕೊಂಡು, ಆಯಾ ತೀರ್ಥಕ್ಷೇತ್ರಗಳ ಅಭಿಮಾನಿದೇವತೆಗಳನ್ನೂ, ಭಗವದ್ರೂಪಗಳನ್ನೂ ಚಿಂತಿಸುತ್ತ ತೀರ್ಥಯಾತ್ರೆ ಮಾಡುವುದು ತುಂಬಾ ಶ್ರಮಸಾಧ್ಯವಾದ ಕೆಲಸ; ಸಂಚಾರಕಾಲದಲ್ಲಿ ಒದಗುವ ಆಯಾಸವನ್ನು (ತಂಪಾದ) ಗಾಳಿಯು ಪರಿಹರಿಸುವಂತೆ, ತೀರ್ಥಸಂಚಾರದಲ್ಲಿ ಒದಗುವ ಅಜ್ಞಾನಾದಿ ನಿಮಿತ್ತ ಶ್ರಮವನ್ನು ಶ್ರೀಮಧ್ವಾಚಾರ್ಯರು ಪರಿಹರಿಸಲಿ ಎಂದು ಭಾವ[೧].

೨. ಯಾವುದೇ ತೀರ್ಥಕ್ಷೇತ್ರವನ್ನು ಸಂದರ್ಶಿಸುವಾಗಲೂ, ಅದಕ್ಕೆ ಸಂಬಂಧಿಸಿದ ಅಭಿಮಾನಿ ದೇವತೆಗಳನ್ನೂ, ಅಲ್ಲಿಯ ಭಗದ್ರೂಪ ವಿಶೇಷವನ್ನೂ ತಪ್ಪದೆ ಚಿಂತಿಸಬೇಕು; ಬಲಜ್ಞಾನಾದಿಸ್ವರೂಪರಾದ ಶ್ರೀಮಧ್ವಾಚಾರ್ಯರನ್ನು ಆಶ್ರಯಿಸಿದವರಿಗೆ ಮಾತ್ರವೇ ಸಕಲತೀರ್ಥಕ್ಷೇತ್ರಗಳ ಬಗ್ಗೆ ಯಥಾರ್ಥಜ್ಞಾನವನ್ನು ಹೊಂದಲು ಸಾಧ್ಯ ಎಂದು ಭಾವ. ಆನಂದ ತೀರ್ಥರ ಸ್ಮರಣೆಯೇ ಮಹಾತೀರ್ಥಯಾತ್ರೆ ಅಲ್ಲವೇ; 'ಒಂದುಬಾರಿ ಸ್ಮರಣೆ ಸಾಲದೇ, ಆನಂದ ತೀರ್ಥರ, ಪೂರ್ಣಪ್ರಜ್ಞರ, ಸರ್ವಜ್ಞರಾಯರ..' (ಶ್ರೀವಾದಿರಾಜರು)

೩. ತೀರ್ಥಯಾತ್ರಾರಂಭದಲ್ಲಿ ಸಕಲತೀರ್ಥಗಳನ್ನು ತಮ್ಮ ಸ್ನಾನಾದಿಗಳಿಂದ ಪವಿತ್ರ-ರನ್ನಾಗಿಸಿದ[೨] ಶ್ರೀಮದಾನಂದತೀರ್ಥರ ಸ್ಮರಣೆಯು ಅತ್ಯವಶ್ಯ. ಶ್ರೀಹರಿಯ ಅನುಗ್ರಹಸಂಪಾದನೆಗೆ 'ಆನಂದತೀರ್ಥ'ರಂತಹ ಮತ್ತೊಂದು ತೀರ್ಥವೇ ಇಲ್ಲವಾದ್ದರಿಂದ ಅವರ ಮಾಹಾತ್ಮ್ಯವನ್ನೂ, ಗ್ರಂಥಗಳನ್ನೂ ತಪ್ಪದೆ ಚಿಂತಿಸುವುದೇ ಸಕಲ ತೀರ್ಥಯಾತ್ರೆಯ ಸಾಧನ ಎಂಬ ಧ್ವನಿಯೂ ಇಲ್ಲಿದೆ (ರೂಪಕಾಲಂಕಾರ-ಇಂದ್ರವಜ್ರಾವೃತ್ತ).

---

೧. ಭಾರತೀಪತಿತ್ವಾತ್ ಜ್ಞಾನಬಲಪೂರ್ಣತ್ವಾಚ್ಚ ಸ್ತೋತುಂ ಶಕ್ತಿಂ ದತ್ವಾ ಚಿಂತಾಂ ಪರಿಹರತು ಇತ್ಯರ್ಥಃ । ... ಯಥಾ ಶಿರೋನಿಹಿತಭಾರಸ್ಯಾಧ್ವನಿ ಸಂಚರತಃ ಪುರುಷಸ್ಯ ಸ್ವೇದಂ ವಾಯುಃ ಪರಿಹರತಿ, ತಥಾ ಪದೇ ಪದೇ ಅಬೋಧಾದಿಜನಿತಮನಸ್ತಾಪಂ ಪ್ರಬುದ್ಧಶಿರೋಮಣಿಃ ಮಧ್ವರೂಪೀ ವಾಯುಃ ಪರಿಹರೇದಿತಿ ಭಾವಃ । — ವ್ಯಾಖ್ಯಾನ

ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥ — ಶ್ರೀವ್ಯಾಸರಾಜರು (ನ್ಯಾಯಾಮೃತ)

೨. ಬುದ್ಧಿಶುದ್ಧಿಕರಗೋನಿಕರಾಢ್ಯಂ ತೀರ್ಥಜಾತಮುಭಯಂ ಚ ಧರಣ್ಯಾಮ್ ।
ಆತ್ಮಮಜ್ಜನತ ಏವ ನಿಕಾಮಂ ಪರ್ಯಶೋಧಯದಮಂದಮನೀಷಃ ॥ - ಸುಮಧ್ವವಿಜಯ (೬/೩೭)

೪. ಆಯಾಸವನ್ನು ಪರಿಹರಿಸಲು ಆಯಾಸವಿಲ್ಲದವರನ್ನು ಪ್ರಾರ್ಥಿಸಬೇಕು; ಶ್ರೀವಾಯುದೇವರು ನಿಃಸೀಮಬಲಪೌರುಷರಾದ್ದರಿಂದ[೧], ಅವರಿಗೆ ಶ್ರಮಾದಿಗಳ ಪ್ರಸಕ್ತಿಯೇ ಇಲ್ಲ; ಆದ್ದರಿಂದ ಅವರನ್ನು ಆಶ್ರಯಿಸಿ ನಾವು ಅನಾಯಾಸವಾಗಿ ಉದ್ಧೃತರಾಗಬೇಕು ಎಂದು ಭಾವ.

## ವಾಗೀಶತೀರ್ಥರ ಪ್ರಾರ್ಥನೆ

ವಾಗೀಶತೀರ್ಥಮುನಿವರ್ಯ ಭವದ್ದಯಾಂಬು -
ಯೋಗೇನ ಪಾವಯ ಮನೋಗೃಹಮನ್ವಹಂ ಮೇ ।
ನಾಗೇಂದ್ರತಲ್ಪಮಧಿರೋಪಯ ತತ್ಪದಾಬ್ಜ -
ರಾಗೇಣ ರಂಜಯ ಕಲಿಂ ಜಯ ತದ್ವಿವಿಕ್ಷುಮ್ ॥ ೪ ॥

ಅ: ವಾಗೀಶತೀರ್ಥಮುನಿವರ್ಯ = ಎಲೈ ವಾಗೀಶತೀರ್ಥರೆಂಬ ಮುನಿಶ್ರೇಷ್ಠರೇ; **ಭವದ್ದಯಾಂಬುಯೋಗೇನ** = ನಿಮ್ಮ ಕೃಪಾಜಲದ ಸಂಪರ್ಕದಿಂದ; **ಮೇ** = ನನ್ನ; **ಮನೋಗೃಹಂ** = ಮನಸ್ಸು ಎಂಬ ಮನೆಯನ್ನು; **ಅನ್ವಹಂ** = ಪ್ರತಿ ದಿನವೂ; **ಪಾವಯ** = ಪಾವನಗೊಳಿಸಿರಿ; **ನಾಗೇಂದ್ರತಲ್ಪಂ** = ಶೇಷಪರ್ಯಂಕನಾದ ಶ್ರೀನಾರಾಯಣನನ್ನು; **ಅಧಿರೋಪಯ** = ಅಲ್ಲಿ ನೆಲೆಗೊಳಿಸಿರಿ; **ತತ್ಪದಾಬ್ಜರಾಗೇಣ** = ಆ ಶ್ರೀನಾರಾಯಣನ ಪಾದಕಮಲಗಳ ಮೇಲಿನ ಅನುರಾಗದಿಂದ[೨] (ಪಾದಕಮಲಗಳ ಕೆಂಪಾದ ಬಣ್ಣದಿಂದ); **ರಂಜಯ** = ಅದನ್ನು ಅಲಂಕರಿಸಿರಿ; **ತದ್ವಿವಿಕ್ಷುಂ** = ಅದನ್ನು ಪ್ರವೇಶಿಸಲು ಬಯಸಿರುವ; **ಕಲಿಂ** = (ಮನೋದೋಷಕ್ಕೆ ಕಾರಣನಾದ) ಕಲಿಯೆಂಬ ಮಹಾದೈತ್ಯನನ್ನು; **ಜಯ** = ಪರಾಭವಗೊಳಿಸಿರಿ.

ಎಲೈ ಮುನಿಶ್ರೇಷ್ಠರಾದ ವಾಗೀಶತೀರ್ಥರೇ ! ನಿಮ್ಮ ಕೃಪಾಜಲದ ಸಂಪರ್ಕದಿಂದ ನನ್ನ ಮನಸ್ಸು ಎಂಬ ಮನೆಯನ್ನು ಪ್ರತಿನಿತ್ಯ ಪಾವನಗೊಳಿಸಿರಿ. ಶೇಷ-ಪರ್ಯಂಕನಾದ ಶ್ರೀನಾರಾಯಣನನ್ನು ಅಲ್ಲಿ ನೆಲೆಗೊಳಿಸಿರಿ. ಆ ಶ್ರೀನಾರಾಯಣನ ಪಾದಕಮಲಗಳ ಮೇಲಿನ ಅನುರಾಗದಿಂದ ಪಾದಕಮಲಗಳ ಕೆಂಪಾದ ಬಣ್ಣ-ದಿಂದ ಅದನ್ನು ಅಲಂಕರಿಸಿರಿ ಮತ್ತು ಅದನ್ನು ಪ್ರವೇಶಿಸಬಯಸಿರುವ ಕಲಿಯೆಂಬ ಮಹಾದೈತ್ಯನನ್ನು ಪರಾಭವಗೊಳಿಸಿರಿ.

ವಿ: ೧. ಈ ಶ್ಲೋಕದಲ್ಲಿ ಶ್ರೀವಾದಿರಾಜರು ತಮ್ಮ ಗುರುಗಳಾದ ಶ್ರೀವಾಗೀಶತೀರ್ಥರನ್ನು ಪ್ರಾರ್ಥಿಸುತ್ತಿರುವರು. ಪ್ರತಿದಿನವೂ ಮನೆಯನ್ನು ನೀರಿನಿಂದ ಸ್ವಚ್ಛಗೊಳಿಸಿ, ಕೆಮ್ಮಣ್ಣು ರಂಗವಲ್ಲಿಗಳಿಂದ ಅಲಂಕರಿಸಿ, ಅದರಲ್ಲಿ ದೇವರನ್ನು ಸ್ಥಾಪಿಸಿ, ಪೂಜಿಸುವುದು[೩] ಮತ್ತು ಅದಕ್ಕೆ

---

೧. ನಿಸ್ಸೀಮಪೌರುಷಬಲಸ್ಯ ಕುತಃ ಶ್ರಮೋಽಸ್ಯ । -ಮ.ಭಾ.ತಾ.ನಿ. (೭/೬)

೨. ತರುಣಾದಿತ್ಯಸವರ್ಣಕಚರಣಾಬ್ಜಾಮಲಕೀರ್ತೇ । -ದ್ವಾದಶಸ್ತೋತ್ರ

೩. ಪೂಜ್ಯಶ್ಚ ಭಗವಾನ್ನಿತ್ಯಂ ಚಕ್ರಾಬ್ಜಾದಿಕಮಂಡಲೇ । -ತಂತ್ರಸಾರಸಂಗ್ರಹ (೧/೪೮)

ಅಡ್ಡಿಯಾಗುವ ದುಷ್ಟಜನರನ್ನು ಒಳಗೆ ಬರದಂತೆ ತಡೆಯುವುದು ಲೋಕದಲ್ಲಿ ಕಂಡಿದೆ. ಅದರಂತೆ ಶ್ರೀಹರಿಯನ್ನು ಪೂಜಿಸಬೇಕಾದ ಮನೋಮಂದಿರವನ್ನು ಗುರುಕಾರುಣ್ಯಜಲದಿಂದ ತೊಳೆಯಬೇಕು, ಶೇಷಶಾಯಿಯಾದ ಶ್ರೀಹರಿಯನ್ನು ಅಲ್ಲಿ (ಅಚಲವಾಗಿ) ಸ್ಥಾಪಿಸಬೇಕು; ಆತನ ಮೇಲಿನ ಅನುರಾಗವೆಂಬ ರಾಗದಿಂದ ಅದನ್ನು ಅಲಂಕರಿಸಬೇಕು; ಮತ್ತು ಇದಕ್ಕೆಲ್ಲ ಅಡ್ಡಿಯಾಗುವ ಕಲಿಯೆಂಬ ಮಹಾಶತ್ರುವನ್ನು ಜಯಿಸಬೇಕು. ಇದೆಲ್ಲವನ್ನು ಸಾಧಿಸುವ ಪರಮೋಪಾಯವೆಂದರೆ ಗುರುಕಾರುಣ್ಯವೇ[೧] ಆಗಿದೆ ಎಂದು ಭಾವ. ಮನೋಗೃಹದ ನೈರ್ಮಲ್ಯ, ಭಗವದಾವಾಹನ, ಅಲಂಕಾರ, ದೋಷಜಯ ಮೊದಲಾದ ಶ್ರೀಹರಿಪ್ರೀತಿಕರವಾದ ಸಕಲಕ್ಕೂ ಶ್ರೀಗುರುಗಳ ಅನುಗ್ರಹವು ಅತ್ಯವಶ್ಯ ಎಂದು ಭಾವ.

೨. ಶ್ರೀಹರಿಯನ್ನು ಹೃದಯಕಮಲದಲ್ಲಿ ಪ್ರತಿನಿತ್ಯವೂ ಚಿಂತಿಸಿ ಪೂಜಿಸಬೇಕು ಎಂಬ ಪ್ರಮೇಯವನ್ನು 'ಅನ್ವಹಂ' ಎಂಬುದಾಗಿ ಸೂಚಿಸಿರುವರು. ಭಗವದ್ಭಕ್ತಿಯೇ ನಿಜವಾದ ಅಲಂಕಾರ ಮತ್ತು ಭಗವಂತನ ಪಾದಕಮಲವನ್ನು ಅಲಂಕರಿಸುವ ಮುಖ್ಯ ಸಾಧನ, ಶ್ರೀಹರಿಯ ಚಿಂತನೆಯು ಕಲಿನಿಗ್ರಹದ ಪರಮಸಾಧನ ಮೊದಲಾದ ಅನೇಕ ಪ್ರಮೇಯಗಳು ಇದರಲ್ಲಿ ಅಡಗಿವೆ.

೩. ಇಲ್ಲಿ 'ವಾಗೀಶ(ಭಾರತೀಪತಿ)ತೀರ್ಥ' ಎಂಬ ಪದವು ಮುಖ್ಯಾರ್ಥದಲ್ಲಿ 'ಆನಂದತೀರ್ಥ'ರಿಗೆ ಅನ್ವಯಿಸುತ್ತದೆ; ಕಲಿನಿಗ್ರಹ ಇತರರಿಗೆ ಸರ್ವಥಾ ಅಸಾಧ್ಯವಷ್ಟೇ !

## ಗ್ರಂಥದ ವಿಷಯ

**ತೀರ್ಥಕ್ಷೇತ್ರತದೀಶಾನಾಂ ಮಾಹಾತ್ಮ್ಯಾನಿ ಯಥಾಮತಿ ।**
**ವಾದಿರಾಜೋ ಯತಿಃ ಸ್ತೌತಿ ಪದ್ಯೈಃ ಕತಿಪಯೈಃ ಕವಿಃ ॥ ೫ ॥**

**ಅ:** ಕವಿಃ = (ಈ ಗ್ರಂಥವನ್ನು ರಚಿಸುತ್ತಿರುವ) ಕವಿಯಾದ **ವಾದಿರಾಜಃ** = ಶ್ರೀವಾದಿರಾಜರೆಂಬ; **ಯತಿಃ** = ಯತಿಗಳು; **ತೀರ್ಥಕ್ಷೇತ್ರತದೀಶಾನಾಂ** = ಗಂಗಾದಿತೀರ್ಥಗಳ, ಶ್ರೀರಂಗಾದಿಕ್ಷೇತ್ರಗಳ ಮತ್ತು ಅವುಗಳ ಅಧಿಪತಿಗಳಾದ ದೇವತೆಗಳ; **ಮಾಹಾತ್ಮ್ಯಾನಿ** = ಮಹಿಮೆಗಳನ್ನು; **ಕತಿಪಯೈಃ** = ಕೆಲವು; **ಪದ್ಯೈಃ** = ಪದ್ಯಗಳಿಂದ; **ಯಥಾಮತಿ** = ಯಥಾಮತಿಯಾಗಿ; **ಸ್ತೌತಿ** = ಸ್ತುತಿಸುತ್ತಿರುವರು.

ಕವಿಯಾದ ಶ್ರೀವಾದಿರಾಜರೆಂಬ ಯತಿಗಳು ಗಂಗಾದಿತೀರ್ಥಗಳ, ಶ್ರೀರಂಗಾದಿ-ಕ್ಷೇತ್ರಗಳ ಮತ್ತು ಅವುಗಳ ಅಧಿಪತಿಗಳಾದ ದೇವತೆಗಳ ಮಾಹಾತ್ಮ್ಯಗಳನ್ನು ಕೆಲವು ಪದ್ಯಗಳಿಂದ ಯಥಾಮತಿಯಾಗಿ ಸ್ತುತಿಸುತ್ತಿರುವರು.

---

೧. ಗುರುಪ್ರಸಾದೋ ಬಲವಾನ್ ನ ತಸ್ಮಾದ್ಬಲವತ್ತರಃ । –ಬ್ರಹ್ಮಸೂತ್ರಭಾಷ್ಯ (೩/೩/೪೫)
ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ ಪ್ರಪನ್ನಾ
ಮಾನ್ಯಾಃ ಸ್ಮಃ ಕಿಮಪಿ ಚ ವದಂತೋಽಪಿ ಮಹತಾಮ್ ॥ - ನ್ಯಾಯಸುಧಾ
ಗುರುಕೃಪಾ ಹಿ ಸಕಲಪುರುಷಾರ್ಥಕರೀತಿ ಭಾವಃ - ವ್ಯಾಖ್ಯಾನ

ವಿ : ೧. ಶ್ರೀವಾದಿರಾಜರು ಈ ಗ್ರಂಥರಚನೆಯ ಉದ್ದೇಶವನ್ನು ಈ ಶ್ಲೋಕದಲ್ಲಿ ತಿಳಿಸಿರುವರು; ಗಂಗಾದಿತೀರ್ಥಗಳ, ಶ್ರೀರಂಗಾದಿ ಕ್ಷೇತ್ರಗಳ ಮತ್ತು ಅಲ್ಲಿರುವ ದೇವತೆಗಳ ಮಾಹಾತ್ಮ್ಯವಿಶೇಷದ ಸಂಕ್ಷಿಪ್ತವರ್ಣನೆಯೇ ಈ ಕೃತಿಯ ಮುಖ್ಯ ವಿಷಯ ಎಂದು ಭಾವ.

೨. ತೀರ್ಥಕ್ಷೇತ್ರತದೀಶಾನಾಂ : ಇಲ್ಲಿ ತೀರ್ಥಗಳು ಎಂದರೆ ಗಂಗಾದಿಗಳು ಎಂದೂ, ಕ್ಷೇತ್ರಗಳು ಎಂದರೆ ಶ್ರೀರಂಗ ಪುಷ್ಕರಾದಿಗಳು ಎಂದೂ ಅರ್ಥ[೧].

೩. ಮಾಹಾತ್ಮ್ಯಾನಿ : ಎಂದರೆ ಪಾವನಗೊಳಿಸುವಿಕೆ, ಜ್ಞಾನಭಕ್ತ್ಯಾದಿ ಪುರುಷಾರ್ಥಪ್ರದತ್ವ ಮೊದಲಾದ ಸಾಮರ್ಥ್ಯಗಳು ಎಂದು ಅರ್ಥ[೨].

೪. ಕತಿಪಯ್ಯೈಃ ಪದ್ಯೈಃ : ಇಲ್ಲಿಯ ವರ್ಣನೆಯ ಶ್ಲೋಕಗಳು[೩] ಪರಿಮಿತವಾಗಿದ್ದರೂ, ಅವುಗಳ ಮಾಹಾತ್ಮ್ಯವು ಮಾತ್ರ ಅಪರಿಮಿತ ಎಂದು ಭಾವ.[೪] ಅವುಗಳ ಮಾಹಾತ್ಮ್ಯವನ್ನು ಇನ್ನೂ ಹೆಚ್ಚು ವಿವರವಾಗಿ ವರ್ಣಿಸಲು ಇನ್ನೂ ಹೆಚ್ಚಿನ ಶ್ಲೋಕಗಳು ಅವಶ್ಯವಿದ್ದರೂ ಗ್ರಂಥ ವಿಸ್ತಾರಭಯ ಮೊದಲಾದ ಕಾರಣದಿಂದ ಕೆಲವೇ ಶ್ಲೋಕಗಳಲ್ಲಿ ವರ್ಣಿಸುತ್ತಿರುವರು ಎಂದು ಭಾವ.

೫. ಯಥಾಮತಿ - ಎಂಬುದಕ್ಕೆ 'ಮತಿಮನತಿಕ್ರಮ್ಯ' ಎಂದರ್ಥ. ತಮ್ಮ ಬುದ್ಧಿಗೆ ತಿಳಿಯುವಷ್ಟು ಎಂದೂ, ಶಿಷ್ಯರ ಬುದ್ಧಿಗೆ ತಿಳಿಯುವಷ್ಟು ಎಂದೂ ಅರ್ಥ; ಮೊದಲನೇ ಅರ್ಥದಲ್ಲಿ ಇದು ಶ್ರೀವಾದಿರಾಜರಂತಹ ಮಹಾನುಭಾವರಿಗೆ 'ವಿನಯೋಕ್ತಿ' ಮಾತ್ರ. ಎರಡನೇ ಅರ್ಥವೇ ವಸ್ತುಸ್ಥಿತಿಕಥನ.

೬. 'ಸ್ತೌತಿ' - ಎಂಬ ಇಲ್ಲಿಯ ಪ್ರಥಮ ಪುರುಷ ಪ್ರಯೋಗವು[೫] ಸ್ವಾಹಂಕಾರ ಖಂಡನೆಯನ್ನು ಉದ್ದೇಶಿಸಿದೆ.

## ಜನ್ಮಭೂಮಿ (ಪರಶುರಾಮಕ್ಷೇತ್ರ)

**ಕರ್ಣೇ ಪದನ್ಯಸ್ತರುಚೀ ರಿರಂಸು-**
**ರ್ವಾರಾಶಿವಸ್ತ್ರಂ ಜಘನ್ನಾದ್ಧಿ ಯಸ್ಯಾಃ ।**
**ಅಮೂಮುಚದ್ಬಾಣಕರೇಣ ಭೂಮೇಃ**
**ಶ್ರೀಭಾರ್ಗವಃ ಸಾ ಜಯತಿ ಕ್ಷಿತಿರ್ನಃ ॥೬॥**

ಅ: ಭೂಮೇಃ = ಭೂಮಿಯ; ಕರ್ಣೇ = ಕರ್ಣಸ್ಥಾನೀಯವಾದ ಗೋಕರ್ಣದಲ್ಲಿ; ಪದನ್ಯಸ್ತರುಚಿಃ = ಪಾದವಿರಿಸುವ ಶೋಭೆಯಿಂದ ಕೂಡಿದ; ಶ್ರೀಭಾರ್ಗವಃ =

---

೧. ಪುಷ್ಕರಾದ್ಯಾನಿ ಕ್ಷೇತ್ರಾಣಿ ಗಂಗಾದ್ಯಾಃ ಸರಿತಸ್ತಥಾ । – ಸ್ಮೃತಿ
೨. ಮಾಹಾತ್ಮ್ಯಾನಿಪವಿತ್ರೀಕರಣಜ್ಞಾನಭಕ್ತ್ಯಾದಿ ಪುರುಷಾರ್ಥಪ್ರದತ್ವಾದಿರೂಪಸಾಮರ್ಥ್ಯಾನಿ । – ವ್ಯಾಖ್ಯಾನ
೩. ಕತಿಪಯ್ಯೈಃ ಪರಿಮಿತೈಃ । – ವ್ಯಾಖ್ಯಾನ
೪. ಸುವರ್ಣಾಂ ಕೋ ನು ವರ್ಣಯೇತ್ । (೧/೪೬) ಇತ್ಯಾದಿ ಮಾತುಗಳನ್ನು ಗಮನಿಸಿದರೆ ಈ ಅರ್ಥವು ಸ್ಫುಟವಾಗುತ್ತದೆ.
೫. ಗರ್ವಪರಿಹಾರಾಯ ಪ್ರಥಮಪುರುಷಪ್ರಯೋಗಃ । – ವ್ಯಾಖ್ಯಾನ

ಶ್ರೀಪರಶುರಾಮದೇವರು; ರಿರಂಸುಃ = ರಮಿಸಬಯಸಿದವರಾಗಿ; ಯಸ್ಯಾಃ = ಯಾವ ಭೂಮಿಯ; ಜಘನಾತ್ = ಜಘನಪ್ರದೇಶದಿಂದ; ವಾರಾಶಿವಸ್ತ್ರಂ = ಸಮುದ್ರರೂಪದ ವಸ್ತ್ರವನ್ನು; ಬಾಣಕರೇಣ = ಬಾಣವೆಂಬ ಹಸ್ತದಿಂದ; ಅಮೂಮುಚತ್ ಹಿ = ಸರಿಸಿದನೋ; ಸಾ = ಆ; ನಃ = ನಮ್ಮ; ಕ್ಷಿತಿಃ = (ಜನ್ಮ)ಭೂಮಿಯು(ಪರಶುರಾಮಕ್ಷೇತ್ರವು); ಜಯತಿ= ಉತ್ಕೃಷ್ಟವಾಗಿದೆ.

ಭೂದೇವಿಯ ಕರ್ಣಸ್ಥಾನೀಯವಾದ ಗೋಕರ್ಣ ಕ್ಷೇತ್ರದಲ್ಲಿ ತಮ್ಮ ಹೆಜ್ಜೆಯಿರಿಸಿ ಶೋಭೆ ನೀಡಿದ ಶ್ರೀಪರಶುರಾಮದೇವರು, ಕ್ರೀಡಿಸಬಯಸಿದವರಾಗಿ ಭೂಮಿಯ ಜಘನಸ್ಥಾನೀಯವಾದ ಸಹ್ಯಾದ್ರಿಸಮೀಪದ ಪ್ರದೇಶದಿಂದ, ಸಮುದ್ರವೆಂಬ ವಸ್ತ್ರವನ್ನು, ತಮ್ಮ ಬಾಣವೆಂಬ ಹಸ್ತದಿಂದ ಸರಿಸಿದಂತಹ ನಮ್ಮ ಜನ್ಮಭೂಮಿ ಪರಶುರಾಮಕ್ಷೇತ್ರವು ಉತ್ಕೃಷ್ಟವಾದುದು.

ವಿ: ೧. ಶ್ರೀಪರಶುರಾಮದೇವರು ಹಿಂದೆ ಇಪ್ಪತ್ತೊಂದು ಸಲ ಭೂಮಿಯನ್ನು ಸುತ್ತಿ ದುಷ್ಟ-ಕ್ಷತ್ರಿಯರನ್ನು ಸದೆಬಡೆದು ಭೂಮಿಯನ್ನು ವಶಪಡಿಸಿಕೊಂಡು ಅದನ್ನೆಲ್ಲ ಬ್ರಾಹ್ಮಣರಿಗೆ ದಾನವಾಗಿತ್ತರು; ಅನಂತರ ದಾನ ಮಾಡಿದ ಸ್ಥಳದಲ್ಲಿ ತಾವು ವಾಸ ಮಾಡುವುದು ಧರ್ಮವಲ್ಲವೆಂಬುದನ್ನು ಲೋಕಕ್ಕೆ ತಿಳಿಸಲೆಂದು ಗೋಕರ್ಣ ಪ್ರದೇಶದಲ್ಲಿ ನಿಂತು ಸಮುದ್ರದತ್ತ ಬಾಣ ಪ್ರಯೋಗ ಮಾಡಿ, ಬಾಣವು ಬೀಳುವವರೆಗೆ ಸಮುದ್ರವು ಸಹ್ಯಾದ್ರಿಯಿಂದ ದೂರಕ್ಕೆ ಸರಿಯುವಂತೆ ಮಾಡಿದರು ಎಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ; ಇದನ್ನು ಶ್ರೀವಾದಿರಾಜರು 'ಹಿ' ಶಬ್ದದಿಂದ ಸೂಚಿಸಿ, ಆ ಘಟನೆಯನ್ನು ಕಾವ್ಯಮಯವಾಗಿ ಹೀಗೆ ವರ್ಣಿಸಿರುವರು[೧].

೨. ಒಬ್ಬ ಕಾಮುಕನು ರಮಣೇಚ್ಛೆಯಿಂದ ತನ್ನ ಪ್ರಿಯೆಯ ಕಿವಿಗಳಲ್ಲಿ ಸವಿಮಾತು-ಗಳನ್ನಾಡುತ್ತ ಅವಳ ನಿತಂಬಪ್ರದೇಶದಿಂದ ಅವಳ ವಸ್ತ್ರವನ್ನು ಸರಿಸುವ ಕಾರ್ಯವನ್ನು ಧ್ವನಿಸುವುದರಿಂದಾಗಿ ಇಲ್ಲಿ 'ಸಮಾಸೋಕ್ತಿ' ಎಂಬ ಅಲಂಕಾರವು ಉಂಟಾಗಿದೆ[೨].

೩. ಶ್ರೀಪರಶುರಾಮದೇವರಿಗೆ ತುಂಬಾ ಪ್ರೀತಿಪಾತ್ರವಾದ ಸ್ಥಾನ ಎಂಬುದು ಶ್ರೀಪರಶು-ರಾಮಕ್ಷೇತ್ರದ ಪ್ರಶಸ್ತಿ ಎಂದು ಭಾವ. ಅದಕ್ಕೆಂದೇ ಶ್ರೀಹರಿಯ ಪುತ್ರರಾದ ಶ್ರೀಮುಖ್ಯಪ್ರಾಣದೇವರು ಈ ಪರಶುರಾಮಕ್ಷೇತ್ರದಲ್ಲಿ ಶ್ರೀಮಧ್ವರೂಪದಿಂದ ಅವತರಿಸಿದರು ಎಂಬ ವಿಶೇಷಾಂಶವನ್ನೂ ಇದರಿಂದ ಊಹಿಸಬಹುದು.

---

೧. ಶ್ರೀಪರಶುರಾಮಃ ಸಮಸ್ತಾಂ ಭೂಮಿಂ ಬ್ರಾಹ್ಮಣೇಭ್ಯೋ ದತ್ವಾ ಸ್ವನಿವಾಸಾರ್ಥಂ ಗೋಕರ್ಣೇ ಸ್ಥಿತ್ವಾ ಬಾಣಪ್ರಯೋಗಂ ಕೃತ್ವಾ ಸ್ವಬಾಣೋ ಯಾವತಿ ಪ್ರದೇಶೇ ಪತತಿ ತಾವತ್ಪರ್ಯಂತಂ ಸಹ್ಯಾದ್ರಿಪ್ರದೇಶಾತ್ ಸಮುದ್ರಂ ನಿಷ್ಕಾಸಿತವಾನಿತಿ ಪೌರಾಣಿಕೀಂ ಪ್ರಸಿದ್ಧಂ ಹಿ ಶಬ್ದೇನಾಹ ।

– ವ್ಯಾಖ್ಯಾನ

೨. ಗೋಕರ್ಣವು ಭೂದೇವಿಗೆ ಕರ್ಣಸ್ಥಾನೀಯವೂ, ಸಹ್ಯಾದ್ರಿಯು ಜಘನಸ್ಥಾನೀಯವೂ ಆಗಿವೆ ಎಂಬ ವಿಶೇಷಾಂಶವೂ ಇಲ್ಲಿ ಸೂಚಿತ.

೩. ಗೋಕರ್ಣಕ್ಷೇತ್ರದ ವರ್ಣನೆಯು ಶ್ಲೋ. ೮೦-೮೨ ರಲ್ಲೂ, ಸಹ್ಯಾದ್ರಿಯ ವರ್ಣನೆಯು ಶ್ಲೋ.೫೪ ರಲ್ಲೂ ಬಂದಿವೆ.

## ರಜತಪೀಠಪುರ (ಉಡುಪಿ)

**ಕಾಶೀತಲೇ ಕೃತಪದಾಽಪಿ ಸರಿತ್ ಸುರಾಣಾ -**
**ಮಾಯಾತಿ ಯದ್ಗತಪವಿತ್ರಸರೋಽಧುನಾಽಪಿ ।**
**ರುದ್ರಾದಿದೇವಗಣಸೇವಿತಸರ್ವಭಾಗಂ**
**ತದ್ರೂಪ್ಯಪೀಠಪುರಮಪ್ರತಿಮಂ ತ್ರಿಲೋಕ್ಯಾಮ್ ॥ ೭ ॥**

ಅ: ಸುರಾಣಾಂ ಸರಿತ್ = ದೇವನದಿಯಾದ ಗಂಗೆಯು; ಕಾಶೀತಲೇ = ಕಾಶೀಕ್ಷೇತ್ರದಲ್ಲಿ; ಕೃತಪದಾಽಪಿ = ನೆಲೆಸಿದವಳಾದರೂ ಸಹ; ಯದ್ಗತಪವಿತ್ರಸರಃ = ಯಾವ ರಜತಪೀಠಪುರ(ಉಡುಪಿ)ದಲ್ಲಿರುವ ಪವಿತ್ರವಾದ (ಮಧ್ವ)ಸರೋವರಕ್ಕೆ; ಅಧುನಾಽಪಿ = ಈಗಲೂ ಕೂಡಾ; ಆಯಾತಿ =(ಶ್ರೀಮದಾಚಾರ್ಯರ ಸ್ನಾನಕ್ಕೆಂದು ಅನಂತೇಶ್ವರದೇವರ ಆಜ್ಞಾನುಸಾರ) ಬರುತ್ತಿರುವಳೋ; ರುದ್ರಾದಿದೇವಗಣಸೇವಿತಸರ್ವಭಾಗಂ = ರುದ್ರಾದಿ ದೇವಗಣದಿಂದ ಸೇವಿತವಾದ ಸರ್ವಪ್ರದೇಶವನ್ನು ಹೊಂದಿರುವ; ತದ್ರೂಪ್ಯಪೀಠಪುರಂ = ಅಂತಹ ರಜತಪೀಠಪುರವೆಂಬ ಸರ್ವಜನ ಪ್ರಸಿದ್ಧವಾದ ಕ್ಷೇತ್ರವು; ತ್ರಿಲೋಕ್ಯಾಂ = ಮೂರುಲೋಕಗಳಲ್ಲೂ; ಅಪ್ರತಿಮಂ = ಅನುಪಮವಾಗಿದೆ. (ಕಾವ್ಯಲಿಂಗಾಲಿಂಕಾರ)

**ದೇವನದಿಯಾದ ಗಂಗೆಯು ಕಾಶೀಕ್ಷೇತ್ರದಲ್ಲಿ ನೆಲೆಸಿದ್ದರೂ ಯಾವ ರಜತಪೀಠಪುರದಲ್ಲಿನ ಪವಿತ್ರವಾದ (ಮಧ್ವ)ಸರೋವರಕ್ಕೆ ಈಗಲೂ ಬರುತ್ತಿರುವಳೋ, ಅಂತಹ ರುದ್ರಾದಿ ದೇವವೃಂದವು ಸೇವಿಸುವ ಸರ್ವಪ್ರದೇಶ ಹೊಂದಿರುವ ರಜತಪೀಠಪುರವು ಮೂರುಲೋಕಗಳಲ್ಲೂ ಅನುಪಮವಾಗಿದೆ.**

ವಿ: ೧. ಸಾಮಾನ್ಯವಾಗಿ ಉತ್ತಮ ಸ್ಥಳದಲ್ಲಿ ನೆಲೆಸಿದವರು ಬೇರೆ ಕಡೆ ಹೋಗುವುದಿಲ್ಲ; ಆದರೆ ಕಾಶೀಕ್ಷೇತ್ರದಲ್ಲಿ ಸದಾ ಪ್ರವಹಿಸುವ ದೇವಗಂಗೆಯು ಅಲ್ಲಿಂದ ಬಹು ದೂರವಿರುವ ಉಡುಪಿಕ್ಷೇತ್ರದಲ್ಲಿ[೧] ಇಂದಿಗೂ ಕ್ಲೃಪ್ತಕಾಲದಲ್ಲಿ ತಪ್ಪದೇ ಆಗಮಿಸುತ್ತಿರುವಳು ಎಂಬುದು ಪ್ರಮಾಣಪ್ರಮಿತವಾದ ವಿಚಾರ; ಇದಕ್ಕೆ ಉಡುಪಿ ಕ್ಷೇತ್ರವು ಶ್ರೀಮಧ್ವಾಚಾರ್ಯರ ಸನ್ನಿಧಾನ ವಿಶೇಷವನ್ನು ಹೊಂದಿರುವುದೇ ಕಾರಣ;

೨. ಬರೀ ಗಂಗೆಯಿಂದಲೇ ಏಕೆ ರುದ್ರಾದಿ ಸಮಸ್ತದೇವತಾಸಮೂಹದಿಂದಲೂ ಈ ಕ್ಷೇತ್ರದ ಪ್ರತಿಯೊಂದು ಸ್ಥಳವೂ ಸೇವಿತವಾಗಿದೆ. ಹೀಗೆ ಸರ್ವಸೇವ್ಯವಾಗಿರುವ ಈ ಕ್ಷೇತ್ರದ ಹಿರಿಮೆಯು ಅಸದೃಶ; ಇದಕ್ಕೆಲ್ಲ ಕಾರಣರಾದ ಶ್ರೀಮನ್ಮಧ್ವಾಚಾರ್ಯರ ಮಾಹಾತ್ಮ್ಯವು ಅದ್ವಿತೀಯ ಎಂಬುದು ಇಲ್ಲಿಯ ಮುಖ್ಯ ಅಭಿಪ್ರಾಯ.

೩. ಶ್ರೀಮಧ್ವಾಚಾರ್ಯರು 'ಪೂರ್ಣಪ್ರಜ್ಞ'ರೆಂಬ ಹೆಸರಿನಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿದ ಹೊಸತರಲ್ಲಿ ಒಮ್ಮೆ ಗಂಗಾಸ್ನಾನಕ್ಕೆಂದು ಹೋಗಲು ಬಯಸಿದಾಗ ಅವರ ವಿರಹವನ್ನು

---

೧. ಅಪಭ್ರಷ್ಟಭಾಷಯಾ 'ಉಡುಪೀ' ನಾಮ್ನಾ ಸರ್ವಜನ ಪ್ರಸಿದ್ಧಂ ಕ್ಷೇತ್ರಮ್ । – ವ್ಯಾಖ್ಯಾನ
ರಜತಪೀಠಪುರಸ್ಯ 'ಒಡಿಪು' ಇತಿ ಅಪಭ್ರಷ್ಟಸಂಜ್ಞಾ । –ಸುಮಧ್ವವಿಜಯಭಾವಪ್ರಕಾಶಿಕಾ (೨/೬)

ತಾಳಲಾರದೆ ಗುರು ಅಚ್ಯುತಪ್ರೇಕ್ಷರು ಶ್ರೀಅನಂತೇಶ್ವರನನ್ನು ಅನನ್ಯವಾಗಿ ಪ್ರಾರ್ಥಿಸಿದರೆಂದೂ, ಅನಂತೇಶ್ವರನು ಅವರ ಕೋರಿಕೆಯನ್ನು ಮನ್ನಿಸಿ, ಗಂಗೆಯೇ ಶ್ರೀಮಧ್ವಾಚಾರ್ಯರ ಸ್ನಾನಕ್ಕಾಗಿ ಉಡುಪಿಗೆ ಬರುವಳೆಂದು ಒಬ್ಬನಲ್ಲಿ ಆವೇಶಿಸಿ ಆದೇಶಿಸಿದನೆಂದೂ, ಅದೇ ರೀತಿ ಗಂಗೆಯು ಅಂದಿನಿಂದ ಮೂರನೇ ದಿವಸ ನಿರ್ದಿಷ್ಟವೇಳೆಯಲ್ಲಿ ಅಲ್ಲಿ ಮೊದಲೇ ಇದ್ದ ಅನಂತಸರೋವರಕ್ಕೆ ಆಗಮಿಸಲು, ಶ್ರೀಪೂರ್ಣಪ್ರಜ್ಞರನ್ನು ಮುಂದಿಟ್ಟುಕೊಂಡು ಅಚ್ಯುತಪ್ರೇಕ್ಷರೇ ಮೊದಲಾದ ಸಕಲ ಸಜ್ಜನರೂ ಗಂಗಾಸ್ನಾನವನ್ನು ಮಾಡಿ ಕೃತಾರ್ಥರಾದರೆಂದೂ [೧]ಸುಮಧ್ವವಿಜಯದಲ್ಲಿ ವರ್ಣಿತವಾಗಿದೆ. ಅನಂತರ ಆ ಸರೋವರಕ್ಕೆ 'ಮಧ್ವಸರೋವರ'[೨] ಎಂದೇ ಹೆಸರಾಯಿತು. ಅನಂತರವೂ ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಭಾಗೀರಥಿಯು ತಪ್ಪದೆ ಮಧ್ವಸರೋವರಕ್ಕೆ ಆಗಮಿಸುವಳು ಎಂಬ ಮಾತು ಸುಮಧ್ವವಿಜಯದಲ್ಲಿದೆ. ಇಲ್ಲಿಯ 'ಅಧುನಾಽಪಿ' ಎಂಬ ಶ್ರೀವಾದಿರಾಜರ ಮಾತು ಅದಕ್ಕೊಂದು ಪ್ರತ್ಯಕ್ಷ ಪುರಾವೆಯಾಗಿಯೂ ಮಾನ್ಯವಾಗಿದೆ.

## ಉಡುಪಿಯ ಅಷ್ಟಮಠಾಧೀಶರ ವರ್ಣನೆ

**ಯಸ್ಮಿನ್ ವಾಗ್ವಜ್ರಧಾರಾ ದುರಿತಕುಲಮಹಾತೂಲದಾಹೇಽತಿಶೂರಾಃ**
**ದಂಡಪ್ರೋದ್ಭಾಸಿಹಸ್ತಾಃ ಸ್ಫುರದಸಿಸಮಸನ್ಮಾರ್ಗಸಕ್ತಾಃ ಸಮಸ್ತಾಃ ।**
**ಶ್ರೀಕೃಷ್ಣಸ್ನೇಹಪಾಶಾಃ ಶ್ರಮಹರಗತಯಃ ಶಾಂತಿಭಾಜೋ ವಿರಕ್ತಾಃ**
**ಯೋಗೀಂದ್ರಾಶ್ಚಿತ್ರಲೋಕಾಧಿಪನಿಭವಿಭವಾ ಮಧ್ವದಾಸಾ ಜಯಂತಿ ॥ ೮ ॥**

ಅ: ಯಸ್ಮಿನ್ = (ಆ) ಉಡುಪಿಕ್ಷೇತ್ರದಲ್ಲಿ; ಮಧ್ವದಾಸಾಃ ಯೋಗೀಂದ್ರಾಃ = ಶ್ರೀಮಧ್ವಾಚಾರ್ಯರ ಶಿಷ್ಯ ಪರಂಪರೆಯ ಅಷ್ಟಮಠಾಧೀಶರುಗಳು; ಸಮಸ್ತಾಃ = ಸಮಸ್ತರೂ; ವಾಗ್ವಜ್ರಧಾರಾಃ = [೩]ವಿಶ್ವಸತ್ಯತ್ವ, ಶ್ರೀಹರಿಯ ಸರ್ವಕರ್ತೃತ್ವ, ಜೀವರ ಪಾರಮಾರ್ಥಿಕಭೇದ, ವೇದಪುರಾಣಾದಿಗಳ ಪ್ರಾಮಾಣ್ಯ ಮೊದಲಾದವುಗಳನ್ನು ಸಾಧಿಸುವ ವಾಕ್ಯಗಳೆಂಬ ವಜ್ರವನ್ನು ಧರಿಸಿದವರೂ; ದುರಿತಕುಲಮಹಾತೂಲದಾಹೇ =

---

೧. ತದಾಜ್ಞಯೋಪಾಗತಜಾಹ್ನವೀಜಲೇ ಜನೋಽತ್ರ ಸಸ್ನೌ ಸಹ ಪೂರ್ಣಬುದ್ಧಿನಾ ।
ತತಃ ಪರಂ ದ್ವಾದಶವತ್ಸರಾಂತರೇ ಸದಾಽಽವ್ರಜೇತ್ ಸಾ ತದನುಗ್ರಹಾಂಕಿನೀ ॥ –(೪/೪೨)

೨. ಮಧ್ವಸರೋವರಾರ್ಘ್ಯಮಂತ್ರಃ :–
ನಾಗಾಸನಾಜ್ಞಯಾ ಪ್ರಾಪ್ತಗಂಗಾಜಲಸಮಾಶ್ರಿತ ।
ಶ್ರೀಮನ್ಮಧ್ವತಟಾಕೇದಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

೩. ವಿಶ್ವಂ ಸತ್ಯಂ ಹರಿಃ ಕರ್ತಾ ಜೀವೋಽನ್ಯಃ ಪರಮಾರ್ಥತಃ ।
ವೇದಃ ಸತ್ಯಂ ಪುರಾಣಂ ಚೇತ್ಯೇವಂ ವ್ಯಾಸಮತಸ್ಥಿತಿಃ ॥★
- ಇತ್ಯಾದಿರೂಪವಾಗೇವ ವಾಕ್ಯಮೇವ ವಜ್ರಧಾರಾ ಯೇಷಾಂ ತೇ ಶಾಸ್ತ್ರಾಭ್ಯಾಸಪಾಟವೇನ ಅತಿನಿಶಿತವಾಕ್ಯಧಾರಯಾ ವಿರುದ್ಧರಾದ್ಧಾಂತಪರ್ವತಪಕ್ಷವಿಚ್ಛೇದನಸಮರ್ಥಾ ಇತ್ಯರ್ಥಃ ।
– ವ್ಯಾಖ್ಯಾನ

★ ಇದು ಶ್ರೀವಿಷ್ಣುದಾಸಾಚಾರ್ಯರ 'ವಾದರತ್ನಾವಲೀ' ಗ್ರಂಥದ ಪ್ರತಿಜ್ಞಾ ಶ್ಲೋಕ.

ಪಾಪಸಮೂಹವೆಂಬ ಹತ್ತಿಯ ರಾಶಿಯನ್ನು ಭಸ್ಮಗೊಳಿಸುವ ವಿಷಯದಲ್ಲಿ; ಅತಿಶೂರಾಃ = ಅತ್ಯಂತ ಶೂರರೂ; ದಂಡಪ್ರೋದ್ಭಾಸಿಹಸ್ತಾಃ = ದಂಡದಿಂದ ಭೂಷಿತವಾದ ಕೈಗಳನ್ನು ಹೊಂದಿರುವವರೂ; ಸ್ಫುರದಸಿಸಮಸನ್ಮಾರ್ಗಸಕ್ತಾಃ = ಹರಿತವಾದ ಖಡ್ಗದಂತಿರುವ ಅತಿ ತೀಕ್ಷ್ಣವಾದ ತಪಶ್ಚರ್ಯೆ ಮೊದಲಾದವುಗಳಿಂದ ಕೂಡಿದ ಸನ್ಮಾರ್ಗದಲ್ಲಿ ನಿರತರಾದವರೂ; ಶ್ರೀಕೃಷ್ಣಸ್ನೇಹಪಾಶಾಃ = ಶ್ರೀಕೃಷ್ಣಭಕ್ತಿಯೆಂಬ ಪಾಶವನ್ನು ಧರಿಸಿದವರೂ; ಶ್ರಮಹರಗತಯಃ = ಸಂಸಾರಖೇದವನ್ನು ಪರಿಹರಿಸುವಂತಹ ಗಮನದಿಂದ ಕೂಡಿದವರೂ; ಶಾಂತಿಭಾಜಃ = ಶಾಂತಿಯುಕ್ತರೂ; ವಿರಕ್ತಾಃ = ವೈರಾಗ್ಯವನ್ನು ಹೊಂದಿದವರೂ,(ಆಗಿ); ಚಿತ್ರಲೋಕಾಧಿಪನಿಭವಿಭವಾಃ = ಅದ್ಭುತವಾದ (ಇಂದ್ರಾದಿ) ಅಷ್ಟದಿಕ್ಪಾಲಕರುಗಳಿಗೆ ಸಮಾನವಾದ ಸಂಪತ್ತನ್ನು ಹೊಂದಿದವರೂ ಆಗಿ; ಜಯಂತಿ = ಉತ್ಕೃಷ್ಟರಾಗಿರುವರು;

ಶ್ರೀಮಧ್ವಾಚಾರ್ಯರ ಶಿಷ್ಯಪರಂಪರೆಯ ಉಡುಪಿಕ್ಷೇತ್ರದ ಅಷ್ಟಮಠಾಧೀಶರೆಲ್ಲರೂ ವಾಗ್ರೂಪದ ವಜ್ರವನ್ನು ಧರಿಸಿದವರು (ಇಂದ್ರನಂತೆ); ಪಾಪಸಮೂಹರೂಪದ ಹತ್ತಿಯ ರಾಶಿಯನ್ನು ಭಸ್ಮಗೊಳಿಸುವ ವಿಷಯದಲ್ಲಿ ಅತ್ಯಂತಶೂರರು(ಅಗ್ನಿಯಂತೆ); ದಂಡದಿಂದ ಶೋಭಿಸುವ ಕೈಗಳುಳ್ಳವರು(ಯಮನಂತೆ); ಹರಿತವಾದ ಖಡ್ಗದಂತಿರುವ ಅತಿ ತೀಕ್ಷ್ಣವಾದ ಸನ್ಮಾರ್ಗದಲ್ಲಿ ನಿರತರಾದವರು(ನಿರ್ಋತಿಯಂತೆ); ಶ್ರೀಕೃಷ್ಣಭಕ್ತಿಯೆಂಬ ಪಾಶವನ್ನು ಹಿಡಿದವರು(ವರುಣನಂತೆ); ಸಂಸಾರಖೇದವನ್ನು ಪರಿಹರಿಸುವ ನಡೆಯವರು(ವಾಯುವಿನಂತೆ); ಶಾಂತಸ್ವಭಾವದವರು (ಚಂದ್ರನಂತೆ); ವೈರಾಗ್ಯಭೂಷಿತರು(ಶಿವನಂತೆ); ಹೀಗೆ ಇವರೆಲ್ಲರೂ ಅದ್ಭುತವಾದ ಇಂದ್ರಾದಿ ಅಷ್ಟದಿಕ್ಪಾಲಕರಂತಹ ವೈಭವದಿಂದ ಮೆರೆಯುತ್ತಿರುವರು.

ವಿ: ೧. ಉಡುಪಿಯ ಅಷ್ಟಮಠಾಧೀಶರುಗಳಲ್ಲಿ ಪ್ರತಿಯೊಬ್ಬರೂ ಅಷ್ಟದಿಕ್ಪಾಲರುಗಳ ವೈಭವವನ್ನು ಹೊಂದಿದವರಾಗಿ ಅದ್ಭುತವೆನ್ನಿಸಿದವರು ಎಂದು ಭಾವ.

೨. ಇಂದ್ರನು ವಜ್ರಧರ, ಈ ಯತಿಗಳು ಶಾಸ್ತ್ರಾಭ್ಯಾಸಪಾಟವದಿಂದಾಗಿ ತುಂಬಾ ತೀಕ್ಷ್ಣವಾದ ವಾಕ್ಯಗಳನ್ನೇ ವಜ್ರವನ್ನಾಗಿ ಹೊಂದಿದವರು; ಅಗ್ನಿಯು ದಾಹಕ; ಇವರು ಪಾಪರಾಶಿಗಳನ್ನು[೧] ದರ್ಶನಮಾತ್ರದಿಂದಲೇ ನಾಶಮಾಡುವವರು; ಯಮನು ದಂಡಹಸ್ತ ಇವರು ಯತ್ಯಾಶ್ರಮಿಗಳಾದ್ದರಿಂದ ದಂಡಪಾಣಿಗಳಾದವರು; ನಿರ್ಋತಿಯು ಖಡ್ಗಧರ, ಇವರು ಖಡ್ಗದ ಅಲಗಿನಂತೆ ಹರಿತವಾದ ನಿರಹಾರಾದಿ ವ್ರತಗಳಲ್ಲಿ[೨] ನಿರತರಾದವರು; ವರುಣನು ಪಾಶಧರ;

---

೧. ಅಗ್ನಿಚಿತ್ ಕಪಿಲಃ ಸತ್ರೀ ರಾಜಾ ಭಿಕ್ಷುರ್ಮಹೋದಧಿಃ।
ದೃಷ್ಟಮಾತ್ರಾಃ ಪುನಂತ್ಯೇತೇ ತಸ್ಮಾತ್ ಪಶ್ಯೇತ ನಿತ್ಯಶಃ॥ – ಸ್ಮೃತಿ
ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ।
ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ॥ – ಭಾಗವತ (೧೦/೮೪/೧೧)

೨. ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ ಕವಯೋ ವದಂತಿ। – ಕಠೋಪನಿಷತ್
ಅಸಿವದತಿತೀಕ್ಷ್ಣಾನಶನಾದಿವ್ರತಚರ್ಯಾನಿಷ್ಠಾ ಇತ್ಯರ್ಥಃ। – ವ್ಯಾಖ್ಯಾನ

ಇವರು ಶ್ರೀಕೃಷ್ಣನಲ್ಲಿ ಭಕ್ತಿಪಾಶವನ್ನು ಹೊಂದಿದವರು; ವಾಯುವು ಶ್ರಮಹರಗತಿಯುಳ್ಳವನು[೧]; ಇವರು ಪರಾನುಗ್ರಹಕ್ಕೋಸ್ಕರ ಸಂಚಾರಶೀಲರು; ಚಂದ್ರನು ಶೀತಕರ; ಇವರು ಭಗವನ್ನಿಷ್ಠರಾದವರು; ಶಿವನು ವಿರಕ್ತಶಿಖಾಮಣಿ; ಇವರು ಪರಮವಿರಕ್ತರು. ಹೀಗೆ ಇವರಲ್ಲಿ ವಜ್ರಧರತ್ವಾದಿ ಇಂದ್ರಾದಿದಿಕ್ಪಾಲಕರ ಸಕಲವೈಭವಗಳೂ ತುಂಬಿವೆ. ಆದ್ದರಿಂದಲೇ ಇವರು ಉತ್ಕೃಷ್ಟರು ಎಂದು ಭಾವ.

೩. ಅಷ್ಟಮಠಾಧೀಶರುಗಳಿಗೆ ಅಷ್ಟದಿಕ್ಪಾಲಕರೊಂದಿಗೆ ಮುಖ್ಯಸಾಮ್ಯವು ಇಲ್ಲವಾದರೂ, ಅಪೂರ್ವಧರ್ಮಗಳಿಂದ ಸಾಮ್ಯವನ್ನು ಹೇಳಿರುವರು (ಅಭೂತೋಪಮಾಲಂಕಾರ). ಅಷ್ಟಮಠಾಧೀಶರುಗಳು ಎಲ್ಲರೂ ವಾದಕುಶಲರು, ಪಾಪಪರಿಹಾರಕರು, ದಂಡಪಾಣಿಗಳು, ನಿರಾಹಾರಾದಿ ವ್ರತಶೀಲರು, ಶ್ರೀಕೃಷ್ಣಭಕ್ತರು, ಸಂಚಾರಶೀಲರು, ಭಗವನ್ನಿಷ್ಠರು ಮತ್ತು ವಿರಕ್ತರು ಎಂಬುದು ಇಲ್ಲಿಯ ಒಟ್ಟು ಅಭಿಪ್ರಾಯ.

೪. ಪರರ ಗುಣಗಳನ್ನೂ ಹೀಗೆ ತುಂಬು ಹೃದಯದಿಂದ ವರ್ಣಿಸುವ ಶ್ರೀವಾದಿರಾಜರ ಸಹೃದಯತೆ ಅಪೂರ್ವವಾದ ಜ್ಞಾನಿಲಕ್ಷಣವಾಗಿದೆ.

೫. ಧರ್ಮಪಾಲಕರಾದ ಪೀಠಾಧಿಪತಿಗಳಿಗೆ ಹೀಗೆ ಸಕಲದಿಕ್ಪಾಲಕರ ಮುಖ್ಯಗುಣಗಳೂ ಒಂದಲ್ಲ ಒಂದು ರೀತಿಯಲ್ಲಿ ಇರಲೇಬೇಕು ಎಂಬ ಧ್ವನಿಯೂ ಇಲ್ಲಿದೆ.

## ಉಡುಪಿಯ ಹಿರಿಮೆ(೧)

ದ್ವಾರಾವತೀಂ ಸಕಲಭಾಗ್ಯವತೀಮುಪೇಕ್ಷ್ಯ
ಗೋಪಾಲಬಾಲಲಲನಾಕರಪೂಜನಂ ಚ ।
ವಾರ್ಧಿಂ ವಧೂಗೃಹಮತೀತ್ಯ ಸ ಮಧ್ವನಾಥೋ
ಯತ್ರಾಸ್ತಿ ತದ್ರಜತಪೀಠಪುರಂ ಗರೀಯಃ ॥ ೯ ॥

ಅ: **ಸ ಮಧ್ವನಾಥಃ** = ಶ್ರೀಮಧ್ವಾಚಾರ್ಯರ ಸ್ವಾಮಿಯಾದ ಆ ಶ್ರೀಕೃಷ್ಣನು **ಸಕಲಭಾಗ್ಯವತೀಂ** = ಸಕಲವಿಧವಾದ ಐಶ್ವರ್ಯಗಳಿಂದ ಕೂಡಿದ; **ದ್ವಾರಾವತೀಂ** = ದ್ವಾರಾವತಿ(ದ್ವಾರಕೆ)ಯನ್ನು; **ಉಪೇಕ್ಷ್ಯ** = ತ್ಯಜಿಸಿ; **ಗೋಪಾಲಬಾಲಲಲನಾಕರಪೂಜನಂ ಚ (ಉಪೇಕ್ಷ್ಯ)** = ಗೋಪಕುಮಾರಿಯರ ಕರಪೂಜನವನ್ನೂ ಉಪೇಕ್ಷಿಸಿ; **ವಧೂಗೃಹಂ** = ತನ್ನ ಪತ್ನಿಯಾದ ಮಹಾಲಕ್ಷ್ಮಿಯ ತವರುಮನೆಯಾದ; **ವಾರ್ಧಿಂ** = ಸಮುದ್ರವನ್ನೂ; **ಅತೀತ್ಯ** = ದಾಟಿ; **ಯತ್ರ ಅಸ್ತಿ** = ಯಾವ ರಜತಪೀಠಪುರದಲ್ಲಿ ನೆಲೆಸಿರುವನೋ; **ತದ್ರಜತಪೀಠಪುರಂ** = ಅಂತಹ ರಜತಪೀಠಪುರವು; **ಗರೀಯಃ** = ತುಂಬಾ ಉತ್ತಮವಾದುದು.

---

೧. ಜನಸ್ಯ ಕೃಷ್ಣಾದ್ವಿಮುಖಸ್ಯ ದೈವಾದಧರ್ಮಶೀಲಸ್ಯ ಸುದುಃಖಿತಸ್ಯ ।
ಅನುಗ್ರಹಾಯೇಹ ಚರಂತಿ ನೂನಂ ಭೂತಾನಿ ಭವ್ಯಾನಿ ಜನಾರ್ದನಸ್ಯ ॥ ಭಾಗವತ (೩/೫/೩)

ಶ್ರೀಮಧ್ವಾಚಾರ್ಯರ ಸ್ವಾಮಿಯಾದ ಶ್ರೀಕೃಷ್ಣನು ಸಕಲವಿಧ ಐಶ್ವರ್ಯಗಳಿಂದ ಕೂಡಿದ ದ್ವಾರಾವತಿ(ದ್ವಾರಕೆ)ಯನ್ನು ತೊರೆದು, ಗೋಪಕುಮಾರಿಯರ ಕರಪೂಜನವನ್ನೂ ಉಪೇಕ್ಷಿಸಿ, ತನ್ನ ಪತ್ನಿಯಾದ ಮಹಾಲಕ್ಷ್ಮಿಯ ತವರುಮನೆಯಾದ ಸಮುದ್ರವನ್ನೂ ದಾಟಿ ಬಂದು ನೆಲೆಸಿರುವ ರಜತಪೀಠಪುರವು ತುಂಬಾ ಹಿರಿದಾದುದು.

ವಿ: ೧. ಐಶ್ವರ್ಯದ ಅಭಾವ ಮತ್ತು ಸನ್ಮಾರ್ಗದ ಕೊರತೆ - ಇವು ಒಂದು ಸ್ಥಳವನ್ನು ಬಿಡಲು ಕಾರಣಗಳಾಗಿವೆ; ಅದರೆ ದ್ವಾರಕೆಯು ತುಂಬಾ ಸಂಪದ್ಭರಿತವಾದ ಪಟ್ಟಣ; ಮತ್ತು ಅಲ್ಲಿ ಬಹುಸಂಖ್ಯಾಕರಾದ ಗೋಪಬಾಲಿಕೆಯರು ಸ್ವತಃ ತಮ್ಮ ಕೈಗಳಿಂದ ತನ್ನನ್ನು ಪೂಜಿಸುವರು; ಆದರೂ ಶ್ರೀಕೃಷ್ಣನು ಆ ದ್ವಾರಕೆಯನ್ನು ಬಿಟ್ಟು ಬಂದಿರುವನು.

೨. ಹೆಂಡತಿಯ ತವರುಮನೆಯಂತು ಮನುಷ್ಯನ ಪಾಲಿಗೆ ಭೂಲೋಕದ ಸ್ವರ್ಗ; ತನ್ನ ಪತ್ನಿ ಮಹಾಲಕ್ಷ್ಮಿಯ ತವರುಮನೆಯಂತೂ ರತ್ನಾಕರವಾದ ಸಾಗರ; ಆದರೆ ಈ ಎರಡೂ ಕಡೆಯೂ ನೆಲೆಸದೆ, ಸಂಪತ್ತು, ಪೂಜೆ ಮತ್ತು ಅಭಿಮಾನ ಮೂರನ್ನೂ ಲೆಕ್ಕಿಸದೆ ಶ್ರೀಕೃಷ್ಣನು ಉಡುಪಿಯಲ್ಲಿ ನೆಲೆಸಿರುವನು; ಇದಕ್ಕೆ ಶ್ರೀಮಧ್ವಾಚಾರ್ಯರ ಮೇಲಿನ ಅವನಿಗಿರುವ ಪರಮಪ್ರೀತಿಯೇ ಕಾರಣ.

೩. ಶ್ರೀಮದ್ವಾಚಾರ್ಯರು ನೆಲೆಸಿದ್ದರಿಂದ ಉಡುಪಿಗೆ ಶ್ರೀಕೃಷ್ಣ ಬಂದಂತೆ[1], ಮಧ್ವಶಾಸ್ತ್ರದ ಅಧ್ಯಯನದಿಂದ ಬ್ರಹ್ಮಜ್ಞಾನವು ಲಭಿಸುವುದು; ಅದಕ್ಕಿಂತಲೂ ಪ್ರೀತಿಕರವಾದ ಕಾರ್ಯವು ಶ್ರೀಹರಿಗೆ ಮತ್ತೊಂದಿಲ್ಲ ಎಂಬ ಸೂಚನೆಯೂ ಇಲ್ಲಿದೆ.

೪. ಉಡುಪಿಯು ಉತ್ತಮವೆನಿಸಲು ಅಲ್ಲಿ ಶ್ರೀಮಧ್ವಪ್ರತಿಷ್ಠಿತಶ್ರೀಕೃಷ್ಣನು ನೆಲೆಸಿರುವುದನ್ನು ಕಾರಣವನ್ನಾಗಿ ಕೊಟ್ಟಿರುವುದರಿಂದ ಇಲ್ಲಿ 'ಕಾವ್ಯಲಿಂಗ' ಎಂಬ ಅಲಂಕಾರವಿದೆ.

## ಉಡುಪಿಯ ಹಿರಿಮೆ(೨)

**ರೂಪ್ಯಾತ್ಮಕಸ್ಯ ಭವತಸ್ತುಲನಾಂ ನ ಭೇಜುಃ**
**ಕ್ಷೇತ್ರಾಣಿ ಭಾರತಮಹೀರಚಿತಾನ್ಯಮೂನಿ ।**
**ಈಶಾಚಲಂ ಚ ಜಯಸೀಶ್ವರಮಾತ್ರವಾಸಂ**
**ಶ್ರೀಮಧ್ವಹಸ್ತಕಮಲಾರ್ಚಿತಕೃಷ್ಣಮೂರ್ತ್ಯಾ ॥ ೧೦ ॥**

---

೧. ಉಡುಪಿಯ ಶ್ರೀಕೃಷ್ಣವಿಗ್ರಹವು ಮೂಲತಃ ದ್ವಾರಕೆಯಲ್ಲಿದ್ದು ಅನಂತರ ನಾವೆಯ ಮೂಲಕ ಶ್ರೀಮಧ್ವಾಚಾರ್ಯರ ಕೈಗೆ ತಲುಪಿದ ಪ್ರಸಿದ್ಧ ಕಥೆಗೆ ಶ್ರೀವಾದಿರಾಜರ ಈ ಮಾತು ಪೋಷಕವಾಗಿದೆ; ಅವರ ಸರಸಭಾರತೀವಿಲಾಸದಲ್ಲಿನ ಮಾತುಗಳೂ ಇಲ್ಲಿ ಗಮನಾರ್ಹ:

ಮರುದ್ರೂಪೇ ಗುರೌ ಪ್ರೇಮ್ಣಾ ಹರಿರ್ದ್ವಾರಾವತೀಪುರಾತ್ ।
ನಾವಾ ಸೇವಾತುರಂ ದ್ರಷ್ಟುಕಾಮೋ ದಾಮೋದರಃ ಪ್ರಭುಃ ॥
ಆಯಾದಾಯಾಸಹೃತ್ ಸ್ವಾನಾಮಿತಿ ಸರ್ವಸ್ಯ ಸಂಮತಮ್ ॥ (೭/೧೮-೧೯)
(ವಿವರಗಳಿಗೆ ನಮ್ಮ ಪ್ರಕಾಶನದ ಸುಮಧ್ವವಿಜಯದ ಅನುವಾದವನ್ನು ನೋಡಿ).

ಅ: (ಎಲೈ ರಜತಪೀಠಪುರವೇ !) ಭಾರತಮಹೀರಚಿತಾನಿ = ಭರತಖಂಡದ ಭೂಮಯವಾದ; ಅಮೂನಿ ಕ್ಷೇತ್ರಾಣಿ = ಈ ಯಾವ ಕ್ಷೇತ್ರಗಳೂ(ಎಂದಿಗೂ); ರೂಪಾತ್ಮಕಸ್ಯ = ರಜತರೂಪದಲ್ಲಿರುವ; ಭವತಃ = ನಿನ್ನ; ತುಲನಾಂ = ಸಾಮ್ಯವನ್ನು ನ ಭೇಜುಃ = ಹೊಂದಲಾರವು; ಈಶ್ವರಮಾತ್ರವಾಸಂ = ರುದ್ರದೇವರಿಗೆ ಮಾತ್ರವೇ ನಿವಾಸವಾದ; ಈಶಾಚಲಂ = ಕೈಲಾಸಪರ್ವತವನ್ನು ಸಹ; ಶ್ರೀಮಧ್ವಹಸ್ತಕಮಲಾರ್ಚಿತ- ಕೃಷ್ಣಮೂರ್ತ್ಯಾ = ಶ್ರೀಮಧ್ವಾಚಾರ್ಯರ ಕರಕಮಲಗಳಿಂದ ಪೂಜಿತವಾದ ಶ್ರೀಕೃಷ್ಣ- ಪ್ರತಿಮೆಯಿಂದಾಗಿ; (ನೀನು) ಜಯಸಿ = ಮೀರಿಸಿಬಿಟ್ಟಿರುವಿ.

**ಎಲೈ ರಜತಪೀಠಪುರವೇ ! ಭರತಖಂಡದ ಈ ಯಾವ ಮಣ್ಣಿನ ಕ್ಷೇತ್ರಗಳೂ ರಜತರೂಪದ ನಿನ್ನ ಸಾಮ್ಯವನ್ನು ಸರ್ವಥಾ ಹೊಂದಲಾರವು; ಶ್ರೀಮಧ್ವಾಚಾರ್ಯರ ಕರಕಮಲಗಳಿಂದ ಪೂಜಿತವಾದ ಶ್ರೀಕೃಷ್ಣಪ್ರತಿಮೆಯಿಂದಾಗಿ ರುದ್ರದೇವರು ಮಾತ್ರ ನೆಲೆಸಿರುವ ಕೈಲಾಸಪರ್ವತವನ್ನು ಸಹ ನೀನು ಮೀರಿಸಿರುವಿ.**

ವಿ: ೧. ಭರತಖಂಡದ ಬೇರಾವ ಕ್ಷೇತ್ರವೂ ಉಡುಪಿಯಂತೆ ರಜತಮಯವಾಗಿಲ್ಲ; ಕೈಲಾಸ ಪರ್ವತವು 'ರಜತಾದ್ರಿ' ಎಂಬುದು ನಿಜವಾದರೂ ಅಲ್ಲಿ ರುದ್ರದೇವರು ಮಾತ್ರವೇ ನೆಲೆಸಿರುವರು. ಆದರೆ ಉಡುಪಿಯಲ್ಲಿ ಚಂದ್ರಮೌಳೀಶ್ವರವೆಂಬ ರುದ್ರದೇವರ ಮೂರ್ತಿಯು ಮಾತ್ರವಲ್ಲದೆ, ಶ್ರೀಮಧ್ವಾಚಾರ್ಯಪೂಜಿತ ಶ್ರೀಕೃಷ್ಣಪ್ರತಿಮೆಯೂ ಉಂಟು; ಆದ್ದರಿಂದ ಇತರ ಕ್ಷೇತ್ರಗಳಿಗಿಂತ ಮಾತ್ರವಲ್ಲದೆ 'ರಜತಾದ್ರಿ'ಗಿಂತಲೂ, ರಜತಪೀಠಪುರವೇ ಶ್ರೇಷ್ಠವಾದುದು ಎಂದು ಭಾವ.

೨. [1]ಉಡುಪಿಯ ಉತ್ತಮತ್ವಕ್ಕೆ 'ರೂಪ್ಯಾತ್ಮಕತ್ವ' ಮತ್ತು 'ಶ್ರೀಕೃಷ್ಣಪ್ರತಿಮಾಯುಕ್ತತ್ವ' ಗಳನ್ನು ಕಾರಣವನ್ನಾಗಿ ಕೊಟ್ಟಿರುವುದರಿಂದ ಇಲ್ಲೂ 'ಕಾವ್ಯಲಿಂಗ' ಎಂಬ ಅಲಂಕಾರವಿದೆ.

## ಉಡುಪಿ ಶ್ರೀಕೃಷ್ಣನ ವರ್ಣನೆ

**ನಿರ್ಮಥ್ಯೋಗ್ರಭವಾರ್ಣವೇ ನಿಜಮನೋಽಭೀಷ್ಟಂ ದಿಶಾಮೀತಿ ಯಃ**
**ಸಮ್ಯಗ್ ಜ್ಞಾಪಯಿತುಂ ಕರೇಣ ವಿಲಸನ್ಮಂಥಾನಮನ್ಯೇನ ಚ ।**

---

೧. ಸ್ಕಂದಪುರಾಣದಲ್ಲಿ ರಜತಪೀಠಪುರಮಾಹಾತ್ಮ್ಯವು ನಿರೂಪಿತವಾಗಿದೆ; ಅದರಂತೆ ರಾಮಭೋಜನೆಂಬ ರಾಜನು ಒಮ್ಮೆ ಅಶ್ವಮೇಧಯಾಗಕ್ಕಾಗಿ ಭೂಶೋಧನೆ ಮಾಡುತ್ತಿದ್ದಾಗ, ಅವನ ನೇಗಿಲಿಗೆ ಘಟಸರ್ಪವೊಂದು ಸಿಲುಕಿ ಮೃತವಾಯಿತು; ಆದರಿಂದ ರಾಜನಿಗೆ ತುಂಬಾ ದುಃಖವಾಯಿತು; ಆ ಸರ್ಪವು ಮೂಲತಃ ಒಬ್ಬ ಅಸುರ ಎಂದು ಸ್ವತಃ ಶ್ರೀಪರಶುರಾಮದೇವರು ತಿಳಿಸಿದರೂ, ಆ ರಾಜನು ಸಮಾಧಾನ ಹೊಂದಲಿಲ್ಲ, ಆಗ ಶ್ರೀಪರಶುರಾಮದೇವರು ರಜತಪೀಠವನ್ನು ಸ್ಥಾಪಿಸಿ ಅದರ ನಾಲ್ಕೂ ಮೂಲೆಗಳಲ್ಲಿ ಸರ್ಪಪ್ರತಿಮೆಗಳನ್ನು ಪೂಜಿಸಲು ಆದೇಶವಿತ್ತರು; ಅದರಂತೆ ಆ ರಾಜನು ಮಾಡಿದನು, ಮುಂದೊಂದು ದಿನ ಸ್ವತಃ ಶ್ರೀಪರಶುರಾಮದೇವರು ಆ ಪೀಠದ ಮಧ್ಯೆ ಲಿಂಗಾಕಾರದಿಂದ ಉದ್ಭವಿಸಿದರು. ಆ ಲಿಂಗವೇ ಇಂದು ಅನಂತೇಶ್ವರ, ಅನಂತಾಸನ ಎಂದು ಪ್ರಸಿದ್ಧವಾಗಿದೆ; ಆ ಸ್ಥಳವೇ ರಜತಪೀಠಪುರವಾಯಿತು. ಈ ನಾಲ್ಕು ಸರ್ಪ ಪ್ರತಿಮೆಗಳಿರುವ ಸ್ಥಳಗಳು ಇಂದು ತಾಂಗೋಡು, ಮಾಂಗೋಡು, ಅರಿಗೋಡು ಮತ್ತು ಮುಚ್ಚಿಲಗೋಡು ಎಂದು ಪ್ರಸಿದ್ಧವಾಗಿವೆ.

**ರಮ್ಯಂ ದಾಮ ದಧನ್ ಮಹೇಶರಜತಗ್ರಾಮಶ್ರಿಯೋಽಲಂಕೃತಿಃ**
**ಕರ್ಮಂದೀಶ್ವರಭಕ್ತಿಬಂಧನವಶಃ ಪ್ರೀತೋಽಸ್ತು ಕೃಷ್ಣಃ ಪ್ರಭುಃ ॥ ೧೧ ॥**

ಅ: ಉಗ್ರಭವಾರ್ಣವೇ = ಉಗ್ರವಾದ ಸಂಸಾರಸಮುದ್ರದಲ್ಲಿ; ನಿರ್ಮಥ್ಯ = (ಸಾಧನೆಗೆ ಪ್ರತಿಬಂಧಕವಾದ ದುರದೃಷ್ಟಾದಿಗಳನ್ನು) ಮಥಿಸಿ; ನಿಜಮನೋಭೀಷ್ಟಂ = ತನ್ನ ಭಕ್ತರ ಅಭಿಲಾಷೆಯನ್ನು (ಜ್ಞಾನಭಕ್ತಿಸಂಪತ್ತು ಮೊದಲಾದವುಗಳನ್ನು) ದಿಶಾಮಿ = ಕೊಡುತ್ತೇನೆ; ಇತಿ = ಎಂಬುದಾಗಿ; ಸಮ್ಯಗ್ ಜ್ಞಾಪಯಿತುಂ = ತನ್ನ ಕರ ಪಲ್ಲವಮುದ್ರೆಗಳಿಂದಾಗಿ ಪ್ರತ್ಯಕ್ಷ ತಿಳಿಸಿಕೊಡಲೆಂದು; ಯಃ = ಯಾವನು; ಕರೇಣ = (ಬಲ)ಗೈಯಿಂದ; ವಿಲಸನ್ಮಂಥಾನಂ = ಹೊಳೆಯುವ ಕಡಗೋಲನ್ನೂ; ಅನ್ಯೇನ ಕರೇಣ = ಮತ್ತೊಂದು ಕೈಯಿಂದ (ಎಡಗೈಯಿಂದ); ರಮ್ಯಂ = ಮನೋಹರವಾದ; ದಾಮ ಚ = ಹಗ್ಗವನ್ನೂ; ದಧತ್ = ಹಿಡಿದಿರುವ; ಮಹೇಶರಜತಗ್ರಾಮಶ್ರಿಯಃ = 'ಶಿವಳ್ಳಿ' ಎಂಬ ಗ್ರಾಮಶ್ರೀಗೆ; ಅಲಂಕೃತಿಃ = ಭೂಷಣವಾಗಿರುವ; ಕರ್ಮಂದೀಶ್ವರಭಕ್ತಿಬಂಧನವಶಃ = ಯತಿಶ್ರೇಷ್ಠರ ಭಕ್ತಿಬಂಧನಕ್ಕೆ ಸಿಲುಕುವ; ಪ್ರಭುಃ = ಸ್ವಾಮಿಯಾದ ಶ್ರೀಕೃಷ್ಣನು, ಪ್ರೀತಃ ಅಸ್ತು = ಪ್ರಸನ್ನನಾಗಲಿ.

''ಉಗ್ರವಾದ ಸಂಸಾರಸಮುದ್ರವನ್ನು ಮಥಿಸಿ ನನ್ನ ಭಕ್ತರ ಅಭಿಲಾಷೆಯನ್ನು ಈಡೇರಿಸುವೆನು'' ಎಂಬುದನ್ನು ತನ್ನ ಕರಪಲ್ಲವಮುದ್ರೆಗಳಿಂದ ಪ್ರತ್ಯಕ್ಷ ತಿಳಿಸಿಕೊಡಲೆಂದು ಬಲಗೈಯಿಂದ ಹೊಳೆಯುವ ಕಡಗೋಲನ್ನೂ, ಮತ್ತೊಂದು ಕೈಯಿಂದ ಮನೋಹರವಾದ ಹಗ್ಗವನ್ನೂ, ಹಿಡಿದಿರುವ 'ಶಿವಳ್ಳಿ' ಎಂಬ ಗ್ರಾಮಶ್ರೀಗೆ ಭೂಷಣವಾಗಿರುವ, ಯತಿಶ್ರೇಷ್ಠರ ಭಕ್ತಿಬಂಧನಕ್ಕೆ ಸಿಲುಕುವ, ಸ್ವಾಮಿಯಾದ ಶ್ರೀಕೃಷ್ಣನು ಸುಪ್ರೀತನಾಗಲಿ.

ವಿ: ೧. ಉಡುಪಿ ಶ್ರೀಕೃಷ್ಣನ ವಿಗ್ರಹದ ಬಲಗೈಯಲ್ಲಿ ಕಡಗೋಲು ಮತ್ತು ಎಡಗೈಯಲ್ಲಿ ಕಡೆಯುವ ಹಗ್ಗ (ನೇಣು)ಗಳಿವೆ; ಶ್ರೀಕೃಷ್ಣನ ಈ ಭಂಗಿಯು ತಾನು ಭಕ್ತರ ಪಾಪಗಳನ್ನು ಮಥಿಸಿ ಜ್ಞಾನ, ಭಕ್ತಿ ಮೊದಲಾದ ಸಂಪತ್ತುಗಳನ್ನು ಅನುಗ್ರಹಿಸುವೆನು ಎಂದು ಸೂಚಿಸುವಂತಿದೆ ಎಂಬುದಾಗಿ ವರ್ಣಿಸಿರುವರು(ಉತ್ಪ್ರೇಕ್ಷಾಲಂಕಾರ).

೨. ಮಹೇಶರಜತಗ್ರಾಮಶ್ರಿಯೋಽಲಂಕೃತಿಃ : ಮಹೇಶನ ಕಾಂತಿಯು ರಜತ-ಸಮೂಹದಂತಿದ್ದು ಅದರಲ್ಲಿ ನೆಲೆಸಿರುವ ಶ್ರೀಕೃಷ್ಣನ ಕಾಂತಿಯು ಇಂದ್ರನೀಲಮಣಿಯ ಕಾಂತಿಯನ್ನು ಹೊಂದಿದೆ; ಇದರಿಂದ ಮುತ್ತುಗಳ ಮಧ್ಯೆ ಇರುವ ಇಂದ್ರನೀಲಮಣಿಯು ಅವುಗಳಿಗೆ ಕಾಂತಿಪ್ರದವಾಗುವಂತೆ, ಶ್ರೀಕೃಷ್ಣನು ರುದ್ರದೇವರ ಅಂತರ್ಯಾಮಿಯಾಗಿದ್ದು ಅವರಿಗೆ ಶೋಭೆಯನ್ನು ಕೊಡುತ್ತಿರುವನು[1] ಎಂದೂ, ರುದ್ರದೇವರ ರಜತಗ್ರಾಮವಾದ ಕೈಲಾಸಪರ್ವತದ ಸೊಬಗನ್ನು ಪ್ರಳಯಕಾಲದಲ್ಲಿ ನಾಶಮಾಡುವ ಕಾರಣದಿಂದಾಗಿ ಶಿವನಿಗೂ

---

೧. 'ನನು ಶಿವದೇವಸ್ತದಲಂಕಾರೋಽಸ್ತು ಕಿಮನೇನ' ಇತ್ಯತ್ರಾಪಿ ಇದಮೇವೋತ್ತರಮ್। ಮಹೇಶಸ್ಯ ರಜತಗ್ರಾಮವತ್ ರಜತಸಮೂಹವತ್ ಯಾ ಶ್ರೀಃ ಅಂಗಕಾಂತಿಃ ತಸ್ಯಾ ಅಲಂಕಾರಭೂತಃ। ಮೌಕ್ತಿಕಾಂತರಿತೇಂದ್ರನೀಲರತ್ನವದಂತರ್ಯಾಮಿತಯಾ ತಮಪಿ ಭಾಸಯನ್ನಿತ್ಯರ್ಥಃ। — ವ್ಯಾಖ್ಯಾನ

ಶ್ರೀಕೃಷ್ಣನು ಸಂಹಾರಕನಾಗಿರುವುದರಿಂದ ಅವನು ರುದ್ರಾಂತರ್ಯಾಮಿ ಎಂದೂ[೧] ಸಿದ್ಧವಾಗುತ್ತದೆ.

## ಅಪೂರ್ವ ದಶಾವತಾರಸ್ತುತಿ

**ಚಾಂಚಲ್ಯಂ ಪೃಷ್ಠದೇಶೇ ಕಠಿಣಕೃತಿರಧೋವಕ್ತ್ರತಾ ಕ್ವಾಪಿ ಕೋಪೋ**
**ಯಾಞ್ಚಾ ಕಸ್ಮಾದಕಸ್ಮಾದಪಕೃತಿರುಪಕಾರಿಷ್ವಪಿ ಪ್ರಾಜ್ಞಮೌಲೇ ।**
**ಸ್ತ್ರ್ಯರ್ಥೇಽನ್ಯಸ್ತ್ರೀಷ್ವವಜ್ಞಾ ಕಿಮಿತಿ ರಮಣ ತೇ ಚೋರತಾ ಮಾಯಿಕತ್ವಂ**
**ಚಿತ್ರಂ ರೋಹಾವರೋಹಾವಿತಿ ವಿರಸಗಿರಾಽಪ್ಯಾದೃತಃ ಪಾತು ಕೃಷ್ಣಃ ॥೧೨॥**

ಅ: **(ಹೇ) ಪ್ರಾಜ್ಞಮೌಲೇ ! ರಮಣ !** = ಎಲೈ ಪ್ರಾಜ್ಞಶಿರೋಮಣಿಯೂ ರಮಣನೂ ಆದ ಶ್ರೀಕೃಷ್ಣನೇ !; **ತೇ** = ನಿನಗೆ; **ಚಾಂಚಲ್ಯಂ** = ಚಾಪಲ್ಯವು(ಒಮ್ಮೆ ಒಬ್ಬಳನ್ನು ಪ್ರೀತಿಸಿ ಅನಂತರ ಅವಳನ್ನು ತ್ಯಜಿಸಿ ಬೇರೊಬ್ಬಳನ್ನು ಪ್ರೀತಿಸುವ[೨]); **ಕಸ್ಮಾತ್?** = ಯಾವ ಕಾರಣದಿಂದ ಉಂಟಾಯಿತು?; **ಪೃಷ್ಠದೇಶೇ** = ಪರೋಕ್ಷದಲ್ಲಿ ; **ಕಠಿಣಕೃತಿಃ** = (ಎದುರಲ್ಲಿ ಒಳ್ಳೆಯ ಮಾತುಗಳನ್ನಾಡಿ, ಬೇರೆಯವರ ಎದುರಲ್ಲಿ ಕೆಟ್ಟ ಮಾತುಗಳನ್ನು ಏತಕ್ಕೆ ನುಡಿಯುವಿ ಎಂದು ಭಾವ) ಕ್ರೂರವಾದ ವರ್ತನೆಯು ಏತಕ್ಕೆ?; **ಅಧೋವಕ್ತ್ರತಾ(ಕಸ್ಮಾತ್)**= (ಹೀಗೇಕೆ[೩] ಮಾಡುತ್ತಿರುವಿ ಎಂದು ಮತ್ತೆ ಮತ್ತೆ ಕೇಳಿದರೂ, ಪ್ರತ್ಯುತ್ತರವನ್ನು ಕೊಡದೆ ಮುಖವನ್ನು ಕೆಳಕ್ಕೆ ಮಾಡಿಕೊಂಡಿರುವುದು ಏತಕ್ಕೆ?) ಮುಖವನ್ನು ಕೆಳಕ್ಕೆ ಮಾಡಿ ಕೊಂಡಿರುವುದಾದರೂ ಏತಕ್ಕೆ?; **ಅಕಸ್ಮಾತ್ ಯಾಞ್ಚಾ ಕಸ್ಮಾತ್** = (ಅನುಕೂಲಳಾದ[೪] ನನ್ನನ್ನು ಬಿಟ್ಟು ಅನುಕೂಲೆಯಲ್ಲದ ಬೇರೊಬ್ಬಳನ್ನು) ಕಾರಣವಿಲ್ಲದೆ ಬೇಡಿಕೊಳ್ಳುವುದು ಏತಕ್ಕೆ? **ಉಪಕಾರಿಷ್ವಪಿ ಅಪಕೃತಿಃ (ಕಸ್ಮಾತ್)?** = ದಾಸಿಯಂತೆ[೫] ಸೇವಿಸುವ ಸ್ತ್ರೀಜನರಲ್ಲಿ ಅಪಕಾರ ಮಾಡುವ ಬುದ್ಧಿಯು ಏತಕ್ಕೆ; **ಸ್ತ್ರ್ಯರ್ಥೇ** = ಒಬ್ಬ ಸ್ತ್ರೀಗೋಸ್ಕರ; **ಅನ್ಯಸ್ತ್ರೀಷ್ವವಜ್ಞಾ** = ಇತರ ಸ್ತ್ರೀಯರಲ್ಲಿ ಅವಜ್ಞೆಯು ಏತಕ್ಕೆ?; **ತೇ ಚೋರತಾ ಕಿಮಿತಿ** = ನಿನಗೆ ಕಳ್ಳ ಬುದ್ಧಿಯು

---

೧. 'ನನು ರುದ್ರಸ್ಯಾಂತರ್ಯಾಮಿತ್ವಂ ಕೃಷ್ಣಸ್ಯ ಕುತಃ' ಇತ್ಯತ್ರಾಪಿ ಇದಮೇವೋತ್ತರಂ । ಮಹೇಶಸ್ಯ ಯೋ ರಜತಗ್ರಾಮಃ ಕೈಲಾಸಃ ತತ್ರ ಯಾ ಶ್ರೀಃ ಅಲಂಕೃತಿಃ ಪ್ರಲಯೇ ನಿರಾಕರಣಂ ಯಸ್ಮಾತ್ ಸ ತಥೋಕ್ತಃ । ಪ್ರಲಯೇ ಶಿವಸ್ಯಾಪಿ ಸಂಹರ್ತೃತಯಾ ಶಿವಾದಪ್ಯುತ್ತಮತ್ವಾತ್ ಹರಿರೇವ ತದಂತರ್ಯಾಮೀತಿ ಭಾವಃ । —ವ್ಯಾಖ್ಯಾನ

೨. ಏಕದಾ ಏಕಸ್ಯಾಂ ಪ್ರೀತಿಃ ಪುನಸ್ತಾಂ ವಿಹಾಯಾನ್ಯಸ್ಯಾಂ ಪ್ರೀತಿರಿತ್ಯೇವಂ ಚಂಚಲತಾ । —ವ್ಯಾಖ್ಯಾನ

೩. ಕಿಮರ್ಥಮೇವಂಕರೋಷೀತಿ ಬಹುಧಾ ಕಥಿತೇಽಪಿ ಪ್ರತ್ಯುತ್ತರಮದತ್ವಾ ಅಧೋಮುಖತಯೈವ ಸ್ಥಿತಿಃ । —ವ್ಯಾಖ್ಯಾನ

೪. ಅನುಕೂಲಾಯಾಂ ಸತ್ಯಾಂ ಅನನುಕೂಲಾಯಾಃ ಪ್ರಾರ್ಥನಂ ಚ ನೋಚಿತಮಿತಿ ಭಾವಃ । —ವ್ಯಾಖ್ಯಾನ

೫. ದಾಸೀವತ್ ಕರ್ಮಕರ್ತ್ರ್ಯಾಮಪಿ ಮಯಿ ಅನ್ಯಾಂಗನಾಪ್ರೇರಿತಃ ಸನ್ ವಸ್ತ್ರಭೂಷಣಾದಿಕಂ ನ ದದಾಸಿ ತದಪಿ ನೋಚಿತಮಿತಿ ಭಾವಃ । —ವ್ಯಾಖ್ಯಾನ

ಏತಕ್ಕೆ?; ರೋಹಾವರೋಹೌ ಚಿತ್ರಂ = ಕೆಲವರಿಗೆ ಉನ್ನತಿಯನ್ನು ಮತ್ತೆ ಕೆಲವರಿಗೆ ಅವನತಿಯನ್ನು ಉಂಟುಮಾಡುವ ನಿನ್ನ ಸ್ವಭಾವವೂ ಆಶ್ಚರ್ಯಕರವೇ ಆಗಿದೆ; ಇತಿ = ಈ ರೀತಿ; ವಿರಸಗಿರಾ ಅಪಿ = ವಿರಸ ವಚನದಿಂದಲೂ ಸಹ; ಆದೃತಃ = ಆದರ ವಿಷಯನಾಗುವ; ಕೃಷ್ಣಃ = ಶ್ರೀಕೃಷ್ಣನು; ಪಾತು = ಪಾಲಿಸಲಿ.

ಎಲೈ ಪ್ರಾಜ್ಞಶಿರೋಮಣಿಯಾದ ರಮಣ ಶ್ರೀಕೃಷ್ಣನೇ ! ನಿನಗೆ ಚಾಪಲ್ಯವೇತಕ್ಕೆ? ಪರೋಕ್ಷದಲ್ಲಿ ಕ್ರೂರವಾದ ವರ್ತನೆಯು ಏತಕ್ಕೆ? ಮುಖವನ್ನು ಕೆಳಕ್ಕೆ ಮಾಡಿಕೊಂಡಿರುವುದಾದರೂ ಏತಕ್ಕೆ? ಕಾರಣವಿಲ್ಲದೆ ಯಾಚನೆ ಏತಕ್ಕೆ? ದಾಸಿಯಂತೆ ಸೇವಿಸುವ ಸ್ತ್ರೀಜನರಲ್ಲಿ ಅಪಕಾರ ಮಾಡುವ ಬುದ್ಧಿಯು ಏತಕ್ಕೆ? ಒಬ್ಬ ಸ್ತ್ರೀಗೋಸ್ಕರ ಇತರ ಸ್ತ್ರೀಯರಲ್ಲಿ ಅವಜ್ಞೆ ಏತಕ್ಕೆ? ಕಳ್ಳಬುದ್ಧಿ ಏತಕ್ಕೆ? ಕೆಲವರಿಗೆ ಉನ್ನತಿಯನ್ನು, ಮತ್ತೆ ಕೆಲವರಿಗೆ ಅವನತಿಯನ್ನು ಉಂಟುಮಾಡುವ ನಿನ್ನ ಸ್ವಭಾವವೂ ಆಶ್ಚರ್ಯಕರವೇ ಆಗಿದೆ; ಈ ರೀತಿ ವಿರಸ ವಚನದಿಂದ ಸಹ ಆದರಿಸಲ್ಪಡುವ ಶ್ರೀಕೃಷ್ಣನು ಪಾಲಿಸಲಿ.

ವಿ: ೧. ಶ್ರೀವಾದಿರಾಜರು ಶ್ಲೇಷಮಯವಾಗಿ ಶ್ರೀಕೃಷ್ಣನನ್ನು ಸ್ತುತಿಸಿರುವ ಅಪೂರ್ವ ಶ್ಲೋಕವಿದು; ಮೇಲ್ನೋಟಕ್ಕೆ[೧] ತನ್ನಲ್ಲಿ ಉದಾಸೀನನಾದ ಶ್ರೀಕೃಷ್ಣನನ್ನು ಗೋಪಬಾಲಿಕೆಯೊಬ್ಬಳು ಛೇಡಿಸಿ ನುಡಿಯುವ ಮಾತಿನಂತಿರುವ ಇದು ಅನೇಕ ಅಪೂರ್ವ ಅರ್ಥಗಳನ್ನು ಹೊಂದಿದ್ದು ಶ್ರೀವಾದಿರಾಜರ ಸರಸಭಾರತಿಗೆ ಒಂದು ಉತ್ತಮ ನಿದರ್ಶನವಾಗಿದೆ; ವಿರಸವಾಗಿ ತೋರುವ ಈ ಮಾತು ಹೇಗೆ ಸರಸವೂ ಆಗಿದೆ ಎಂಬುದನ್ನು ಸಹ ಇಲ್ಲಿಯ ಪದಗಳಿಂದಲೇ ತಿಳಿಯಬಹುದು.

೨. ಪ್ರಳಯೋದಕದಲ್ಲಿ ಮತ್ಸ್ಯರೂಪದಿಂದ ಸಂಚರಿಸಿದ್ದು, ಕೂರ್ಮಾವತಾರದಲ್ಲಿ ಕಠಿಣವಾದ ಮಂದರಪರ್ವತವನ್ನು ಹೊತ್ತದ್ದು, ಹಿರಣ್ಯಾಕ್ಷನನ್ನು ಸಂಹರಿಸಲು ಅಧೋಮುಖವಾದ ವರಾಹಾವತಾರವನ್ನು ತಾಳಿದ್ದು, ನರಸಿಂಹರೂಪದಿಂದ ಹಿರಣ್ಯ-ಕಶಿಪುವನ್ನು ಸಂಹರಿಸುವಾಗ ಕೋಪವನ್ನು ತೋರಿಸಿದ್ದು, ವಾಮನ ರೂಪದಿಂದ ಬಲಿಯನ್ನು ಯಾಚಿಸಿದ್ದು, ತನ್ನ ಭಕ್ತರಾದ ಕಾರ್ತವೀರ್ಯಾರ್ಜುನ ಮೊದಲಾದವರನ್ನು ಪರಶುರಾಮ-ರೂಪದಿಂದ ಸಂಹರಿಸಿದ್ದು, ರಾಮಾವತಾರದಲ್ಲಿ ತನ್ನ ಪತ್ನಿಯಾದ ಸೀತೆಗೋಸ್ಕರ ಅನ್ಯಸ್ತ್ರೀಯರಾದ ಶೂರ್ಪನಖಿ ಮೊದಲಾದ ದೈತ್ಯಸ್ತ್ರೀಯರುಗಳ ನಾಸಿಕಾಛೇದನಾದಿಗಳನ್ನು ಮಾಡಿದ್ದು, ಕೃಷ್ಣಾವತಾರದಲ್ಲಿ ನವನೀತಾದಿಗಳನ್ನು ಕದ್ದದ್ದು, ಬುದ್ಧಾವತಾರದಲ್ಲಿ ಮೋಹಕಮಾತುಗಳಿಂದ ದೈತ್ಯರನ್ನು ವಂಚಿಸಿದ್ದು, ಕಲ್ಕ್ಯವತಾರದಲ್ಲಿ ಕುದುರೆಯನ್ನು ಹತ್ತಿಳಿದದ್ದು, ಏತಕ್ಕೆ? ಎಂಬ ಪ್ರಾರ್ಥನೆಯಲ್ಲಿ ವ್ಯಕ್ತವಾಗುವ ದಶಾವತಾರಗಳ ಮರ್ಮವನ್ನು ಅರಿಯುವ ಕಾತರದಿಂದಾಗಿ, ಇದರಲ್ಲಿ ಶ್ರೀಹರಿಯ ಬಗ್ಗೆ ತುಂಬಿತುಳುಕುವ ಆದರವು ಗೋಚರಿಸುತ್ತದೆ.

೩. ಶ್ರೀವಾದಿರಾಜಸ್ವಾಮಿಗಳ ಅಪಾರ ಕೌಶಲಕ್ಕೆ ಉತ್ತಮ ನಿದರ್ಶನವಾಗಿರುವ ಈ ಶ್ಲೋಕಕ್ಕೆ ಅನೇಕಾರ್ಥಗಳಿದ್ದು, ಅವುಗಳನ್ನು ಸ್ವತಃ ಅವರ ಮುಖದಿಂದಲೇ ಕೇಳಿ, ಅವುಗಳಲ್ಲಿ ಕೆಲವನ್ನು

---

೧. ಕಸ್ಯಾಶ್ಚಿದ್ಗೋಪಾಲಬಾಲಿಕಾಯಾಃ ಸ್ವೋದಾಸೀನದಶಾಯಾಮೀಷದೀರ್ಷ್ಯಾಸಹಿತ ಪ್ರೀಯೋಕ್ತಿರಿಯಮ್
– ವ್ಯಾಖ್ಯಾನ

ಮಾತ್ರವೇ ತಾವು ಬರೆದಿರುವುದಾಗಿ ವ್ಯಾಖ್ಯಾನಕಾರರಾದ ಶ್ರೀನಾರಾಯಣಾಚಾರ್ಯರು ತಿಳಿಸಿರುವರು; ವಿಸ್ತರಸ್ತ್ವಸ್ಯ ಪದ್ಯಸ್ಯ ಗುರುಮುಖಾದೇವ ಶ್ರೋತವ್ಯಃ। ತದೀಯಕೌಶಲಸಮು ದ್ರಾಲ್ಲೇಶಮಾತ್ರಂ ಪ್ರದರ್ಶಿತಂ। ತದಪಿ ತಚ್ಛಿಕ್ಷಯೈವ ನೋತ್ಪ್ರೇಕ್ಷಯಾ॥

೪. ಇದಕ್ಕೆ ಶ್ರೀಕೃಷ್ಣಾವತಾರಕ್ಕೆ ವಿಶೇಷವಾಗಿ ಸಂಬಂಧಿಸಿದ ಮಾಹಾತ್ಮ್ಯಗಳನ್ನು ವರ್ಣಿಸುವ ಮತ್ತೊಂದು ಅರ್ಥವನ್ನು ಸಹ ವ್ಯಾಖ್ಯಾನಕಾರರು ಬರೆದಿದ್ದು, ಅದರ ಸಂಗ್ರಹವು ಹೀಗಿದೆ:

೫. **ಚಾಂಚಲ್ಯಂ (ಚಿತ್ರಂ):** ಸರ್ವತ್ರ ವ್ಯಾಪ್ತನಾದ ಶ್ರೀಹರಿಯು ಶ್ವೇತದ್ವೀಪದಲ್ಲಿ ತನ್ನ ದರ್ಶನಕ್ಕೆಂದು ಬಂದ ದೇವತೆಗಳಿಗೆ ಅವರ ಹೃದಯದಲ್ಲಿ ಒಮ್ಮೆ ಗೋಚರಿಸಿ ಮಾಯವಾದದ್ದು; ವಿಶ್ವರೂಪವೆಂಬ ಸ್ಥೂಲರೂಪದಿಂದ ಗೋಚರನಾದರೂ ಸೂಕ್ಷ್ಮರೂಪದಿಂದ ಅಗೋಚರ-ನಾದದ್ದು; ಕುವಲಯಾಪೀಡವೆಂಬ ಕಂಸನ ಆನೆಗೆ ಒಮ್ಮೆ ಮುಂದೆ, ಒಮ್ಮೆ ಹಿಂದೆ, ಒಮ್ಮೆ ಎಡಬಲದಲ್ಲಿ ಕಾಣಿಸಿಕೊಳ್ಳುತ್ತ ಅದ್ಭುತವಾಗಿ ಸಂಚರಿಸಿದ್ದು; ಆಶ್ಚರ್ಯಕರ !

೬. **ಈಶೇ ಪೃಷ್ಟದ (ಪೃಷ್ಟದ+ಈಶೇ) ಕಠಿಣಕೃತಿಃ(ಚಿತ್ರಂ):** ಭಸ್ಮಾಸುರನಿಂದ ಸಂಕಟಕ್ಕೆ ಗುರಿಯಾದ ಶ್ರೀರುದ್ರದೇವರನ್ನು ಅವರ ಮುಂದೆ ನಿಂತು, ಭಸ್ಮಾಸುರನನ್ನು ಮೃದುವಚನ-ಗಳಿಂದ ಮರುಳುಮಾಡಿ ಪುನಃ ಅತಿಕ್ರೂರಿಯಾದ ಅವನನ್ನು ಭಸ್ಮಮಾಡಿದ್ದು ಆಶ್ಚರ್ಯಕರ !

೭. **ಈಶೇ** - ಈಶರೂಪನಾದ ಶೇಷನಲ್ಲೂ, ಪಕ್ಷೀಶನಾದ ಗರುಡನಲ್ಲೂ; **ಪೃಷ್ಟದ** - ಕುಳಿತಿರುವ(ಮಲಗಿರುವ)ವನೇ !; **ಕಠಿಣಕೃತಿಃ** – ಶೇಷನಮೇಲೆ ಮಲಗಿದಂತೆಯೇ ಪರ್ವತಾದಿ-ರೂಪ ಕಠಿಣಜಗತ್ತನ್ನು ನಿರ್ಮಿಸಿದ್ದು; ಗರುಡನ ಹೆಗಲ ಮೇಲೆ ಕುಳಿತೇ ಅತ್ಯಂತ ಭಯಂಕರರಾದ ದೈತ್ಯರನ್ನು ಸಂಹರಿಸಿದ್ದು, ಮೇಷರೂಪದ ರುದ್ರದೇವರ ಮೇಲೆ ಕುಳಿತು ಅವರಿಗೆ ಒದಗಿದ್ದ ಯೋಗಿನೀಪೀಡೆಯನ್ನು ಪರಿಹರಿಸಿ 'ದುಷ್ಟಶಕ್ತಿಸಹಸ್ರಭುಕ್' (ವಾಸುದೇವಸಹಸ್ರನಾಮ) ಎನಿಸಿದ್ದು, ಆಶ್ಚರ್ಯಕರ !

೮. **ಅಧೋವಕ್ತ್ರತಾ(ಚಿತ್ರಂ):** ಸೂರ್ಯ, ಚಂದ್ರ, ನಕ್ಷತ್ರ, ಗ್ರಹಗಳಿಂದ ಕೂಡಿದ ಜ್ಯೋತಿಶ್ಚಕ್ರವನ್ನು ಧರಿಸಲೆಂದು ಶಿಂಶುಮಾರರೂಪದಿಂದ ಅಧೋಮುಖನಾಗಿರುವುದು ಆಶ್ಚರ್ಯಕರ !

೯. **ಕ್ವಾಪಿ ಕೋಪಃ (ಚಿತ್ರಂ):** ಭಕ್ತರಲ್ಲದವರಲ್ಲಿ ಮಾತ್ರವೇ ಕೋಪವನ್ನು ಹೊಂದಿರುವ ನಿನಗೆ ಭಕ್ತರಲ್ಲಿ ಮಾತ್ರ ಎಂದೂ ಅಂತಹ ಕೋಪವೇ ಇಲ್ಲ; ಇದೂ ಆಶ್ಚರ್ಯಕರ !

೧೦. **ಪೃಷ್ಟದ ! ಅಕಸ್ಮಾತ್ ಯಾಜ್ಞಾ(ಚಿತ್ರಂ):** ರುದ್ರದೇವರಿಗೆ ಆಸರೆಯಾದ ನೀನು ಅವರನ್ನೇ ಪುತ್ರಾರ್ಥಿಯಾಗಿ ಪೂಜಿಸಿ(ಲೋಕವನ್ನು ವಂಚಿಸಿ)ದ್ದು ಆಶ್ಚರ್ಯಕರ !

೧೧. **ಉಪಕಾರಿಷ್ವಪಿ ಅಪಕೃತಿಃ(ಚಿತ್ರಂ):** ಸೃಷ್ಟಿಕಾಲದಲ್ಲಿ ನಿನ್ನ ಬಳಿಯೇ ಇದ್ದು ಒಂದು ರೀತಿಯಲ್ಲಿ ಸೃಷ್ಟಿಗೆ ಕಾರಣವೆನ್ನಿಸಿಕೊಂಡ ದೇಶ, ಕಾಲ, ಪ್ರಕೃತಿ ಮೊದಲಾದವುಗಳಲ್ಲಿ 'ಕಿಂ ಸ್ವಿದಾಸೀದಧಿಷ್ಠಾನಂ'[೧] ಇತ್ಯಾದಿ ಶ್ರುತ್ಯುಕ್ತ ರೀತಿಯಲ್ಲಿ ತಾನು ಸ್ವತಂತ್ರ, ಅವುಗಳಿಂದ ತನಗೇನೂ ಸಹಾಯ ಬೇಕಿಲ್ಲ ಎಂಬ ಧಿಕ್ಕಾರ ತೋರಿದ್ದು ಸಹ ಆಶ್ಚರ್ಯ ! ನಿತ್ಯವಾದ ಅವುಗಳಿಗೆ

---

೧. ಋಗ್ವೇದ (೧೦/೮೧/೨) - ಬ್ರಹ್ಮಸೂತ್ರಭಾಷ್ಯದಲ್ಲಿ ಉದ್ಧೃತ (೨/೧/೧೫)

ಪರಾಧೀನ ವಿಶೇಷಾವಾಪ್ತಿ ಮೊದಲಾದ ರೀತಿಯ ಜನನಮರಣಾದಿಗಳನ್ನು ಉಂಟುಮಾಡುವುದು ಸಹ ಆಶ್ಚರ್ಯಕರ !

೧೨. ಅರ್ಥೇ(ಸತಿ) (ಯಾ) ಸ್ತ್ರೀ - (ಸಾ) (ಚಿತ್ರಂ): ಅಮೃತವನ್ನು ದೇವತೆಗಳಿಗೆ ಉಣಬಡಿಸಲೆಂದು ನೀನು 'ನಾರಾಯಣೀ' ಎಂಬ ಸ್ತ್ರೀರೂಪವನ್ನು ಪ್ರಕಟಿಸಿದ್ದು ಸಹ ಆಶ್ಚರ್ಯಕರ !

೧೩. ಅನ್ನೀ, ಅಸ್ತ್ರೀ, ಇಷ್ವವಜ್ಞಾ(ಚ ಚಿತ್ರಂ): ದೇವತೆಗಳಿಗೆ ಅಮೃತವನ್ನು ಬಡಿಸುವ ಸಮಯದಲ್ಲಿ ಅಮೃತವೆಂಬ ಅನ್ನವನ್ನು ಹೊಂದಿದವನಾಗಿ ಆಗಲೇ (ವಂಚಕನಾದ) ರಾಹುವಿನ ಶಿರಸ್ಸನ್ನು ಕತ್ತರಿಸಲೆಂದು ಸೌಟನ್ನೇ ಅಸ್ತ್ರವನ್ನಾಗಿಸಿಕೊಂಡು ಅವನನ್ನು ಸಂಹರಿಸಿದ್ದು ಆಶ್ಚರ್ಯಕರ. ಉದರಂಭರಣಕ್ಕೋಸ್ಕರ ಮಾತ್ರವೇ ಅನ್ನವನ್ನು ಹೊಂದಿದ್ದ ಅಸ್ತ್ರಪಾಣಿಗಳಾಗಿದ್ದ ದೈತ್ಯರ ಬಾಣಗಳನ್ನು ಕಡೆಗಣಿಸಿದ್ದು ಆಶ್ಚರ್ಯಕರ !

೧೪. ಅನ್ಯಸ್ತ್ರೀಷ್ವವಜ್ಞಾ: ಲಾವಣ್ಯಾದಿ ಗುಣಗಳಲ್ಲಿ ನಿನಗೆ ಎಂದೂ ಸಾಟಿಯಾಗದ ಅಷ್ಟಮಹಾಮಹಿಷಿಯರ, ಹದಿನಾರು ಸಾವಿರದ ಒಂದು ನೂರು ಇತರ ಪತ್ನಿಯರ ಮತ್ತು (ಅಸಂಖ್ಯ) ಗೋಪಿಕಾಸ್ತ್ರೀಯರುಗಳ ಕುಡಿನೋಟವೆಂಬ ಬಾಣಗಳನ್ನು ವ್ಯರ್ಥಗೊಳಿಸಿದ್ದು ಆಶ್ಚರ್ಯಕರ !

೧೫. ಅನ್ನಿನಃ ಅಸ್ತ್ರಿಷು - ಅವಜ್ಞಾ(ಚಿತ್ರಂ): ತಮ್ಮನ್ನು ಅನ್ನದ ಋಣಕ್ಕೆ ಗುರಿಮಾಡಿದ್ದ ಜರಾಸಂಧನ ಬಳಿ ಇದ್ದಂತಹ ಸ್ತ್ರೀಯರಲ್ಲವೆಂಬ ಕಾರಣಕ್ಕಾಗಿ ಪುರುಷರೆನಿಸಿದ್ದ (ಪೌರುಷರಹಿತರಾಗಿದ್ದ ಎಂದರ್ಥ); ಅಸ್ತ್ರಪಾಣಿಗಳಾದ ಇಪ್ಪತ್ತುಮೂರು ಅಕ್ಷೋಹಿಣೀ ಸೇನೆಯ ಜನಗಳನ್ನು ಅವರ ಸರ್ವಾವಯಗಳ[೧] ಮೇಲೆಲ್ಲಾ ಬಾಣ ತುಂಬಿಸುವ ಮೂಲಕ ತುಚ್ಛೀಕರಿಸಿದ್ದು ಆಶ್ಚರ್ಯಕರ !

೧೬. ತೇ ಚೋರತಾ ಕಿಮಿತಿ: ನೀನು ನಿನ್ನನ್ನು ಸ್ಮರಿಸುವ ಭಕ್ತ ಜನರ ಅನಂತ ಜನ್ಮಗಳ ಪಾಪಗಳನ್ನು ಕದಿಯುವ ಕಳ್ಳ[೨] (ಅಶೇಷಪಾಪನಾಶಕ ಎಂದರ್ಥ) ಎನ್ನಿಸಿದ್ದು ಯಾವ ಪ್ರಯೋಜನಕ್ಕಾಗಿ? (ಭಕ್ತವತ್ಸಲನಾದ ಕಾರಣಕ್ಕಾಗಿ ಮಾತ್ರವೇ ನೀನು ಭಕ್ತರ ಪಾಪಪರಿಹಾರಕನಾಗಿರುವೆಯೇ ಹೊರತು ಅದರಿಂದ ನಿನಗಾವ ಪ್ರಯೋಜನವೂ ಇಲ್ಲ ಎಂದು ಭಾವ).

---

೧. ಏಕೈಕಸ್ಮಿನ್ ದಶ ದಶ ಭಟೇ ಚಾಶ್ವೇ ಶತಂ ಶತಮ್ ।
ರಥೇ ರಥೇ ಸಹಸ್ರಂ ಚಾಯುತಂ ಚ ಗಜೇ ಗಜೇ ॥ - ಸ್ಮೃತಿ

೨. ನಾರಾಯಣೋ ನಾಮ ನರೋ ನರಾಣಾಂ ಪ್ರಸಿದ್ಧಚೋರಃ ಕಥಿತಂ ಪೃಥಿವ್ಯಾಮ್ ।
ಅನೇಕಜನ್ಮಾರ್ಜಿತಪಾಪಸಂಚಯಂ ಹರತ್ಯಶೇಷಂ ಸ್ಮೃತಮಾತ್ರ ಏವ ॥ - ಕೃ.ಮ. (೪೮)
ಶೃಣ್ವೇ ವೀರಮುಗ್ರಮುಗ್ರಂ ದಮಾಯನ್ನನ್ಯಮನ್ಯಮತಿನೇನೀಯಮಾನಃ ।
ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ।
- ಋಗ್ವೇದ (೬/೪೭/೧೬; ೧೦/೮೧/೨) ಮ. ಭಾ.ತಾ. ನಿ ದಲ್ಲಿ ಉದ್ಧೃತ (೧/೧೦೧)

೧೭. ತೇ - ಅಚಃ - ಅರತಾ ಕಸ್ಮಾತ್(ಇತಿ ಚಿತ್ರಂ): ಅಕಾರಾದಿ ಷೋಡಶ ಸ್ವರಗಳು, ಅರತಾಃ - ಅಕಾರಸಂಬಂಧವಾದ 'ಕಾ' ದಿ ವ್ಯಂಜನಗಳು ಹೀಗೆ ಒಟ್ಟಾಗಿ ಏಕ ಪಂಚಾಶತ್(೫೧) ವರ್ಣಾತ್ಮಕವಾದ ಸಕಲ ಶ್ರುತಿ ಪುರಾಣರೂಪ ಶಾಸ್ತ್ರಗಳು ನಿನಗೆ ಯಾರಿಂದ ಬಂದವು? (ನೀನು ಸ್ವತಃ ಸರ್ವಶಾಸ್ತ್ರಜ್ಞನಾಗಿರುವೆಯೇ ಹೊರತು, ಇತರರ ಉಪದೇಶದಿಂದಲ್ಲ ಎಂದು ಭಾವ. ಇದು ಶ್ರೀಕೃಷ್ಣನು 'ಸಾಂದೀಪನಿ' ಆಚಾರ್ಯರ ಶಿಷ್ಯ ಎಂಬ ಭ್ರಾಂತಿಯನ್ನು ಸಹ ಪರಿಸುತ್ತದೆ) (ನಿನ್ನ ನಾಲಿಗೆಯಲ್ಲಿ ತುಂಬಿರುವ ವರ್ಣಗಳು ಸಕಲಶಾಸ್ತ್ರಾತ್ಮಕವಾಗಿರುವುದು ಸಹ ಆಶ್ಚರ್ಯಕರ !)

೧೮. ಅಮಾಯಿಕತ್ವಂ (ಚಿತ್ರಂ): ಮಾಯಾಮಯವಾದ ಶರೀರಾದಿಗಳ ಮಧ್ಯ ಇದ್ದರೂ ನಿನಗೆ ಅವುಗಳ ಲೇಪ ಎಂದೂ ಇಲ್ಲವೆಂಬುದು ಆಶ್ಚರ್ಯಕರ !

(ಮಾಯಾಃ ಆಯಃ ಅಸ್ಯ ವರ್ತತೇ ಮಾಯೀ; ಕಃ - ಸುಖರೂಪಃ - ಮಾಯೀ ಚಾಸೌ ಕಶ್ಚ- ಮಾಯಿಕಃ - ತಸ್ಯ ಭಾವಃ - ಮಾಯಿಕತ್ವಂ) ಸ್ವರತನಾದ ನೀನು ಲಕ್ಷ್ಮೀದೇವಿಯೊಂದಿಗೆ ವಿಹರಿಸುವುದು ಸಹ ಆಶ್ಚರ್ಯಕರ; (ಲಕ್ಷ್ಮೀದೇವಿಯೊಂದಿಗೆ ವಿಹರಿಸಿಯೂ ನೀನು ಸ್ವರತನಾಗಿರುವುದು ಆಶ್ಚರ್ಯಕರ ಎಂದೂ ಭಾವ.)

೧೯. ರೋಹಾವರೋಹೌ - (ಚಿತ್ರಂ) : ಅನಂತಜೀವರಾಶಿಗಳಲ್ಲಿ ಯೋಗ್ಯರಿಗೆ ಮುಕ್ತಿಯನ್ನು ಕೊಡುವುದು (ರೋಹಃ); ಅಯೋಗ್ಯರನ್ನು ಅಂಧಂತಮಸ್ಸಿನಲ್ಲಿ ಬೀಳಿಸುವುದು (ಅಪರೋಹಃ); ಮಿಶ್ರರಿಗೆ ಸುಖದುಃಖಗಳನ್ನು ಕೊಡುವುದು (ರೋಹಾವರೋಹೌ); ಇವೂ ಚಿತ್ರವೇ; ಅನಾದ್ಯನಂತಕಾಲದಲ್ಲಿ ತ್ರಿವಿಧಜೀವರಿಗೆ ಒಮ್ಮೆಯೂ ವ್ಯತ್ಯಾಸವಾಗದಂತೆ ಸುಖಾದಿ ಗತಿಪ್ರದನಾಗಿರುವುದು ಅಪಾರವಾದ ಭಗವನ್ಮಹಿಮೆ ಎಂದು ಭಾವ.)

೨೦. ದಿವ್ಯದೇಹದಿಂದಲೇ ಪರಂಧಾಮಗಮನ (ರೋಹ[1]); ಮತ್ತು ಅನಾದಿ ನಿತ್ಯವಾದ ದಿವ್ಯದೇಹದಿಂದಲೇ ಅವತಾರ(ಅವರೋಹ[2]); ಎಂಬ ನಿನ್ನ ಮಹಿಮೆಯೂ ಆಶ್ಚರ್ಯಕರ (ಪರಮಾತ್ಮನ ಯಾವ ರೂಪಕ್ಕೂ ಹುಟ್ಟುಸಾವುಗಳಿಲ್ಲ; ಅವೆಲ್ಲವೂ ಅಪ್ರಾಕೃತ, ನಿತ್ಯ ಹಾಗೂ ಸ್ವಗತಭೇದವಿವರ್ಜಿತ ಎಂದು ಭಾವ.)

೨೧. ಹೀಗೆ ಇಲ್ಲಿಯ ಪದಗಳಿಗೆ ಅಪೂರ್ವವಾದ ಅರ್ಥಗಳನ್ನು ಬರೆಯುತ್ತ ವಿರಸಗಿರಾ ಎಂಬುದಕ್ಕೂ ಸಹ, ದಶಾವತಾರರಸಭರಿತವಾದ, ಉಕ್ತರೀತಿಯಲ್ಲಿ ಅಧ್ಯಾತ್ಮರಸ ಭರಿತವಾದ ಮಾತಿನಿಂದ ಎಂಬ ಸರಸಾರ್ಥವನ್ನು ಬರೆದಿರುವರು.

**ರೂಪ್ಯಾತ್ಮಕಾಮರಪುರಃಸರ ಸನ್ನಿರೂಪ್ಯ**
**ರೂಪ್ಯಾತ್ಮಕಂ ಚ ಭವತಃ ಕೃಪಯಾ ಗತಸ್ಯ ।**

---

೧. ಪ್ರದರ್ಶ್ಯಾತಪ್ತತಪಸಾಮವಿತೃಪ್ತದೃಶಾಂ ನೃಣಾಮ್ ।
ಆದಾಯಾಂತರಧಾದ್ಯಸ್ತು ಸ್ವಬಿಂಬಂ ಲೋಕಲೋಚನಮ್ ॥ –ಭಾಗವತ (೩/೨/೧೧)

೨. ತದಾ ವಾಂ ಪರಿತುಷ್ಟೋಽಹಮಮುನಾ ವಪುಷಾಽನಘೇ ।
ಪ್ರಾದುರಾಸಂ ವರದರಾಟ್ ಯುವಯೋಃ ಕಾಮದಿತ್ಸಯಾ ॥ – ಭಾಗವತ (೧೦/೩/೩೭)

ರೂಪ್ಯಾತ್ಮಕಾಲಯಕೃತಾಲಯ ಯತ್ ತ್ವಮೇವ
ರೂಪ್ಯಾತ್ಮನೋ ಗತಿರಿಹಾಪಿ ತದೀಶ ಪಾಹಿ ॥೧೩ ॥

ಅ: ರೂಪ್ಯಾತ್ಮಕಾಮರಪುರಃಸರ = ರೂಪಕಾಲಂಕಾರದಿಂದ ಪ್ರತಿಪಾದಿಸಲು ಯೋಗ್ಯ-ವಾದ ಸ್ವರೂಪವನ್ನು ಹೊಂದಿರುವಂತಹ ಬ್ರಹ್ಮಾದಿದೇವತೆಗಳಲ್ಲಿ ಅತ್ಯಂತ ಶ್ರೇಷ್ಠನಾಗಿರುವ; ಸನ್ನಿರೂಪ್ಯ = ಸಜ್ಜನರಿಂದ ಸುತ್ತ್ಯನಾದ; ರೂಪ್ಯಾತ್ಮಕಾಲಯಕೃತಾಲಯ = ರಜತಪೀಠಪುರ (ಉಡುಪಿ) ಯ(ದ)ಲ್ಲಿರುವ ದೇವಾಲಯದಲ್ಲಿ ನೆಲೆಸಿರುವ; (ಹೇ) ಈಶ = ಸ್ವಾಮಿಯಾದ ಎಲೈ ಶ್ರೀಕೃಷ್ಣನೇ; ಯತ್ = ಇದರಿಂದ; ಭವತಃ ಕೃಪಯಾ ರೂಪ್ಯಾತ್ಮಕಂ = ನಿನ್ನ ಅನುಗ್ರಹದಿಂದ ಮುಕ್ತಿಯಲ್ಲಿ ಪ್ರಶಸ್ತ ನಿಜರೂಪವನ್ನು ಹೊಂದುವ ಮುಕ್ತಜೀವನಿಗೆ ಯೋಗ್ಯವಾದ ಆನಂದವನ್ನು; ಗತಸ್ಯ = ಪಡೆದಂತಹ; ಆತ್ಮನಃ = ಮುಕ್ತಜೀವಸಮುದಾಯಕ್ಕೆ; ತ್ವಂ ಏವ ಗತಿಃ = ನೀನೇ ಗತಿ; ರೂಪೀ = ಎಂಬ ಪ್ರಮೇಯವು ನಿರೂಪಿತವಾಗಿದೆ; ತತ್ = ಆದ್ದರಿಂದ; ಇಹ ಅಪಿ = ಈ ಸಂಸಾರದಲ್ಲೂ; ಪಾಹಿ = ನೀನೇ ನಮ್ಮನ್ನು ರಕ್ಷಿಸು.

ರೂಪಕಪ್ರತಿಪಾದ್ಯರಾದ ದೇವತೆಗಳಲ್ಲಿ ಅತ್ಯಂತ ಮಿಗಿಲಾದ, ಸಜ್ಜನರು ಕೊಂಡಾಡುವ ಸ್ವಾಮಿಯಾದ ಎಲೈ ಶ್ರೀಕೃಷ್ಣನೇ ! ಉಡುಪಿಯ ದೇವಾಲಯದಲ್ಲಿ ನೆಲೆಸುವ ಮೂಲಕ 'ನಿನ್ನ ಅನುಗ್ರಹದಿಂದ ಮುಕ್ತಿಯಲ್ಲಿ ಪ್ರಶಸ್ತ ನಿಜರೂಪ ಪಡೆಯುವ ಮುಕ್ತಜೀವಸಮುದಾಯಕ್ಕೆ ನೀನೇ ಗತಿ' ಎಂಬ ಪ್ರಮೇಯವನ್ನು ನಿರೂಪಿಸಿರುವ ನೀನೇ ಇಲ್ಲಿಯೂ ನಮ್ಮನ್ನು ಪಾಲಿಸು.

ವಿ: ೧. ಇದು ಶ್ರೀವಾದಿರಾಜಸ್ವಾಮಿಗಳ ಸ್ವಾಪ್ನಪದ್ಯ; ಪುನರಪಿ ಸ್ವಕೀಯಸ್ವಾಪ್ನಪದ್ಯೇನ ತಮೇವ ಕೃಷ್ಣಂ ಸ್ತೌತಿ ।

೨. ರೂಪಾತ್ಮ್ಯಕಾಮರಪುರಃಸರ : ಸೌಭಾಗ್ಯಶಾಲಿಯಾದ ಮಹಾಪುರುಷನನ್ನು ಐಶ್ವರ್ಯದಲ್ಲಿ ಇಂದ್ರ; ವ್ಯಾಖ್ಯಾನದಲ್ಲಿ ಶೇಷ, ಸೌಂದರ್ಯದಲ್ಲಿ ಮನ್ಮಥ,ಧನದಲ್ಲಿ ಕುಬೇರ; ವಿದ್ಯೆಯಲ್ಲಿ ರುದ್ರ; ವೇದದಲ್ಲಿ ಚತುರ್ಮುಖ ಎಂಬುದಾಗಿ ಕವಿಗಳು ವರ್ಣಿಸಿರುವರು. ಈ ರೀತಿ ರೂಪಕಾಲಂಕಾರದಿಂದ ವರ್ಣಿಸಲ್ಪಡುವಂತಹ ಬ್ರಹ್ಮಾದಿದೇವತೆಗಳಲ್ಲಿ ಅತ್ಯಂತ ಶ್ರೇಷ್ಠನು ಶ್ರೀಹರಿ ಎಂದು ಭಾವ[೧].

೩. ಕೃಪಯಾ : ಯಥಾಯೋಗ್ಯವಾಗಿ ಶ್ರವಣ ರೂಪವಾದ ಬ್ರಹ್ಮಜಿಜ್ಞಾಸೆಯಿಂದ ಲಭಿಸುವ ಶ್ರೀಹರಿಪ್ರಸಾದದಿಂದಲೇ ಮೋಕ್ಷವು ಲಭಿಸುವುದು ಎಂದು ಭಾವ[೨].

೪. ರೂಪ್ಯಾತ್ಮಕ : ಸುಜೀವಿಗಳು ಸ್ವರೂಪತಃ ಬಲ, ಆನಂದ ಮೊದಲಾದವುಗಳಿಂದ ಕೂಡಿದವರು; ಅವರ ಆ ನೈಜಗುಣಗಳು ಸಂಪೂರ್ಣವಾಗಿ ಅಭಿವ್ಯಕ್ತವಾಗುವುದು ಮೋಕ್ಷದಲ್ಲಿ ಎಂಬ ಶಾಸ್ತ್ರಪ್ರಮೇಯದ ಹಿನ್ನೆಲೆಯಲ್ಲಿ ಈ ಮಾತು ಬಂದಿದೆ[೩].

---

೧. 'ಈ ಪರಿಯ ಸೊಬಗಾವ ದೇವರಲಿ ನಾ ಕಾಣೆ' - ಶ್ರೀ ಪುರಂದರದಾಸರ ಕೃತಿಯನ್ನು ಇಲ್ಲಿ ಸ್ಮರಿಸಬಹುದು.

೨. ಜಿಜ್ಞಾಸೋತ್ಥಜ್ಞಾನಜಾತ್ ತತ್ಪ್ರಸಾದಾದೇವ ಮುಚ್ಯತೇ॥ – ಅನುವ್ಯಾಖ್ಯಾನ

೩. ಬಲಮಾನಂದ ಓಜಶ್ಚ ಸಹೋಜ್ಞಾನಮನಾಕುಲಮ್ ।

೫. ಸಕಲ ದೇವೋತ್ತಮನೂ, ಮುಕ್ತರಿಗೆ ಆಶ್ರಯನೂ ಆಗಿರುವ ಶ್ರೀಹರಿಯೇ ಸಂಸಾರದಲ್ಲೂ ಸಹ ಸಕಲರಿಗೂ ಗತಿಯಾಗಿರುವನು ಎಂದು ತಿಳಿದು ಅವನನ್ನು ಸದಾ ಪ್ರಾರ್ಥಿಸಬೇಕು ಎಂದು ಭಾವ (ಮುಕ್ತಾನಾಂ ಪರಮಾ ಗತಿಃ).

## ಅನಂತೇಶ್ವರ (ಅನಂತಾಸನ)

**ಶಿವಾಂತರ್ಯಾಮಿತಾಂ ಸ್ವೀಯಾಂ ಪ್ರಿಯಾನ್ ಪ್ರತಿ ನಿಬೋಧಯನ್ ।**
**ದಯಾವಾರಿನಿಧಿಃ ಶೈವೀಂ ಶಿಲಾಮಾಶ್ರಿತ್ಯ ಶೋಭತೇ ॥ ೧೪ ॥**

ಅ : **ದಯಾವಾರಿನಿಧಿಃ** = ಕರುಣಾಸಮುದ್ರನಾದ ಶ್ರೀಹರಿಯು; **ಸ್ವೀಯಾಂ** = ತನ್ನ; **ಶಿವಾಂತರ್ಯಾಮಿತಾಂ** = ಶಿವಾಂತರ್ಯಾಮಿತ್ವವನ್ನು; **ಪ್ರಿಯಾನ್ ಪ್ರತಿ** = ಭಕ್ತರಿಗೆ; **ನಿಬೋಧಯನ್** = ತಿಳಿಸಿಕೊಡುವುದಕ್ಕಾಗಿ; **ಶೈವೀಂ ಶಿಲಾಂ** = ಲಿಂಗಾಕಾರದ ಶಿಲೆಯಲ್ಲಿ; **ಆಶ್ರಿತ್ಯ** = ನೆಲೆಸಿ; **ಶೋಭತೇ** = ಶೋಭಿಸುತ್ತಿರುವನು;

**ಕರುಣಾಸಮುದ್ರನಾದ ಶ್ರೀಹರಿಯು ತನ್ನ ಶಿವಾಂತರ್ಯಾಮಿತ್ವವನ್ನು ಭಕ್ತರಿಗೆ ತಿಳಿಸಿಕೊಡಲೆಂದು ಲಿಂಗಾಕಾರದ ಶಿಲೆಯಲ್ಲಿ ನೆಲೆಸಿ ಶೋಭಿಸುತ್ತಿರುವನು.**

ವಿ: ೧. ಉಡುಪಿಯ ಪ್ರಧಾನ ದೇವತೆಯಾದ 'ಅನಂತಾಸನ' (ಅನಂತೇಶ್ವರ)ನು ಸಾಕ್ಷಾತ್ ಶ್ರೀಪರಶುರಾಮದೇವರು; ಆದರೆ ಲಿಂಗಾಕಾರದಲ್ಲಿರುವನು; ವಿಷ್ಣುವು ಹೀಗೆ ಲಿಂಗಾಕಾರದಲ್ಲಿರುವುದು ಅವನ [೧]ರುದ್ರಾಂತರ್ಯಾಮಿತ್ವಕ್ಕೆ ದ್ಯೋತಕ ಎಂದು ಭಾವ.

೨. ಅನಂತಾಸನನು ಮೂಲತಃ ನಾರಾಯಣ ಎಂಬುದನ್ನು ಶ್ರೀನಾರಾಯಣ-ಪಂಡಿತಾಚಾರ್ಯರು 'ಸುಮಧ್ವವಿಜಯ' ಮತ್ತು ಅದರ 'ಭಾವಪ್ರಕಾಶಿಕೆ'ಗಳಲ್ಲಿ ಸ್ಪಷ್ಟಪಡಿಸಿರುವರು[೨].

**ಈಶಸ್ಯಾಹೀಶಪದವೀಂ ಭಾಸಯನ್ನಿವ ಭಾವಿನೀಮ್ ।**
**ಅಧ್ಯಾಸ್ತೇ ಶೇಷಶಯನಃ ಸ್ನಿಗ್ಧಾಂ ಲಿಂಗಶಿಲಾಂ ಹರಿಃ ॥ ೧೫ ॥**

---

ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ ॥
- ಗೌಪವನಶ್ರುತಿಃ (ಬ್ರಹ್ಮಸೂತ್ರಭಾಷ್ಯ (೨/೩/೩೧) ದಲ್ಲಿ ಉದ್ಧೃತ

೧. ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ । – ವಿಷ್ಣುಪುರಾಣ

೨. ಭೇಜೇ ಭುಜಂಗಶಯನಂ ದ್ವಿಷಡಬ್ದಕಾಲಮ್॥ – ಸುಮಧ್ವವಿಜಯ (೨/೧೯)

ರಜತಪೀಠಪುರಸ್ಥಸ್ಯ ನಾರಾಯಣತ್ವಂ ನಿಶ್ಚೀಯತೇ –
ಸ್ವದರ್ಶನೋರುವ್ರತಿನೇ ನಿಶೀಥೇ ಪ್ರಾಪ್ತಾಯ ಭೋಗೀಂದ್ರಗತೋ ಹರಿಃ ಪ್ರಭುಃ ।
ಸ್ವಂ ದರ್ಶಯಿತ್ವಾ ಖಲು ಕುಂಜಮಾಧವದ್ವಿಜಾಯ ತದ್ವತ್ತ್ರಿಮಾಂ ನ್ಯಧಾಪಯತ್ ॥
– ಸುಮಧ್ವವಿಜಯ ಭಾವಪ್ರಕಾಶಿಕಾ (೨/೧೫)

ಅ: ಶೇಷಶಯನಃ = ಶೇಷಶಾಯಿಯಾದ; ಹರಿಃ = ಶ್ರೀಹರಿಯು; ಈಶಸ್ಯ = ಶಿವನಿಗೆ; ಭಾವಿನೀಂ = ಮುಂದೆ ಬರಲಿರುವ; ಅಹೀಶಪದವೀಂ = ಶೇಷಪದವಿಯನ್ನು; ಭಾಸಯನ್ ಇವ = ತಿಳಿಸಿಕೊಡಲೋ ಎಂಬಂತೆ; ಸ್ನಿಗ್ಧಾಂ = ಮನೋಹರವಾದ; ಲಿಂಗಶಿಲಾಂ = ಲಿಂಗಾಕಾರದ ಶಿಲೆಯಲ್ಲಿ; ಅಧ್ಯಾಸ್ತೇ = ನೆಲೆಸಿರುವನು.

**ಶಿವನಿಗೆ ಮುಂದೆ ಬರಲಿರುವ ಶೇಷಪದವಿಯನ್ನು ತಿಳಿಸಿಕೊಡಲೋ ಎಂಬಂತೆ ಶೇಷಶಾಯಿಯಾದ ಶ್ರೀಹರಿಯು ಮನೋಹರವಾದ ಲಿಂಗಾಕಾರದ ಶಿಲೆಯಲ್ಲಿ ನೆಲೆಸಿರುವನು.**

ವಿ: ೧. 'ಅನಂತೇಶ್ವರನು ಶೇಷಶಾಯಿ; ಇರುವುದು ಲಿಂಗಾಕಾರದ[1] ಶಿಲೆಯಲ್ಲಿ' - ಎಂಬ ಅಂಶವು ಮುಂದೆ ಶಿವನು ಶೇಷಪದವಿ ಬರುವುದಕ್ಕೆ ಸೂಚಕವಾಗಿದೆ ಎಂದು ಭಾವ[2].

೨. ರುದ್ರದೇವರು ಶೇಷಪದವಿಯನ್ನು ಹೊಂದಿ ಶ್ರೀಹರಿಗೆ ಶಯನವಾಗಿ ಅನಂತರ ಮುಕ್ತರಾಗುವರು ಎಂಬ ಪ್ರಮೇಯವು ಶಾಸ್ತ್ರಸಿದ್ಧವಾಗಿದೆ.

## ಪಾಜಕಕ್ಷೇತ್ರ[3]

**ಪವಿತ್ರಂ ಪಾಜಕಕ್ಷೇತ್ರಂ ಕೋ ನ ಸೇವೇತ ಕೋವಿದಃ ।**
**ಸತ್ಯಲೋಕೇಶ್ವರಃ ಪ್ರಾಣೋ ಯತ್ರಾವಾತರದುತ್ಸುಕಃ ॥ ೧೬ ॥**

ಅ: ಯತ್ರ = ಯಾವ ಕ್ಷೇತ್ರದಲ್ಲಿ; ಸತ್ಯಲೋಕೇಶ್ವರಃ = ಸತ್ಯಲೋಕಾಧಿಪತಿಗಳಾದ; ಪ್ರಾಣಃ = ಶ್ರೀಮುಖ್ಯಪ್ರಾಣದೇವರು; ಉತ್ಸುಕಃ = ಉತ್ಸುಕರಾಗಿ; ಅವಾತರತ್ = ಅವತರಿಸಿದರೋ (ಅಂತಹ); ಪವಿತ್ರಂ = ಪಾವನವಾದ; ಪಾಜಕಕ್ಷೇತ್ರಂ = ಪಾಜಕಕ್ಷೇತ್ರವನ್ನು; ಕಃ ಕೋವಿದಃ = ಯಾವ ವಿದ್ವಾಂಸನು ತಾನೆ; ನ ಸೇವೇತ = ಸೇವಿಸಲಾರನು.

---

೧. ಒಮ್ಮೆ ನಾರಾಯಣನು ರುದ್ರದೇವರಿಗೆ ಅವರ ಅಪೇಕ್ಷೆಯಂತೆ ತಾನು ಲಿಂಗಾಕಾರದಿಂದ ಪ್ರಕಟವಾಗಿ ವರವಿತ್ತಿದ್ದನೆಂದೂ, ಅದರಂತೆ ವೇದಾರಣ್ಯದಲ್ಲಿ ನೆಲೆಸಿದ್ದ ಪುತ್ರಾರ್ಥಿಯಾದ ಬ್ರಾಹ್ಮಣನೊಬ್ಬನಿಗೆ ತಿಳಿಸಿ, ಅವನ ಯಜ್ಞಕುಂಡವಾಗಿದ್ದ ನಾಗಪೀಠವೊಂದರಲ್ಲಿ ಕ್ಷೀರಾಭಿಷೇಕ ಮಾಡಿದಾಗ, ಲಿಂಗಾಕಾರದಲ್ಲಿ ಅನಂತಾಸನನೆಂದು ಪ್ರಕಟನಾದನೆಂದೂ ಪುರಾಣಪ್ರಸಿದ್ಧಿಯುಂಟು. ರುದ್ರದೇವರು ಶ್ರೀಪರಶುರಾಮಪೂಜಕರೆಂಬ ಪುರಾಣ ಪ್ರಸಿದ್ಧ ವಿಷಯವು 'ದ್ವಾದಶಸ್ತೋತ್ರ' ದಲ್ಲಿ ಬಂದಿದೆ: ರಾಮ ಭೃಗೂದ್ವಹ ಸೂರ್ಜಿತದೀಪ್ತೇ ಕ್ಷತ್ರಕುಲಾಂತಕ ಶಂಭುವರೇಣ್ಯ ॥ (೬/೩)

೨. 'ರುದ್ರಃ ಶೇಷಾತ್ಮಕಃ' – ಮ. ಭಾ. ತಾ ನಿ. (೧/೧೪)
'ಏಕೋ ರುದ್ರಸ್ತಥಾ ಶೇಷಃ' – ಮ. ಭಾ. ತಾ. ನಿ (೧/೭೪)

೩. ರಾಮಾಧಿವೇಶಿತಹರಿಸ್ವಸ್ಯಮೌಲಿಮಾಲಾರಾಜದ್ವಿಮಾನಗಿರಿಶೋಭಿತಮಧ್ಯವಾಸ ।
ಕ್ಷೇತ್ರಂ ಸ ಪಾಜಕಪದಂ ತ್ರಿಕುಲ್ಯೈಕಕೇತುಃ ಕಂ ಯದ್ದಧಾತಿ ಸತತಂ ಖಲು ವಿಶ್ವಪಾಜಾತ್ ॥
– ಸುಮಧ್ವವಿಜಯ (೨/೧೧)

ಸತ್ಯಲೋಕಾಧಿಪತಿಗಳಾದ ಶ್ರೀಮುಖ್ಯಪ್ರಾಣದೇವರು ಉತ್ಸುಕರಾಗಿ ಅವತರಿಸಿದ ಪಾವನವಾದ ಪಾಜಕಕ್ಷೇತ್ರವನ್ನು ಯಾವ ವಿದ್ವಾಂಸ ತಾನೆ ಸೇವಿಸನು?

ವಿ: ೧. ಸತ್ಯಲೋಕಾಧಿಪತಿಗಳೂ ಶುದ್ಧಭಾಗವತಧರ್ಮರತರೂ ಆದ ಸಾಕ್ಷಾತ್ ಶ್ರೀವಾಯುದೇವರು ಅವತರಿಸಿದ ಕ್ಷೇತ್ರ ಎಂದ ಮೇಲೆ ಪಾಜಕಕ್ಷೇತ್ರವು ತುಂಬಾ ಪಾವನವೆಂಬುದು ಖಚಿತ ಎಂದು ಭಾವ;

೨. ಅದನ್ನು ಸೇವಿಸದವನು ವಿದ್ವಾಂಸನೇ ಅಲ್ಲ; ಎಂಬ ಮಾತಿನಲ್ಲಿ ಅದನ್ನು ಸೇವಿಸಿದವನಿಗೆ ವಿದ್ವತ್ತು ಬರುವುದು ಖಚಿತ ಎಂಬ ಸೂಚನೆಯೂ ಇದೆ.

## ವಿಮಾನಗಿರಿಯ ದುರ್ಗಾದೇವಿ

**ಪರಶ್ವಧಧನುರ್ಬಾಣಗದಾತೀರ್ಥೋಪಶೋಭಿತೇ ।**
**ಗಿರೌ ಯತ್ರ ಸುತಪ್ರೇಮ್ಣೇವಾಸ್ತೇ ನಿತ್ಯಂ ಹರಿಸ್ವಸಾ ॥ ೧೭ ॥**

ಅ: ಪರಶ್ವಧಧನುರ್ಬಾಣಗದಾತೀರ್ಥೋಪಶೋಭಿತೇ = (ತನ್ನ ಸುತ್ತ ನಾಲ್ಕು ದಿಕ್ಕುಗಳಲ್ಲಿರುವ) ಪರಶುತೀರ್ಥ, ಧನುಸ್ತೀರ್ಥ, ಬಾಣತೀರ್ಥ ಮತ್ತು ಗದಾತೀರ್ಥ ಎಂಬ ನಾಲ್ಕು ತೀರ್ಥಗಳಿಂದ ಕಂಗೊಳಿಸುವ; ಯತ್ರ = ಆ ಪಾಜಕಕ್ಷೇತ್ರದ ಬಳಿಯಿರುವ; ಗಿರೌ = (ವಿಮಾನ) (ಕುಂಜಾರುಗಿರಿ ಎಂಬ) ಬೆಟ್ಟದಲ್ಲಿ; ಹರಿಸ್ವಸಾ = ಶ್ರೀಕೃಷ್ಣಸೋದರಿಯಾದ ದುರ್ಗಾದೇವಿಯು; ಸುತಪ್ರೇಮ್ಣಾ ಇವ = ತಮ್ಮ ಪುತ್ರರಾದ ಶ್ರೀಮಧ್ವಾಚಾರ್ಯರೂಪದ ಶ್ರೀವಾಯುದೇವರ ಮೇಲಿನ ವಾತ್ಸಲ್ಯದಿಂದಲೋ ಎಂಬಂತೆ; ನಿತ್ಯಂ ಆಸ್ತೇ = ಸದಾ ನೆಲೆಸಿರುವರು. (ಉತ್ಪ್ರೇಕ್ಷಾಲಂಕಾರ)

ತನ್ನ ಸುತ್ತಲಿನ ಪರಶುತೀರ್ಥ, ಧನುಸ್ತೀರ್ಥ, ಬಾಣತೀರ್ಥ ಮತ್ತು ಗದಾತೀರ್ಥ ಎಂಬ ನಾಲ್ಕು ತೀರ್ಥಗಳಿಂದ ಕಂಗೊಳಿಸುವ, ಪಾಜಕ ಕ್ಷೇತ್ರದ ಬಳಿಯ ವಿಮಾನಗಿರಿ ಎಂಬ ಬೆಟ್ಟದಲ್ಲಿ ಶ್ರೀಕೃಷ್ಣನ ಸೋದರಿಯಾದ ದುರ್ಗಾದೇವಿಯು ತಮ್ಮ ಮಗನ ಮೇಲಿನ ವಾತ್ಸಲ್ಯದಿಂದಲೋ ಎಂಬಂತೆ ಸದಾ ನೆಲೆಸಿರುವರು.

ವಿ: ೧. ಪಾಜಕದ ಸುತ್ತಲೂ ಶ್ರೀಪರಶುರಾಮದೇವರು ಪರಶು, ಧನುಸ್ಸು, ಬಾಣ ಮತ್ತು ಗದಾ ಎಂಬ ತಮ್ಮ ಆಯುಧಗಳಿಂದ ನಿರ್ಮಿಸಿದ ನಾಲ್ಕು ತೀರ್ಥಗಳಿವೆ. ಪಾಜಕದ ಪಶ್ಚಿಮಕ್ಕೆ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿ 'ವಿಮಾನಗಿರಿ' ಎಂಬ ಬೆಟ್ಟವಿದೆ; ಅದರಲ್ಲಿ ಶ್ರೀಪರಶುರಾಮದೇವರು ಪ್ರತಿಷ್ಠಾಪಿಸಿದ 'ದುರ್ಗಾ' ಮೂರ್ತಿಯಿದೆ; ಅಲ್ಲಿ ಶ್ರೀದುರ್ಗಾದೇವಿಯ ವಿಶೇಷ ಸಾನ್ನಿಧ್ಯವುಂಟು, ಅದಕ್ಕೆ ಕಾರಣ ಅವರ ಪುತ್ರರಾದ ಶ್ರೀವಾಯುದೇವರು ಶ್ರೀಮಧ್ವರೂಪದಿಂದ ಅವತರಿಸಿದ್ದೇ ಆಗಿದೆ ಎಂಬುದಾಗಿ ವರ್ಣಿಸಿರುವರು[೧]

---

೧. ''ಶ್ರೀವಾಯುದೇವರು ರುದ್ರಾದಿದೇವತೆಗಳಿಗೆ ಒಡೆಯರೂ, ಶ್ರೀಹರಿಗೆ ಪರಮಪ್ರಿಯರೂ ಆಗಿರುವರು; ಅಂತಹವರು ಅವತರಿಸಿದ ಕ್ಷೇತ್ರವೆಂದ ಮೇಲೆ ಅದು 'ಪಾವನ' ಎಂಬುದು ಸ್ಪಷ್ಟ; ಗಂಗಾದಿ ಜಡತೀರ್ಥಗಳಿಗೆ ಉಗಮಸ್ಥಾನವಾದದ್ದು ಹಿಮಾಲಯಪರ್ವತ; ಆದರೆ ಹಿರಿಯ

೨. ಹರಿಸ್ವಸಾ: ವಸುದೇವ[೧] ನಂದಗೋಪರು ಅಣ್ಣತಮ್ಮಂದಿರು; ಶ್ರೀಕೃಷ್ಣನು ವಸುದೇವನ ಪುತ್ರನಾಗಿ, ದುರ್ಗೆಯು ನಂದಗೋಪನ ಪುತ್ರಿಯಾಗಿ ಪ್ರಾದುರ್ಭೂತರಾದರು; ಆದ್ದರಿಂದ ದುರ್ಗೆಯು ಶ್ರೀಕೃಷ್ಣನ ತಂಗಿ ಎಂದು ಪ್ರಸಿದ್ಧರಾಗಿರುವರು.

೩. **ಸುತಪ್ರೇಮ್ಣಾ:** ಶ್ರೀಮಧ್ವಾಚಾರ್ಯರು ಶ್ರೀವಾಯುದೇವರ ಅವತಾರ. ಶ್ರೀವಾಯುದೇವರು ಲಕ್ಷ್ಮೀನಾರಾಯಣರ ಪುತ್ರರು, ದುರ್ಗಾದೇವಿಯು[೨] ಮಹಾಲಕ್ಷ್ಮಿಯಾದ್ದರಿಂದ ಶ್ರೀಮಧ್ವಾಚಾರ್ಯರು ಅವರ ಪುತ್ರರು ಎಂದರ್ಥ. 'ದಶಪ್ರಮತಿಂ ಜನಯಂತ ಯೋಷಣಃ' ಎಂಬ ಬಳಿತ್ಥಾಸೂಕ್ತದ ಮಂತ್ರದಲ್ಲಿ ಶ್ರೀಭೂದುರ್ಗಾರೂಪದ ಮಹಾಲಕ್ಷ್ಮಿಯೇ ಶ್ರೀಮಧ್ವಾಚಾರ್ಯರ ಮುಖ್ಯತಾಯಿ ಎಂಬ ಭಾವವೂ ಇದೆ.

೪. **'ಪರಶು'** ಮೊದಲಾದ ಶ್ರೀಪರಶುರಾಮರ ಆಯುಧಗಳು 'ಪಾಪಹರ' ವಾಗಿರುವಂತೆ, ಆ ಆಯುಧಗಳಿಂದ ಉಂಟಾದ ಈ ನಾಲ್ಕು ತೀರ್ಥಗಳು ಸಹ ಪಾಪಪರಿಹಾರಕವಾಗಿವೆ ಎಂಬುದು ಅವುಗಳ ಹೆಸರಿನಿಂದಲೇ ತಿಳಿಯುತ್ತದೆ; ಇವುಗಳಲ್ಲಿ ಮಿಂದವರಿಗೆ ಧರ್ಮವು (ತಪಸ್ಸು, ಶೌಚ, ದಯಾ ಮತ್ತು ಸತ್ಯ) ಎಂಬ ನಾಲ್ಕು ಪಾದಗಳಿಂದಲೂ ವರ್ಧಿಸುವುದು ಎಂದು ತಿಳಿಸಲೆಂದೇ ಅವರು ಇವುಗಳನ್ನು ನಿರ್ಮಿಸಿರುವರು ಎಂದೂ ಶ್ರೀಹೃಷೀಕೇಶತೀರ್ಥರು ವರ್ಣಿಸಿರುವರು (ಸಂಪ್ರದಾಯಪದ್ಧತಿ ೩,೪):

ಯತ್ರತ್ಯ ತೀರ್ಥೇಷು ನಿಮಜ್ಜತಾಂ ಸತಾಂ ಧರ್ಮಶ್ಚತುರ್ಭಿಶ್ಚರಣೈ ಸಹ್ಯಧತೇ ।
ಇತಿ ಪ್ರಬೋಧಾಯ ಚಕಾರ ಮಾಧವಶ್ಚತ್ವಾರಿ ತೀರ್ಥಾನಿ ಭೃಗೋಃ ಕುಲೋದ್ಭವಃ ॥
ಪರಶ್ವಾದೀನ್ಯಾಯುಧಾನಿ ಯಥಾ ಪಾಪಹರಾಣಿ ವೈ ।
ತೀರ್ಥಾನಿ ಚ ತಥೇತ್ಯೇವಂ ಬೋಧಯಂತ್ಯಭಿಧಾ ಇಮಾಃ ॥

೫. ಪಾಜಕದಲ್ಲಿ ಇವುಗಳಲ್ಲದೆ, ಶ್ರೀಮಧ್ವಾಚಾರ್ಯರು ತಮ್ಮ ಬಾಲ್ಯದಲ್ಲಿ ನಿರ್ಮಿಸಿದ 'ವಾಸುದೇವತೀರ್ಥ' ಎಂಬ ಮತ್ತೊಂದು ತೀರ್ಥವೂ ಇದೆ; ಇಲ್ಲಿರುವ ಮಠದಲ್ಲಿ ಶ್ರೀಮಧ್ವಾಚಾರ್ಯರು ಬಾಲ್ಯದಲ್ಲಿ ವಿಮಾನಗಿರಿಯಿಂದ ಮನೆಗೆ ಹಾರಿದಾಗ ಅದರ ಸಂಕೇತವಾಗಿ ಮೂಡಿದ ಎರಡು ಪಾದಗಳ ಗುರುತೂ ಇದೆ.

---

ಚೇತನರಾದ ಶ್ರೀಆನಂದತೀರ್ಥರ ಜನ್ಮಭೂಮಿ ಈ 'ಪಾಜಕ'; ಎಂದ ಮೇಲೆ ಹಿಮಾಲಯಾದಿಗಳಿಗಿಂತಲೂ ಪಾಜಕವು ಮಿಗಿಲು'' ಎಂಬುದಾಗಿ ಶ್ರೀಹೃಷೀಕೇಶತೀರ್ಥರು 'ಸಂಪ್ರದಾಯಪದ್ಧತಿ'ಯಲ್ಲಿ ಪಾಜಕಕ್ಷೇತ್ರವನ್ನು ವರ್ಣಿಸಿರುವರು (ಶ್ಲೋ. ೧, ೨):

ಈಶೇಂದ್ರಾದಿಸುರಾಣಾಮೀಶಃ ಶ್ರೀರಮಣಪ್ರಿಯಃ ।
ಯತ್ರ ಪ್ರಾದುರಭೂದ್ವಾಯುಃ ಕ್ಷೇತ್ರಂ ತತ್ ಪಾಜಕಂ ಶುಭಮ್ ॥
ಜಡಸ್ಯ ಗಂಗಾದ್ಯಭಿಧಸ್ಯ ಕೇವಲಂ ತೀರ್ಥಸ್ಯ ಮೂಲಂ ಹಿಮವನ್ನಗಾಧಿಪಃ ।
ಮತೌಖ್ಯ ತೀರ್ಥಸ್ಯ ಜಡೇತರಸ್ಯ ವೈ ಮೂಲಂ ಪವಿತ್ರಂ ತದತೀವ ಪಾಜಕಮ್ ॥

೧. ಶೂರತಾತಸುತಸ್ಯ ವೈಶ್ಯಾಪ್ರಭವೋಽಥ ಗೋಪಃ । – ಮ. ಭಾ.ತಾ.ನಿ. (೧೧/೨೨೮)

೨. ಶ್ರೀಭೂದುರ್ಗಾಖ್ಯಾಃ ಋಗಾದಿವೇದಾಭಿಮಾನಿನ್ಯೋ ದೇವ್ಯಃ ಸ್ವಾಭಿಮನ್ಯಮಾನವೇದಾನಾಮನ್ಯೈರನ್ಯಥಾ ವ್ಯಾಖ್ಯಾತತ್ವಾತ್ ಯಥಾವದ್ವ್ಯಾಖ್ಯಾನಾಯ ಮಧ್ಯಗೇಹಾಖ್ಯವಿಪ್ರಪತ್ನ್ಯಾಃ ಉದರೇ ಸ್ಥಿತ್ವಾ ಅಜನಯಂತೇತಿ ಭಾವಃ ।– ಶ್ರೀವಾದಿರಾಜಸ್ವಾಮಿಗಳ ಮ. ಭಾ.ತಾ.ನಿ. ಭಾವಪ್ರಕಾಶಿಕಾ (೨/೧೫೭)

೬. ಈ ಐದು ತೀರ್ಥಗಳ ಸ್ನಾನ, ಶ್ರೀದುರ್ಗಾದೇವಿಯ ಸಂದರ್ಶನ ಮತ್ತು ಈ ಮಧ್ವ-ಪಾದಗಳ ಉಪಾಸನೆ ಈ ಮೂರನ್ನು ಮಾಡಿದವನು ಕೃತಕೃತ್ಯನೇ ಸರಿ ಎಂಬ ಮಾತೂ ಸಂಪ್ರದಾಯಪದ್ಧತಿಯಲ್ಲಿ ಬಂದಿದೆ:

ಚತ್ವಾರಿ ತೀರ್ಥಾನಿ ವಿಧಾಯ ಪಾಜಕೇ ಪ್ರಾಬೋಧಿ ತನ್ಮೋಕ್ಷಚತುಷ್ಟಯಪ್ರದಮ್ ।
ರಾಮೇಣ ನೋ ಸಾರ್ಷ್ಟಿದಮಿತ್ಯಸೌ ಮರುತ್ತೀರ್ಥಂ ಚಕಾರೇತಿ ಮಮಾವಭಾಸತೇ ॥
ಅಸ್ಮೋಶ್ಚರಣಯೋರಂಕಯುಗ್ಮಮಶ್ಮನ್ಯಭೂತ್ ತದಾ ।
ಪಾಪಾಚಲೇಂದ್ರಕುಲಿಶಮಿತ್ಯದ್ಯಾಪಿ ಗೃಹಾಂತಿಕೇ ॥
ತೀರ್ಥಾನಾಂ ಪಂಚಕೇ ಸ್ನಾತ್ವಾ ಕೃತ್ವಾ ದುರ್ಗಾವಲೋಕನಮ್ ।
ಉಪಾಸ್ಯ ಚರಣೌ ವಾಯೋಃ ಕೃತಕೃತ್ಯೋ ಭವೇನ್ನರಃ ॥
ಭಕ್ತಿತಸ್ತ್ರಿತಯಂ ಕೃತ್ವಾ ಪ್ರಯಾಗಾದಿಸ್ಥಲತ್ರಯೇ ।
ಸತ್ಕರ್ಮಣಾಂ ಫಲಂ ಯತ್ಸ್ಯಾತ್ತತ್ಪ್ರಾಪ್ನೋತಿ ನರೋ ಧ್ರುವಮ್ ॥

-ಸಂಪ್ರದಾಯಪದ್ಧತಿ (೬, ೨೩, ೨೪)

೭. ಪಾಜಕದಿಂದ ವಿಮಾನಗಿರಿಗೆ ತೆರಳುವ ದಾರಿಯಲ್ಲಿ ಶ್ರೀಮಧ್ವಾಚಾರ್ಯರು ತಮ್ಮ ಬಾಲ್ಯದಲ್ಲಿ ತಮ್ಮನ್ನು ಕಚ್ಚಲೆಂದು ಬಂದ ಸರ್ಪರೂಪದ ಮಣಿಮಂತನನ್ನು ಸಂಹರಿಸಿದ ಸ್ಥಳವೂ ಇದೆ :

ಸ್ವಾಂಗುಷ್ಠಾಂಗುಲಿತುಂಡೇನ ವಾಸುದೇವಾಖ್ಯಪಕ್ಷಿರಾಟ್ ।
ಮಾರಯಾಮಾಸ ತಂ ಸರ್ಪಂ ತಲ್ಲಕ್ಷ್ಮಾದ್ಯಾಪಿ ದೃಶ್ಯತೇ ॥ -ಸಂಪ್ರದಾಯಪದ್ಧತಿ (೧೦)

**ತ್ರಿಶೂಲಧಾರಿಣೀ ದೈತ್ಯಗಜಕುಂಭವಿದಾರಿಣೀ ।**
**ಗಿರೀಂದ್ರಶಿಖರಾವಾಸಾ ದುರ್ಗಾ ಸ್ವರ್ಗಾಪವರ್ಗದಾ ॥ ೧೮ ॥**

ಅ: ತ್ರಿಶೂಲಧಾರಿಣೀ = ತ್ರಿಶೂಲವನ್ನು ಧರಿಸಿರುವವಳೂ; ದೈತ್ಯಗಜಕುಂಭವಿದಾ-ರಿಣೀ = ಮಹಿಷಾಸುರ ಎಂಬ ಆನೆಯ ಕುಂಭಸ್ಥಳವನ್ನು ಸೀಳಿ ಹಾಕಿದವಳೂ; ಗಿರೀಂದ್ರ-ಶಿಖರಾವಾಸಾ = ('ವಿಮಾನ'ವೆಂಬ ಹೆಸರಿನ) ಶ್ರೇಷ್ಠಪರ್ವತದಲ್ಲಿ ನೆಲೆಸಿರುವವಳೂ, (ಆದ) ದುರ್ಗಾ = ಶ್ರೀದುರ್ಗಾದೇವಿಯು; ಸ್ವರ್ಗಾಪವರ್ಗದಾ = ಸ್ವರ್ಗ ಮೋಕ್ಷಗಳನ್ನು ಅನುಗ್ರಹಿಸುವವಳಾಗಿರುವಳು.

ತ್ರಿಶೂಲ ಧರಿಸಿದ, ಮಹಿಷಾಸುರ ಎಂಬ ಆನೆಯ ಕುಂಭಸ್ಥಳವನ್ನು ಸೀಳಿದ, 'ವಿಮಾನ'ವೆಂಬ ಹೆಸರಿನ ಶ್ರೇಷ್ಠಪರ್ವತದಲ್ಲಿ ನೆಲೆಸಿರುವ ಶ್ರೀದುರ್ಗಾದೇವಿಯು ಸ್ವರ್ಗ ಮೋಕ್ಷಗಳನ್ನು ಅನುಗ್ರಹಿಸುವವಳಾಗಿರುವಳು.

ವಿ: ಸ್ವರ್ಗಾಪವರ್ಗದಾ: ನಾಲ್ಕು ಪುರುಷಾರ್ಥಗಳಲ್ಲಿ ಧರ್ಮ, ಅರ್ಥ ಮತ್ತು ಕಾಮಗಳಿಗೆ 'ತ್ರಿವರ್ಗ' ವೆಂದೂ ಮೋಕ್ಷಕ್ಕೆ 'ಅಪವರ್ಗ'ವೆಂದೂ ಹೆಸರು; ಭಕ್ತರ ಯೋಗ್ಯತೆಗೆ ಅನುಸಾರವಾಗಿ ಕೆಲವರಿಗೆ ಸ್ವರ್ಗವನ್ನೂ ಮತ್ತೆ ಕೆಲವರಿಗೆ ಮೋಕ್ಷವನ್ನೂ ಕೆಲವರಿಗೆ ಮೊದಲು ಸ್ವರ್ಗ ಮತ್ತು ಅನಂತರ ಮೋಕ್ಷವನ್ನೂ ಅನುಗ್ರಹಿಸುವರು ಎಂದು ಭಾವ. ಸ್ವಾತಂತ್ರ್ಯೇಣ ಮೋಕ್ಷದನು

ಶ್ರೀಹರಿಯೇ ಆದರೂ, ಅವರ ಅನುಗ್ರಹದಿಂದ ರಮಾದೇವಿಯೂ ಮೋಕ್ಷದಾತೃತ್ವವನ್ನು ಹೊಂದಿರುವರು ಎಂದರ್ಥ[೧].

ಪ್ರಲಯೇ ಜಲದುರ್ಗಾಽಸಿ ಸರ್ಗಾದೌ ಗಿರಿವಿಸ್ತೃತಿಃ ।
ಇದಾನೀಂ ಸ್ಥಲದುರ್ಗಾಽಸಿ ದುರ್ಗಾತ್ವಂ ಸದ್ಗುಣಾರ್ಣವೇ ॥೧೯॥

ಅ: ಸದ್ಗುಣಾರ್ಣವೇ = ಜ್ಞಾನಾದಿಸದ್ಗುಣಸಾಗರಳಾಗಿರುವ ಎಲೈ ದುರ್ಗಾ-ದೇವಿಯೇ ! **ತ್ವಂ** = ನೀನು; **ಪ್ರಲಯೇ** = ಪ್ರಲಯಕಾಲದಲ್ಲಿ (ಪ್ರಳಯಜಲರೂಪದಲ್ಲಿ); **ಜಲದುರ್ಗಾಽಸಿ** = ಜಲದುರ್ಗೆಯಾಗಿರುವಿ; **ಸರ್ಗಾದೌ** = ಸೃಷ್ಟಿಯ ಆರಂಭದಲ್ಲಿ; **ಗಿರಿವಿಸ್ತೃತಿಃ** = ವೇದದಲ್ಲಿ ವಿಸ್ತಾರ ಹೊಂದಿದವಳಾಗಿದ್ದಿ; **ಇದಾನೀಂ** = ಈಗ; **ಸ್ಥಲದುರ್ಗಾಽಸಿ** = ಈ ಸ್ಥಳದಲ್ಲಿದ್ದು ಸ್ಥಳದುರ್ಗೆಯಾಗಿರುವಿ; ಆದ್ದರಿಂದ ನಿನ್ನಲ್ಲಿ; **ದುರ್ಗಾತ್ವಂ**(ಉಪಪದ್ಯತೇ) - ದುರ್ಗಾಪದವಾಚ್ಯತ್ವವು (ಸದಾ) ಸಾರ್ಥಕವಾಗಿದೆ.(**ತ್ವಂ** = ನೀನು; **ದುರ್ಗಾ** = ದುರ್ಗೆಯೆನ್ನಿಸಿರುವಿ)

ಎಲೈ ಗುಣಸಮುದ್ರಳೆ ! ನೀನು ಪ್ರಲಯಕಾಲದಲ್ಲಿ ಜಲದುರ್ಗೆಯಾಗಿರುವಿ; ಸೃಷ್ಟಿಯ ಆರಂಭದಲ್ಲಿ ವೇದದಲ್ಲಿ ವಿಸ್ತಾರ ಹೊಂದಿದಿ; ಈಗ ಈ ಸ್ಥಳದಲ್ಲಿದ್ದು ಸ್ಥಳದುರ್ಗೆಯಾಗಿರುವಿ. ಆದ್ದರಿಂದ ನಿನ್ನಲ್ಲಿ ದುರ್ಗಾಪದವಾಚ್ಯತ್ವವು ಸಾರ್ಥಕ-ವಾಗಿದೆ.

ವಿ: ೧. ರಾಜರುಗಳು ರಚಿಸುವ ಜಲದುರ್ಗ, ಗಿರಿದುರ್ಗ ಮತ್ತು ಸ್ಥಳದುರ್ಗ ಎಂಬ ಹೆಸರುಗಳ ಮೂಲಕ 'ದುರ್ಗಾ' ದೇವಿಯ ಹೆಸರಿನ ಸಾರ್ಥಕ್ಯವನ್ನು ಇಲ್ಲಿ ವರ್ಣಿಸಲಾಗಿದೆ.

೨. ಗಿರಿವಿಸ್ತೃತಿಃ 'ಗಿರಿ ವಿಸ್ತೃತಿಃ ಯಸ್ಯಾಃ ಸಾ' ಎಂದೂ 'ಗಿರೌ ವಿಸ್ತೃತಿಃ ಯಸ್ಯಾಃ ಸಾ' ಎಂದೂ ಇದಕ್ಕೆ ವಿಗ್ರಹ; ಸೃಷ್ಟಿಯ ಆರಂಭಕಾಲದಲ್ಲಿ ಮಹಾಲಕ್ಷ್ಮಿಯು ದುರ್ಗಾರೂಪದಿಂದ ಶ್ರೀಹರಿಯನ್ನು ವೇದವಾಕ್ಯಗಳಿಂದ ಸ್ತುತಿಸುವರು ಎಂದು ಭಾಗವತಪುರಾಣದಲ್ಲಿದೆ. (ಭಾಗವತಪುರಾಣದ ದಶಮಸ್ಕಂಧದ ಆ ಭಾಗಕ್ಕೆ 'ಶ್ರುತಿಗೀತಾ' ಎಂದೇ ಹೆಸರು) ಆದ್ದರಿಂದ 'ಗಿರಿ ವಿಸ್ತೃತಿಃ ಯಸ್ಯಾಃ' ಎಂಬ ವಿಗ್ರಹವೂ, ಶಬ್ದಸಾಮ್ಯದಿಂದಾಗಿ ಎರಡನೇ ವಿಗ್ರಹವೂ ಉಚಿತವಾಗಿದೆ.

೩. ಸ್ಥಲದುರ್ಗಾ: ಬೆಟ್ಟವು ಚಿಕ್ಕದಾದ್ದರಿಂದಲೂ, ಪುಣ್ಯಕ್ಷೇತ್ರವಾಗಿರುವುದರಿಂದಲೂ ವಿಮಾನಗಿರಿ'ಯನ್ನು 'ಸ್ಥಲ' ಎಂದು ಕರೆಯಲಾಗಿದೆ[೨].

ದುರ್ಜ್ಞೇಯತ್ವಾದ್ದುಃಖದತ್ವಾದ್ದುಷ್ಪ್ರಾಪ್ಯತ್ವಾಚ್ಚ ದುರ್ಜನೈಃ ।
ಸತಾಮಭಯಭೂಮಿತ್ವಾದ್ದುರ್ಗಾ ತ್ವಂ ಹೃದ್ಗುಹಾಶ್ರಯಾತ್ ॥೨೦॥

---

೧. ಶ್ರಿಯಂ ವಸಾನಾ ಅಮೃತತ್ವಮಾಯನ್ । – ಶ್ರುತಿ
ವಿಶ್ವಸ್ಥಿತಿಪ್ರಳಯಸರ್ಗಮಹಾವಿಭೂತಿವೃತ್ತಿಪ್ರಕಾಶನಿಯಮಾವೃತಿಬಂಧಮೋಕ್ಷಾಃ ॥
ಯಸ್ಯಾ ಅಪಾಂಗಲವಮಾತ್ರತ ಊರ್ಜಿತಾ ಸಾ ಶ್ರೀಃ... -ದ್ವಾದಶಸ್ತೋತ್ರ

೨. ತತ್ರ ವರ್ತಮಾನಗಿರೇರಲ್ಪತ್ವಾದ್ವಾ ಪುಣ್ಯಕ್ಷೇತ್ರತ್ವಾದ್ವಾ ಸ್ಥಲತ್ವೋಕ್ತಿಃ । – ವ್ಯಾಖ್ಯಾನ

ಅ: ದುರ್ಜ್ಞೇಯತ್ವಾತ್ = ತಿಳಿಯಲು ಸುಲಭಳಲ್ಲವಾದ್ದರಿಂದಲೂ; ದುಃಖದತ್ವಾತ್ = ದುರ್ಜನರಿಗೆ ದುಃಖವನ್ನು ಕೊಡುವವಳಾದ್ದರಿಂದಲೂ; ದುರ್ಜನೈಃ ದುಷ್ಪ್ರಾಪ್ಯತ್ವಾತ್ ಚ = ದುಷ್ಟರಿಂದ ಯಾವರೀತಿಯಲ್ಲೂ ಪಡೆಯಲು ಅಸಾಧ್ಯಳಾದ್ದರಿಂದಲೂ; ಚ = ಮತ್ತು; ಸತಾಂ ಅಭಯಭೂಮಿತ್ವಾತ್ = ಸಜ್ಜನರಿಗೆ ಅಭಯಸ್ಥಾನವಾಗಿರುವುದರಿಂದಲೂ; ಹೃದ್ಗುಹಾಶ್ರಯಾತ್ = ನಿಯಾಮಕಳಾಗಿ ಸಕಲರ ಹೃದಯಗುಹೆಗಳಲ್ಲಿ ನೆಲೆಸಿರುವುದರಿಂದಲೂ; ತ್ವಂ = ನೀನು; ದುರ್ಗಾ = 'ದುರ್ಗಾ' ಎನ್ನಿಸಿರುವಿ.

> ನೀನು ಅರಿಯಲು ದುರ್ಲಭಳು; ದುರ್ಜನರಿಗೆ ದುಃಖ ಕೊಡುವವಳು; ದುಷ್ಟರಿಗೆ ಲಭಿಸದವಳು ಮತ್ತು ಸಜ್ಜನರಿಗೆ ಅಭಯದ ನೆಲೆಯಾಗಿರುವವಳು; ಸಕಲರ ಹೃದಯಗುಹೆಗಳಲ್ಲಿ ನೆಲೆಸಿರುವವಳು; ಅದಕ್ಕೆಂದು 'ದುರ್ಗೆ' ಎನ್ನಿಸಿರುವಿ.

ವಿ: ೧. ದುರ್ಗಾದೇವಿಯು ಸಾಕಲ್ಯೇನ ಬ್ರಹ್ಮಾದಿಗಳಿಗೂ [1] ಅಜ್ಞೇಯಳು; ತಮೋಭಿಮಾನಿನಿಯಾದ್ದರಿಂದ ದುರ್ಜನರಿಗೆ ದುಃಖಪ್ರದಳು; ದುರ್ಜನರಿಗೆ ಸರ್ವದಾ ಅಜ್ಞೇಯಳು[2], ಸಜ್ಜನರಿಗೆ ಶ್ವೇತದ್ವೀಪ, ಅನಂತಾಸನ ಮತ್ತು ವೈಕುಂಠವೆಂಬ ತ್ರಿಧಾಮರೂಪಳಾಗಿ ಅಭಯಸ್ಥಾನೀಯಳು[3]; ಸಕಲರಹೃದಯದಲ್ಲೂ ನಿಯಾಮಕಳಾಗಿ ನೆಲೆಸಿರುವಳು; ಹೀಗೆ ಅನೇಕ ಕಾರಣಗಳಿಂದ 'ದುರ್ಗಾ' ಎಂಬ ಹೆಸರು ಅವರಿಗೆ ತುಂಬಾ ಸಾರ್ಥಕವಾಗಿದೆ ಎಂದು ಭಾವ.

೨. ಈ ಶ್ಲೋಕವನ್ನು ಶ್ರೀವಿಜಯಧ್ವಜತೀರ್ಥರು ತಮ್ಮ ಶ್ರೀಮದ್ಭಾಗವತವ್ಯಾಖ್ಯಾನದಲ್ಲಿ ಉಲ್ಲೇಖಿಸಿರುವರು. ಶ್ರೀವಾದಿರಾಜಸ್ವಾಮಿಗಳಿಗಿಂತ ಒಂದು ಶತಮಾನಕ್ಕಿಂತ ಹೆಚ್ಚು ಹಿಂದಿನವರಾದ ಅವರು ಇದನ್ನು ಉಲ್ಲೇಖಿಸಿರುವುದರಿಂದ ಈ ಶ್ಲೋಕ ಮೂಲತಃ ಪ್ರಾಚೀನವಾಗಿದ್ದು ಶ್ರೀವಾದಿರಾಜರಿಂದ ಇಡಿಯಾಗಿ ಹಾಗೆಯೇ ಉಲ್ಲೇಖಿಸಲ್ಪಟ್ಟಿದೆ ಎಂದು ತಿಳಿಯಬೇಕು.

## ಎಲ್ಲೂರಿನ ವಿಶ್ವನಾಥ[4]

**ರಕ್ಷೋಗಣಕ್ಷಪಣದಕ್ಷಮಹಾತ್ರಿಶೂಲಂ**
**ತ್ರ್ಯಕ್ಷಂ ವಲಕ್ಷತನುಮುಲ್ಲಸದಕ್ಷಮಾಲಮ್।**

---

೧. ಬ್ರಹ್ಮಾದಯೋ ಬಹುತಿಥಂ ಯದಪಾಂಗಮೋಕ್ಷಕಾಮಾಃ। – ಭಾಗವತ (೧/೧೬/೩೩)

೨. ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ। – ಗೀತಾ (೭/೧೪)

೩. ಶ್ರೀರೇವ ಲೋಕರೂಪೇಣ ವಿಷ್ಣೋಸ್ತಿಷ್ಠತಿ ಸರ್ವದಾ।
ಅತೋ ಹಿ ವೈಷ್ಣವಾ ಲೋಕಾ ನಿತ್ಯಸ್ತೇ ಚೇತನಾ ಅಪಿ॥ –ಗೀತಾತಾತ್ಪರ್ಯ (೧೮/೬೩)
ತ್ರಿಧಾಮಧಾಮರೂಪೇಣ ಯಾ ಮುಕ್ತಿರಿತಿ ಕೀರ್ತ್ಯತೇ॥ –ಸರಸಭಾರತೀವಿಲಾಸ (೩/೧೩)

೪. ಎಲ್ಲೂರು ಕ್ಷೇತ್ರವು ಉಡುಪಿಯಿಂದ ಆಗ್ನೇಯಕ್ಕೆ, ಉಡುಪಿ-ಮಂಗಳೂರು ರಸ್ತೆಯಲ್ಲಿನ ಉಚ್ಚಿಲ ಎಂಬ ಊರಿನಿಂದ ಐದು ಕಿ.ಮೀ. ದೂರದಲ್ಲಿದೆ (ಉಡುಪಿಯಿಂದ ಸುಮಾರು ೨೫ ಕಿ.ಮೀ. ಗಳ ದೂರದಲ್ಲಿದೆ).

ರೂಕ್ಷಾಘಶಿಕ್ಷಣವಿಚಕ್ಷಣಶಕ್ತಿಯೂಥಂ
ದಕ್ಷಾಧ್ವರಕ್ಷಯದಮಾಶ್ರಯ ವಿಶ್ವನಾಥಮ್॥೨೧॥

ಅ: ರಕ್ಷೋಗಣಕ್ಷಪಣದಕ್ಷಮಹಾತ್ರಿಶೂಲಂ = ರಾಕ್ಷಸರ ಸಮುದಾಯವನ್ನು ನಾಶಮಾಡುವ ಕಾರ್ಯದಲ್ಲಿ ಸಮರ್ಥವಾದ ಮಹಾತ್ರಿಶೂಲವನ್ನು ಹೊಂದಿರುವ; ತ್ರ್ಯಕ್ಷಂ = ಮೂರು ಕಣ್ಣುಗಳುಳ್ಳ, ವಲಕ್ಷತನುಂ = ಧವಳಶರೀರನಾದ; ಉಲ್ಲಸದಕ್ಷಮಾಲಂ = ಹೊಳೆಯುವ ಜಪಮಾಲೆಯುಳ್ಳ; ರೂಕ್ಷಾಘಶಿಕ್ಷಣವಿಚಕ್ಷಣಶಕ್ತಿಯೂಥಂ = ಕ್ರೂರವಾದ ಪಾಪಗಳನ್ನು ನಿವಾರಿಸುವಲ್ಲಿ ಶಕ್ತವಾದ ಶಕ್ತಿಸಮೂಹವನ್ನು ಹೊಂದಿರುವ, [೧]ದಕ್ಷಾಧ್ವರಕ್ಷಯದಂ = ದಕ್ಷಪ್ರಜಾಪತಿಯ ಯಜ್ಞವನ್ನು ಧ್ವಂಸ ಮಾಡಿದಂತಹ(ದಕ್ಷಪ್ರಜಾಪತಿಯ ಯಜ್ಞದ ನಾಶವನ್ನು ತಡೆದಂತಹ); ವಿಶ್ವನಾಥಂ = ವಿಶ್ವೇಶ್ವರನನ್ನು; ಆಶ್ರಯ = ಸೇವಿಸು.

ಕೈಯಲ್ಲಿ ರಕ್ಕಸರ ಗುಂಪನ್ನು ಸದೆಬಡೆಯುವಲ್ಲಿ ಶಕ್ತವಾದ ಮಹಾತ್ರಿಶೂಲ, ಮೂರುಕಣ್ಣುಗಳು, ಧವಳಶರೀರ, ಹೊಳೆಯುವ ಜಪಮಾಲೆ, ಕ್ರೂರವಾದ ಪಾಪಗಳನ್ನು ಪರಿಹರಿಸಲು ಸಮರ್ಥವಾದ ಶಕ್ತಿಸಮೂಹ, ಇಂತಹ ದಕ್ಷಪ್ರಜಾಪತಿಯ ಯಜ್ಞವನ್ನು ಧ್ವಂಸ ಮಾಡಿದ ಈ 'ವಿಶ್ವನಾಥ'ನನ್ನು ಸೇವಿಸು.

ಅಂಗಾನುಷಂಗತಭುಜಂಗಮತುಂಗಭೋಗಂ
ಗಂಗಾತರಂಗಕೃತಮಂಗಲಮೌಲಿಭಾಗಮ್ ।
ಸಂಗೀತಲೋಲಯತಿಪುಂಗವಗೀತಗಾಥಂ
ತಂ ಗೌರ್ಯಪಾಂಗರಸಮಾಶ್ರಯ ವಿಶ್ವನಾಥಮ್ ॥೨೨॥

ಅ: ಅಂಗಾನುಷಂಗತಭುಜಂಗಮತುಂಗಭೋಗಂ = ಅವಯವಗಳಲ್ಲಿ ಹಾವುಗಳ ಉನ್ನತವಾದ ಶರೀರಗಳನ್ನು ಕಟ್ಟಿಕೊಂಡಿರುವ; ಗಂಗಾತರಂಗಕೃತಮಂಗಲಮೌಲಿ-ಭಾಗಮ್ = ಗಂಗಾತರಂಗಗಳಿಂದ ಪಾವನವಾದ[೨] ಶಿರಃಪ್ರದೇಶದಿಂದ ಕೂಡಿರುವ; ಸಂಗೀತಲೋಲಯತಿಪುಂಗವಗೀತಗಾಥಂ = ಸಂಗೀತರಸಿಕರಾದ ಯತಿಪುಂಗವರಿಂದ ಹಾಡಲ್ಪಡುವ ತ್ರಿಪುರಸಂಹಾರಾದಿ ಚರಿತ್ರೆಗಳನ್ನು ಹೊಂದಿರುವ; ಗೌರ್ಯಪಾಂಗರಸಂ = ಗೌರೀದೇವಿಯ ಕುಡಿನೋಟದಿಂದ ಆದರಪೂರ್ವಕ ದಿಟ್ಟಿಸಲ್ಪಡುವ; ತಂ = ಆ ; ವಿಶ್ವನಾಥಂ = ವಿಶ್ವನಾಥನನ್ನು ; ಆಶ್ರಯ = ಆಶ್ರಯಿಸು.

ಸರ್ಪ ಬಿಗಿದ ಅವಯವಗಳ, ಗಂಗಾತರಂಗಗಳಿಂದ ಪಾವನವಾದ ಶಿರಸ್ಸಿನ, ಸಂಗೀತರಸಿಕರಾದ ಯತಿಪುಂಗವರು ಸ್ತುತಿಸುವ ಪುಣ್ಯಚರಿತ್ರೆಯ, ಗೌರೀದೇವಿಯು ಕುಡಿನೋಟದಿಂದ ದಿಟ್ಟಿಸುವ, ಈ ವಿಶ್ವನಾಥನನ್ನು ಆಶ್ರಯಿಸು.

---

೧. ದಕ್ಷಾಧ್ವರಕ್ಷಯಂ ದ್ಯತಿ – ಇತಿ (ದೋ ಅವಖಂಡನೇ)

೨. ಯಚ್ಛೌಚನಿಃಸೃತಸರಿತ್ಪ್ರವರೋದಕೇನ
ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋಽಭೂತ್ ॥ -ಭಾಗವತ (೩/೨೮/೨೨)

ಇಂದ್ರಾದಿದೇವಗಣವಂದಿತಪಾದಪದ್ಮಂ
ಚಂದ್ರಾರ್ಧಚೂಡಮರವಿಂದದಲಾಯತಾಕ್ಷಮ್ ।
ಕಂದರ್ಪವೈರಿಣಮನಿಂದ್ಯಮಮಂದಬೋಧಂ
ತಂ ದೇವದೇವಮಿಮಮಾಶ್ರಯ ವಿಶ್ವನಾಥಮ್ ॥೨೩॥

ಅ : ಇಂದ್ರಾದಿದೇವಗಣವಂದಿತಪಾದಪದ್ಮಂ = ಇಂದ್ರಾದಿದೇವತೆಗಳ ಸಮೂಹದಿಂದ ವಂದಿತಪಾದಕಮಲನಾದ; ಚಂದ್ರಾರ್ಧಚೂಡಂ = ಅರ್ಧಚಂದ್ರನನ್ನು ಜಟೆಯಲ್ಲಿ ಧರಿಸಿರುವ; ಅರವಿಂದದಲಾಯತಾಕ್ಷಮ್ = ಕಮಲದಳಗಳಂತೆ ವಿಶಾಲವಾದ ಕಣ್ಣುಗಳುಳ್ಳ; ಕಂದರ್ಪವೈರಿಣಂ = ಮನ್ಮಥನ ಶತ್ರುವಾದ; ಅನಿಂದ್ಯಂ = ನಿಂದನೆಗೆ ಅನರ್ಹನಾದ; ಅಮಂದಬೋಧಂ = (ಯಥಾಯೋಗ್ಯವಾಗಿ) ಪೂರ್ಣಜ್ಞಾನನಾದ; ದೇವದೇವಂ = ಇಂದ್ರಾದಿ ದೇವತೆಗಳಿಗೆ ಸ್ವಾಮಿಯಾದ; ತಂ = ಅಂತಹ; ಇಮಂ = ಈ; ವಿಶ್ವನಾಥಂ = ವಿಶ್ವನಾಥನನ್ನು ; ಆಶ್ರಯ = ಆಶ್ರಯಿಸು.

ಇಂದ್ರಾದಿದೇವತಾವೃಂದವು ನಮಿಸುವ ಪಾದಕಮಲಗಳು, ಮೌಲಿಯಲ್ಲಿ ಅರ್ಧ ಚಂದ್ರ, ತಾವರೆದಳದಂತಹ ವಿಶಾಲವಾದ ನೇತ್ರಗಳು, ಇಂತಹ ಮನ್ಮಥನನ್ನು ಮಣಿಸುವ, ಅಪಾರಜ್ಞಾನದ, ದೂರಲಾಗದ, ದೇವದೇವನಾದ ವಿಶ್ವನಾಥನನ್ನು ಆಶ್ರಯಿಸು.

ವಂದಾರುನಾರದಸನಂದನಮುಖ್ಯಯೋಗಿ -
ವೃಂದೈಃ ಪ್ರವಂದ್ಯಚರಿತೈಃ ಪರಿತಶ್ಚ ಸೇವ್ಯಮ್ ।
ಇಂದಿಂದಿರೋಪಮಸಿತೇತರಕಂಠಕಾಂತಿಂ
ಸೌಂದರ್ಯಮೂರ್ತಿಮಮುಮಾಶ್ರಯ ವಿಶ್ವನಾಥಮ್ ॥೨೪॥

ಅ: ಪ್ರವಂದ್ಯಚರಿತೈಃ = ಬಹಳ ಸ್ತುತ್ಯಚರಿತ್ರರಾದ; ವಂದಾರುನಾರದಸನಂದನಮುಖ್ಯಯೋಗಿವೃಂದೈಃ = ಭಗವಂತನನ್ನು ಸದಾ ವಂದಿಸುವ ಸ್ವಭಾವದ ನಾರದ, ಸನಂದನ ಮೊದಲಾದ ಯೋಗಿಗಳ ಗುಂಪುಗಳಿಂದ; ಪರಿತಃ ಚ = ಸುತ್ತಲೂ, ಸೇವ್ಯಂ = ಸೇವಿಸಲ್ಪಡುವ; ಇಂದಿಂದಿರೋಪಮಸಿತೇತರಕಂಠಕಾಂತಿಂ = ಭ್ರಮರದಂತೆ ಕಪ್ಪಾದ ಕಂಠಕಾಂತಿಯುಳ್ಳ(ನೀಲಕಂಠನಾದ); ಸೌಂದರ್ಯಮೂರ್ತಿಂ = ಸುಂದರ ಶರೀರವುಳ್ಳ; ಅಮುಂ = ಈ; ವಿಶ್ವನಾಥಂ = ವಿಶ್ವನಾಥನನ್ನು; ಆಶ್ರಯ = ಆಶ್ರಯಿಸು.

ಸ್ತುತ್ಯಚರಿತ್ರರಾದ ನಾರದ ಸನಂದನ ಮೊದಲಾದ ಯೋಗಿವೃಂದವು ಸುತ್ತಲೂ ಸೇವಿಸುವ, ಭ್ರಮರದಂತೆ ಕಪ್ಪಾದ ಕಂಠಕಾಂತಿಯ ಸುಂದರಶರೀರದ ಈ ವಿಶ್ವನಾಥನನ್ನು ಆಶ್ರಯಿಸು.

ಛಂದಶ್ಚಯಸ್ತುತಚರಿತ್ರ ಪುರತ್ರಯಾರೇ
ಕುಂದಪ್ರಸೂನಕೃತಸೇವನತೃಪ್ತಚಿತ್ತ ।

ತ್ವಾಂ ದೀನಬಂಧುಮರುಣೇಂದುಲಸತ್ಕಪರ್ದಂ
ವಂದೇಽರಿಮರ್ದನ ಸುಹೃದ್ಧನ ವಿಶ್ವನಾಥ ॥ ೨೫ ॥

ಅ: ಛಂದಶ್ಚಯಸ್ತುತಚರಿತ್ರ = ಶ್ರೀರುದ್ರ, ನಮಕಚಮಕ ಮೊದಲಾದ ವೇದರಾಶಿಗಳಿಂದ ಸ್ತುತಿಸಲ್ಪಡುವ ಮಹಿಮೆಯುಳ್ಳ; ಪುರತ್ರಯಾರೇ = ತ್ರಿಪುರವೈರಿಯಾದ, ಕುಂದಪ್ರಸೂನಕೃತ-ಸೇವನತೃಪ್ತಚಿತ್ತ = ಕುಂದಪುಷ್ಪಗಳಿಂದ ಮಾಡಲ್ಪಡುವ ಪೂಜೆಗೆ ತೃಪ್ತಿಪಡುವ ಮನಸ್ಸುಳ್ಳ, ಅರಿಮರ್ದನ = ಶತ್ರುಸಂಹಾರಿಯಾದ; ಸುಹೃದ್ಧನ = ಭಕ್ತರಿಗೆ ನಿಧಿಯಾದ; (ಹೇ) ವಿಶ್ವನಾಥ = ಎಲೈ ವಿಶ್ವನಾಥನೇ, ದೀನಬಂಧುಂ = ಅನಾಥಬಂಧುವೂ; ಅರುಣೇಂದು-ಲಸತ್ಕಪರ್ದಂ = ನಸುಗೆಂಪುಬಣ್ಣದ ಚಂದ್ರನಿಂದಾಗಿ ಶೋಭಿಸುವ ಜಟೆಯುಳ್ಳವನೂ, (ಆದ), ತ್ವಾಂ = ನಿನ್ನನ್ನು, ವಂದೇ = ವಂದಿಸುವೆನು.

**ವೇದರಾಶಿಗಳು ಸ್ತುತಿಸುವ ಮಹಿಮೆ, ತ್ರಿಪುರಾಸುರರ ಮೇಲೆ ಜಯ, ಕುಂದಪುಷ್ಪಗಳ ಪೂಜೆಗೆ ತೃಪ್ತಿಪಡುವ ಮನಸ್ಸು, ಭಕ್ತರ ಪಾಲಿಗೆ ನಿಧಿ, ಅನಾಥರಿಗೆ ಬಂಧು, ನಸುಗೆಂಪುಬಣ್ಣದ ಚಂದ್ರನು ಶೋಭಿಸುವ ಜಟೆ, ಶತ್ರುಗಳನ್ನು ಮಣಿಸುವ, ಇಂತಹ ಎಲೈ ವಿಶ್ವನಾಥನೇ, ನಿನ್ನನ್ನು ವಂದಿಸುವೆನು.**

ವಿ: ೧. ಶ್ರೀರುದ್ರದೇವರು ತ್ರಿಶೂಲಪಾಣಿ, ಮುಕ್ಕಣ್ಣ, ಧವಲಕಾಯ, ಜಪನಿರತ, ಪಾಪನಾಶಕ, ದಕ್ಷಯಜ್ಞನಾಶಕರ[೧] ನಾಗಭೂಷಣ, ಗಂಗಾಧರ, ಯತಿಗಳಿಂದಲೂ ಸ್ತುತ್ಯ, ಗೌರೀಪ್ರಿಯ, ಇಂದ್ರಾದಿವಂದ್ಯ, ಚಂದ್ರಮೌಲಿ, ಕಮಲನೇತ್ರ, ಕಾಮಹರ, ಅಪಾರಜ್ಞಾನಿ, ನಾರದಾದಿಸುತ್ತ್ಯ, ನೀಲಕಂಠ, ಸುಂದರರೂಪ, ನಮಕಚಮಕಾದಿವೇದಪ್ರತಿಪಾದ್ಯ, ತ್ರಿಪುರಾರಿ, ಕಪರ್ದೀ, ಭಕ್ತಪ್ರಿಯ ಮೊದಲಾದ ಹಿರಿಮೆ ಹೊಂದಿದವರು ಎಂಬುದು ಈ ಶ್ಲೋಕಗಳ ಭಾವ.

೨. ರುದ್ರದೇವರ ಹಿರಿಮೆಯ ಅನೇಕ ಮುಖಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸುವ ಈ ಶ್ಲೋಕಗುಚ್ಛ ಒಂದು ಅಪೂರ್ವ ಶಿವಸ್ತುತಿಯಾಗಿದೆ; ಪಂಚಮುಖರಾದ ರುದ್ರದೇವರನ್ನು ಪಂಚಶ್ಲೋಕಗಳಿಂದ ಸ್ತುತಿಸಿರುವುದು ಸಹ ತುಂಬಾ ಔಚಿತ್ಯಪೂರ್ಣವಾಗಿದೆ.

೩. ಸೌಂದರ್ಯಮೂರ್ತಿಃ : ರುದ್ರದೇವರು ಒಟ್ಟು ೩೨ ಲಕ್ಷಣಗಳಲ್ಲಿ ೨೮ ಸಲ್ಲಕ್ಷಣಗಳನ್ನು ಹೊಂದಿರುವವರು[೨], ಆದ್ದರಿಂದ ಅವರನ್ನು 'ಸೌಂದರ್ಯಮೂರ್ತಿ'ಗಳು ಎಂದು ಕರೆದಿರುವುದೂ ಉಚಿತವಾಗಿದೆ[೩].

---

೧. ಶ್ರೀರುದ್ರದೇವರು ಶ್ರೀಬ್ರಹ್ಮದೇವರ ಆದೇಶದಂತೆ ಅನಂತರ ದಕ್ಷಯಜ್ಞವನ್ನು ಪೂರ್ಣವಾಗುವಂತೆ ಅನುಗ್ರಹಿಸಿದ ಮಹನೀಯರೂ ಆಗಿರುವ ಎಂಬ ಅರ್ಥವೂ ಸೂಚಿತ.

೨. ಅಷ್ಟಾವಿಂಶಲ್ಲಕ್ಷಣಾಸ್ತು ಗಿರೀಶಪದಯೋಗಿನಃ। -ಬೃಹದ್ಭಾಷ್ಯ

೩. ಶ್ರೀವಾದಿರಾಜರು ತೀರ್ಥಪ್ರಬಂಧದ ಇತರ ಕೆಲವು ಶ್ಲೋಕಗಳಲ್ಲೂ ಶ್ರೀರುದ್ರದೇವರನ್ನು ಸ್ತುತಿಸಿರುವರು; ಸರಸಭಾರತೀವಿಲಾಸದ ಶಿವಸ್ತೋತ್ರಪರವಾದ ಕೆಲವು ಶ್ಲೋಕಗಳು ಹೀಗಿವೆ:
**ಗಂಗಾಧರಂ ಜಟಾಜೂಟವಿನ್ಯಸ್ತೇಂದುಕಲೋಜ್ಜ್ವಲಮ್ ।**

೪. ಆಶ್ರಯ: ಇಲ್ಲಿ ಗ್ರಂಥದ ಮೊದಲ ಶ್ಲೋಕದಲ್ಲಿ ಬಂದಿರುವ 'ಮನಃ' ಎಂಬ ಪದವನ್ನು ಸೇರಿಸಿಕೊಂಡು 'ಎಲೈ ಮನಸ್ಸೇ ನೀನು ರುದ್ರದೇವರನ್ನು ಆಶ್ರಯಿಸು' ಎಂಬುದಾಗಿ ಅರ್ಥಮಾಡಿಕೊಳ್ಳಬೇಕು. ಮನೋನಿಯಾಮಕರಾದ ರುದ್ರದೇವರನ್ನು ಸ್ಮರಿಸಲು ಮನಸ್ಸಿಗೆ ಆದೇಶಿಸುವುದು ಉಚಿತವೂ ಆಗಿದೆ, ಇನ್ನೊಂದು ಅರ್ಥದಲ್ಲಿ ''ಎಲೈ ಸುಜೀವಿವೃಂದವೇ '' ಎಂದೂ ಅರ್ಥಮಾಡಿಕೊಳ್ಳಬಹುದು.

## ಎಲ್ಲೂರಿನ ನಂದಿಕೇಶ್ವರ

**ಸುಚಾರುಕರ್ಣಲಾಂಗೂಲಶೃಂಗಾಂಘ್ರ್ಯುದರದೃಙ್ಮುಖಮ್ ।**
**ಕಕುದ್ಮಂತಂ ವೃಷಂ ಶ್ವೇತಂ ನೌಮಿ ಶಂಕರವಾಹನಮ್[೧] ॥ ೨೬ ॥**

ಅ: ಸುಚಾರುಕರ್ಣಲಾಂಗೂಲಶೃಂಗಾಘ್ರ್ಯುದರದೃಙ್ಮುಖಮ್ = ತುಂಬಾ ಮನೋಹರವಾದ ಕಿವಿ, ಬಾಲ, ಕೋಡು, ಕಾಲು, ಉದರ, ಕಣ್ಣು ಮತ್ತು ಮುಖಗಳನ್ನುಳ್ಳ; **ಕಕುದ್ಮಂತಂ** = ಕಕುತ್ ಉಳ್ಳ; **ಶ್ವೇತಂ** = ಬೆಳ್ಳಗಿರುವ; **ಶಂಕರವಾಹನಂ** = ರುದ್ರದೇವರಿಗೆ ವಾಹನವಾಗಿರುವ, **ವೃಷಂ** = 'ನಂದೀಶ್ವರ'ನನ್ನು; **ನೌಮಿ** = ನಮಸ್ಕರಿಸುವೆನು.

ಅತಿರಮ್ಯವಾದ ಕಿವಿ, ಬಾಲ, ಕೋಡು, ಕಾಲು, ಉದರ, ಕಣ್ಣು ಹಾಗೂ ಮುಖಗಳ, ಹೆಗಲು ಹೊಂದಿದ, ಶಿವನಿಗೆ ವಾಹನವಾದ, ಧವಳದೇಹದ 'ನಂದೀಶ್ವರ'ನನ್ನು ವಂದಿಸುವೆನು.

---

ಪೀತಶ್ವೇತಾರುಣಹರಿಚ್ಛ್ಯಾಮಾನನಸರೋರುಹಮ್ ॥
ತ್ರಿನೇತ್ರಪಂಕ್ತ್ಯಾ ಲಸಿತಪಂಚವಕ್ತ್ರಂ ಶುಚಿಸ್ಮಿತಮ್ ।
ಊರ್ಧ್ವಪುಂಡ್ರಧರಂ ಚಕ್ರಶಂಖಾಂಕಿತಭುಜದ್ವಯಮ್ ॥
ಪದ್ಮಾಕ್ಷತುಲಸೀಮಾಲಾವಿದ್ಯೋತಿತಶಿರೋಧರಮ್ ।
ನೀಲಗ್ರೀವಂ ಲಸದ್ರತ್ನಭಾಸ್ವರಾಹೀಶಭೂಷಣಮ್ ॥
ಮೃಗಶೂಲವರಾಭೀತಿಹಸ್ತಂ ಸ್ಫಟಿಕಸನ್ನಿಭಮ್ ।
ಗೌರೀಮನೋಹರತನುಂ ಗೌರನಂದೀಶವಾಹನಮ್ ॥
ಸದಾಧ್ಯಾತೃಬುಧಾಭೀಷ್ಟಪ್ರದಾನೈಕಧುರಂಧರಮ್ ।
ಹರೇಃ ಪ್ರಿಯಂ ಧ್ಯಾನರತಂ ಸ್ಮರಾಮ್ಯಘಹರಂ ಹರಮ್ ॥
ಗಿರೀಂದ್ರವಾಸ ಗೌರೀಶ ಪುರನಾಶ ಸತಾಂ ವಶ ।
ಫಣೀಂದ್ರಭೂಷ ನಿರ್ದೋಷ ಮಮ ತೋಷಕರೋ ಭವ ॥
ಶೂರತ್ರಿಶೂಲಧರ ಮಾರಮದಾಪಹಾರ ವೀರಾಸನಸ್ಥ ವಿಧಿಪುತ್ರ ವಿಶಾಲನೇತ್ರ ।
ಧೀರ್ಮೇಽಸ್ತು ದೀನಶರಣೇ ದಿನನಾಥದೀಪ್ತೌ ಕ್ರೂರಾಸುರೋದರವಿದಾರಣನಾರಸಿಂಹೇ ॥
– ಸರಸಭಾರತೀವಿಲಾಸ (೨/೩೫ -೪೧)

ಧವಳಗಂಗೆಯ ಗಂಗಾಧರಮಹಾಲಿಂಗ ।
ಮಾಧವನ ತೋರಿಸೈ ಮುನಿಕುಲೋತ್ತುಂಗ ॥
ಮೊದಲಾದ ಅನೇಕ ಕನ್ನಡ ಪದಗಳಿಂದಲೂ ಶ್ರೀವಾದಿರಾಜರು ರುದ್ರದೇವರನ್ನು ಕೊಂಡಾಡಿರುವರು.

೧. ಮೃತ್ತಿಕಾವೃಷಭಪೂಜೆಗೆ(ಜ್ಯೇಷ್ಠಅಮಾವಾಸ್ಯಾ)ಮಂತ್ರವಾಗಿಯೂ ಇದು ಉಪಯುಕ್ತವಾಗಿದೆ.

ವಿ: ೧. ನಂದೀಶ್ವರನು ಶಿವನ ವಾಹನವೆಂದು ಮಾನ್ಯನಾಗಿರುವನು. ಈತನ ಶಾಪದಿಂದ ದಕ್ಷಪ್ರಜಾಪತಿಯು ಪ್ರಾರಬ್ಧವಶಾತ್ ವಿಪತ್ತಿಗೆ ಈಡಾದ ವಿವರವು ಭಾಗವತಪುರಾಣದಲ್ಲೂ ರಾವಣನು ಕ್ಲೇಶಪಟ್ಟ ವಿವರವು ರಾಮಾಯಣದಲ್ಲೂ ಬಂದಿದೆ. ಆದ್ದರಿಂದ ನಂದೀಶ್ವರನ ಅನುಗ್ರಹಕ್ಕಾಗಿ ತಾರತಮ್ಯಕ್ರಮದಲ್ಲಿ ಆತನ ಸ್ತೋತ್ರವೂ ವಿಹಿತವಾಗಿದೆ. ವಿಷ್ಣುದೇವಸ್ಥಾನಗಳಲ್ಲಿ ವಿಷ್ಣುವಾಹನವಾದ ಗರುಡನ ಸಂಕೇತವಾಗಿ ಗರುಡಗಂಬವೂ ಶಿವನ ದೇವಸ್ಥಾನಗಳಲ್ಲಿ ಶಿವವಾಹನವಾದ ನಂದೀಶ್ವರನ ಸಂಕೇತವಾಗಿ ವೃಷಭವೂ ಇರುವುದು ಆಸ್ತಿಕರಿಗೆಲ್ಲ ತಿಳಿದಿರುವ ವಿಚಾರ.

೨. ಶ್ರೀವಾದಿರಾಜರು ಶಿವಲಿಂಗದ ದರ್ಶನವನ್ನು ಮಾಡುವಾಗ, ಕ್ಷಣಕಾಲ ಮುಂದಿದ್ದ ಎತ್ತರವಾದ ನಂದಿಯು ಅಡ್ಡವಾಗಲು ಅವರು ಅದನ್ನು ಕುರಿತು ಈ ಶ್ಲೋಕ ರಚಿಸಲು ಅದು ತಕ್ಷಣ ಬಾಗಿ ಕುಳಿತು ಶಿವನ ದರ್ಶನಕ್ಕೆ ಅವಕಾಶ ಮಾಡಿಕೊಟ್ಟಿತೆಂದೂ, ಅದು ಇಂದಿಗೂ ಹಾಗೆಯೇ ಇದೆಯೆಂದೂ ಐತಿಹ್ಯವಿದೆ.

೩. ಕುಂದಪ್ರಸೂನಕೃತಸೇವನತೃಪ್ತಚಿತ್ತ: ಕುಂದವರ್ಮನೆಂಬ ನಾಮಾಂತರವನ್ನು ಹೊಂದಿದ್ದ ಭೂರಿಕೀರ್ತಿ ಎಂಬ ಶೂದ್ರರಾಜನ ಕಾಲದಲ್ಲಿ ಇಲ್ಲಿಯ ವಿಶ್ವನಾಥ ದೇವಾಲಯವು ನಿರ್ಮಿತವಾಯಿತೆಂದು ಐತಿಹ್ಯವಿದೆ. ಅವನ ಪ್ರಾರ್ಥನೆಯಂತೆ ಹುಲಿ - ಹಸುಗಳ ವೈರವಿಲ್ಲದಂತಹ ಒಂದು ಅಪೂರ್ವಸ್ಥಳದಲ್ಲಿ ಉದ್ಭವಿಸಿದ ಶಿವಲಿಂಗ ಎಂಬುದು ಇದರ ಹಿರಿಮೆ. ಶ್ರೀವಾದಿರಾಜರು ಈ ಕ್ಷೇತ್ರಕ್ಕೆ ಆಗಮಿಸಿದಾಗ ಗರ್ಭಗುಡಿಯ ಬಾಗಿಲನ್ನು ಕೆಲವು ಕುಹಕಿಗಳು ಮುಚ್ಚಿ ದರ್ಶನಕ್ಕೆ ಅಡ್ಡಿ ಮಾಡಿದರೆಂದೂ, ಆಗ ವಾದಿರಾಜರು ಶಿವಸ್ತುತಿಯಾಗಿ ಈ ಶ್ಲೋಕಗಳನ್ನು ರಚಿಸಲು ಗರ್ಭಗುಡಿಯ ಬಾಗಿಲನ್ನು ತೆರೆದು ಶಿವನು ದರ್ಶನ ಕೊಟ್ಟನೆಂದು ಹೇಳುವರು. ಕುಂದಪ್ರಸೂನ ಕೃತಸೇವನತೃಪ್ತಚಿತ್ತ - ಎಂಬ ಪದವು ಈ ಐತಿಹ್ಯವನ್ನು ಧ್ವನಿಸುವಂತಿದೆ.

೪. ಇಲ್ಲಿ ಶ್ರೀವಾದಿರಾಜರು ಸ್ಥಾಪಿಸಿರುವ ಶ್ರೀಲಕ್ಷ್ಮೀನರಸಿಂಹ ಸಾಲಿಗ್ರಾಮವೊಂದು ಸಹ ಉಂಟು.

೫. ಈ ಶ್ಲೋಕಗಳನ್ನು ಉತ್ಸವ ಸಮಯದಲ್ಲಿ ಪಠಿಸುವ ಸಂಪ್ರದಾಯ ಅಲ್ಲಿ ಈಗಲೂ ಇದೆ.

## ಮಧ್ಯವಾಟಮಠ

ಭವಘರ್ಮಭವಾರ್ತಿಘ್ನಃ[೧] ಸ ಮಠಃ ಸೇವ್ಯತಾಂ ಸತಾ ।
ಕೃಷ್ಣದ್ವೈಪಾಯನಘನೋ ಯತ್ರಾಗಾದ್ವಾಯುವರ್ತ್ಮನಾ ॥ ೨೭ ॥

---

೧. ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್ ।
ವಕ್ಷ್ಯಾಮಿ ಶಾಂತಯೇ ತಸ್ಯ ಕೃಷ್ಣಾಮೃತಮಹಾರ್ಣವಮ್ ॥ – ಕೃಷ್ಣಾಮೃತಮಹಾರ್ಣವ

ಅ: ಕೃಷ್ಣದ್ವೈಪಾಯನಘನಃ[1] = ಕೃಷ್ಣದ್ವೈಪಾಯನರೆಂಬ ಮೇಘವು; ಯತ್ರ = ಯಾವ ಮಧ್ಯವಾಟಮಠವನ್ನು ಕುರಿತು; ವಾಯುವರ್ತ್ಮನಾ = ಶ್ರೀಮನ್ಮಧ್ವಾಚಾರ್ಯರೆಂಬ ವಾಯು-ವಿನ ಮೂಲಕ; ಆಗಾತ್= ಆಗಮಿಸಿತೋ; ಭವಘರ್ಮಭವಾರ್ತಿಘ್ನಃ = ಸಂಸಾರತಾಪದಿಂದ ಹುಟ್ಟುವ ಕ್ಲೇಶವನ್ನು ಪರಿಹರಿಸುವ; ಸಃ ಮಠಃ = ಅಂತಹ [2]ಮಧ್ಯವಾಟಮಠವು; ಸತಾ = ಸತ್ಪುರುಷನಿಂದ; ಸೇವ್ಯತಾಮ್ = ಸೇವಿಸಲ್ಪಡಲಿ.

ಶ್ರೀಮನ್ಮಧ್ವಾಚಾರ್ಯರೆಂಬ ವಾಯುವಿನ ಮೂಲಕ ಆಗಮಿಸಿದ, ಸಂಸಾರ ತಾಪವನ್ನು ನೀಗಿಸುವ, ಶ್ರೀವೇದವ್ಯಾಸರೆಂಬ ಮೇಘ ನೆಲೆಸಿರುವ ಈ ಮಧ್ಯವಾಟ-ಮಠವನ್ನು ಸಜ್ಜನರು ಸೇವಿಸಬೇಕು.

ವಿ: ೧. ಬಿಸಿಲಿನ ಬೇಗೆಯಿಂದ ನೊಂದವನಿಗೆ ಮೇಘದ ಆಶ್ರಯವು ನೆಮ್ಮದಿ ನೀಡುತ್ತದೆ. ಅಂತಹ ಮೋಡವು ನಮ್ಮ ಬಳಿ ಬರಲು ವಾಯುವು ಅತ್ಯವಶ್ಯ. ಸಂಸಾರದಲ್ಲಿ ನೊಂದವರಿಗೆ (ಮಧ್ಯವಾಟಮಠದಲ್ಲಿರುವ) ಶ್ರೀವೇದವ್ಯಾಸದೇವರು(ವ್ಯಾಸಮುಷ್ಟಿ) ನೆಮ್ಮದಿಯ ನೆಲೆಯಾಗಿ-ರುವರು; ಆ ವ್ಯಾಸಮುಷ್ಟಿಯನ್ನು ಅಲ್ಲಿಗೆ ತಂದು ಸ್ಥಾಪಿಸಿದವರು ಶ್ರೀಮಧ್ವಾಚಾರ್ಯರು; ಹೀಗೆ ಶ್ರೀಮಧ್ವಾಚಾರ್ಯರು ತಂದಿರಿಸಿದ ವ್ಯಾಸಮುಷ್ಟಿಯಿಂದಾಗಿ [3]ಶ್ರೀಮಧ್ಯವಾಟಮಠವು ಸುಜೀವಿಗಳಿಂದ ಅವಶ್ಯ ಸೇವ್ಯವಾಗಿದೆ ಎಂದು ಭಾವ (ರೂಪಕಾಲಂಕಾರ)

೨. ಶ್ರೀಮಧ್ವಾಚಾರ್ಯರು ಎರಡನೆಯ ಬಾರಿ ಉತ್ತರ ಬದರಿಗೆ ತೆರಳಿದ್ದಾಗ, ಅಲ್ಲಿ ಸಾಕ್ಷಾತ್ ವೇದವ್ಯಾಸರು ಅವರಿಗೆ ತಮ್ಮ ನಿತ್ಯಸನ್ನಿಧಾನ ಯುಕ್ತವಾದ(ಎಂಟು) ವ್ಯಾಸಮುಷ್ಟಿಗಳನ್ನು ಅನುಗ್ರಹಿಸಿದ ವಿವರವು [4]ಸುಮಧ್ವವಿಜಯದಲ್ಲಿದೆ. ಅವುಗಳಲ್ಲಿ ಒಂದನ್ನು ಶ್ರೀಮದಾಚಾರ್ಯರು

---

೧. ಶಮಯನ್ ಭವಸಂತಾಪಂ ರಮಯನ್ ಸಾಧುಚಾತಕಾನ್ ।
ಕೃಷ್ಣಮೇಘಃ ಕೃಪಾದೃಷ್ಟಿವೃಷ್ಟ್ಯಾ ಪುಷ್ಣಾತು ಮಾಮಪಿ ॥

- ಎಂಬುದಾಗಿ ಶ್ರೀವ್ಯಾಸರಾಜರು ತಮ್ಮ ತಾತ್ಪರ್ಯಚಂದ್ರಿಕೆಯಲ್ಲಿ ಶ್ರೀಕೃಷ್ಣನನ್ನು ಮೇಘ ಎಂದು ಕರೆದಿರುವುದನ್ನು ಸಹ ಇಲ್ಲಿ ಗಮನಿಸಬಹುದು.

೨. ಮಧ್ಯವಾಟಮಠ: 'ಬಂಟವಾಳ' ದಿಂದ ೧೮ ಕಿ. ಮೀ. ದೂರದಲ್ಲಿ 'ಮದ್ದ' (ಮಧ್ವ) ಎಂಬ ಸ್ಥಳವಿದ್ದು, ಆದರಿಂದ ೩ಕಿ.ಮೀ. ಉತ್ತರದಲ್ಲಿ ಈ ಮಧ್ಯವಾಟ ಮಠವಿದೆ. ಈ 'ಮದ್ದ'ವು ಶ್ರೀಮದಾಚಾರ್ಯರು ತಮ್ಮ ಪ್ರಯಾಣ ಕಾಲದಲ್ಲಿ ಒಮ್ಮೆ ತಂಗಿದ್ದ ಸ್ಥಳ ಎಂದು ಪ್ರತೀತಿ. 'ಮದ್ದ' ದಲ್ಲಿ ಒಂದು ಪ್ರಾಚೀನ ಶಿಲಾಶಾಸನವೂ, ಅಲ್ಲಿಂದ ೩ ಕಿ. ಮೀ. ದೂರದಲ್ಲಿನ ಕಾರಂಜ ಎಂಬಲ್ಲಿ ಶಿವಾಲಯವೂ, ಮಾರ್ಗಮಧ್ಯದಲ್ಲಿ ಬೆಟ್ಟದಲ್ಲಿ ಪಾರ್ವತೀಮಂದಿರವೂ ಇವೆ. 'ಮದ್ದ'ದಲ್ಲಿ ಮಧ್ವನವಮಿಯಂದು ವಿಶೇಷ ಉತ್ಸವವೂ ನಡೆಯುತ್ತದೆ.

೩. ಈ ಮಧ್ಯವಾಟವು ಮಂಗಳೂರಿನಿಂದ ಚಾರ್ಮಾಡಿಗೆ ಹೋಗುವ ದಾರಿಯಲ್ಲಿ ಕಾವಳಕಟ್ಟೆ ಎಂಬ ಊರಿಗೆ ಮೂರು ಕಿ.ಮೀ. ದೂರದಲ್ಲಿದೆ, ಅಲ್ಲಿ ಇಂದು ಗದಾತೀರ್ಥ ಮತ್ತು ಗೌತಮಕುಂಡ ಎಂಬ ಎರಡು ತೀರ್ಥಗಳೂ, ಶ್ರೀಮದಾಚಾರ್ಯರು ತಂಗುತ್ತಿದ್ದರೆನ್ನಲಾದ ಒಂದು ಮಂಟಪವೂ ಇವೆ.

೪. ಪ್ರಾಪ ಸ ನಾರಾಯಣತಃ ಶುದ್ಧಶಿಲಾತ್ಮಪ್ರತಿಮಾಃ ।
ಯಾಸು ಸ ಪದ್ಮಾಸಹಿತೋ ದೋಷ್ಯಹಿತಃ ಸನ್ನಿಹಿತಃ ॥ – ಸುಮಧ್ವವಿಜಯ(೧೦/೨೪)
ತೀರ್ಥಂ ಸ್ವಪಾರ್ಶ್ವಭೂಮಿಂ ಚ ಮೋಕ್ತುಂ ನೇಚ್ಛತಿ ಸನ್ಮತೌ ।

ಮಧ್ಯವಾಟಮಠದಲ್ಲಿ ಸ್ಥಾಪಿಸಿದರು ಮತ್ತು ಅವರು ಕೆಲವು ವರ್ಷಗಳ ಕಾಲ ತಾವೇ ಉಡುಪಿ ಮತ್ತು ಸುಬ್ರಹ್ಮಣ್ಯಗಳಲ್ಲಿ ಪ್ರತಿನಿತ್ಯದ ದೇವಪೂಜೆಯನ್ನು ಮಾಡುತ್ತಿದ್ದಾಗ, ಮಾರ್ಗಮಧ್ಯದಲ್ಲಿ ಈ ಮಧ್ಯವಾಟಮಠದಲ್ಲಿನ ವ್ಯಾಸಮುಷ್ಟಿಯನ್ನು ಪೂಜಿಸುತ್ತಿದ್ದರೆಂದು ಐತಿಹ್ಯ ಉಂಟು; ಪ್ರಕೃತ ಈ ವ್ಯಾಸಮುಷ್ಟಿಯು ಸೋದೆ ಮಠದಲ್ಲಿದೆ.

## ಮಧ್ಯವಾಟದಲ್ಲಿನ ಶ್ರೀವೇದವ್ಯಾಸರ ಸ್ತೋತ್ರ

ಸ್ನೇಹಾರ್ದ್ರಮಧ್ವಹೃದಯಾಖ್ಯದಶಾನುಷಕ್ತಂ
ಮೋಹಾಖ್ಯಸಂತಮಸಕೃಂತನತೀವ್ರಶಕ್ತಿಮ್ ।
ಶ್ರೀಮಧ್ಯವಾಟಮಠಪೌರಟಭಾಜನಸ್ಥಂ
ವ್ಯಾಸಪ್ರದೀಪಮಿಮಮಾದರತೋ ಭಜಧ್ವಮ್ ॥ ೨೮ ॥

ಅ: ಸ್ನೇಹಾರ್ದ್ರಮಧ್ವಹೃದಯಾಖ್ಯದಶಾನುಷಕ್ತಂ = ಭಕ್ತಿರಸದಿಂದ ತೊಯ್ದಿರುವ ಶ್ರೀಮಧ್ವಾಚಾರ್ಯರ ಹೃದಯವೆಂಬ ಬತ್ತಿಯಲ್ಲಿ ಹತ್ತಿಕೊಂಡಿರುವ; ಮೋಹಾಖ್ಯ-ಸಂತಮಸಕೃಂತನತೀವ್ರಶಕ್ತಿಂ = ಅಜ್ಞಾನವೆಂಬ ನಿಬಿಡವಾದ ಕತ್ತಲೆಯನ್ನು ನಾಶಪಡಿಸುವಲ್ಲಿ ತೀವ್ರಸಾಮರ್ಥ್ಯದ; ಶ್ರೀಮಧ್ಯವಾಟಮಠಪೌರಟಭಾಜನಸ್ಥಂ = ಶ್ರೀಮಧ್ಯವಾಟ- ಮಠವೆಂಬ ಚಿನ್ನದ ಹಣತೆಯಲ್ಲಿನ; ಇಮಂ ವ್ಯಾಸಪ್ರದೀಪಂ[೧] = ಈ ವೇದವ್ಯಾಸಮೂರ್ತಿ ಎಂಬ ಉತ್ಕೃಷ್ಟ ದೀಪವನ್ನು ; ಆದರತಃ = ಆದರದಿಂದ; ಭಜಧ್ವಂ = ಸೇವಿಸಿರಿ. (ರೂಪಕಾಲಂಕಾರ)

ಭಕ್ತಿರಸ(ತೈಲ)ದಿಂದ ತೊಯ್ದ ಶ್ರೀಮಧ್ವಾಚಾರ್ಯರ ಹೃದಯವೆಂಬ ಬತ್ತಿಯಲ್ಲಿ ಹತ್ತಿರುವ, ಅಜ್ಞಾನಾಂಧಕಾರವನ್ನು ನಾಶಪಡಿಸುವಲ್ಲಿ ಅಪಾರ ಸಾಮರ್ಥ್ಯವುಳ್ಳ, ಶ್ರೀಮಧ್ಯವಾಟಮಠವೆಂಬ ಚಿನ್ನದ ಹಣತೆಯಲ್ಲಿರುವ ಈ ವೇದವ್ಯಾಸಮೂರ್ತಿ (ವ್ಯಾಸಮುಷ್ಟಿ) ಎಂಬ ಉತ್ಕೃಷ್ಟ ದೀಪವನ್ನು ಆದರದಿಂದ ಸೇವಿಸಿರಿ.

ವಿ: ೧. ಶ್ರೀಮಧ್ಯವಾಟಮಠವೇ ಚಿನ್ನದ ದೀಪದ ಪಾತ್ರೆ; ಶ್ರೀಹರಿಯಲ್ಲಿ ಸದಾ ಭಕ್ತಿರಸವನ್ನು ಹೊಂದಿರುವ ಶ್ರೀಮಧ್ವಾಚಾರ್ಯರ ಹೃದಯವೇ ಬತ್ತಿ; ಶ್ರೀವೇದವ್ಯಾಸಮೂರ್ತಿ (ವ್ಯಾಸಮುಷ್ಟಿ)ಯೇ ಪ್ರಜ್ವಲಿಸಿ ಉರಿಯುತ್ತಿರುವ ಉತ್ಕೃಷ್ಟವಾದ ದೀಪ; ನಮ್ಮ ಹೃದಯವನ್ನು ತುಂಬಿರುವ ಅಜ್ಞಾನವೇ ನಿಬಿಡವಾದ ಅಂಧಕಾರ; ದೀಪದಿಂದ ಕತ್ತಲೆಯು ನಾಶವಾಗುವಂತೆ, ಶ್ರೀವೇದವ್ಯಾಸರ ಅನುಗ್ರಹದಿಂದ ನಮ್ಮ ಹೃದಯವನ್ನು ಕವಿದಿರುವ ಅಜ್ಞಾನದ ಕತ್ತಲೆಯು ಸಂಪೂರ್ಣವಾಗಿ ನಾಶವಾಗುತ್ತದೆ. ತತ್ತ್ವಜ್ಞಾನದ ಬೆಳಕು ತುಂಬುತ್ತದೆ ಎಂದು ಭಾವ.

---

ತ್ವತ್ಸ್ನಾನನಾಂಬುನಿ ಗಂಗಾ ಸ್ಯಾಚ್ಛಿಲಾಸ್ವಾಸ್ವಹಮಿತ್ಯದಾತ್ ॥ – ಸು.ವಿ. ಭಾವಪ್ರಕಾಶಿಕಾ
– ವಿವರಗಳಿಗೆ ನಮ್ಮ ಪ್ರಕಾಶನದ ಸುಮಧ್ವವಿಜಯದ ಅನುವಾದವನ್ನು ನೋಡಿರಿ.

೧. 'ವಿಷ್ಣುರಧ್ಯಾತ್ಮದೀಪಃ' - ಎಂಬ ಭಾಗವತದ ಮಾತು(೧೦/೩/೨೪) ಇಲ್ಲಿ ಸ್ಮರಣೀಯ.

೨. ಸ್ನೇಹಾರ್ದ್ರಮಧ್ವಹೃದಯಾಖ್ಯದಶಾನುಷಕ್ತಂ: ಇಲ್ಲಿ ಸ್ನೇಹವೆಂದರೆ ತೈಲವೆಂದೂ, ಭಕ್ತಿ ಎಂದೂ ಅರ್ಥ[೧] (ಶ್ಲೇಷಾಲಂಕಾರ); ಶ್ರೀಮಧ್ವಾಚಾರ್ಯರು ಭಗವಂತನಲ್ಲಿ ಸದಾ [೨]ಅಚ್ಛಿನ್ನಭಕ್ತರಾದದ್ದರಿಂದ ಇವರ ಮೂಲಕ ದೊರೆಯುವ ಶ್ರೀವೇದವ್ಯಾಸರ ಅನುಗ್ರಹದ ಬೆಳಕು ಶಾಶ್ವತ ಎಂದು ಭಾವ. ದೀಪವು ಉರಿಯಲು ಬತ್ತಿಯು ಅವಶ್ಯವಾಗಿರುವಂತೆ ಶ್ರೀವ್ಯಾಸಾನುಗ್ರಹಕ್ಕೆ ಶ್ರೀಮಧ್ವಾನುಗ್ರಹವು ಅತ್ಯವಶ್ಯ. ಗುರುಗಳ ಮೂಲಕವೇ ಭಗವಂತನು ಅನುಗ್ರಹಿಸುವನು[೩] ಎಂಬ ಭಾವವೂ ಇಲ್ಲಿ ಸೂಚಿತವಾಗಿದೆ.

೩. ದೀಪ ಉರಿಯಲು ಬತ್ತಿಯು ಅಗತ್ಯವಿರುವಂತೆ, ಶ್ರೀವೇದವ್ಯಾಸರೆಂಬ ದೀಪವು ಬೆಳಗಲು ಮಧ್ವಾನುಗ್ರಹವೆಂಬ ಬತ್ತಿಯು ಅತ್ಯಗತ್ಯವೆಂಬ ಪ್ರಮೇಯವೂ ಇಲ್ಲಿ ಸೂಚಿತ : 'ಮುಕುಂದಭಕ್ತ್ಯೈ ಗುರುಭಕ್ತಿಜಾಯೈ' (ಸುಮಧ್ವವಿಜಯ ೧/೩).

**ವೇದವ್ಯಾಸ ಗುಣಾವಾಸ ವಿದ್ಯಾಧೀಶ ಸತಾಂ ವಶ ।**
**ಮಾಂ ನಿರಾಶಂ ಗತಕ್ಲೇಶಂ ಕುರ್ವನಾಶಂ ಹರೇಽನಿಶಮ್ ॥ ೨೯ ॥**

**ಅ: ಗುಣಾವಾಸ** = (ಆನಂದಾದಿ) ಗುಣಗಳಿಗೆ ನೆಲೆಯಾದ; **ವಿದ್ಯಾಧೀಶ** = ವಿದ್ಯೆಗಳಿಗೆ ಮುಖ್ಯಸ್ವಾಮಿಯಾದ; **ಸತಾಂ ವಶ** = ಸಜ್ಜನರಿಗೆ ವಶನಾದ; (ಹೇ) **ವೇದವ್ಯಾಸ ಹರೇ** = ಶ್ರೀವೇದವ್ಯಾಸರೂಪದ ಶ್ರೀಹರಿಯೇ; **ಮಾಂ** = ನನ್ನನ್ನು; **ಅನಿಶಂ** = ನಿತ್ಯವೂ; **ನಿರಾಶಂ** = ವೈರಾಗ್ಯಶಾಲಿಯನ್ನಾಗಿಯೂ; **ಗತಕ್ಲೇಶಂ** = ಕ್ಲೇಶಗಳಿಂದ ರಹಿತನನ್ನಾಗಿಯೂ; **ಅನಾಶಂ** = ನಾಶವಿಲ್ಲದವನನ್ನಾಗಿಯೂ; **ಕುರು** = ಮಾಡು. (ಅಂತ್ಯಾನುಪ್ರಾಸಾಲಂಕಾರ)

ಗುಣನಿಧಿಯಾದ, ವಿದ್ಯಾಧಿಪತಿಯಾದ, ಸಜ್ಜನರಿಗೆ ಒಲಿಯುವ, ಶ್ರೀವೇದವ್ಯಾಸ-ರೂಪದ ಶ್ರೀಹರಿಯೇ ! ನನ್ನನ್ನು ಸದಾ ವೈರಾಗ್ಯಶಾಲಿಯನ್ನಾಗಿ, ತಾಪರಹಿತನನ್ನಾಗಿ, ನಾಶರಹಿತನನ್ನಾಗಿ, ಮಾಡು.

ವಿ : ೧. ಹರೇ = ಶ್ರೀವೇದವ್ಯಾಸರೂಪವು ಸಾಕ್ಷಾದ್ರೂಪವೇ ಹೊರತು, ಕೆಲವು ಭ್ರಾಂತರು ತಿಳಿದಿರುವಂತೆ ಯಾವುದೋ ಒಬ್ಬ ಸಾಮಾನ್ಯ ಋಷಿಯಲ್ಲ ಎಂಬ ಪ್ರಮೇಯವು ಇಲ್ಲಿಯ 'ಹರೇ' ಎಂಬ ಇಲ್ಲಿಯ ಮಾತಿನಿಂದ ತಿಳಿಯುತ್ತದೆ.

---

೧. ಸ್ನೇಹಸ್ತೈಲಾದಿಕೇ ರಸೇ - 'ವಿಶ್ವ'ಕೋಶಃ
ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ॥
ಸ್ನೇಹೋ ಭಕ್ತಿರಿತಿ ಪ್ರೋಕ್ತಃ... -ಮಹಾಭಾರತತಾತ್ಪರ್ಯನಿರ್ಣಯ (೧/೯೩)
೨. 'ಏವಂ ಪ್ರಲಯಕಾಲೇಽಪಿ ಪ್ರತಿಭಾತಪರಾವರಃ ।
ಮುಖ್ಯವಾಯುರ್ನಿತ್ಯಸಮಃ.. -ಅನುವ್ಯಾಖ್ಯಾನ
ಶುದ್ಧೇ ಭಾಗವತೇ ಧರ್ಮೇ ನಿರತೋ ಯದ್ವೃಕೋದರಃ । -ಮ.ಭಾ.ತಾ.ನಿ.(೧೮/೪)
೩. ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂ ತ್ವಿತಿ । -ಮ.ಭಾ.ತಾ.ನಿ. (೨೬/೩೨)
ಅನೇನ ಗುರುಸನ್ನಿಹಿತ ಏವ ಕೃಷ್ಣೋ ಅಜ್ಞಾನಂ ನಿರಸ್ಯತೀತಿ ಸೂಚ್ಯತೇ । -ವ್ಯಾಖ್ಯಾನ
'ಮುಕುಂದಭಕ್ತ್ಯೈ ಗುರುಭಕ್ತಿಜಾಯೈ' - ಸುಮಧ್ವವಿಜಯ (೧/೩)

೨. ಕಪಿಲ, ದತ್ತಾತ್ರೇಯಾದಿ ರೂಪಗಳಂತೆ ಶ್ರೀವೇದವ್ಯಾಸರೂಪವು[೧] ಜ್ಞಾನಕಾರ್ಯದ ಮೂಲಕ ಜಗತ್ತನ್ನು ಸಲಹಿದ ವಿಶಿಷ್ಟರೂಪ[೨].

[೩]ಚಿಂತಾಮಣಿ ನರಸಿಂಹ

ಭೂನ್ಯಸ್ತವಾಮಾಂಕಗವಾಮಪಾಣಿಮ್
ಉತ್ಕ್ಷಿಪ್ತದಕ್ಷೋರುಗತಾನ್ಯಹಸ್ತಮ್ ।
ಚಕ್ರಾಯುಧಂ ವೇತ್ರವತೀತಟಸ್ಥಂ
ಚಿಂತಾಮಣಿಂ ಶ್ರೀನರಸಿಂಹಮೀಡೇ॥೩೦॥

ಅ: ಭೂನ್ಯಸ್ತವಾಮಾಂಕಗವಾಮಪಾಣಿಂ = ಭೂಮಿಯ ಮೇಲಿರಿಸಿರುವ ಎಡ ತೊಡೆಯಲ್ಲಿ ಎಡಗೈಯನ್ನಿರಿಸಿರುವ; ಉತ್ಕ್ಷಿಪ್ತದಕ್ಷೋರುಗತಾನ್ಯಹಸ್ತಂ = ಮೇಲಕ್ಕೆತ್ತಿರುವ ಬಲತೊಡೆಯಲ್ಲಿ ಮತ್ತೊಂದು (ಬಲ) ಹಸ್ತವನ್ನಿರಿಸಿಕೊಂಡಿರುವ, ಚಕ್ರಾಯುಧಂ = ಚಕ್ರವನ್ನೇ ಆಯುಧವನ್ನಾಗಿ ಉಳ್ಳ; [೪]ವೇತ್ರವತೀತಟಸ್ಥಂ = ವೇತ್ರವತೀ ಎಂಬ ನದಿಯ ತೀರದಲ್ಲಿರುವ; ಚಿಂತಾಮಣಿಂ = ಚಿಂತಾಮಣಿ ಎಂಬ; ಶ್ರೀನರಸಿಂಹಂ = ಶ್ರೀನರಸಿಂಹದೇವರನ್ನು; ಈಡೇ = ಸ್ತುತಿಸುವೆನು.

ಭೂಮಿಯ ಮೇಲಿರಿಸಿರುವ ಎಡತೊಡೆಯಮೇಲೆ ಎಡಗೈ, ಮೇಲೆತ್ತಿರುವ ಬಲತೊಡೆಯ ಮೇಲೆ ಬಲಗೈ, ಕೈಯಲ್ಲಿ ಆಯುಧವಾದ ಚಕ್ರ; ಇಂತಹ 'ವೇತ್ರವತೀ' ತೀರದ ಚಿಂತಾಮಣಿ ಶ್ರೀನರಸಿಂಹನನ್ನು ಸ್ತುತಿಸುವೆನು.

ಉದ್ಗತ್ಯ ಪಾತಾಲತಲಾತ್ ಕರಸ್ಥ-
ಚಕ್ರೇಣ ಚಕ್ರಂ ಖಲಯೋಗಿನೀನಾಮ್ ।
ನಿಹತ್ಯ ಗೌರೀವರಕಾಮದೋಽಭೂ-
ದುನ್ನಮ್ರಕರ್ಣೋ ನರಸಿಂಹ ಏಷಃ ॥೩೧॥

ಅ: ಉನ್ನಮ್ರಕರ್ಣಃ = ನಿಮಿರಿದ ಕಿವಿಗಳುಳ್ಳ; ಏಷಃ ನರಸಿಂಹಃ = ಈ ನರಸಿಂಹನು; ಪಾತಾಲತಲಾತ್ = ಪಾತಾಳ ಪ್ರದೇಶದಿಂದ; ಉದ್ಗತ್ಯ = ಮೇಲೇರಿ ಬಂದು; ಕರಸ್ಥಚಕ್ರೇಣ =

---

೧. ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಂ।
ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ॥ – ಮ.ಭಾ.ತಾ.ನಿ. (೨/೫೬)

೨. ಮುನೀನಾಮಪ್ಯಹಂ ವ್ಯಾಸಃ – ಭಗವದ್ಗೀತಾ(೧೦/೩೭)
ದತ್ತವ್ಯಾಸಾದಿರೂಪೇಷು ಜ್ಞಾನಕಾರ್ಯಸ್ತಥಾ ಪ್ರಭುಃ। – ಮ.ಭಾ.ತಾ.ನಿ. (೨/೨೫)

೩. ದಕ್ಷಿಣಕನ್ನಡಜಿಲ್ಲೆಯ ಉಪ್ಪಿನಂಗಡಿ ಎಂಬ ಊರಿನಿಂದ ಸುಮಾರು ಹತ್ತು ಕಿ.ಮೀ. ದೂರದಲ್ಲಿರುವ ಕಡೇಶಾಲ್ಯ(ಕಡೇ ಶಿವಾಲಯ) ಎಂಬಲ್ಲಿ ಈ 'ಚಿಂತಾಮಣಿ' ಕ್ಷೇತ್ರವಿದೆ. ದೇವಾಲಯದ ಬಲಗಡೆ ಶ್ರೀವಾದಿರಾಜಪ್ರತಿಷ್ಠಿತವಾದ ಮುಖ್ಯಪ್ರಾಣದೇವರೂ, ಎಡಗಡೆ ಶ್ರೀಭೂತರಾಜರೂ ಇರುವರು.

೪. 'ವೇತ್ರವತೀ' ಎಂಬುದು 'ನೇತ್ರಾವತೀ' ನದಿಯ ನಾಮಾಂತರ.

ಕೈಯ್ಯಲ್ಲಿನ ಸುದರ್ಶನಚಕ್ರದಿಂದ; ಖಲಯೋಗಿನೀನಾಂ = ದುಷ್ಟರಾದ ಯೋಗಿನೀ ಎಂಬ ಪಿಶಾಚಿಗಳ; ಚಕ್ರಂ = ಸಮೂಹವನ್ನು; ನಿಹತ್ಯ = ಸಂಹರಿಸಿ; ಗೌರೀವರಕಾಮದಃ = ಗೌರೀಪತಿಯಾದ ಶಿವನಿಗೆ ಅಭೀಷ್ಟಪ್ರದನಾಗಿ; ಅಭೂತ್ = ಆದನು.

ನಿಮಿರಿದ ಕಿವಿಗಳ ಈ ನರಸಿಂಹನು ಪಾತಾಳ ಪ್ರದೇಶದಿಂದ ಮೇಲೇರಿ ಬಂದು ಕೈಯ್ಯಲ್ಲಿನ ಸುದರ್ಶನಚಕ್ರದಿಂದ ದುಷ್ಟರಾದ ಯೋಗಿನೀ ಎಂಬ ಪಿಶಾಚಿಗಳ ಸಮೂಹವನ್ನು ಸಂಹರಿಸಿ ಗೌರೀಪತಿಯಾದ ಶಿವನಿಗೆ ಅಭೀಷ್ಟಪ್ರದನಾದನು.

ವಿ:೧. ಒಮ್ಮೆ ಸಿಂಹಾನನೆ ಮೊದಲಾದ ಅರವತ್ತನಾಲ್ಕುಸಾವಿರ 'ಯೋಗಿನೀ' ನಾಮಕ ಪಿಶಾಚಿಗಳು ಶ್ರೀನರಸಿಂಹದತ್ತವರಬಲದಿಂದ ಕೂಡಿ ರುದ್ರದೇವರ ರಕ್ತವನ್ನು ಪಾನ ಮಾಡಲೆಂದು ನುಗ್ಗಿ ಬರಲು, ಅವರು ಒಂದು ಕುರಿಯ ರೂಪವನ್ನು ಧರಿಸಿ ಕುರಿಗಳ ಹಿಂಡಿನಲ್ಲಿ ಅಡಗಿಕೊಂಡು ಶ್ರೀಹರಿಯನ್ನು ಪ್ರಾರ್ಥಿಸಿಕೊಂಡರು; ಆಗ ಪಾತಾಳದಿಂದ ಪ್ರಾದುರ್ಭವಿಸಿ ಬಂದ ಶ್ರೀನರಸಿಂಹದೇವರು ಮೇಷರೂಪದ ರುದ್ರದೇವರನ್ನೇ ವಾಹನವನ್ನಾಗಿ ಮಾಡಿಕೊಂಡು ತನ್ನ ಚಕ್ರದಿಂದ ದುಷ್ಟ ಯೋಗಿನಿಯರನ್ನೆಲ್ಲ ಸಂಹರಿಸಿ ರುದ್ರದೇವರನ್ನು ರಕ್ಷಿಸಿ ಅನುಗ್ರಹಿಸಿದನು ಎಂಬ ಪೌರಾಣಿಕ ಹಿನ್ನೆಲೆಯು ಈ ಕ್ಷೇತ್ರಕ್ಕೆ ಉಂಟು.

೨. 'ಯೋಗಿನೀಗ್ರಸ್ತಗಿರಿಶತ್ರಾತಾ', 'ಮೇಷರೂಪಶಂಕರವಾಹನಃ', 'ಮೇಷರೂಪ-ಶಿವತ್ರಾತಾ','ದುಷ್ಟಶಕ್ತಿಸಹಸ್ರಭುಕ್' ಮೊದಲಾದ ವಾಸುದೇವ ಸಹಸ್ರನಾಮ (ಪದ್ಮಪುರಾ-ಣಾಂತರ್ಗತ ಉ.ಖಂ.ಅ.೭೧)ದ ಮಾತುಗಳು ಈ ಕಥೆಗೆ ಪೋಷಕವಾಗಿವೆ[1].

೩. 'ಕನಕಬಾಹು'ವಾಗಿದ್ದ ಮಂಗಳೂರಿನ ವೀರಬಾಹುವೆಂಬ ರಾಜನು ಇಲ್ಲಿ ದೇವಾಲಯವನ್ನು ನಿರ್ಮಿಸಿ ಸೇವಿಸಿದ್ದರ ಫಲವಾಗಿ ಅವನಿಗೆ ಪುನಃ ತೋಳುಗಳು ಬೆಳೆದು 'ಸುಬಾಹು'ವೆಂದು ಪ್ರಸಿದ್ಧನಾದನು ಎಂಬುದಾಗಿಯೂ ಐತಿಹ್ಯವಿದೆ (ಚಾಂಚಲ್ಯಂ ಪೃಷ್ಠದೇಶೇ (೧/೧೨) ಎಂಬುದರ ವಿವರಣೆಯನ್ನು ನೋಡಿ.)

## ನೇತ್ರಾವತೀ (ನದೀ)

**ವರಾಹನಯನಾನಂದಧಾರಾ ನೇತ್ರಾವತೀಸರಿತ್ ।**
**ಶುಷ್ಕಾಂ ತದ್ಭಕ್ತಿಲತಿಕಾಂ ಪುಷ್ಣಾತಿ ಕಥಮನ್ಯಥಾ ॥ ೩೨ ॥**

---

೧. ಚಿಂತಾಮಣಿನರಸಿಂಹಃ ಶಿವಂ ಗ್ರಸಿತುಮಾಗತಾಂ ಯೋಗಿನೀಂ ನಿಹತ್ಯ ಶಿವಂ ರರಕ್ಷೇತಿ ಪೌರಾಣಿಕೀ ಕಥಾ । – ವ್ಯಾಖ್ಯಾನ

ಪುನರಸೃಗಾಸಕ್ತಚಿತ್ತತಯಾ ಸ್ವಸ್ಯೈವ ಭಕ್ಷಣಾಯೋದ್ಯುಕ್ತನೃಹರಿದತ್ತಸತ್ವಯೋಗಿನೀಭಯೇನ ಮೇಷೇಷು ಮೇಷೀಭೂತಮಾತ್ಮಾನಂ ಚ ಗ್ರಸಿತುಕಾಮಾಂ ತಾಂ ನಾಶಯಿತುಂ ಚಿಂತಾಮಣಿ-ನೃಸಿಂಹೇನ ಮೇಷರೂಪಂ ಸ್ವಂ ವಾಹನೀಕೃತ್ಯ ಕೃತಸ್ವಾತ್ಮರಕ್ಷಣಸ್ಯ ಯೋಗಿನೀಹನನಾಖ್ಯ-ಮಹಾಶೌರ್ಯಸ್ಯ ಚ ಸಾಕ್ಷಾಚ್ಛಿವೇನೈವ ದೃಷ್ಟತ್ವಾತ್ – ವ್ಯಾಖ್ಯಾನ (೨/೪೫)

ಅ: [1]ನೇತ್ರಾವತೀಸರಿತ್ = ನೇತ್ರಾವತೀ ನದಿಯು; ವರಾಹನಯನಾನಂದಧಾರಾ = ವರಾಹದೇವರ ಆನಂದಾಶ್ರುಪ್ರವಾಹವೇ ಆಗಿದೆ; **ಅನ್ಯಥಾ** = ಇಲ್ಲವಾದಲ್ಲಿ; **ಶುಷ್ಕಾಂ** = ಒಣಗಿಹೋದಂತಹ; ತದ್ಭಕ್ತಿಲತಿಕಾಂ = ಆ ವರಾಹ ದೇವರಲ್ಲಿನ ಭಕ್ತಿ ಎಂಬ ಬಳ್ಳಿಯನ್ನು; **ಕಥಂ ಪುಷ್ಣಾತಿ** = ಹೇಗೆ ತಾನೇ ಇದು ಪೋಷಿಸುತ್ತಿತ್ತು?(ಅರ್ಥಾಪತ್ತಿ ಅಲಂಕಾರ)

ನೇತ್ರಾವತೀನದಿಯು ಶ್ರೀವರಾಹದೇವರ ಆನಂದಾಶ್ರುಪ್ರವಾಹವೇ ಸರಿ; ಇಲ್ಲವಾದಲ್ಲಿ ಒಣಗಿಹೋದಂತಹ ಹರಿಭಕ್ತಿಯೆಂಬ ಬಳ್ಳಿಯನ್ನು ಹೇಗೆ ತಾನೇ ಬೆಳೆಸುತ್ತಿತ್ತು?

ವಿ: ೧. ನೇತ್ರಾವತೀ ನದಿಯು ವರಾಹ ಪರ್ವತದ ಕಣ್ಣಿನಂತಿರುವ ಭಾಗದಲ್ಲಿ ಹುಟ್ಟುವುದರಿಂದ ನೇತ್ರಾವತೀ ಎನ್ನಿಸಿದೆ, ಇದನ್ನು ಕಲಿಯುಗದಲ್ಲಿ ತಮ್ಮ ಸ್ನಾನಪಾನರೂಪ ಸೇವನೆಯಿಂದ ಶ್ರೀಹರಿಭಕ್ತಿಯನ್ನು ಹೆಚ್ಚಿಸುವ ನದಿಗಳಲ್ಲಿ ಒಂದು ಎಂಬುದಾಗಿ ಭಾಗವತಪುರಾಣವು ಕೊಂಡಾಡಿದೆ[2].

೨. ವರಾಹದೇವರ ಕಣ್ಣಿನಿಂದ ಹುಟ್ಟಿ ಬಂದ ನದಿ ಎಂದ ಮೇಲೆ ನೇತ್ರಾವತಿಯು ಅವನ ಕಣ್ಣೀರಿನ ಪ್ರವಾಹ ಎಂದಾಯಿತು, ಅದು ವರಾಹ ದೇವರ ಆನಂದಾಶ್ರುವೋ, ದುಃಖಾಶ್ರುವೋ ಎಂಬ ಪ್ರಶ್ನೆಗೆ ವರಾಹದೇವರು ಆನಂದಪೂರ್ಣನಾದ ಶ್ರೀಹರಿಯಾದ್ದರಿಂದ ಆತನಿಗೆ ದುಃಖದ ಪ್ರಸಕ್ತಿಯೇ ಇಲ್ಲ, ಆದ್ದರಿಂದ ಇದು ಆನಂದಾಶ್ರುವೇ ಸರಿ ಎಂಬುದು ಜ್ಞಾನಿಗಳಿಗೆಲ್ಲ ವೇದ್ಯವಾದ ವಿಚಾರ. ಶ್ರೀವಾದಿರಾಜರು ಇದು ಭಗವಂತನ ಆನಂದಾಶ್ರುವೇ ಹೊರತು ದುಃಖಾಶ್ರುವಲ್ಲವೆಂಬುದನ್ನು ಅಪೂರ್ವಯುಕ್ತಿಯಿಂದಲೂ ಇಲ್ಲಿ ಸಮರ್ಥಿಸಿರುವರು.

೩. ನೇತ್ರಾವತೀ ನದಿಯ ನೀರಿನ ಸೇವನೆಯಿಂದ ಭಕ್ತಿಯು ಹೆಚ್ಚುವುದು ಎಂದು ಭಾಗವತ ಪುರಾಣದಿಂದ ಸಿದ್ಧವಾಗಿರುವುದರಿಂದ, ನೇತ್ರಾವತಿಯು ಭಗವಂತನ ಆನಂದಾಶ್ರುವೆಂದೇ ಖಚಿತವಾಗುತ್ತದೆ.

೪. ಆನಂದಾಶ್ರುವು ತಂಪಾಗಿಯೂ, ದುಃಖಾಶ್ರುವು ಬೆಚ್ಚಗೂ ಇರುತ್ತದೆ ಎಂಬುದು ಲೋಕಸಿದ್ಧವಾದ ವಿಚಾರ, ಲತೆಯು ಬಿಸಿನೀರಿಗೆ ಬಾಡುತ್ತದೆ, ತಣ್ಣೀರಿಗೆ ಬೆಳೆಯುತ್ತದೆ. ಇದರಲ್ಲಿ

---

೧. ಸುಮಾರು ೬೩ ಕಿ. ಮೀ. ಉದ್ದವಿರುವ ನೇತ್ರಾವತಿಯು ದಕ್ಷಿಣಕನ್ನಡ ಜಿಲ್ಲೆಯ ಅತ್ಯಂತ ದೊಡ್ಡನದಿ; ವರಾಹಪರ್ವತವೆಂದು ಹೆಸರಾದ ಕುದುರೆಮುಖದಿಂದ ಹುಟ್ಟಿ ಈ ನದಿಯು ಮಂಗಳೂರಿನಿಂದ ಹತ್ತು ಕಿ. ಮೀ. ದೂರವಿರುವ ಕೊಡಿಯಾಲದ ಬಳಿ ಪಶ್ಚಿಮ(ಅರಬ್ಬೀ) ಸಮುದ್ರವನ್ನು ಸೇರುತ್ತದೆ.

೨. ತಾಮ್ರಪರ್ಣೀ ನದೀ ಯತ್ರ ಕೃತಮಾಲಾ ಪಯಸ್ವಿನೀ ।
ಕಾವೇರೀ ಚ ಮಹಾಪುಣ್ಯಾ ಪ್ರತೀಚೀ ಚ ಮಹಾನದೀ ॥
ಯೇ ಪಿಬಂತಿ ಜಲಂ ತಾಸಾಂ ಮನುಜಾ ಮನುಜೇಶ್ವರ ।
ಪ್ರಾಯೋ ಭಕ್ತಾ ಭವಿಷ್ಯಂತಿ ವಾಸುದೇವೇऽಮಲಾಶಯಾಃ ॥ –(೧೧/೫/೪೧,೪೨)
ಮಹಾನದೀ - ನೇತ್ರಾವತೀ – ಸುಮಧ್ವವಿಜಯ ಭಾವಪ್ರಕಾಶಿಕಾ (೪/೧೯)
ಪ್ರತೀಚೀ ಮಹಾನದೀನಾಮ್ನಾ ನೇತ್ರಾವತೀವರಾಹಕ್ಷೇತ್ರಾತ್ ಸಹ್ಯಗಿರಿಂ ಭಿತ್ವಾ ಪಶ್ಚಿಮಸಮುದ್ರಂ ಸ್ಯಂದಮಾನಾ ॥ – ಶ್ರೀವಿಜಯಧ್ವಜತೀರ್ಥರು (ಭಾಗವತಟೀಕಾ)

ಮುಂದವರ ಭಕ್ತಿಲತೆಯು ಬೆಳೆಯುವುದು ಶಾಸ್ತ್ರಸಿದ್ಧಪ್ರಮೇಯವಾದ್ದರಿಂದ ಇದು ತಂಪಾದ ಆನಂದಾಶ್ರುವೇ ಸರಿ ಎಂದು ನಿರ್ಣಯವಾಗುತ್ತದೆ ಎಂದು ಭಾವ.

೫. ಹೀಗೆ ಭಗವಂತನ ಆನಂದಾದಿ ಅನಂತಗುಣಪೂರ್ಣತ್ವ ಮತ್ತು ನೇತ್ರಾವತೀ ನದಿ ನೀರಿನ ಹರಿಭಕ್ತಿಪೋಷಕತ್ವಗಳನ್ನು ಅಪೂರ್ವ ರೀತಿಯಲ್ಲಿ ಈ ಶ್ಲೋಕವು ನಿರೂಪಿಸುತ್ತದೆ. ಎಂದೂ ಬತ್ತದೆ ಹರಿಯುವ ಈ ನದಿಯು ಪರಮಾತ್ಮನ ಸದಾನಂದತ್ವಕ್ಕೂ ದ್ಯೋತಕ ಎಂಬ ಧ್ವನಿಯೂ ಇಲ್ಲಿದೆ.

**ಕೋಲಲೋಲಕೃಪಾಶೀಲಲೋಚನಾಂಬುಜಚುಂಬಿನಿ ।**
**ಮಜ್ಜನ್ ನೇತ್ರಾವತೀತೋಯೇ ತದ್ದಯೇಕ್ಷಾಸ್ಪದಂ ನ ಕಃ ॥ ೩೩ ॥**

ಅ: ಕೋಲಲೋಲಕೃಪಾಶೀಲಲೋಚನಾಂಬುಜಚುಂಬಿನಿ[೧] = ವರಾಹದೇವರ ಚಂಚಲವೂ, ಕೃಪಾಶೀಲವೂ ಆದ ಕಣ್ಣುಗಳೆಂಬ ತಾವರೆಗಳನ್ನು ಮುತ್ತಿಡುತ್ತಿರುವ; ನೇತ್ರಾವತೀತೋಯೇ = ನೇತ್ರಾವತೀನದಿಯ ಜಲದಲ್ಲಿ; ಮಜ್ಜನ್ = ಮೀಯುವ; ಕಃ = ಯಾವನು ತಾನೇ, ತದ್ದಯೇಕ್ಷಾಸ್ಪದಂ = ಆ ಶ್ರೀಹರಿಯ ಕೃಪಾದೃಷ್ಟಿಗೆ ಪಾತ್ರನಾಗುವವನಾಗಿ ನ (ಭವೇತ್) = ಆಗಲಾರನು? (ವೃತ್ತ್ಯನುಪ್ರಾಸಾಲಂಕಾರ)

ವರಾಹದೇವರ ಚಂಚಲವಾದ ಕರುಣೆ ತುಂಬಿದ ಕಮಲದಂತಹ ನೇತ್ರಗಳನ್ನು ಮುತ್ತಿಡುತ್ತಿರುವ ಈ ನೇತ್ರಾವತೀನದಿಯ ಜಲದಲ್ಲಿ ಮೀಯುವ ಯಾವನು ತಾನೇ, ಆ ಶ್ರೀಹರಿಯ ಕೃಪಾದೃಷ್ಟಿಗೆ ಪಾತ್ರನಾಗಲಾರ?

ವಿ: ೧. ನೇತ್ರಾವತೀನದಿಯು ಶ್ರೀವರಾಹದೇವರ 'ನೇತ್ರದಿಂದುದ್ಭವಿಸಿದ ನದಿಯಾದ್ದರಿಂದ ಅದಕ್ಕೆ ಸದಾ ಅವರ ಕಣ್ಣಿನ ಸ್ಪರ್ಶವಿದೆ, ಎಂದ ಮೇಲೆ ಆ ನದಿಯಲ್ಲಿ ಸ್ನಾನ ಮಾಡುವವನು ಅವರ ಕಣ್ಣಿಗೆ ಬಿದ್ದೇ ಬೀಳುವನು ಎಂದೂ, ಅದು ಅವರ ಆನಂದಾಶ್ರುವಾದ್ದರಿಂದ ಕೃಪಾವಲೋಕನಕ್ಕೆ ಪಾತ್ರನಾಗುವನು ಎಂದೂ ಭಾವ.

೨. ನೇತ್ರಾವತೀ ಸ್ನಾನದಿಂದ ಹರಿಕೃಪೆಯು ಲಭಿಸುತ್ತದೆ ಎಂಬುದು ಇಲ್ಲಿಯ ಮುಖ್ಯ ಪ್ರಮೇಯ.

## ನೇತ್ರಾವತೀ - ಕುಮಾರಧಾರಾ ಸಂಗಮ[೨]

**ಕುಮಾರಧಾರಾಸರಿತಾ ಸಮೇತಾ**
**ನೇತ್ರಾವತೀ ಭಾತಿ ತರಂಗಿಣೀಯಮ್ ।**

---

೧. 'ಅಂಬರಗಂಗಾಚುಂಬಿತಪಾದಃ'(ಕಂದುಕಸ್ತುತಿ) ಎಂಬ ಶ್ರೀಮದಾಚಾರ್ಯರ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ನೇತ್ರಾವತೀಸ್ನಾನದಿಂದ ಶ್ರೀಹರಿಕೃಪೆಯು ಲಭಿಸುವಂತೆ, ವಿಷ್ಣುಪಾದೋದ್ಭವೆಯಾದ ಗಂಗೆಯ ಸ್ನಾನದಿಂದ ಪಾದದರ್ಶನವು ಲಭಿಸುವುದು ಎಂದೂ ಭಾವಿಸಬಹುದು.

೨. ದಕ್ಷಿಣಕನ್ನಡಜಿಲ್ಲೆಯ ಉಪ್ಪಿನಂಗಡಿಯ ಬಳಿ ನೇತ್ರಾವತೀ - ಕುಮಾರಧಾರಾ ನದಿಗಳ ಸಂಗಮ ಸ್ಥಾನವಿದೆ. ಇಲ್ಲಿ ಒಂದು ಲಕ್ಷ್ಮೀನಾರಾಯಣ ದೇವಸ್ಥಾನವೂ ಇದೆ.

ತ್ರಿಮಾರ್ಗಗಾತೀರಗತೋಽಪ್ಯವಾತ್ಸೀತ್
ತ್ರಿಲೋಚನೋ ಯತ್ರ ಸಹಸ್ರಮೂರ್ತಿಃ ॥ ೩೪ ॥

ಅ: ತ್ರಿಲೋಚನಃ = ಮುಕ್ಕಣ್ಣನಾದ ಹರನು; ತ್ರಿಮಾರ್ಗಗಾತೀರಗತೋಽಪಿ = ಗಂಗಾತೀರದಲ್ಲಿ ನೆಲೆಸಿದವನಾದರೂ ಸಹ; ಯತ್ರ = ಯಾವ ನೇತ್ರಾವತೀಕುಮಾರಧಾರಾ ನದಿಗಳ ಸಂಗಮದಲ್ಲಿ; ಸಹಸ್ರಮೂರ್ತಿಃ = ಸಾವಿರರೂಪಗಳಿಂದ; ಅವಾತ್ಸೀತ್ = ನೆಲೆಸಿದನೋ (ಅಂತಹ); ಕುಮಾರಧಾರಾಸರಿತಾ = ಕುಮಾರಧಾರೆ ಎಂಬ ನದಿಯಿಂದ; ಸಮೇತಾ = ಕೂಡಿರುವ; ಇಯಂ ನೇತ್ರಾವತೀ ತರಂಗಿಣೀ = ನೇತ್ರಾವತೀ ನದಿಯು; ಭಾತಿ = ಶೋಭಿಸುತ್ತಿರುವುದು.

ತ್ರಿಪಥಗೆ ಎನ್ನಿಸಿದ ಗಂಗೆಯ ತೀರದಲ್ಲಿ ನೆಲೆಸಿದವನಾದರೂ ಸಹ, ಮುಕ್ಕಣ್ಣನಾದ ಹರನು ಸಾವಿರರೂಪಗಳಿಂದ ನೆಲೆಸಿರುವ ಕುಮಾರಧಾರೆಯೊಂದಿಗೆ ಕೂಡಿರುವ ಈ ನೇತ್ರಾವತೀ ನದಿಯು ಶೋಭಿಸುತ್ತಿರುವುದು.

ವಿ: ೧. ಗಂಗಾತೀರದಲ್ಲಿ ವಿಶ್ವನಾಥನೆಂಬ ಒಂದು ರೂಪದಿಂದ ಇರುವ ಶಂಭುವು, ಈ ನೇತ್ರಾವತೀ - ಕುಮಾರಧಾರಾ ಸಂಗಮದಲ್ಲಿ ಸಾವಿರ ಲಿಂಗಗಳ ರೂಪದಲ್ಲಿ ನೆಲೆಸಿರುವುದರಿಂದ, ಈ ಸ್ಥಳವು ಅತ್ಯಂತ ಪವಿತ್ರವಾದುದು ಎಂದು ಭಾವ.

೨. ಸಂಗಮ ಸ್ನಾನದ ಬಳಿ ಇರುವ ಸಹಸ್ರಲಿಂಗೇಶ್ವರ ದೇವಸ್ಥಾನವನ್ನು ಗಮನದಲ್ಲಿಟ್ಟುಕೊಂಡು ಶ್ರೀವಾದಿರಾಜರು ಈ ಸ್ಥಳವನ್ನು ಹೀಗೆ ವರ್ಣಿಸಿರುವರು.

೩. ತ್ರಿಮಾರ್ಗಗಾ - ಎಂದರೆ ತ್ರಿಪಥಗಾ ; ಗಂಗಾ ಎಂದರ್ಥ. ಸ್ವರ್ಗ, ಮರ್ತ್ಯ ಹಾಗೂ ಪಾತಾಳ ಎಂಬ ಮೂರು ಲೋಕಗಳಲ್ಲಿ ಹರಿಯುವುದರಿಂದ ಗಂಗೆಗೆ ಈ ಹೆಸರು.

## ಕುಮಾರಧಾರಾ (ನದೀ)

ಕುಮಾರಧಾರೇ ಸುಜನೋದ್ಧಾರೇ ವಿಜ್ಞಾನಧಾರಯಾ ।
ಪುನೀಹಿ ಮಾಮಘಸ್ತೋಮಂ ಲುನೀಹಿ ಸದನೀಹಿತಮ್ ॥ ೩೫ ॥

ಅ: ಸುಜನೋದ್ಧಾರೇ = ಸುಜನರನ್ನು (ಸಂಸಾರದಿಂದ) ಉದ್ಧರಿಸುವ; ಕುಮಾರಧಾರೇ = ಹೇ ! ಕುಮಾರಧಾರಾನದಿಯೇ; ವಿಜ್ಞಾನಧಾರಯಾ = ಪರಮಾತ್ಮ ವಿಷಯಕವಾದ ಜ್ಞಾನಪರಂಪರೆಯಿಂದ; ಮಾಂ ಪುನೀಹಿ = ನನ್ನನ್ನು ಪಾವನಗೊಳಿಸು; ಸದನೀಹಿತಂ = ಸಜ್ಜನರಿಗೆ ಅನಿಷ್ಟಭೂತವೂ; ಸತ್ಕರ್ಮಾನುಷ್ಠಾನಕ್ಕೆ ವಿರೋಧಿಯೂ ಆಗಿರುವ, ಅಘಸ್ತೋಮಂ = ಪಾಪಸಮೂಹವನ್ನು; ಲುನೀಹಿ = ಭೇದಿಸು[೧].

---

೧. ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ । – ಭಾಗವತ (೧೦/೮೪/೧೧)

ಸುಜನರನ್ನು ಉದ್ಧರಿಸುವ ಹೇ, ಕುಮಾರಧಾರಾನದಿಯೇ ! ವಿಜ್ಞಾನಧಾರೆಯಿಂದ ನನ್ನನ್ನು ಪಾವನಗೊಳಿಸು. ಸಜ್ಜನರನ್ನು ಪೀಡಿಸುವ ಪಾಪಸಮೂಹವನ್ನು ಭೇದಿಸು.

ವಿ: ೧. ಕುಮಾರ(ಷಣ್ಮುಖ) ಸ್ವಾಮಿಗೆ ದೇವೇಂದ್ರನು ದೇವಸೇನಾನಿಯಾಗಿ ಪಟ್ಟಾಭಿಷೇಕ ಮಾಡಿದಾಗ, ಅಭಿಷೇಕ ಜಲವೇ ಹರಿದು 'ಕುಮಾರಧಾರಾ' ನದಿಯಾಯಿತು ಎಂದು ಐತಿಹ್ಯವಿದೆ.

೨. ತೀರ್ಥಸ್ನಾನದಿಂದ ಗುರೂಪದೇಶದ ಮೂಲಕ ತತ್ತ್ವಜ್ಞಾನದ ಪ್ರಾಪ್ತಿ ಮತ್ತು ಪಾಪಪರಿಹಾರರೂಪಫಲಗಳು ಒದಗುವುವು ಎಂಬ ತಾತ್ವಿಕ ಹಿನ್ನೆಲೆಯನ್ನು ಈ ಮಾತು ಜ್ಞಾಪಿಸುತ್ತದೆ.

**ಕುಮಾರಧಾರೇ ತ್ವತ್ತೀರೇ ಮುಕ್ತಿದ್ವಾರೇ ಗುಣಾಕರೇ ।**
**ತಪಸ್ತಪಂತಃ ಸನ್ಮಂತ್ರಂ ಜಪಂತಃ ಸ್ಯಾಮ ಸಂತತಮ್ ॥ ೩೬ ॥**

ಅ: **(ಹೇ) ಕುಮಾರಧಾರೇ** = ಎಲೈ ಕುಮಾರಧಾರಾ ನದಿಯೇ ! **ಗುಣಾಕರೇ** = (ಪಾವಿತ್ರ್ಯಾದಿ) ಗುಣಗಳಿಗೆ ನೆಲೆಯಾದ; **ಮುಕ್ತಿದ್ವಾರೇ** = ಮೋಕ್ಷಕ್ಕೆ ಉಪಾಯವಾಗಿರುವ; **ತ್ವತ್ತೀರೇ** = ನಿನ್ನ ತೀರದಲ್ಲಿ; **(ವಯಂ)** = ನಾವು; **ಸಂತತಂ** = ಅನವರತವೂ; **ತಪಃ** = (ಕೃಚ್ಛ್ರ ಮೊದಲಾದ[1]) ತಪಸ್ಸಗಳನ್ನು; **ತಪಂತಃ** = ಆಚರಿಸುತ್ತಲೂ; **ಸನ್ಮಂತ್ರಂ** = [2]ಉತ್ತಮವಾದ (ಪ್ರಣವ, ಹಯಗ್ರೀವ ಮೊದಲಾದ) ಮಂತ್ರಗಳನ್ನು; **ಜಪಂತಃ** = ಜಪಿಸುತ್ತಲೂ; **ಸ್ಯಾಮ** = ಇರುವವರಾಗೋಣ.

ಎಲೈ ಕುಮಾರಧಾರೆಯೇ ! ನಿನ್ನ ತೀರ ಮುಕ್ತಿಯ ದ್ವಾರ; ಗುಣಗಳ ಆಗರ; ಇಲ್ಲಿ ನಾವು ಸದಾ ತಪಸ್ಸನ್ನು ಆಚರಿಸುತ್ತಾ, ಉತ್ತಮವಾದ ಮಂತ್ರಗಳನ್ನು ಜಪಿಸುತ್ತಾ ನೆಲೆಸುವಂತಾಗಲಿ.

ವಿ: ೧. ಪುಣ್ಯನದಿಗಳ ತೀರಗಳು ತಪಸ್ಸನ್ನು ಆಚರಿಸಲು, ಉತ್ತಮ ಮಂತ್ರಗಳನ್ನು ಜಪಿಸಲು ಉತ್ತಮವಾದ ಕ್ಷೇತ್ರಗಳಾಗಿವೆ. ಶ್ರೀಟೀಕಾಕೃತ್ಪಾದರು, ಶ್ರೀರಾಘವೇಂದ್ರ ಸ್ವಾಮಿಗಳು ಮೊದಲಾದ ಹೆಚ್ಚಿನ ಜ್ಞಾನಿಗಳು ನದೀತೀರಗಳಲ್ಲಿ ಬೃಂದಾವನಸ್ಥರಾಗಿರುವುದು ಸಹ ಜಪ, ತಪಗಳಿಗೆ ಅನುಕೂಲವಾಗಲೆಂದೇ ಎಂಬುದು ಗಮನಾರ್ಹ.

೨. ಕುಮಾರಧಾರೆಯು ಅಂತಹ ಪುಣ್ಯ ನದಿಗಳಲ್ಲಿ ಒಂದಾಗಿರುವುದರಿಂದ, ಅದರ ತೀರದಲ್ಲಿ ನಾವು ಸದಾ ತಪಸ್ಸನ್ನು ಆಚರಿಸುವಂತೆಯೂ, ಮಂತ್ರಜಪವನ್ನು ಮಾಡುವವರಾಗೋಣ ಎಂದು ಆಶಿಸಿರುವರು.

೩. ತೀರ್ಥಯಾತ್ರೆಗೆ ಹೋದಾಗ ನದಿಗಳಲ್ಲಿ ಸ್ನಾನ ಪಾನಾದಿಗಳಂತೆ, ಜಪ, ತಪಗಳು ಸಹ ಅವಶ್ಯ ಕರ್ತವ್ಯವಾಗಿವೆ ಎಂಬ ತತ್ತ್ವವೂ ಇಲ್ಲಿ ಧ್ವನಿತವಾಗಿದೆ.

---

೧. ತಪಸ್ವಿಭ್ಯಃ - ಕೃಚ್ಛ್ರಾದಿಚಾರಿಭ್ಯಃ — ಗೀತಾಭಾಷ್ಯ( ೬/೪೬)
೨. ಸಚ್ಛಬ್ದ ಉತ್ತಮಂ ಬ್ರೂಯಾತ್ । — ಸ್ಮೃತಿ

೪. ಇಲ್ಲಿಯ ಗುಣಾಕರೇ(ಗುಣಗಳಿಗೆ ನೆಲೆಯಾದವಳೇ) ಎಂಬುದನ್ನು ಕುಮಾರಧಾರಾ ನದಿಗೆ ವಿಶೇಷಣವನ್ನಾಗಿಯೂ ಅನ್ವಯಿಸಿಕೊಳ್ಳಬಹುದು.

## [೧]ಸುಬ್ರಹ್ಮಣ್ಯ (ಕ್ಷೇತ್ರ)

**[೨]ಸುಬ್ರಹ್ಮಣ್ಯಸ್ಯ ಮಹಿಮಾ ವರ್ಣಿತುಂ ಕೇನ ಶಕ್ಯತೇ ।**
**ಯತ್ರೋಚ್ಛಿಷ್ಟಮಪಿ ಸ್ಪಷ್ಟಂ ಶ್ವಿತ್ರಿಣಃ ಶೋಧಯತ್ಯಹೋ ॥ ೩೭ ॥**

ಅ: **ಯತ್ರ** = ಯಾವ ಕ್ಷೇತ್ರದಲ್ಲಿ; **ಉಚ್ಛಿಷ್ಟಮಪಿ** = (ಬ್ರಾಹ್ಮಣರ) ಎಂಜಲೂ ಸಹ; **ಶ್ವಿತ್ರಿಣಃ**[೩] = ಕುಷ್ಠರೋಗಿಗಳನ್ನು; **ಸ್ಪಷ್ಟಂ** = ಸ್ಫುಟವಾಗಿ(ಪರಿಪೂರ್ಣವಾಗಿ); **ಶೋಧಯತಿ** = ಪರಿಶುದ್ಧರನ್ನಾಗಿಸುವುದೋ ಅಂತಹ; **ಸುಬ್ರಹ್ಮಣ್ಯಸ್ಯ** = ಬ್ರಾಹ್ಮಣರಿಗೆ ಅತ್ಯಂತ

---

೧. ಸುಬ್ರಹ್ಮಣ್ಯಕ್ಷೇತ್ರವು ಪುತ್ತೂರಿನಿಂದ ಈಶಾನ್ಯಕ್ಕೆ ೩೩ಕಿ.ಮೀ.ಗಳ ದೂರದಲ್ಲಿದೆ. ಇದು ಪ್ರಸಿದ್ಧವಾದ ಸ್ಕಂದಕ್ಷೇತ್ರಗಳಲ್ಲಿ ಒಂದಾಗಿದ್ದು ಇಲ್ಲಿ ಸ್ಕಂದನು ಪ್ರಾದುರ್ಭವಿಸಿದ ಸ್ಥಳವೆನ್ನಿಸಿರುವ ಹುತ್ತದ ಗುಹೆಯೊಂದಿದೆ. ಇದರಿಂದ ಸುಮಾರು ಒಂದು ಕಿ.ಮೀ.ದೂರದಲ್ಲಿ ಕುಮಾರಧಾರಾ ನದಿಯು ಹರಿಯುತ್ತದೆ. ದೇವಸ್ಥಾನಕ್ಕೆ ಹೊಂದಿಕೊಂಡಂತೆ ಶ್ರೀಮಧ್ವಾಚಾರ್ಯರು ಸ್ಥಾಪಿಸಿದ 'ಸುಬ್ರಹ್ಮಣ್ಯ ಮಠ'ವೂ, ಅದರ ಹಿಂಭಾಗದಲ್ಲಿ ದರ್ಪಣತೀರ್ಥವೆಂಬ ತೊರೆಯೂ ಇವೆ. ಶ್ರೀಸುಬ್ರಹ್ಮಣ್ಯ ಮಠದ ಪ್ರಥಮ ಪೀಠಾಧಿಪತಿಗಳಾಗಿ ವಿರಾಜಿಸಿದವರು ಶ್ರೀಮಧ್ವಾಚಾರ್ಯರ ಪೂರ್ವಾಶ್ರಮದ ತಮ್ಮಂದಿರಾಗಿದ್ದು, ಅವರಿಂದಲೇ ಸನ್ಯಾಸ ಸ್ವೀಕರಿಸಿದ ಶ್ರೀವಿಷ್ಣುತೀರ್ಥರು. ಸುಬ್ರಹ್ಮಣ್ಯದಿಂದ ಸುಮಾರು ೧೯ಕಿ.ಮೀ.ಗಳ ದೂರದಲ್ಲಿ ಕುಮಾರಪರ್ವತವೆಂಬ ದುರ್ಗಮವಾದ ಪರ್ವತವೊಂದಿದ್ದು, ಅದರಿಂದ ಕುಮಾರಧಾರಾ ನದಿಯು ಉದ್ಭವಿಸಿದೆ; ಈ ಪರ್ವತದಲ್ಲಿ ಶ್ರೀವಿಷ್ಣುತೀರ್ಥರು ಅದ್ಯಾಪಿ ತಪೋನಿರತರಾಗಿರುವರೆಂದೂ, ಮುಂದೊಂದು ಸಮಯದಲ್ಲಿ ಸತ್ಸಿದ್ಧಾಂತವು ಖಿಲವಾದಾಗ ಇವರು ಪರ್ವತದಿಂದ ಇಳಿದು ಬಂದು, ಶ್ರೀಮಧ್ವಾಚಾರ್ಯರು ಇವರಿಗೋಸ್ಕರ ಸೇತುತಿಲ ಎಂಬ ಕ್ಷೇತ್ರದಲ್ಲಿ ತಾಮ್ರದ ತಗಡಿನಲ್ಲಿ ಬರೆಸಿ ಭೂಗತ ಮಾಡಿಸಿರುವ ಸಚ್ಛಾಸ್ತ್ರಗ್ರಂಥಗಳನ್ನು ಹೊರತೆಗೆದು ಸತ್ಸಿದ್ಧಾಂತವನ್ನು ಪುನಃ ಪ್ರಸಾರ ಮಾಡುವರು ಎಂದೂ, ಶ್ರೀಹೃಷೀಕೇಶತೀರ್ಥರ ಸಂಪ್ರದಾಯ ಪದ್ಧತಿಯಲ್ಲೂ ಶ್ರೀವಾದಿರಾಜಸ್ವಾಮಿಗಳ ಸರಸಭಾರತೀ ವಿಲಾಸದಲ್ಲೂ ಉಲ್ಲೇಖವಿದೆ. (ವಿವರಗಳಿಗೆ ನಮ್ಮ ಪ್ರಕಾಶನದ ಸುಮಧ್ವವಿಜಯ ಹಾಗೂ ಸಂಪ್ರದಾಯಪದ್ಧತಿಗಳ ಕನ್ನಡ ಅನುವಾದವನ್ನು ನೋಡಿರಿ). ಪರಶುರಾಮಕ್ಷೇತ್ರದ ಸಪ್ತಕ್ಷೇತ್ರಗಳಲ್ಲಿ ಈ ಸುಬ್ರಹ್ಮಣ್ಯವೂ ಒಂದು:

ತಿರೋಹಿತೇ ಸನ್ಮತೇಽಸ್ಮಿನ್ ವಿಷ್ಣುತೀರ್ಥೋ ಗುಹಾಚಲಾತ್ ।
ಆಗತ್ಯೋದ್ಧೃತ್ಯ ತತ್ರತ್ಯ ಗ್ರಂಥಾನ್ ಸ ಪ್ರಥಯಿಷ್ಯತಿ । – ಸಂಪ್ರದಾಯಪದ್ಧತಿ (೨೧)
ಸ್ವಾನುಜಂ ವಿಷ್ಣುತೀರ್ಥಂ ಚ ತಪಸಾ ಧೂತಕಲ್ಮಷಮ್ ।
ಪ್ರೇಷಯಿಷ್ಯತಿ ಸತ್ತತ್ತ್ವಕಥನಾಯ ಕಲೌ ಕಿಲ ॥ – ಸರಸಭಾರತೀವಿಲಾಸ(೭೬/೨)

೨. ಸುತರಾಂ ಬ್ರಹ್ಮಸು ಬ್ರಾಹ್ಮಣೇಷು ಸಾಧುರಿತಿ ಸುಬ್ರಹ್ಮಣ್ಯಃ । 'ತತ್ರ ಸಾಧುಃ' (೪/೪/೯೮) ಇತಿ ಯತ್ಪ್ರತ್ಯಯಃ । – ವ್ಯಾಖ್ಯಾನ

೩. ಸುಬ್ರಹ್ಮಣ್ಯಕ್ಷೇತ್ರೇ ಉಚ್ಛಿಷ್ಟಲೇಪೇನ ಕುಷ್ಠವ್ಯಾಧಿರ್ನಶ್ಯತೀತಿ ಪ್ರಸಿದ್ಧಿಃ । – ವ್ಯಾಖ್ಯಾನ

ಹಿತಕಾರಿಯಾಗಿರುವ(ಸುಬ್ರಹ್ಮಣ್ಯನ) ಕುಮಾರಸ್ವಾಮಿಯ; ಮಹಿಮಾ = ಮಾಹಾತ್ಮ್ಯವನ್ನು; ವರ್ಣಿತುಂ = ಹೊಗಳಲು; ಕೇನ = ಯಾರಿಂದ (ತಾನೇ); ಶಕ್ಯತೇ = ಸಾಧ್ಯವಾದೀತು?; ಅಹೋ = ಆಶ್ಚರ್ಯ !

ಅಬ್ಬಾ ! ಎಲ್ಲಿಯ ಎಂಜಲೂ ಸಹ ಕುಷ್ಠರೋಗವನ್ನು ಗುಣಪಡಿಸುವುದೊ, ಅಂತಹ ಸುಬ್ರಹ್ಮಣ್ಯಕ್ಷೇತ್ರದ ಮಹಿಮೆಯನ್ನು ವರ್ಣಿಸಲು ಯಾರಿಗೆ ತಾನೆ ಶಕ್ಯವಾದೀತು?

ವಿ: ಸುಬ್ರಹ್ಮಣ್ಯಕ್ಷೇತ್ರದಲ್ಲಿ ಬ್ರಾಹ್ಮಣರ ಎಂಜಲೆಲೆಯ ಮೇಲೆ ಹೊರಳಿದರೆ (ಮಡೆಸ್ನಾನ), ಕುಷ್ಠರೋಗವು ನಾಶವಾಗುವುದೆಂಬ ಪ್ರಸಿದ್ಧಿಯುಂಟು. ಸುಬ್ರಹ್ಮಣ್ಯಕ್ಷೇತ್ರದ ಉಚ್ಛಿಷ್ಟಕ್ಕೇ ಇಷ್ಟು ಮಹಿಮೆಯಿರುವಾಗ, ಆ ಕ್ಷೇತ್ರದ ಮಹಿಮೆಯೂ ಕ್ಷೇತ್ರಾಧಿಪನಾದ ಸುಬ್ರಹ್ಮಣ್ಯಸ್ವಾಮಿಯ ಮಹಿಮೆಯೂ ಅಪಾರವೆಂಬುದು ಕೈಮುತ್ಯ ಸಿದ್ಧ ಎಂದು ಭಾವ[೧].

**ಬ್ರಹ್ಮಹತ್ಯಾದೋಷಶೇಷಂ ಬ್ರಾಹ್ಮಣಾನಾಂ ಹರನ್ನಯಮ್ ।**
**ವಿರೋಧೇ ತು ಪರಂ ಕಾರ್ಯಮಿತಿ ನ್ಯಾಯಮಮಾನಯತ್॥೩೮॥**

ಅ: ಅಯಂ = ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಅಧಿಪತಿಯಾದ ಸ್ಕಂದನು; ಬ್ರಾಹ್ಮಣಾನಾಂ = ಬ್ರಾಹ್ಮಣರ; ಬ್ರಹ್ಮಹತ್ಯಾದೋಷಶೇಷಂ = (ನರಕಾನುಭವದ ಅನಂತರ ಉಳಿಯುವ ಕುಷ್ಠರೋಗರೂಪವಾದ) ಬ್ರಹ್ಮಹತ್ಯಾ ದೋಷದ ಶೇಷಭಾಗವನ್ನು; ಹರನ್ = ಪರಿಹರಿಸುತ್ತ; ವಿರೋಧೇ ತು = (ಎರಡು ಸೂತ್ರಗಳಿಗೆ ಪರಸ್ಪರ) ವಿರೋಧ ಒದಗಿದಾಗ, ಪರಂ = ಪರ (ಉತ್ತರ) ಸೂತ್ರದಲ್ಲಿ ಹೇಳಲ್ಪಟ್ಟದ್ದು; ಕಾರ್ಯಂ = ಕರ್ತವ್ಯ; ಇತಿ ನ್ಯಾಯಂ = ಎಂಬ (ವೈಯ್ಯಾಕರಣ) ನ್ಯಾಯವನ್ನು; ಅಮಾನಯತ್ = ಪಾಲಿಸಿರುವನು. (ಯುಕ್ತಿ ಅಲಂಕಾರ)[೨]

ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಅಧಿಪತಿಯಾದ ಸ್ಕಂದನು ಬ್ರಾಹ್ಮಣರ ಬ್ರಹ್ಮಹತ್ಯಾದೋಷದ ಶೇಷಭಾಗವನ್ನು ಪರಿಹರಿಸುತ್ತಾ, ಎರಡು ಸೂತ್ರಗಳಿಗೆ ಪರಸ್ಪರ ವಿರೋಧ ಒದಗಿದಾಗ, ಪರ (ಉತ್ತರ) ಸೂತ್ರವೇ ಮಾನ್ಯ ಎಂಬ ವೈಯ್ಯಾಕರಣ ನ್ಯಾಯವನ್ನು ಪಾಲಿಸಿರುವನು.

ವಿ: ೧. ಸುಬ್ರಹ್ಮಣ್ಯ ಕ್ಷೇತ್ರದ ಸೇವೆಯಿಂದ ಕುಷ್ಠರೋಗವು ಪರಿಹಾರವಾಗುವುದೆಂಬ ವಿಚಾರವು ಹಿಂದಿನ ಶ್ಲೋಕದಲ್ಲಿ ಬಂದಿದೆ. ಬ್ರಹ್ಮಹತ್ಯೆಯನ್ನು ಮಾಡಿದವರು ನರಕವನ್ನು ಅನುಭವಿಸಿದ ಮೇಲೆ ಕುಷ್ಠರೋಗಿಗಳಾಗಿ ಹುಟ್ಟುವರು ಎಂಬ ವಿಚಾರವು [೩]ಸ್ಮೃತಿಗಳಲ್ಲಿ ಉಕ್ತವಾಗಿದೆ. ಸುಬ್ರಹ್ಮಣ್ಯಸೇವೆಯಿಂದ ಕುಷ್ಠರೋಗವು ಪರಿಹಾರವಾಗುವುದೆಂದರೆ ಬ್ರಹ್ಮಹತ್ಯಾದೋಷಶೇಷವು ಪರಿಹಾರವಾಗುತ್ತದೆ ಎಂದು ಅರ್ಥ.

---

೧. ಉಚ್ಛಿಷ್ಟಸ್ಯಾಪ್ಯೇತಾದೃಶಸಾಮರ್ಥ್ಯಂ, ಕಿಮು ದೇವಸ್ಯೇತಿ ಭಾವಃ। —ವ್ಯಾಖ್ಯಾನ

೨. 'ದುರ್ಘಟಾರ್ಥಸ್ಯ ಘಟನಾಚಾತುರೀ ಯುಕ್ತಿರಿಷ್ಯತೇ' । — ವ್ಯಾಖ್ಯಾನ

೩. ಜನ್ಮಾಂತರಕೃತಬ್ರಹ್ಮಹತ್ಯಾದೋಷಶೇಷೇಣ ಕುಷ್ಠವ್ಯಾಧಿಯುಕ್ತಾ ಭವಂತೀತಿ ಸ್ಮಾರ್ತ ಪ್ರಸಿದ್ಧಿಃವ್ಯಾ

೨. ಕುಷ್ಠರೋಗಿಯಾದ ಬ್ರಾಹ್ಮಣನು ತನ್ನನ್ನು ಸೇವಿಸಿದಾಗ, ತಾನು ಅವನ ರೋಗವನ್ನು (ಬ್ರಹ್ಮಹತ್ಯಾದೋಷಶೇಷವನ್ನು) ಪರಿಹರಿಸಿದರೆ, ಅವನಿಂದ ಕೊಲ್ಲಲ್ಪಟ್ಟ ಬ್ರಾಹ್ಮಣನಿಗೆ ಅನ್ಯಾಯ ಮಾಡಿದಂತಾಗುತ್ತದೆ; ಪರಿಹರಿಸದಿದ್ದರೆ ಸೇವೆ ಮಾಡುತ್ತಿರುವ ಈ ಬ್ರಾಹ್ಮಣನಿಗೆ ಅನ್ಯಾಯ ಮಾಡಿದಂತಾಗುತ್ತದೆ; ಇಂತಹ ಕಠಿಣ ಸಮಸ್ಯೆಯನ್ನು ಶ್ರೀಸುಬ್ರಹ್ಮಣ್ಯನು ವೈಯ್ಯಾಕರಣನ್ಯಾಯದಿಂದ ಪರಿಹರಿಸಿಕೊಂಡಿರುವನು ಎಂಬುದಾಗಿ ಶ್ರೀವಾದಿರಾಜರು ಅಪೂರ್ವಕೌಶಲದಿಂದ ವರ್ಣಿಸಿರುವರು.

೩. [೧]ತನ್ನದೇ ಆದ ಎರಡು ಸೂತ್ರಗಳಿಗೆ ಪರಸ್ಪರ ವಿರೋಧವುಂಟಾದಾಗ ಪರಸೂತ್ರೋಕ್ತ ನಿಯಮವನ್ನೇ ಆಶ್ರಯಿಸಬೇಕು ಎಂದು 'ವಿರೋಧೇ ತು ಪರಂ ಕಾರ್ಯಂ'(೧/೪/೨) ಎಂಬ ಪಾಣಿನಿಯ ಒಂದು ಸೂತ್ರವು ವಿಧಿಸಿದೆ. ಪ್ರಸಕ್ತ ಸ್ಥಿತಿಯಲ್ಲಿ ಹತನಾಗಿರುವವನು ಪೂರ್ವ ಬ್ರಾಹ್ಮಣ; ಸೇವೆ ಮಾಡುತ್ತಿರುವವನು ಪರ ಬ್ರಾಹ್ಮಣ, ವ್ಯಾಕರಣ ಸೂತ್ರದಂತೆ 'ಪರ' ಬ್ರಾಹ್ಮಣನೇ ಗ್ರಾಹ್ಯನಾದ್ದರಿಂದ ಸುಬ್ರಹ್ಮಣ್ಯನು ಇವನ ಪ್ರಾರ್ಥನೆಯನ್ನು ಮನ್ನಿಸಿ ಇವನ ರೋಗವನ್ನು ಪರಿಹರಿಸುತ್ತಿರುವನು ಎಂದು ಭಾವ[೨].

೪. ಕುಷ್ಠರೋಗದ ಪ್ರಾಪ್ತಿಯ ಹಿನ್ನೆಲೆ, ಅದರ ಪರಿಹಾರ, ಸುಬ್ರಹ್ಮಣ್ಯನ ಕರುಣೆ ಮೊದಲಾದ ಅನೇಕ ವಿಚಾರಗಳನ್ನು 'ವ್ಯಾಕರಣ ಪ್ರಕ್ರಿಯೆ'ಯೊಂದರ ಹಿನ್ನೆಲೆಯಲ್ಲಿ ವಿಶ್ಲೇಷಿಸಿ ಹೊಸಬೆಳಕು ಚೆಲ್ಲಿರುವ ಶ್ರೀವಾದಿರಾಜರ ವ್ಯಾಕರಣ ಧರ್ಮಶಾಸ್ತ್ರಾದಿಗಳ ತಲಸ್ಪರ್ಶಿ ಪಾಂಡಿತ್ಯ, ಅಪಾರ ಯುಕ್ತಿ ಕೌಶಲಗಳು ಎಷ್ಟು ಅಪೂರ್ವವೆನ್ನಲು ಇದೊಂದು ಉತ್ತಮ ನಿದರ್ಶನ.

## ಸುಬ್ರಹ್ಮಣ್ಯ ಸ್ತುತಿ

**ಸುಬ್ರಹ್ಮಣ್ಯ ಸುರಾಗ್ರಗಣ್ಯ ಕುಜನಾರಣ್ಯಜ್ವಲತ್ಪಾವಕ**
**ಪ್ರಬ್ರೂಯಾತ್ ತವ ವಿಕ್ರಮಂ ಭುವಿ ಕವಿಃ ಕೋ ವಾಽಮರೋ ವಾ ದಿವಿ ।**
**ಯಃ ಪ್ರಾಗಪ್ರತಿಮಲ್ಲತಾರಕಮಹಾದೈತ್ಯಂ ಸುದೃಪ್ತಂ ಭವಾನ್**
**ವಿಪ್ರೌಘಪ್ರಿಯ ಸುಪ್ರಭಾವ ಸಮರೇ ಕ್ರೀಡನ್ನಜೈಷೀದ್ದ್ವಿಷಮ್॥ ೩೯ ॥**

**ಅ:** ಸುರಾಗ್ರಗಣ್ಯ = ಸುರಶ್ರೇಷ್ಠನಾದ; **ಕುಜನಾರಣ್ಯಜ್ವಲತ್ಪಾವಕ** = ದುಷ್ಟಜನಗಳೆಂಬ ಕಾಡಿಗೆ ಪ್ರಜ್ವಲಿಸುವ ಅಗ್ನಿಯಾಗಿರುವ; (ಹೇ) ಸುಬ್ರಹ್ಮಣ್ಯ ! = ಎಲೈ ಸ್ಕಂದನೇ !; ತವ =

---

೧. ಪೂರ್ವಪರಸೂತ್ರಯೋರ್ವಿರೋಧೇ ಪರಸೂತ್ರಮೇವಾಂಗೀಕರ್ತವ್ಯಮಿತಿ ವೈಯ್ಯಾಕರಣನೀತಿಮ್ ।
— ವ್ಯಾಖ್ಯಾನ

೨. ಅಯಂ ಭಾವಃ। ಪೂರ್ವಜನ್ಮಕೃತಬ್ರಾಹ್ಮಣವಧಜನಿತಕುಷ್ಠವ್ಯಾಧಿಪರಹಾರೇ ಏತದ್ಧತಸ್ಯ ಬ್ರಾಹ್ಮಣಸ್ಯ ವಿರೋಧಃ । ಅಪರಿಹಾರೇ ಶರಣಾಗತಸ್ಯ ಇದಾನೀಂತನಸ್ಯ ಬ್ರಾಹ್ಮಣಸ್ಯ ವಿರೋಧಃ । ಏವಂ ವಿರೋಧೇ ಪ್ರಾಪ್ತೇ 'ವಿಪ್ರತಿಷೇಧೇ ಪರಂ ಕಾರ್ಯಂ' ಇತಿ ಅಂಗೀಕೃತ್ಯೇದಾನೀಂತನಶರಣಾಗತ ಏವ ಬ್ರಾಹ್ಮಣಃ ಪಾಲನೀಯ ಇತಿ ನಿಶ್ಚಿತ್ಯ ಕುಷ್ಠವ್ಯಾಧಿಂ ಪರಿಹೃತ್ಯ ಶರಣಾಗತಂ ಪಾಲಯತೀತಿ ।
— ವ್ಯಾಖ್ಯಾನ

ನಿನ್ನ; ವಿಕ್ರಮಂ = ಪರಾಕ್ರಮವನ್ನು; ಭುವಿ = ಭೂಲೋಕದಲ್ಲಿನ; ಕೋ ವಾ ಕವಿಃ = ಯಾವುದೇ ಕವಿಯಾಗಲೀ; ದಿವಿ = ದೇವಲೋಕದಲ್ಲಿನ; ಕೋ ವಾ ಅಮರಃ = ಯಾವುದೇ ದೇವತೆಯಾಗಲೀ; ಪ್ರಬ್ರೂಯಾತ್ = ಸರಿಯಾಗಿ ಎಂತು ವರ್ಣಿಸಿಯಾನು?; (ಹೇ) ಸುಪ್ರಭಾವ = ಉತ್ತಮಸಾಮರ್ಥ್ಯವುಳ್ಳ; (ಹೇ) ವಿಪ್ರೌಘಪ್ರಿಯ = ಬ್ರಾಹ್ಮಣಸಮುದಾಯಕ್ಕೆ ಪ್ರಿಯನಾಗಿರುವ, ಎಲೈ ಸುಬ್ರಹ್ಮಣ್ಯನೇ ! ಯಃ ಭವಾನ್ = ಯಾವ ನೀನು; ಪ್ರಾಕ್ = ಹಿಂದೆ; ಸಮರೇ = (ದೇವಾಸುರ) ಸಂಗ್ರಾಮದಲ್ಲಿ; ಸುದೃಪ್ತಂ = ಬಹಳವಾಗಿ ಸೊಕ್ಕಿದ್ದ; ದ್ವಿಷಂ = ಶತ್ರುವಾದ; ಅಪ್ರತಿಮಲ್ಲತಾರಕಮಹಾದೈತ್ಯಂ = ಸರಿಸಾಟಿಯಾದ ಯೋಧರೇ ಇಲ್ಲವಾಗಿದ್ದ 'ತಾರಕ'ನೆಂಬ ದೈತ್ಯನನ್ನು; ಕ್ರೀಡನ್ = ಕ್ರೀಡಿಸುತ್ತಲೇ (ಅನಾಯಾಸದಿಂದ); [೧]ಅಜೈಷೀತ್ = ಗೆದ್ದಿರುವೆ.

ಹೇ ಸ್ಕಂದನೇ ! ನೀನು ಸುರರಲ್ಲಿ ಅಗ್ರಗಣ್ಯ; ದುರ್ಜನರನ್ನು ಸುಟ್ಟುಹಾಕುವಂತಹ ಪ್ರಜ್ವಲಿಸುವ ಬೆಂಕಿ; ನಿನ್ನ ಪರಾಕ್ರಮವನ್ನು ಭೂಲೋಕದ ಯಾವುದೇ ಕವಿಯಾಗಲೀ ದೇವಲೋಕದಲ್ಲಿನ ದೇವತೆಯಾಗಲೀ ಎಂತು ತಾನೆ ವರ್ಣಿಸಿ-ಯಾನು? ವಿಪ್ರವೃಂದಕ್ಕೆ ಪ್ರಿಯನಾದ, ಎಲೈ ಸುಬ್ರಹ್ಮಣ್ಯನೇ ! ನೀನು ಹಿಂದೆ ದೇವಾಸುರಸಂಗ್ರಾಮದಲ್ಲಿ ಬಹಳವಾಗಿ ಕೊಬ್ಬಿದ್ದ ಅಪ್ರತಿಮಲ್ಲನೆಂದೆನಿಸಿದ್ದ 'ತಾರಕ'ನೆಂಬ ಮಹಾದೈತ್ಯನನ್ನು ಲೀಲಾಜಾಲವಾಗಿ ಕೊಂದೆಯಲ್ಲವೇ?

ವಿ: ಬ್ರಹ್ಮದೇವರ ವರದಿಂದ ಅವಧ್ಯನಾದ ತಾರಕಾಸುರನನ್ನು ಸಂಹರಿಸಲೆಂದು ಕಾಮನು 'ಷಣ್ಮುಖ'ನಾಗಿ ಅವತರಿಸಿದನೆಂಬುದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ, ತಾರತಮ್ಯದಲ್ಲಿ ಇಂದ್ರದೇವರಿಗೆ ಸಮನಾಗುವ ಕಾಮನು ಷಣ್ಮುಖನಾಗಿ ಅವತರಿಸಿ, ದೇವಸೇನಾನಿಯೆನ್ನಿಸಿ ಕುಮಾರನಾಗಿಯೇ ತಾರಕಾಸುರನನ್ನು ಸಂಹರಿಸಿದನು. ಸ್ಕಂದನ ಹಿರಿಮೆಗೆ ಅವನೊಳಗಿರುವ 'ಸ್ಕಂದ' ಎಂಬ ಭಗವದ್ರೂಪವೇ ಮುಖ್ಯ ಕಾರಣವೆಂದು ಗೀತೆಯಲ್ಲಿ ಬಂದಿದೆ(ಸೇನಾನೀನಾಮಹಂ ಸ್ಕಂದಃ -೧೦/೨೪).

ಅನ್ನಂ ದದಾಸಿ ವಿದಧಾಸ್ಯಖಿಲಸ್ಯ ರಕ್ಷಾಂ
ಕ್ಲಿನ್ನಂ ಪುನಾಸಿ ವಿಲುನಾಸಿ ಸಮಸ್ತದೋಷಾನ್ ।
ಹೇ ಸ್ಕಂದ ವಂದ್ಯ ಭವತೋ ಭುವನೇ ಭವಾನೀ -
ಸೂನೋ ಕೃಪಾಜಲನಿಧೇ ಕತಮಃ ಸಮಃ ಸ್ಯಾತ್ ॥ ೪೦ ॥

ಅ: ಭವಾನೀಸೂನೋ = ಪಾರ್ವತೀ ಪುತ್ರನಾದ; ವಂದ್ಯ = ಸ್ತುತ್ಯನಾದ; ಹೇ ಸ್ಕಂದ = ಎಲೈ ಷಣ್ಮುಖನೇ ! (ನೀನು); ಅನ್ನಂ ದದಾಸಿ = ಅನ್ನಪ್ರದನಾಗಿರುವಿ; ಅಖಿಲಸ್ಯ = ಸಕಲರ; ರಕ್ಷಾಂ = ರಕ್ಷಣೆಯನ್ನು; ವಿದಧಾಸಿ = ಮಾಡುತ್ತಿರುವಿ; ಕ್ಲಿನ್ನಂ ಪುನಾಸಿ = ಕುಷ್ಠವ್ಯಾಧಿಯಿಂದ ಕೊಳೆತು ನಾರುತ್ತಿರುವವರನ್ನು; ಪುನಾಸಿ = (ವ್ಯಾಧಿಯನ್ನು ಪರಿಹರಿಸಿ)

---

೧. ಭವದ್ಯೋಗೇ ನ ಮಧ್ಯಮಃ । ೨/೮/೬, ಶೇಷೇ ಪ್ರಥಮಃ (೩/೯,೬)

ಪಾವನಗೊಳಿಸುವಿ; ಸಮಸ್ತದೋಷಾನ್ = ಬ್ರಹ್ಮಹತ್ಯಾದಿ ಸಕಲ ಪಾಪಗಳನ್ನು ವಿಲುನಾಸಿ = ಭೇದಿಸುವಿ (ಪರಿಹರಿಸುವಿ); (ಹೀಗೆ) ಕೃಪಾಜಲನಿಧೇ = ದಯಾಸಮುದ್ರನಾಗಿರುವ ಸುಬ್ರಹ್ಮಣ್ಯಸ್ವಾಮಿಯೇ; ಭುವನೇ = ಲೋಕದಲ್ಲಿ; ಭವತಃ = ನಿನಗೆ; ಕತಮಃ = ಯಾವನು ತಾನೇ; ಸಮಃ ಸ್ಯಾತ್ = ಸಾಟಿಯಾದಾನು?

ಪಾರ್ವತೀ ಪುತ್ರನಾದ, ಸ್ತುತ್ಯನಾದ ಎಲೈ ಷಣ್ಮುಖನೇ! ನೀನು ಅನ್ನಪ್ರದನಾಗಿರುವಿ; ಸಕಲರಿಗೆ ರಕ್ಷಣೆ ನೀಡುತ್ತಿರುವಿ; ಕೊಳೆತು ನಾರುತ್ತಿರುವವರನ್ನು ಗುಣಪಡಿಸುವಿ; ಬ್ರಹ್ಮಹತ್ಯಾದಿ ಸಕಲಪಾಪಗಳನ್ನು ಪರಿಹರಿಸುವಿ; ದಯಾಸಮುದ್ರನಾಗಿರುವ ಸುಬ್ರಹ್ಮಣ್ಯಸ್ವಾಮಿಯೇ ! ಲೋಕದಲ್ಲಿ ನಿನಗೆ ಯಾವನು ತಾನೇ ಸಾಟಿಯಾದಾನು?

ವಿ: ೧. ಅನ್ನದಾನ, ರಕ್ಷಣೆ, ವ್ಯಾಧಿನಾಶ, ಪಾಪಪರಿಹಾರ ಮೊದಲಾದವುಗಳಿಂದ ಅನೇಕ ತೆರನಾಗಿ ಭಕ್ತರನ್ನು ಸಲಹುವ ಸುಬ್ರಹ್ಮಣ್ಯನು ಕರುಣಾಸಮುದ್ರನೇ ಸರಿ; ಇಂತಹ ದೇವತೆಗಳು ಬಹಳಷ್ಟಿಲ್ಲ ಎಂದು ಭಾವ.

೨. ವಿಲುನಾಸಿ: ಸ್ಕಂದನು [1]ವಿಷ್ಣುಚಕ್ರದ ಅವಾಂತರಾಭಿಮಾನಿಯಾದ್ದರಿಂದ ಪಾಪಗಳನ್ನು 'ಕತ್ತರಿಸುವಿ' ಎಂದು ಕರೆದಿರುವರು.

ಪ್ರವರ್ತಿತಸ್ಕಾಂದಮತಃ ಪೃಥಿವ್ಯಾಂ
ಜಗತ್ಪತಿಂ ಶ್ರೀಪತಿಮಾತ್ಮನಾಥಮ್ ।
ರಹಸ್ಯುಪಾರಾಧಯಿತುಂ ಗುಹಾದ್ಯ
ಗುಹಾಂಶ್ರಿತೋಽಸೀತಿ ಮಮ ಪ್ರತರ್ಕಃ ॥೪೧॥

ಅ: (ಹೇ) ಗುಹ = ಎಲೈ ಸ್ಕಂದನೇ; ಪೃಥಿವ್ಯಾಂ = ಭೂಲೋಕದಲ್ಲಿ; ಪ್ರವರ್ತಿತ-ಸ್ಕಾಂದಮತಃ = ಸ್ಕಂದನೇ ಸರ್ವೋತ್ತಮನೆಂಬ ಮತವನ್ನು ಪ್ರವರ್ತನೆ ಮಾಡಿದ (ನೀನು); ಜಗತ್ಪತಿಂ = ಜಗನ್ನಾಥನಾದ; ಆತ್ಮನಾಥಂ = ನಿನಗೂ ಸ್ವಾಮಿಯಾದ; ಶ್ರೀಪತಿಂ = ಲಕ್ಷ್ಮೀ-ಪತಿಯಾದ ನಾರಾಯಣನನ್ನು; ರಹಸಿ = ಏಕಾಂತದಲ್ಲಿ (ರಹಸ್ಯವಾಗಿ); ಉಪಾರಾಧಯಿತುಂ= ಆರಾಧಿಸಲೆಂದು; ಗುಹಾಂಶ್ರಿತಃ ಅಸಿ = ಹುತ್ತರೂಪದ ಗುಹೆಯಲ್ಲಿ ಆಶ್ರಯಿಸಿರುವಿ; ಇತಿ = ಎಂದು; ಮಮ = ನನ್ನ; ಪ್ರತರ್ಕಃ = ಬಲವಾದ ಊಹೆಯಾಗಿದೆ. (ಉತ್ಪ್ರೇಕ್ಷಾಲಂಕಾರ)

ಎಲೈ ಸ್ಕಂದನೇ ! ಭೂಲೋಕದಲ್ಲಿ ಸ್ಕಂದನೇ ಸರ್ವೋತ್ತಮನೆಂಬ ಮತವನ್ನು ಪ್ರವರ್ತನೆ ಮಾಡಿದ ನೀನು ಜಗನ್ನಾಥನಾದ, ನಿನಗೆ ಒಡೆಯನಾದ, ಲಕ್ಷ್ಮೀಪತಿಯಾದ ನಾರಾಯಣನನ್ನು ರಹಸ್ಯವಾಗಿ ಆರಾಧಿಸಲೆಂದು ಈ ಹುತ್ತದಲ್ಲಿ ಅಡಗಿರುವಿ ಎಂದು ನನ್ನ ಬಲವಾದ ಊಹೆ.

---

೧. ವಿಷ್ಣುಚಕ್ರಾತ್ಮಕತ್ವಾದಿತಿಭಾವಃ। – ವ್ಯಾಖ್ಯಾನ

.............................ಕಾಮಃ ಪುನಃ ಶ್ರೀರಮಣಾದ್ರಮಾಯಾಮ್ ।
ಪ್ರದ್ಯುಮ್ನನಾಮಾಽಭವದೇವಮೀಶಾತ್ ಸ ಸ್ಕಂದತಾಮಾಪ ಸ ಚಕ್ರತಾಂ ಚ ।– ಮ.ಭಾ.ತಾ.ನಿ.(೩/೭೨)

ವಿ: ೧. 'ಸ್ಕಂದನೇ ಸರ್ವೋತ್ತಮ'ನೆಂದು ಸಾರುವ ಸ್ಕಾಂದಮತಕ್ಕೆ ಸ್ವತಃ ಸ್ಕಂದನೇ ಪ್ರವರ್ತಕನಾಗಿರುವನು; ಪಾಶುಪತಮತದಂತೆ, ಸ್ಕಾಂದ ಮತವೂ ಅಗ್ರಾಹ್ಯವೇ ಆಗಿದ್ದು ಅಸುರಮೋಹನದ ಉದ್ದೇಶವನ್ನು ಮಾತ್ರವೇ ಹೊಂದಿದೆ. ಹೀಗೆ ಅಸುರರನ್ನು ದುರ್ಮತದಿಂದ ವಂಚಿಸಿದ ಸ್ಕಂದನು ಸ್ವತಃ ವಿಷ್ಣುಭಕ್ತನಾಗಿರುವನು; ಆದರೆ ಹೀಗೆ ಅಸುರಮೋಹನಕ್ಕೆಂದು 'ತನ್ನ ಸರ್ವೋತ್ತಮತ್ವ'ವನ್ನು ಹೇಳಿಕೊಂಡ ಮೇಲೆ ವಿಷ್ಣುವನ್ನು ಆರಾಧಿಸತೊಡಗಿದರೆ ದೈತ್ಯರಿಗೆ 'ಸ್ಕಂದನು ತಮ್ಮನ್ನು ವಂಚಿಸಲೆಂದೇ ಸುಳ್ಳು ಹೇಳಿರುವನು' ಎಂಬ ರಹಸ್ಯವು ತಿಳಿದು ಸ್ಕಂದಮತವನ್ನು ಅವಲಂಬಿಸಲಾರರು; ಇನ್ನು ತನ್ನ ಕರ್ತವ್ಯವಾದ ವಿಷ್ಣುಪೂಜೆಯನ್ನಂತೂ ಬಿಡುವಂತೆಯೂ ಇಲ್ಲ; ಅದಕ್ಕೆಂದೇ ಆತನು ಹುತ್ತದೊಳಗೆ ಅಡಗಿಕುಳಿತು ಏಕಾಂತದಲ್ಲಿ ಶ್ರೀಹರಿಯನ್ನು ಆರಾಧಿಸುತ್ತಿರುವನು ಎಂದು ಭಾವ[೧].

೨. ಈ ಸುಬ್ರಹ್ಮಣ್ಯಕ್ಷೇತ್ರದಲ್ಲಿ ಹುತ್ತವೊಂದರಲ್ಲಿ ಸ್ಕಂದನು ನೆಲೆಸಿರುವನು ಎಂಬ ಪ್ರಸಿದ್ಧಿಯನ್ನು ಶ್ರೀವಾದಿರಾಜರು ಹೀಗೆ ಉತ್ಪ್ರೇಕ್ಷಿಸಿರುವರು[೨].

೩. ಸ್ಕಾಂದಮತವು ಪಾಶುಪತ, ಗಾಣಾಪತ, ಸೌರ, ಶಾಕ್ತ ಮೊದಲಾದ ಮತಗಳಂತೆ ಅಸುರಮೋಹನಕ್ಕಾಗಿ ಹೊರಟ ಮತ್ತೊಂದು ಮತ[೩]. ಪಾಶುಪತಕ್ಕೆ ಸ್ವತಃ ಶಿವನೇ ಪ್ರವರ್ತಕನಾಗಿರುವಂತೆ, ಸ್ಕಾಂದಮತಕ್ಕೆ ಸ್ವತಃ ಸ್ಕಂದನೇ ಪ್ರವರ್ತಕನಾಗಿರುವನು[೪]. ಆದರೆ ಶಿವ[೫], ಸ್ಕಂದ ಮೊದಲಾದ ಎಲ್ಲರೂ ಮೂಲತಃ ವಿಷ್ಣುಭಕ್ತರಾಗಿರುವ ಉತ್ತಮ ದೇವತೆಗಳಾಗಿದ್ದು,

---

೧. ಅನೇನ ಪೂರ್ವಂ ಸ್ಕಾಂದಮತಂ ಕೃತ್ವಾ 'ತತ್ರಾಹಮೇವ ಸರ್ವೋತ್ತಮಃ' ಇತಿ ಸಿದ್ಧಾಂತಯಿತ್ವಾ, ಇದಾನೀಂ ಸ್ವೇನ ಅನ್ಯಃ ಪೂಜ್ಯತೇ ಚೇತ್, ಅಸ್ಮತ್ಪ್ರತಾರಣಾಯೈವ ಇದಂ ಶಾಸ್ತ್ರಂ ಕೃತಮಿತಿ ಬುದ್ಧ್ವಾ ಜನಾನಾಂ ಸ್ವಶಾಸ್ತ್ರೇ ಪ್ರವೃತ್ತಿರ್ನ ಸ್ಯಾದಿತಿ ಧಿಯೈವ ರಹಸಿ ಉಪಾರಾಧಾಯಿತುಂ ಗುಹಾಂ ಸಮಾಶ್ರಿತೋಽಸಿ । — ವ್ಯಾಖ್ಯಾನ

೨. ಸುಬ್ರಹ್ಮಣ್ಯಕ್ಷೇತ್ರೇ ವಲ್ಮೀಕಗುಹಾಯಾಂ ಸ್ಕಂದಸ್ತಿಷ್ಠತೀತಿ ಪ್ರಸಿದ್ಧಿಮನುಸೃತ್ಯೇಯಮುತ್ಪ್ರೇಕ್ಷಾ । - ವ್ಯಾ

೩. ಇವುಗಳಲ್ಲಿ ಪ್ರಧಾನವಾದ ಪಾಶುಮತವನ್ನು ಶ್ರೀವೇದವ್ಯಾಸದೇವರು ಬ್ರಹ್ಮಸೂತ್ರಗಳಲ್ಲಿ ನಿರಾಕರಿಸಿರುವರು (ಅಧ್ಯಾಯ ೨, ಪಾದ ೨ - ಪತ್ಯುರಧಿಕರಣ). ಶ್ರೀಮದಾಚಾರ್ಯರು ಇದೇ ನ್ಯಾಯದಿಂದ ಸ್ಕಂದ ಸೌರ ಮೊದಲಾದ ಇತರ ಮತಗಳೂ ನಿರಾಕೃತವಾಗುತ್ತವೆ ಎಂಬುದನ್ನು ತಮ್ಮ ಅನುವ್ಯಾಖ್ಯಾನದಲ್ಲಿ ಸ್ಪಷ್ಟಪಡಿಸಿರುವರು:

ಸ್ಕಂದಸೂರ್ಯಗಣೇಶಾದಿಮತಾನಿ ನ್ಯಾಯತೋಽಮುತಃ ।
ನಿರಾಕೃತಾನ್ಯಶೇಷೇಣ ಸಿದ್ಧಾಂತಸ್ಯಾವಿಶೇಷತಃ ॥

೪. ಸುಬ್ರಹ್ಮಣ್ಯಕ್ಕೆ ಹೋಗುವ ಜನ, ಅವನನ್ನೇ ಸರ್ವೋತ್ತಮನೆಂದು ತಿಳಿಯುವ ತಪ್ಪನ್ನು ಮಾಡದಿರಲಿ ಎಂಬ ತಾತ್ತ್ವಿಕ ದೃಷ್ಟಿಯಿಂದ ಶ್ರೀವಾದಿರಾಜರು ಈ ಪ್ರಮೇಯವನ್ನು ನಿರೂಪಿಸಿರುವರು.

೫. ಪಾಶುಪತಮತವನ್ನು ಪ್ರವರ್ತಿಸಿದ ಶ್ರೀರುದ್ರದೇವರು ಅಂತರಂಗದಲ್ಲಿ ಶ್ರೇಷ್ಠ ಹರಿಭಕ್ತರಾಗಿರುವರು ಎಂಬ ಪ್ರಮೇಯವು ಪದ್ಮಪುರಾಣ ಉತ್ತರಖಂಡದಲ್ಲಿ ಪ್ರತಿಪಾದಿತವಾಗಿದೆ:

ರಾಮರಾಮೇತಿರಾಮೇತಿ ರಮೇ ರಾಮೇ ಮನೋರಮೇ ।
ಸಹಸ್ರನಾಮ ತತ್ತುಲ್ಯಂ ರಾಮನಾಮವರಾನನೇ ॥

ಶ್ರೀಹರಿಪ್ರೀತಿಗಾಗಿ ಮಾತ್ರವೇ ಹಾಗೆ ದುರ್ಮತಗಳನ್ನು ಬೋಧಿಸಿದರು – ಎಂಬ ಪ್ರಮೇಯ ಇದರಲ್ಲಿ ಅಡಗಿದೆ.

ಶ್ರೀವಿಷ್ಣುತೀರ್ಥಮುನಿಮಿತ್ರ ಸುರಾರಿಜೈತ್ರ
ಶ್ರೀಕೃಷ್ಣಪಜ್ಜಲಜಭೃಂಗ ಕೃತಾಘಭಂಗ ।
ಸಹ್ಯೇಶ ದೇಹಿ ಸಕಲೈರುಪಜೀವ್ಯಮನ್ನಂ
ಸಂಹರ್ತೃ ಸರ್ವಭುವನಸ್ಯ ಕುಮಾರ ಮಹ್ಯಮ್ ॥ ೪೨ ॥

ಅ: ಶ್ರೀವಿಷ್ಣುತೀರ್ಥಮುನಿಮಿತ್ರ = ಶ್ರೀವಿಷ್ಣುತೀರ್ಥಮುನಿಗಳಿಗೆ ಸಖನಾದ; ಸುರಾರಿಜೈತ್ರ = ದೇವಶತ್ರುವಾದ ತಾರಕಾಸುರನನ್ನು ಜಯಿಸಿದ; ಶ್ರೀಕೃಷ್ಣಪಜ್ಜಲಜಭೃಂಗ = ಶ್ರೀಕೃಷ್ಣನ ಪಾದಕಮಲಗಳಲ್ಲಿ ದುಂಬಿಯಾದ; ಕೃತಾಘಭಂಗ = ಪಾಪಗಳನ್ನು ಭಗ್ನಗೊಳಿಸಿದ; ಸಹ್ಯೇಶ = ಸಹ್ಯಪರ್ವತಕ್ಕೆ ಸ್ವಾಮಿಯಾದ; (ಹೇ)ಕುಮಾರ = ಎಲೈ ಸುಬ್ರಹ್ಮಣ್ಯನೇ; ಸಕಲೈಃ = ಬ್ರಹ್ಮಾದಿ ಸಕಲರಿಂದಲೂ; ಉಪಜೀವ್ಯಂ = ಆಶ್ರಯಿಸಲ್ಪಡುವ, ಸರ್ವಭುವನಸ್ಯ = ಸಮಸ್ತಲೋಕಗಳ; ಸಂಹರ್ತೃ = ಸಂಹಾರಕನಾದ; ಅನ್ನಂ = ('ಅದ್ಯತೇ ಇತಿ', 'ಅತ್ತಿ ಇತಿ ಅನ್ನಂ' ಎಂಬ ವ್ಯುತ್ಪತ್ತಿಯಿಂದ) ಅನ್ನ ಶಬ್ದವಾಚ್ಯನಾಗಿರುವ ಶ್ರೀನಾರಾಯಣನನ್ನು; ಮಹ್ಯಂ = ನನಗೆ; ದೇಹಿ = ಕೊಡು(ಶ್ರೀನಾರಾಯಣನನ್ನು ನನ್ನ ಕಣ್ಣಿಗೆ ಬೀಳುವಂತೆ ಮಾಡು ಎಂದರ್ಥ).

ಎಲೈ ಸುಬ್ರಹ್ಮಣ್ಯ ! ನೀನು ಶ್ರೀವಿಷ್ಣುತೀರ್ಥಮುನಿಗಳಿಗೆ ಮಿತ್ರನಾದವನು. ದೇವಶತ್ರುಗಳನ್ನು ಜಯಿಸಿದವನು. ಶ್ರೀಕೃಷ್ಣನ ಪಾದಕಮಲಗಳಲ್ಲಿ ದುಂಬಿಯಂತಿರುವವನು. ಪಾಪಗಳನ್ನು ಭಗ್ನಗೊಳಿಸುವವನು; ಸಹ್ಯಪರ್ವತಕ್ಕೆ ಅಧಿಪತಿಯಾದವನು. ಸಕಲರಿಗೆ ಆಶ್ರಯನಾದ, ಸಮಸ್ತಲೋಕಗಳನ್ನು ಸಂಹರಿಸುವ, 'ಅನ್ನ' ಶಬ್ದವಾಚ್ಯನಾದ ಶ್ರೀನಾರಾಯಣನನ್ನು ನನಗೆ ನೀಡು.

ವಿ. ೧. ಶ್ರೀವಿಷ್ಣುತೀರ್ಥಮುನಿಮಿತ್ರ[೧] : ಶ್ರೀವಿಷ್ಣುತೀರ್ಥಶ್ರೀಚರಣರು ಸುಬ್ರಹ್ಮಣ್ಯದಲ್ಲಿ ಮಠವನ್ನು ನಿರ್ಮಿಸಿಕೊಂಡು ಬಹುಕಾಲ ನೆಲೆಸಿದ್ದರು(ಮತ್ತು ಈಗಲೂ ಇದರ ಸಮೀಪದ ಕುಮಾರಪರ್ವತದಲ್ಲಿ ತಪೋನಿರತರಾಗಿರುವರು). ಹೀಗೆ ಒಟ್ಟಾಗಿ ವಾಸಿಸಿದ್ದರಿಂದ ಶ್ರೀವಿಷ್ಣುತೀರ್ಥರಿಗೂ, ಸುಬ್ರಹ್ಮಣ್ಯನಿಗೂ ಪರಸ್ಪರ ಮೈತ್ರಿಯುಂಟಾಗಿದೆ ಎಂಬ ಅರ್ಥದಲ್ಲಿ 'ಶ್ರೀವಿಷ್ಣುತೀರ್ಥಮುನಿಮಿತ್ರ' ಎಂದು ಕರೆಯಲಾಗಿದೆ (ಶ್ರೀವಿಷ್ಣುತೀರ್ಥರು ಶ್ರೀಮದಾಚಾರ್ಯರ ಆದೇಶದಂತೆ ಶ್ರೀಸೋದೆ ಮತ್ತು ಸುಬ್ರಹ್ಮಣ್ಯ ಎಂಬ ಎರಡು ಮಠಗಳಿಗೂ ಪ್ರಥಮ ಪೀಠಾಧೀಶರಾಗಿದ್ದವರು).

---

೧. ವಿಷ್ಣುತೀರ್ಥಶ್ರೀಚರಣಃ ಸುಬ್ರಹ್ಮಣ್ಯೇ ಮಠಂ ಕೃತ್ವಾ ಆತಿಷ್ಠದಿತಿ ಪ್ರಸಿದ್ಧಿಃ।
ಏಕತ್ರಾವಾಸೇನ ಪರಸ್ಪರಮೈತ್ರೀ ಭವತೀತಿ ಗುಹಸ್ಯ ವಿಷ್ಣುತೀರ್ಥಮುನಿಮಿತ್ರತ್ವಮ್ ॥ -ವ್ಯಾಖ್ಯಾನ

೨. ಸಹ್ಯೇಶ: ೯೬೬ ಕಿಲೋಮೀಟರ್‌ಗಳಷ್ಟು ಉದ್ದದ ಸಹ್ಯಾದ್ರಿಪರ್ವತಶ್ರೇಣಿಯಲ್ಲಿ ಸುಬ್ರಹ್ಮಣ್ಯವೇ ಅತ್ಯಂತ ಪ್ರಧಾನವಾದ ಕ್ಷೇತ್ರವೆಂಬುದು 'ಸಹ್ಯೇಶ' ಪದದಿಂದ ಸೂಚಿತವಾಗಿದೆ.

೩. ಅನ್ನಂ: [೧]'ಅದ್ಯತೇಽತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ' ಎಂಬ ಶ್ರುತಿಯು 'ನಾರಾಯಣ'ನಿಗೆ ಅನ್ನಶಬ್ದವಾಚ್ಯತ್ವವನ್ನು ನಿರೂಪಿಸಿದೆ; 'ಅನ್ನಮನ್ನಾದ ಏವ ಚ' ಎಂಬುದಾಗಿ ವಿಷ್ಣುಸಹಸ್ರನಾಮದಲ್ಲೂ 'ಅನ್ನ' ಎಂಬ ನಾಮವು ಉಕ್ತವಾಗಿದೆ.'ಅನ್ನದ' (ಅನ್ನವನ್ನು ಕೊಡುವವನು) ಎಂದು ಪ್ರಸಿದ್ಧನಾದ ಸುಬ್ರಹ್ಮಣ್ಯನನ್ನು ಶ್ರೀವಾದಿರಾಜರು ನಮಗೆ ಮುಖ್ಯತಃ ಅನ್ನ ಶಬ್ದವಾಚ್ಯನಾದ ಶ್ರೀಹರಿಯನ್ನೇ ಕೊಡು ಎಂಬುದಾಗಿ ಕೇಳಿರುವರು. ಯಾವುದೇ ಬೇಡಿಕೆಯನ್ನು ಹೇಗೆ ಆಧ್ಯಾತ್ಮಿಕವಾಗಿ ಅನುಸಂಧಾನಮಾಡಿಕೊಳ್ಳಬಹುದು ಎಂಬುದಕ್ಕೆ ಇದೊಂದು ಉತ್ತಮ ನಿದರ್ಶನ.

## ಶ್ರೀವೇದವ್ಯಾಸ ಸಂಪುಟ

**ಯತ್ರ ಸಂಪುಟಮಸ್ಫೋಟಂ ಕೃಷ್ಣಸ್ಯ ಸ್ಫೋರಯತ್ಯಹೋ ।**
**ಅಗ್ರಾಹ್ಯತ್ವಮದೃಶ್ಯತ್ವಂ ಕಿಂ ಪುನಸ್ತತ್ರ ಪಂಡಿತಾಃ ॥ ೪೩ ॥**

ಅ: **ಯತ್ರ** = ಆ ಸುಬ್ರಹ್ಮಣ್ಯ (ಕ್ಷೇತ್ರ)ದಲ್ಲಿ; **ಅಸ್ಫೋಟಂ** = ತೆರೆಯಲಾಗದ; **ಸಂಪುಟಂ** = (ಸಾಲಿಗ್ರಾಮಗಳನ್ನು ಹೊಂದಿರುವ) ಸಂಪುಟವು; **ಕೃಷ್ಣಸ್ಯ** - ಶ್ರೀಹರಿಯ; **ಅಗ್ರಾಹ್ಯತ್ವಂ** =(ಸಾಕಲ್ಯೇನ) ಅಗ್ರಾಹ್ಯತ್ವವನ್ನೂ; **ಅದೃಶ್ಯತ್ವಂ** = ಅದೃಶ್ಯತ್ವವನ್ನೂ; **ಸ್ಫೋರಯತಿ**[೨] = ಪ್ರಕಟಿಸುತ್ತಿರುವುದು (ಎಂಬುದು); **ಅಹೋ** = ಎಂತಹ ಆಶ್ಚರ್ಯ; **ತತ್ರ** = ಆ ಕ್ಷೇತ್ರದಲ್ಲಿ; **ಪಂಡಿತಾಃ** = ವಿದ್ವಾಂಸರು; **ಕಿಂ ಪುನಃ** = ಶ್ರೀವಿಷ್ಣುವಿನ ಅಗ್ರಾಹ್ಯತ್ವಾದಿಗಳನ್ನು[೩] ಪ್ರತಿಪಾದಿಸುತ್ತಿರುವರು ಎಂದು ಬೇರೆ ಹೇಳಬೇಕೆ?

**ಸುಬ್ರಹ್ಮಣ್ಯಕ್ಷೇತ್ರದಲ್ಲಿನ ತೆರೆಯಲಾಗದ ಸಂಪುಟವೂ ಸಹ ಶ್ರೀಹರಿಯ ಅಗ್ರಾಹ್ಯತ್ವವನ್ನು ಅದೃಶ್ಯತ್ವವನ್ನು ತಿಳಿಸಿಕೊಡುತ್ತಿರುವುದು; ಎಂತಹ ಆಶ್ಚರ್ಯ ! ಇನ್ನು ಅಲ್ಲಿಯ ವಿದ್ವಾಂಸರು ಶ್ರೀವಿಷ್ಣುವಿನ ಅಗ್ರಾಹ್ಯತ್ವಾದಿಗಳನ್ನು ಪ್ರತಿಪಾದಿಸುತ್ತಿರುವರು ಎಂದು ಬೇರೆ ಹೇಳಬೇಕೆ?**

ವಿ: ೧. ಸುಬ್ರಹ್ಮಣ್ಯ ಮಠದ ಪ್ರಧಾನಮೂರ್ತಿಯಾದ 'ವೇದವ್ಯಾಸ ಸಂಪುಟ'ವು ವ್ಯಾಸಮುಷ್ಟಿಮತ್ತು ೧೪೪ ಲಕ್ಷ್ಮೀನಾರಾಯಣಸಾಲಿಗ್ರಾಮಗಳನ್ನು ಹೊಂದಿರುವ ಅಪೂರ್ವ ದೇವರು; ಶ್ರೀಮದಾಚಾರ್ಯರಿಂದ ಶ್ರೀವಿಷ್ಣುತೀರ್ಥರಿಗೆ ಅನುಗೃಹೀತವಾದ ಈ ಸಂಪುಟವು ಇಂದಿಗೂ

---

೧. 'ಅದ್ಯತೇ ಉಪಜೀವ್ಯತೇ ಅತ್ತಿ ಚ ಸಂಹರತಿ ಚ ಯತಸ್ತಸ್ಮಾತ್' । – ವ್ಯಾಖ್ಯಾನ

೨. ಸಂಪುಟಸ್ಯ ಸಂಶ್ಲಿಷ್ಟತ್ವಾತ್ ಅಂತಃಸ್ಥಿತಶ್ರೀಕೃಷ್ಣಮೂರ್ತೇರಗ್ರಾಹ್ಯತ್ವಂ ಅದೃಶ್ಯತ್ವಂ ಚ ವ್ಯನಕ್ತೀತಿ ಭಾವಃ । – ವ್ಯಾಖ್ಯಾನ

೩. ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಂ ।
ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ......। – ಅಥರ್ವಣೋಪನಿಷತ್(೧/೬)
'ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' ಓಂ – ಬ್ರಹ್ಮಸೂತ್ರ (೧/೨/೨೧)

ಅಭೇದ್ಯ ಎಂದೇ ಪ್ರಸಿದ್ಧವಾಗಿದೆ; ಹೀಗಿರುವ ಸಂಪುಟವು ಪರಮಾತ್ಮನ ಅಗ್ರಾಹ್ಯತ್ವ ಅದೃಶ್ಯತ್ವಗಳಿಗೆ ಸಂಕೇತವಾಗಿದೆ ಎಂದು ಭಾವ.

೨. ಹೀಗೆ ಜಡವಾದ ಸಂಪುಟವೇ ಭಗವತ್ಪ್ರತಿಪಾದಕವಾಗಿರುವಾಗ ಅಲ್ಲಿಯ ಪಂಡಿತರು ಶ್ರೀಹರಿಯ ಅದೃಶ್ಯತ್ವಾದಿ ಧರ್ಮಗಳ ಬೋಧಕರು ಎಂಬುದು ಕೈಮುತ್ಯಸಿದ್ಧ;

೩. ವಾಕ್ಯಾರ್ಥಕುಶಲರಾದ ಅನೇಕ ಪಂಡಿತರು ಆ ಸುಬ್ರಹ್ಮಣ್ಯಕ್ಷೇತ್ರದಲ್ಲಿ ನೆಲೆಸಿದ್ದರು ಎಂಬ ವಿಶೇಷಾಂಶವನ್ನು ಇಲ್ಲಿ ಗಮನಿಸಬಹುದು.

೪. ಪರಮಾತ್ಮನ ಅಗ್ರಾಹ್ಯತ್ವಾದಿ ಧರ್ಮಗಳನ್ನು ಸ್ಥಾಪಿಸುವವನೇ ನಿಜವಾದ ಪಂಡಿತ ಎಂಬ ಧ್ವನಿಯೂ ಇಲ್ಲಿದೆ.

**ಅಭೇದ್ಯಮತಿಯತ್ನೇನಾಪ್ಯಸ್ಖಲತ್ಕೃಷ್ಣವಿಗ್ರಹಮ್ ।**
**ತತ್ಪೂಜಾಭಾಜನಂ ಭಾತಿ ಮಾಧ್ವಂ ಹೃದಿವ ಸಂಪುಟಮ್ ॥ ೪೪ ॥**

ಅ: **ಅತಿಯತ್ನೇನ ಅಪಿ** = ಅತ್ಯಂತ ಹೆಚ್ಚಿನ ಪ್ರಯತ್ನದಿಂದಲೂ ಸಹ; **ಅಭೇದ್ಯಂ** = ಭೇದಿಸಲಾಗದ; **ಅಸ್ಖಲತ್ಕೃಷ್ಣವಿಗ್ರಹಂ** = ನಲುಗದ (ವಾಸಿಷ್ಠ) ಕೃಷ್ಣ ವಿಗ್ರಹವನ್ನು ಹೊಂದಿರುವ; **ತತ್ಪೂಜಾಭಾಜನಂ** = ಆ ಕೃಷ್ಣನ ಪೂಜಾಪಾತ್ರೆಯಾಗಿರುವ; **ಸಂಪುಟಂ** = ಸಂಪುಟವು; **ಮಾಧ್ವಂ** = ಶ್ರೀಮಧ್ವಾಚಾರ್ಯರ; **ಹೃತ್ ಇವ** = ಹೃದಯವೋ ಎಂಬಂತೆ; **ಭಾತಿ** = ಕಂಗೊಳಿಸುತ್ತಿದೆ (**ತುಲ್ಯಯೋಗಿತ್ವಾಲಂಕಾರ**).

**ಅತಿ ಹೆಚ್ಚಿನ ಪ್ರಯತ್ನದಿಂದ ಸಹ ತೆರೆಯಲಾಗದ ಶ್ರೀಕೃಷ್ಣನ ವಿಗ್ರಹವುಳ್ಳ, ಕೃಷ್ಣನ ಪೂಜಾಪಾತ್ರೆಯಾಗಿರುವ ಈ ಸಂಪುಟವು ಶ್ರೀಮಧ್ವಾಚಾರ್ಯರ ಹೃದಯ ಎಂಬಂತೆ ಕಂಗೊಳಿಸುತ್ತಿದೆ.**

ವಿ: ೧.ಶ್ರೀವಾಯುದೇವರ ಅವತಾರರಾದ ಶ್ರೀಮಧ್ವಾಚಾರ್ಯರು 'ಆಖಣಾಶ್ಮಸಮ'-ರು[೧]; ಅಸುರರು ಎಷ್ಟು ಪ್ರಯತ್ನಿಸಿದರೂ ಅವರಲ್ಲಿ ಪ್ರವೇಶಮಾಡಲು ಸಮರ್ಥರಾಗಲಿಲ್ಲ ಎಂಬ ವಿಷಯವು ಛಾಂದೋಗ್ಯೋಪನಿಷತ್ತಿನಲ್ಲಿ ಪ್ರತಿಪಾದಿತವಾಗಿದೆ[೨].

೨. ಶ್ರೀಮಧ್ವಾಚಾರ್ಯರ ಹೃದಯವು ಯಾವಾಗಲೂ ಶ್ರೀಕೃಷ್ಣನ ಚಿಂತನೆಯಿಂದ ಕೂಡಿದ್ದು ಶ್ರೀಕೃಷ್ಣಪೂಜೆಗೆ ಮುಖ್ಯಪ್ರತೀಕವಾಗಿರುವುದು, ಸುಬ್ರಹ್ಮಣ್ಯಮಠದ ವ್ಯಾಸ-ಸಂಪುಟವು ಸಹ ಯಾವರೀತಿಯ ಪ್ರಯತ್ನದಿಂದಲೂ ಅಭೇದ್ಯವಾಗಿದೆ, ಪೂಜಾಪ್ರತೀಕ-ವಾಗಿದೆ[೩], ಆದ್ದರಿಂದ ಅದು ಶ್ರೀಮಧ್ವಾಚಾರ್ಯರ ಹೃದಯದಂತೆ ಮಾನ್ಯವಾಗಿದೆ.

---

೧. ಪ್ರಾಣಸ್ಯ ನಾಸುರಾವೇಶಃ ಆಖಣಾಶ್ಮಸಮೋ ಹಿ ಸಃ ।
— ಭಾಗವತತಾತ್ಪರ್ಯನಿರ್ಣಯೋದಾಹೃತಬ್ರಹ್ಮತರ್ಕವಚನ (೧೧/೨/೪೯)

೨. 'ಯ ಏವಾಯಂ ಮುಖ್ಯಪ್ರಾಣಸ್ತಮುದ್ಗೀಥಮುಪಾಸಾಂ ಚಕ್ರಿರೇ' ಇತಿ ಶ್ರುತ್ಯನುಸಾರೇಣ ಮುಖ್ಯಪ್ರಾಣಃ ಅಸುರಾಣಾಂ ಭೇತ್ತುಮಶಕ್ಯಸ್ತತ್ರ ಕದಾऽಪ್ಯಸುರಾವೇಶಾಭಾವಾದಿತಿ ಭಾವಃ । — ವ್ಯಾಖ್ಯಾನ

೩. ಈ ಬಗ್ಗೆ ಹೆಚ್ಚಿನ ವಿವರಗಳು ಶ್ರೀವಾದಿರಾಜಸ್ವಾಮಿಗಳ ಸರಸಭಾರತೀವಿಲಾಸದ ಪಂಚಮವಿಲಾಸದಲ್ಲಿ

೩. ಅಭೇದ್ಯಮತಿಯತ್ನೇನಾಪಿ: ಶ್ರೀವ್ಯಾಸಸಂಪುಟವು ಯಾವ ರೀತಿಯಿಂದಲೂ ತೆರೆಯಲು ಸಾಧ್ಯವಾಗದಿರುವ ಅಪೂರ್ವ ಸಂಪುಟ; ಬಹಳ ಹಿಂದೆ ಅದನ್ನು ತೆರೆಯಲು ಸಾಕಷ್ಟು ಪ್ರಯತ್ನಿಸಿ ವಿಫಲನಾದ ರಾಜನೊಬ್ಬನು, ಕೊನೆಗೆ ಆನೆಯ ಕಾಲಲ್ಲಿ ಅದನ್ನು ತುಳಿಸಲು ಯತ್ನಿಸಿದನಂತೆ, ಆಗಲೂ ಅದು ಸಾಧ್ಯವಾಗಲಿಲ್ಲ; ಬದಲಾಗಿ ಆನೆಯೇ ಕ್ಲೇಶಪಟ್ಟು ಮೃತವಾಯಿತಂತೆ? ಆ ರಾಜನೂ ಅನೇಕ ತೆರನಾದ ಆಪತ್ತಿಗೆ ಗುರಿಯಾದನಂತೆ ಎಂಬುದನ್ನು ಪ್ರಾಚೀನವಾದ ತಾಮ್ರ ಶಾಸನವೊಂದು ಸಹ ತಿಳಿಸುತ್ತದೆ[೧]. ಈ ಸಂಪುಟಕ್ಕೇ ಇಂದು ಗಂಧಪುಷ್ಪಾದಿ ಸಮರ್ಪಣಗಳಿಂದ ಪೂಜೆಯಾಗುತ್ತಿದೆ[೨];

೪. ಮುಂದೊಮ್ಮೆ ಸನ್ಮತಸ್ಥಾಪನೆಗಾಗಿ ಕುಮಾರಪರ್ವತದಿಂದ ಇಳಿದು ಬರುವ ಶ್ರೀವಿಷ್ಣುತೀರ್ಥರಿಂದ ಮಾತ್ರವೇ ಈ ಸಂಪುಟವನ್ನು ತೆರೆದು ಪೂಜಿಸಲು ಸಾಧ್ಯ ಎಂದು ಸಂಪ್ರದಾಯ.

## ಪಯಸ್ವಿನೀ (ನದೀ)

**ಪಯಸ್ವಿನಿ ಜಗತ್ಸ್ವಾಮೀ ತ್ವಯಿ ಸನ್ನಿಹಿತೋ ಧ್ರುವಮ್ ।**
**ನ ಚೇತ್ ತತ್ಪ್ರೇಯಸೀ ತೀರೇ ಕಥಂ ತೇಽವತರಿಷ್ಯತಿ ॥ ೪೫ ॥**

ಅ: (ಹೇ) **ಪಯಸ್ವಿನಿ !** = ಎಲೈ ಪಯಸ್ವಿನೀ ನದಿಯೇ !; **ಜಗತ್ಸ್ವಾಮೀ** = ಜಗದೊಡೆಯನಾದ ಶ್ರೀನಾರಾಯಣನು; **ತ್ವಯಿ** = ನಿನ್ನಲ್ಲಿ; **ಸನ್ನಿಹಿತಃ** = ಸನ್ನಿಹಿತನಾಗಿರುವನು; **ಧ್ರುವಂ** = (ಇದು) ನಿಶ್ಚಯ; **ನ ಚೇತ್** = ಇಲ್ಲವಾದಲ್ಲಿ; **ತತ್ಪ್ರೇಯಸೀ** = ಅವನ ಪ್ರಿಯತಮೆಯಾದ ಮಹಾಲಕ್ಷ್ಮಿಯು; **ತೇ** = ನಿನ್ನ; **ತೀರೇ** = ತೀರದಲ್ಲಿ; **ಕಥಂ** = ಏತಕ್ಕೆ; **ಅವತರಿಷ್ಯತಿ** =(ದುರ್ಗಾರೂಪದಿಂದ) ಅವತರಿಸುವರು?

ಎಲೈ ಪಯಸ್ವಿನೀ ! ಜಗದೊಡೆಯನಾದ ಶ್ರೀನಾರಾಯಣನು ನಿನ್ನಲ್ಲಿ ಸನ್ನಿಹಿತ ಎಂಬುದು ನಿಶ್ಚಿತ. ಇಲ್ಲವಾದಲ್ಲಿ ಅವನ ಪ್ರಿಯತಮೆಯಾದ ಮಹಾಲಕ್ಷ್ಮಿಯು ನಿನ್ನ ತೀರದಲ್ಲಿ ಏತಕ್ಕೆ ದುರ್ಗಾರೂಪದಿಂದ ಅವತರಿಸುವಳು?

ವಿ: ೧. ಕಲಿಯುಗದಲ್ಲಿ (ಮೂವತ್ತಾರು ಸಾವಿರ ವರ್ಷಗಳು ಕಳೆದ ಮೇಲೆ) ದುಷ್ಟರ ಸಂಹಾರಕ್ಕಾಗಿ ದುರ್ಗಾದೇವಿಯು ವಿಪ್ರಕುಲದಲ್ಲಿ ಅವತರಿಸುವಳು ಎಂಬುದಾಗಿ ಶ್ರೀಮದಾಚಾರ್ಯರು[೩] ತಿಳಿಸಿರುವರು.

---

ದೊರೆಯುತ್ತವೆ.

೧. ಇದು ಶ್ರೀವಿಷ್ಣುತೀರ್ಥರ ಶಿಷ್ಯರಾದ ಶ್ರೀಅನಿರುದ್ಧತೀರ್ಥರ ಕಾಲಕ್ಕೆ ನಡೆದ ಘಟನೆ ಎಂಬುದಾಗಿ ಶಾಸನದಲ್ಲಿದೆ; ಆ ಶಾಸನವು ಸುಬ್ರಹ್ಮಣ್ಯಮಠದ ಚರಿತ್ರೆ ಪುಸ್ತಕದಲ್ಲಿ ಅಚ್ಚಾಗಿದೆ.

೨. ದೇವಸ್ಯಾಸ್ಫೋಟಸಂಪುಟಾಂತಃಪಾತಿತ್ವಾತ್ ಸಂಪುಟೋಪರ್ಯೇವ ಗಂಧಪುಷ್ಪಾದಿಕಮರ್ಚಯಂತೀತಿ ಭಾವಃ । — ವ್ಯಾಖ್ಯಾನ

೩. ದುರ್ಗಾ ಪುನರ್ವಿಪ್ರಕುಲೇಽವತೀರ್ಣಾ ಹನಿಷ್ಯತಿ ವ್ರಾತಮಥಾಸುರಾಣಾಂ ।
— ಮಹಾಭಾರತತಾತ್ಪರ್ಯನಿರ್ಣಯ.(೩೨/೧೬೪)

೨. ತಮ್ಮ ದಕ್ಷಿಣದಿಗ್ವಿಜಯ ಕಾಲದಲ್ಲಿ ಪಯಸ್ವಿನಿಯನ್ನು ಸಂದರ್ಶಿಸಿದಾಗ, ಅದರ ತೀರದಲ್ಲೇ ದುರ್ಗಾದೇವಿಯು ಅವತರಿಸಲಿರುವುದನ್ನು ಸ್ಮರಿಸಿಕೊಂಡರು ಎಂಬ ಮಾತು [೧]ಸುಮಧ್ವವಿಜಯದಲ್ಲಿದೆ; ಈ ಪ್ರಸಿದ್ಧಿಯ ಹಿನ್ನಲೆಯಲ್ಲಿ ಶ್ರೀವಾದಿರಾಜಸ್ವಾಮಿಗಳು ಆ ನದಿಯನ್ನು ಹೀಗೆ ಸ್ತುತಿಸಿರುವರು;

೩. ದುರ್ಗಾದೇವಿಯು ಇತರ ಸ್ಥಳಗಳನ್ನು ಬಿಟ್ಟು ಪಯಸ್ವಿನೀ ತೀರವನ್ನೇ ತನ್ನ ಅವತಾರಸ್ಥಳವನ್ನಾಗಿ ನಿಶ್ಚಯಿಸಿರುವರು ಎಂದ ಮೇಲೆ ಅದರಲ್ಲಿ ಮಹಾವಿಷ್ಣುವಿನ ವಿಶೇಷ ಸನ್ನಿಧಾನ ಇರುವುದು ನಿಶ್ಚಿತ ಎಂದು ಭಾವ[೨].

೪. ಪಯಸ್ವಿನಿಯು ಕೇರಳದಲ್ಲಿ ಹರಿಯುವ ಮುಖ್ಯ ನದಿಗಳಲ್ಲೊಂದು; ಇದನ್ನು ಕೇರಳಕ್ಕೆ ಭೂಷಣಪ್ರಾಯ ಎಂದೂ, ಮನಃ ಶುದ್ಧಿಯನ್ನು ಕರುಣಿಸುವ ಪವಿತ್ರ ನದಿ ಎಂದೂ ಸುಮಧ್ವವಿಜಯಕಾರರು ವರ್ಣಿಸಿರುವರು.

## ಸುವರ್ಣಾ(ನದೀ)

**ವೇದಾಚಲಹೃದುದ್ಭೂತಾಂ [೩]ಸುವರ್ಣಾಂ ಕೋ ನು ವರ್ಣಯೇತ್ ।**
**ಅಂಹಸೋ ದಹ್ಯಮಾನಸ್ಯ ಶ್ರಾವಯಂತೀಂ ಸ್ವನಂ ಜನಾನ್ ॥ ೪೬ ॥**

ಅ: **ವೇದಾಚಲಹೃದುದ್ಭೂತಾಂ** = 'ವೇದ' ಎಂಬ ಪರ್ವತದ (ಹೃದಯ) ಗುಹೆಯಿಂದ ಹುಟ್ಟಿರುವ; **ದಹ್ಯಮಾನಸ್ಯ** = ದಹಿಸಲ್ಪಡುತ್ತಿರುವ; **ಅಂಹಸಃ** = ಪಾಪದ; **ಸ್ವನಂ** = ಧ್ವನಿಯನ್ನು; **ಜನಾನ್** = ತನ್ನಲ್ಲಿ ಮುಳುಗುಹಾಕುವ ಜನರಿಗೆ; **ಶ್ರಾವಯಂತೀಂ** = ಕೇಳಿಸುತ್ತಿರುವ; **ಸುವರ್ಣಾಂ** = ಸುವರ್ಣಾ ಎಂಬ ನದಿಯನ್ನು; **ಕೋ ನು ವರ್ಣಯೇತ್?** = ಯಾವನು ತಾನೇ ಬಣ್ಣಿಸಿಯಾನು?

---

೧. ಸ್ವಹೇಲಯಾ ಪಾತಿತಪಾರ್ಥಿವವ್ರಜಾಂ ಧೀಶುದ್ಧಿದಾಂ ಕೇರಳಭೂಷಣಾಯಿತಾಮ್ ।
ಪಯಸ್ವಿನೀಂ ಪ್ರೇಕ್ಷ್ಯ ಪಥಿ ದ್ವಿಜಾರ್ಚಿತಾಂ ಸ ಭಾವಿನೀಮಸ್ಮರದತ್ರ ಚಂಡಿಕಾಮ್ ।
– ಸುಮಧ್ವವಿಜಯ(೫/೩೫)

೨. ದುರ್ಗಾರೂಪೇಣ ಮಹಾಲಕ್ಷ್ಮೀಃ ಪಯಸ್ವಿನೀತೀರೇ ಅವತರಿಷ್ಯತೀತಿ ಪುರಾಣಪ್ರಸಿದ್ಧಿಃ। ಸ್ವಭರ್ತ್ರವಸ್ಥಿತಿಮವಲೋಕ್ಯ ಮಹಾಲಕ್ಷ್ಮ್ಯಾ ಅವತರಿಷ್ಯಮಾಣತ್ವಾತ್ ತ್ವಯಿ ವಿಷ್ಣುಃ ಸನ್ನಿಹಿತ ಇತಿ ನಿಶ್ಚಯ ಇತಿ ಭಾವಃ।
– ವ್ಯಾಖ್ಯಾನ

ಒಡೆಯನಿದ್ದಲ್ಲಿಗೆ ಮಡದಿ ಬಾಹೊದು ರೂಢಿಗುಚಿತವಿದು ನಡೆ ನಮ್ಮನೆಗೆ - (ಬಾರೇ ಭಾಗ್ಯದ ನಿಧಿಯೇ) – ಎಂಬ ಅನಂತಾದ್ರೀಶರ ಮಾತನ್ನು ಇಲ್ಲಿ ಮಡದಿ ಇದ್ದಲ್ಲಿಗೆ ಒಡೆಯ ಬರುವನು ಎಂಬುದಾಗಿ ಅನ್ವಯಿಸಿಕೊಳ್ಳಬಹುದು. ಅವರಿಬ್ಬರೂ ನಿತ್ಯ ಅವಿಯೋಗಿಗಳು ಎಂಬ ಪ್ರಮೇಯ ಇದರಿಂದ ಸೂಚಿತ.

೩. ಶ್ರೀವಾದಿರಾಜರು ಇಲ್ಲಿಯವರೆಗೂ ದಕ್ಷಿಣಕ್ಕೆ ಬಂದು ಇಲ್ಲಿಂದ ಪುನಃ ಉತ್ತರಕ್ಕೆ ಹೊರಟಿರುವರು.

ಪಾಪಗಳು ಸುಡುವ ಧ್ವನಿಯನ್ನು ಜನರ ಕಿವಿಗೆ ಬೀಳಿಸುವ, ವೇದಪರ್ವತದ ಗುಹೆಯಿಂದ ಹುಟ್ಟಿಬಂದ, ಈ ಸುವರ್ಣಾನದಿಯನ್ನು ಯಾವನು ತಾನೇ ಬಣ್ಣಿಸಿಯಾನು?

ವಿ: ೧. ಉಡುಪಿಯಿಂದ ಐದು ಕಿ.ಮೀ. ದೂರವಿರುವ ಮಣಿಪಾಲದಲ್ಲಿ ಈ ಸುವರ್ಣಾನದಿಯು ಹರಿಯುತ್ತದೆ; ವೇದವೆಂಬ ಪರ್ವತದ ಮಧ್ಯಭಾಗದಿಂದ ಹುಟ್ಟುವ ನದಿಯೆಂದು ಇದಕ್ಕೆ ಪ್ರಸಿದ್ಧಿಯುಂಟು;

೨. ಇದರಲ್ಲಿ ಕೃಷ್ಣಾಂಗಾರ ಚತುರ್ದಶಿ (ಕೃಷ್ಣ ಪಕ್ಷದ ಚತುರ್ದಶಿಯು ಮಂಗಳವಾರ ಒದಗಿದ ದಿನ)ಯಂದು ಅವಗಾಹನ ಸ್ನಾನವನ್ನು ಮಾಡುವವರ ಕಿವಿಗೆ, ಅವರ ಪಾಪಗಳು ನಾಶವಾಗುವ 'ಚಟಚಟ' ವೆಂಬ ಧ್ವನಿಯು ಕೇಳಿಸುವುದು. ಹೀಗೆ ಸ್ನಾನ ಮಾಡುತ್ತಿರುವಾಗಲೇ ಪಾಪನಾಶವಾಗುವುದನ್ನು ಖಚಿತಪಡಿಸುವ 'ಸುವರ್ಣಾ' ನದಿಯು ತುಂಬಾ ಪವಿತ್ರವಾದುದು ಎಂದು ಭಾವ.

೩. ನಿತ್ಯವಾದ ವೇದಗಳ ತಾತ್ಪರ್ಯಕ್ಕೆ ಅನುಗುಣವಾಗಿ ರಚಿತವಾಗಿರುವ (ಬ್ರಾಹ್ಮಾಂಶ್ಚ ವೇದತಶ್ಚಕ್ರೇ - ಇತ್ಯಾದಿ) ಇತರ ಶಾಸ್ತ್ರಗ್ರಂಥಗಳು ಸಹ 'ಸುವರ್ಣ' (ನಿರ್ದೋಷಃ ಶಬ್ದಃ ಆಗಮಃ' ಶೋಭನಾಃ ವರ್ಣಾ ಯಸ್ಯ)ವೇ ಆಗಿದ್ದು ಅವುಗಳ ಅವಗಾಹನವು ಸಹ ಯಥಾಯೋಗ್ಯವಾಗಿ ಪಾಪನಾಶಕವಾಗಿದೆ (ಶ್ರುತಂ ಹರತಿ ಪಾಪಾನಿ) ಎಂಬ ಅರ್ಥವು ಸಹ ಇಲ್ಲಿ ಸೂಚಿತವಾಗಿದೆ ಎನ್ನಬಹುದು.

## ಕುಂಭಾಸಿ (ಕ್ಷೇತ್ರ)

**ಭಾಸಿ ಕುಂಭಾಸಿಸಂಜ್ಞ ತ್ವಂ ಕ್ಷೇತ್ರಂ ಶ್ರೀಶಗಿರೀಶಯೋಃ ।**
**ಯತ್ರ ಕುಂಭಾಸುರಸ್ಯಾಸಿರಭಾಸೀದ್ದ್ರೌಪದೀಪತಿಃ ॥ ೪೭ ॥**

ಅ: (ಹೇ)ಕುಂಭಾಸಿಸಂಜ್ಞ = ಎಲೈ ಕುಂಭಾಸಿಯೇ !; ತ್ವಂ = ನೀನು; ಶ್ರೀಶ-ಗಿರೀಶಯೋಃ = ಹರಿಹರರ; ಕ್ಷೇತ್ರಂ = ಕ್ಷೇತ್ರವಾಗಿ; ಭಾಸಿ = ಶೋಭಿಸುತ್ತಿರುವಿ; ಯತ್ರ = ಅಲ್ಲಿ; ದ್ರೌಪದೀಪತಿಃ = ದ್ರೌಪದೀಪತಿಯಾದ ಶ್ರೀಭೀಮಸೇನನು; ಕುಂಭಾಸುರಸ್ಯ = ಕುಂಭನೆಂಬ ರಾಕ್ಷಸನಿಗೆ; ಅಸಿಃ = ಖಡ್ಗವಾಗಿ; ಅಭಾಸೀತ್ = ಕಂಗೊಳಿಸಿದನು[೧].

ಎಲೈ ಕುಂಭಾಸಿಯೇ ! ನೀನು ಹರಿಹರರ ಕ್ಷೇತ್ರವಾಗಿ ಶೋಭಿಸುತ್ತಿರುವಿ; ಇಲ್ಲಿ ದ್ರೌಪದೀಪತಿಯಾದ ಶ್ರೀಭೀಮಸೇನನು ಕುಂಭನೆಂಬ ರಾಕ್ಷಸನಿಗೆ ಖಡ್ಗವಾಗಿ ಕಂಗೊಳಿಸಿದನು.

ವಿ: ೧. ಕುಂಭನೆಂಬ ರಾಕ್ಷಸನ ಪಾಲಿಗೆ ಶ್ರೀಭೀಮಸೇನನು ಖಡ್ಗದಂತೆ ನಾಶಕನಾದ ಸ್ಥಳ-ವಾದ್ದರಿಂದ 'ಕುಂಭಾಸಿ'[೨] ಎಂದು ಈ ಕ್ಷೇತ್ರವು ಪ್ರಸಿದ್ಧವಾಗಿದೆ.

---

೧. ಕುಂಭಾಸಿಕ್ಷೇತ್ರೇ ಭೀಮಸೇನಃ ಕುಂಭಾಸುರಂ ಜಘಾನೇತಿ ಪುರಾಣಪ್ರಸಿದ್ಧಿಃ । – ವ್ಯಾಖ್ಯಾನ
೨. ಕುಂಭಾಸಿಯು ಶ್ರೀವಾದಿರಾಜಸ್ವಾಮಿಗಳ ಜನ್ಮಸ್ಥಳವಾದ 'ಹೂವಿನಕೆರೆ' ಗೆ ಎರಡು ಮೈಲು

೨. ವಿಷ್ಣು ಮತ್ತು ಶಿವ ಇಬ್ಬರ ಕ್ಷೇತ್ರವೆಂದು ಇದು ಮಾನ್ಯವಾಗಿರುವುದರಿಂದ, ವೈಷ್ಣವರು ಮತ್ತು ಶೈವರು ಉಭಯರೂ ಈ ಕ್ಷೇತ್ರವನ್ನು ಸಂದರ್ಶಿಸುವರು ಎಂದು ಭಾವ.

**ಗುಹಾಮುಖಂ ತೀರ್ಥನೇತ್ರಂ ವೇದಸ್ಥಾನಂ ವನಾಯನಮ್ ।**
**ಯತ್ಯರ್ಥ್ಯಂ ಗೌತಮಕ್ಷೇತ್ರಂ ಚಿತ್ರಂ ತತ್ತನುವದ್ ಬಭೌ ॥ ೪೮ ॥**

ಅ: **ಗುಹಾಮುಖಂ** = ಗುಹೆಯೇ ಮುಖವಾಗಿರುವ; **ತೀರ್ಥನೇತ್ರಂ** = ತೀರ್ಥಗಳೇ ಕಣ್ಣಾಗಿರುವ; **ವನಾಯನಂ** = ವನವೇ ನೆಲೆಯಾಗಿರುವ; **ವೇದಸ್ಥಾನಂ** = ವೇದಕ್ಕೆ ತವರಾದ; **ಯತ್ಯರ್ಥ್ಯಂ** = ಯತಿಗಳು ಬಯಸುವ; **ಗೌತಮಕ್ಷೇತ್ರಂ** = ಗೌತಮಕ್ಷೇತ್ರವಾದ ಆ ಕುಂಭಾಸಿಯು; **ತತ್ತನುವತ್** = ಅವರ ಶರೀರದಂತೆ; **ಬಭೌ** = ಕಂಗೊಳಿಸಿತು; **ಚಿತ್ರಂ** = ಆಶ್ಚರ್ಯವು !

**ಗುಹೆಯೇ ಮುಖ, ತೀರ್ಥಗಳೇ ಕಣ್ಣುಗಳು, ವೇದಗಳಿಗೆ ತವರು, ವನವೇ ನೆಲೆ. ಯತಿಗಳು ಬಯಸುವ ಇಂತಹ ಗೌತಮಕ್ಷೇತ್ರವಾದ ಕುಂಭಾಸಿಯು ಆ ಮುನಿಯ ಶರೀರದಂತೆ ಕಂಗೊಳಿಸುತ್ತಿರುವುದು; ಆಶ್ಚರ್ಯ !**

ವಿ: ೧. ಹಿಂದೊಮ್ಮೆ ಭೀಕರ ಬರಗಾಲದಲ್ಲಿ ಗೌತಮರು ಗಂಗಾದೇವಿಯನ್ನು ಒಲಿಸಿ ಅವರ ಅನುಗ್ರಹಕ್ಕೆ ಅನೇಕ ಋಷಿಗಳಿಗೆ ತಮ್ಮ ಆಶ್ರಯದಲ್ಲಿ ಆಶ್ರಯವನ್ನು ಕಲ್ಪಿಸಿ ಉಪಕಾರ ಮಾಡಿದ ಸ್ಥಳವೆಂಬ ಕಾರಣದಿಂದಾಗಿ 'ಗೌತಮಕ್ಷೇತ್ರ'ವೆಂಬುದಾಗಿಯೂ ಈ ಕುಂಭಾಸಿಯು ಪ್ರಸಿದ್ಧವಾಗಿದೆ[೧]. ಆ ಕ್ಷೇತ್ರವು ಗೌತಮರ ಶರೀರದಂತೆ ಕಂಗೊಳಿಸುವುದು ಎಂದು ಇಲ್ಲಿ ವರ್ಣಿಸಿರುವರು.

೨. **ಗುಹಾಮುಖಂ** : ಕುಂಭಾಸಿಯಲ್ಲಿ 'ಯಮಗುಹಾ'[೨] ಎಂಬ ಹೆಸರಿನ ಗುಹೆಯೊಂದಿದ್ದು, ಅದು ಈ ಕ್ಷೇತ್ರಕ್ಕೆ ಮುಖಸ್ಥಾನೀಯವಾಗಿದೆ ಎಂದು ಭಾವ.

೩. **ತೀರ್ಥನೇತ್ರಂ** : ಇಲ್ಲಿ ಶೂದ್ರರಿಗೆ ಮತ್ತೆ ಬ್ರಾಹ್ಮಣರಿಗೆ ಎಂಬುದಾಗಿ ಎರಡು ಪ್ರತ್ಯೇಕ ತೀರ್ಥಗಳಿದ್ದು, ಅವೆರಡೂ ಈ ಕ್ಷೇತ್ರಕ್ಕೆ ನೇತ್ರಸ್ಥಾನೀಯವಾಗಿವೆ ಎಂದು ಭಾವ.

೪. **ವನಾಯನಂ** : 'ಮಧುವನ'[೩] ವೆಂಬ ಇಲ್ಲಿನ ವನವೇ ಈ ಕ್ಷೇತ್ರಕ್ಕೆ ಶರೀರ ಸ್ಥಾನೀಯವಾಗಿದೆ ಎಂದು ಭಾವ.

---

ದೂರದಲ್ಲಿ, ಉಡುಪಿ ಕುಂದಾಪುರ ಮುಖ್ಯ ರಸ್ತೆಯಲ್ಲಿದೆ. ಇಲ್ಲಿ ಹರಿಹರರ ಸನ್ನಿಧಾನದಿಂದ ಕೂಡಿವೆ ಎಂಬ ಪ್ರಸಿದ್ಧಿಯುಳ್ಳ ಎರಡು ಜಲಕುಂಡಗಳಿವೆ; ಇಲ್ಲಿ ಒಂದು ಗಣಪತಿ ದೇವಾಲಯವೂ ಉಂಟು. ಕುಂಭಾಸಿಗೆ ಗಜಪುರವೆಂದು ನಾಮಾಂತರವೂ ಉಂಟು. ಇದೂ ಪರಶುರಾಮಕ್ಷೇತ್ರದ ಸಪ್ತಮಹಾಕ್ಷೇತ್ರಗಳಲ್ಲಿ ಒಂದು.

೧. (ಗೌತಮಕ್ಷೇತ್ರಂ) ಅನಾವೃಷ್ಟೌ ಸತ್ಯಾಂ ಗೌತಮಮುನಿನಾ ಸ್ವಶಕ್ತ್ಯಾ ಗಂಗಾಮಾಹೂಯ ಮುನೀನ್ ಸ್ಥಾಪಯಿತ್ವಾ ಸ್ಥಿತಮಿತಿ ಪೌರಾಣಿಕೀ ಕಥಾ । – ವ್ಯಾಖ್ಯಾನ

೨. ತಸ್ಮಿನ್ ಕ್ಷೇತ್ರೇ ಯಮಗುಹಾಭಿಧಾ ಕಾಚನ ಗುಹಾ ವರ್ತತೇ । –ವ್ಯಾಖ್ಯಾನ

೩. ತತ್ರ ಮಧುವನಾಖ್ಯಂ ವನಮಸ್ತೀತಿ ಭಾವಃ । –ವ್ಯಾಖ್ಯಾನ

ಭಾ. ಗುಹೆಯು ಮುಖವಾಗಿಯೂ, ಎರಡು ತೀರ್ಥಗಳು ನೇತ್ರಗಳಾಗಿಯೂ, ವೇದಗಳಿಗೆ ನೆಲೆಯಾಗಿಯೂ, ಮಧುವನವು ಶರೀರವಾಗಿಯೂ ಇರುವ ಗೌತಮ ಕ್ಷೇತ್ರವು ಗೌತಮಮುನಿಗಳ ಶರೀರವೋ ಎಂಬಂತೆ ಕಂಗೊಳಿಸುವುದು ಎಂದು ಭಾವ.

## ಕೋಟೀಶ್ವರ (ಕ್ಷೇತ್ರ)

**ಚಾರು ಕೋಟೀಶ್ವರಸ್ಥಾನಂ ಶೋಭತೇ ಯತ್ ಪುರತ್ರಯಮ್ ।**
**ಪುರಾರಿರಿವ ನಿರ್ಜಿತ್ಯ ಧ್ವಜೇನಾದ್ಯಾಪಿ ಜೃಂಭತೇ ॥ ೪೯ ॥**

ಅ: ಚಾರು = ಮನೋಹರವಾದ, [1]ಕೋಟೀಶ್ವರಸ್ಥಾನಂ = ಕೋಟೀಶ್ವರ ಎಂಬ ಶಿವನ ಕ್ಷೇತ್ರವು, ಶೋಭತೇ = ಶೋಭಿಸುತ್ತಿದೆ, ಯತ್ = ಇದು, ಪುರಾರಿಃ ಇವ = ತ್ರಿಪುರಾರಿಯಾದ ಶಿವನಂತೆ, ಪುರತ್ರಯಂ = ಸ್ಕಂದಪುರ(ಕಂದಾವರ), ಗಜಪುರ (ಕುಂಭಾಸಿ) ಮತ್ತು ಬ್ರಹ್ಮಪುರ (ಬ್ರಹ್ಮಾವರ) ಎಂಬ ಮೂರು ಗ್ರಾಮಗಳನ್ನು, ನಿರ್ಜಿತ್ಯ = ಜಯಿಸಿ (ಈ ಮೂರು ಗ್ರಾಮಗಳಿಂದಲೂ ಉತ್ಸವಕ್ಕಾಗಿ ವಂತಿಗೆಯು ಕೋಟೀಶ್ವರಕ್ಕೆ ಸಲ್ಲುತ್ತವೆ ಎಂದು ಭಾವ); ಅದ್ಯಾಪಿ = ಇಂದೂ ಸಹ; ಧ್ವಜೇನ = ಧ್ವಜೋತ್ಸವದಿಂದ; ಜೃಂಭತೇ = ಕಂಗೊಳಿಸುತ್ತಿರುವುದು (ಉತ್ಪ್ರೇಕ್ಷಾಲಂಕಾರ).

ಮನೋಹರವಾದ, ಕೋಟೀಶ್ವರ ಎಂಬ ಶಿವನ ಕ್ಷೇತ್ರವು ಶೋಭಿಸುತ್ತಿದೆ. ಇದು, ತ್ರಿಪುರಾರಿಯಾದ ಶಿವನಂತೆ ಸ್ಕಂದಪುರ(ಕಂದಾವರ), ಗಜಪುರ (ಕುಂಭಾಸಿ) ಮತ್ತು ಬ್ರಹ್ಮಪುರ (ಬ್ರಹ್ಮಾವರ) ಎಂಬ ಮೂರು ಗ್ರಾಮಗಳನ್ನು, ಜಯಿಸಿ ಇಂದೂ ಸಹ ಧ್ವಜೋತ್ಸವದಿಂದ ಕಂಗೊಳಿಸುತ್ತಿರುವುದು.

ವಿ: ಈಶ್ವರನು ಪುರತ್ರಯವನ್ನು ಜಯಿಸಿ ಜಯಧ್ವಜದಿಂದ ಶೋಭಿಸಿದಂತೆ ಕೋಟೀಶ್ವರವು ಕಂದಾವರ, ಕುಂಭಾಸಿ ಮತ್ತು ಬ್ರಹ್ಮಾವರಗಳೆಂಬ ಗ್ರಾಮತ್ರಯಗಳಿಂದ ಬರುವ ವಂತಿಗೆಯಿಂದ ಧ್ವಜೋತ್ಸವವನ್ನು ಆಚರಿಸುವುದರಿಂದ, ರುದ್ರದೇವರಂತೆ ಶೋಭಿಸುತ್ತಿದೆ ಎಂದು ಭಾವ. ಪರಶುರಾಮಕ್ಷೇತ್ರದ ಸಪ್ತಮಹಾಕ್ಷೇತ್ರಗಳಲ್ಲಿ ಇದೂ ಒಂದು.

**ನಮಸ್ತೇ ಶಿತಿಕಂಠಾಯ ಕೋಟಿಸಂಖ್ಯರ್ಷಿತೋಷಣಾತ್ ।**
**ಯಃ ಕೋಟೀಶ್ವರಸಂಜ್ಞೋಽಭೂಃ ಸ ಕಿಂ ನೈಕರ್ಷಿಕಾಮಧುಕ್ ॥೫೦॥**

---

೧. ಕೋಟೀಶ್ವರವು ಉಡುಪಿ - ಕುಂದಾಪುರ ಮಾರ್ಗದಲ್ಲಿರುವ ಮತ್ತೊಂದು ಪುಣ್ಯಕ್ಷೇತ್ರ; ಇಲ್ಲಿ ಒಂದು ದೊಡ್ಡ ಈಶ್ವರ ದೇವಾಲಯವಿದೆ; ತನ್ನನ್ನು ಕುರಿತು ತಪಸ್ಸು ಮಾಡುತ್ತಿದ್ದ ಕೋಟಿಸಂಖ್ಯಾಕರಾದ ಮುನಿಗಳಿಗೆ ಕೋಟಿಲಿಂಗಗಳ ರೂಪದಲ್ಲಿ ಈಶ್ವರನು ದರ್ಶನಕೊಟ್ಟ ಸ್ಥಳವಾದ್ದರಿಂದ ಇದಕ್ಕೆ 'ಕೋಟೀಶ್ವರ' ಎಂದು ಹೆಸರು; ಈ ದೇವಾಲಯದಲ್ಲಿ ಇಂದೂ ಶಿವಲಿಂಗದ ಕೆಳಗೆ ಇರುವ ಅನೇಕ ಲಿಂಗಗಳೇ ಈ ಕೋಟಿಲಿಂಗಗಳು ಎಂದು ಪ್ರತೀತಿ.

ಅ: **ಶಿತಿಕಂಠಾಯ** = ನೀಲಕಂಠನಾದ, **ತೇ ನಮಃ** = ನಿನಗೆ ನಮಸ್ಕಾರವು; **ಯಃ (ತ್ವಂ)** = ಯಾವ (ನೀನು); **ಕೋಟಿಸಂಖ್ಯರ್ಷಿತೋಷಣಾತ್**[೧] = ಕೋಟಿಸಂಖ್ಯಾಕರಾದ ಋಷಿಗಳಿಗೆ ಸಂತೋಷವುಂಟುಮಾಡಿದ್ದರಿಂದಾಗಿ; **ಕೋಟೀಶ್ವರಸಂಜ್ಞಃ** = ಕೋಟೀಶ್ವರ-ನೆಂಬ ಹೆಸರಿನವನಾಗಿ; **ಅಭೂಃ** = ಆಗಿರುವೆ; **ಸಃ (ತ್ವಂ)** = ಅಂತಹ ನೀನು, **ಏಕರ್ಷಿ-ಕಾಮಧುಕ್** = ಒಬ್ಬ ಋಷಿಯಾದ ನನಗೆ ಕಾಮಧೇನುವಾಗಿ; **ನ ಕಿಂ** = ಆಗಲಾರೆಯೇನು?

**ನೀಲಕಂಠನಾದ, ನಿನಗೆ ನಮಸ್ಕಾರ; ನೀನು ಕೋಟಿಸಂಖ್ಯೆಯ ಋಷಿಗಳಿಗೆ ಸಂತೃಪ್ತಿ ನೀಡಿದ್ದರಿಂದಾಗಿ 'ಕೋಟೀಶ್ವರ' ಎನ್ನಿಸಿರುವಿ. ಅಂತಹ ನೀನು, ಒಬ್ಬ ಋಷಿಯಾದ ನನಗೆ ಕಾಮಧೇನು ಆಗದಿರುವೆಯಾ?**

ವಿ: ೧. ಇದೂ ಸಹ ಶ್ರೀವಾದಿರಾಜರ 'ಸ್ವಾಪ್ನಪದ್ಯ': ಸ್ವಾಪ್ನಮಿದಂ ಪದ್ಯಮ್ (ವ್ಯಾ.).

೨. ಕೋಟಿಸಂಖ್ಯಾಕರಾದ ಋಷಿಗಳ ಅಭಿಲಾಷೆಯನ್ನು ಪೂರೈಸಿದ ನಿನಗೆ ಒಬ್ಬ ಋಷಿಯಾದ ನನ್ನ ಬಯಕೆಯನ್ನು ಈಡೇರಿಸುವುದರಲ್ಲಿ ಸಾಮರ್ಥ್ಯವು ಕೈಮುತ್ಯಸಿದ್ಧ ಎಂದು ಭಾವ.

೩. ಅಷ್ಟು ಜನರಿಗೆ ಇಷ್ಟಪ್ರದರಾದ ರುದ್ರದೇವರಿಗೆ ಒಬ್ಬರಿಗೆ ಇಷ್ಟಪ್ರದರಾಗುವುದು ಏನಾಶ್ಚರ್ಯ ಎಂದೂ ಭಾವ.

## ಕ್ರೋಡ ಶಂಕರನಾರಾಯಣ (ಕ್ಷೇತ್ರ)[೨]

**ಕ್ರೋಡಯೋಗೀಶ್ವರಕ್ಷೇತ್ರಂ ಭಾತಿ [೩]ಶುಕ್ತಿಮತೀತಟೇ ।**
**ಸತಾಂ ಮತಾ ದ್ವಿತಾ ಯತ್ರ ಸ್ವಪ್ನೋಮೇಶರಮೇಶಯೋಃ ॥ ೫೧ ॥**

ಅ: **ಕ್ರೋಡಯೋಗೀಶ್ವರಕ್ಷೇತ್ರಂ** = 'ಕ್ರೋಡ' ಎಂಬ ಮುನಿಶ್ರೇಷ್ಠರ ಕ್ಷೇತ್ರವು; **ಶುಕ್ತಿಮತೀತಟೇ** = 'ಶುಕ್ತಿಮತೀ' ಎಂಬ ನದಿಯ ತೀರದಲ್ಲಿ; **ಭಾತಿ** = ಶೋಭಿಸುತ್ತಿದೆ,

---

೧. ಕೋಟಿಸಂಖ್ಯೈರ್ಮುನಿಭಿಃ ತಪಸಿ ಕ್ರಿಯಾಮಾಣೇ ಸತಿ ತೇಷಾಮನುಗ್ರಹಾಯ ಶಿವಃ ಪ್ರಾದುರ್ಬಭೂವೇತಿ ಪುರಾಣಪ್ರಸಿದ್ಧೋಽಯಮರ್ಥಃ ॥ -ವ್ಯಾಖ್ಯಾನ

೨. ಈ ಕ್ರೋಡಕ್ಷೇತ್ರವು ಪರಶುರಾಮಕ್ಷೇತ್ರದ ಸಪ್ತಮಹಾಕ್ಷೇತ್ರಗಳಲ್ಲಿ ಒಂದು; ಇದು ಕುಂದಾಪುರದಿಂದ ೨೯ ಕಿ.ಮೀ. ದೂರದಲ್ಲಿ ವಾರಾಹಿ ನದಿಯ ತೀರದಲ್ಲಿದೆ. ಖರ ಮತ್ತು ರಟ್ಟ ಎಂಬ ಅಸುರರ ಸಂಹಾರಕ್ಕಾಗಿ, ಕ್ರೋಡಮುನಿಯ ತಪಸ್ಸಿಗೆ ಮೆಚ್ಚಿ, ಹರಿ ಮತ್ತು ಹರರು ಲಿಂಗರೂಪದಲ್ಲಿ ಪ್ರಕಟವಾದ ಸ್ಥಳ ಎಂಬುದು ಈ ಕ್ಷೇತ್ರದ ಪ್ರಸಿದ್ಧಿ. ಕ್ರೋಡಮುನಿಯ ತಪಸ್ಸು ಮಾಡಿದ ಆಶ್ರಮವು ಇದರ ಸಮೀಪದಲ್ಲಿರುವ 'ಕ್ರೋಡಗಿರಿ' ಎಂಬ ಬೆಟ್ಟದ ಮೇಲೆ ಇದೆ. ಕ್ರೋಡದಲ್ಲಿ ಇಂದು ಒಂದು ಆಳೆತ್ತರದ ಬೆಳ್ಳಿಯ ಶಂಕರನಾರಾಯಣ ವಿಗ್ರಹ, ಚಿನ್ನದ ಪಾಲಕಿ, ರತ್ನಮಂಟಪ ಮತ್ತು ೬೦ ಮಣಭಾರದ, ೮ ಕಿ.ಮೀ. ದೂರದವರೆಗೆ ನಿನಾದವನ್ನು ಪಸರಿಸುವ ಒಂದು ದೊಡ್ಡ ಗಂಟೆ – ಇವೆಲ್ಲ ಇವೆ.

೩. ಶುಕ್ತಿಮತೀನದಿಯು ಇಂದು 'ವಾರಾಹೀ' ಎಂದು ವ್ಯವಹರಿಸಲ್ಪಡುತ್ತಿದೆ.

ಯತ್ರ = ಅಲ್ಲಿ ಸತಾಂ = ಸಜ್ಜನರಿಗೆ, ಮತಾ = ಅಭಿಮತವಾದ, ಉಮೇಶರಮೇ-ಶಯೋಃ = ಶಂಕರ ಮತ್ತು ನಾರಾಯಣರ, ದ್ವಿತಾ = ಭೇದವು, ಸ್ಪಷ್ಟಾ = ಸ್ಫುಟವಾಗಿದೆ.

'ಕ್ರೋಡ' ಎಂಬ ಮುನಿಶ್ರೇಷ್ಠರ ಕ್ಷೇತ್ರವು 'ಶುಕ್ತಿಮತೀ' ನದಿಯ ತೀರದಲ್ಲಿ ಶೋಭಿಸುತ್ತಿದೆ; ಇಲ್ಲಿ ಸಜ್ಜನರಿಗೆ ಅಭಿಮತವಾದ, ಶಂಕರ ಮತ್ತು ನಾರಾಯಣರ ಭೇದವು ಸ್ಪಷ್ಟವಾಗಿ ಮನವರಿಕೆಯಾಗುವುದು.

ವಿ: ೧. ಕ್ರೋಢ ಅಥವಾ ಶಂಕರನಾರಾಯಣಕ್ಷೇತ್ರವೆಂದು ಪ್ರಸಿದ್ಧವಾಗಿರುವ ಈ ಸ್ಥಳವು 'ಕ್ರೋಡ' ಎಂಬ ಮುನಿಯ ತಪಸ್ಸಿಗೆ ಮೆಚ್ಚಿ ಹರಿಹರರು ಲಿಂಗರೂಪದಲ್ಲಿ ಕಾಣಿಸಿಕೊಂಡ ಕ್ಷೇತ್ರ. ಒಂದೇ ಲಿಂಗದ ಎಡಭಾಗವನ್ನು ನಾರಾಯಣ ಎಂದೂ, ಬಲಭಾಗವನ್ನು ಶಂಕರ ಎಂದೂ ಹೇಳುವರು. ಈ ಎಡ ಬಲ ಎಂಬ ಸ್ಥಾನ ಭೇದ ಮತ್ತು ವಿಷ್ಣುವಿಗಿರುವ ಬಲಭಾಗವು ದಪ್ಪನಾಗಿಯೂ, ಶಿವನಿಗಿರುವ ಎಡ ಭಾಗವು ಕೃಶವಾಗಿಯೂ ಇರುವುದು ಶಾಸ್ತ್ರಸಿದ್ಧವಾದ ಹರಿಹರ ಭೇದಕ್ಕೂ ಮತ್ತು(ಹರಿಯ ಉತ್ತಮತ್ವಕ್ಕೂ) ಪ್ರತ್ಯಕ್ಷ ನಿದರ್ಶನವಾಗಿದೆ ಎಂದು ಭಾವ.

೨. ಜಮದಗ್ನಿ, ಮಾಂಡವ್ಯ, ಅಗಸ್ತ್ಯ ಲೋಮಶರೆಂಬ ಮಹಾಮುನಿಗಳೂ (ಸಹ ಕ್ರೋಡಮುನಿಯೊಂದಿಗೆ) ತಪಸ್ಸು ಮಾಡಿದರೆಂದೂ, ಇವರೆಲ್ಲ ಕ್ರಮವಾಗಿ ಅನಿರುದ್ಧ ಪ್ರದ್ಯುಮ್ನ ಸದ್ಯೋಜಾತ, ಸಂಕರ್ಷಣ, ಅಘೋರ, ವಾಸುದೇವ ತತ್ಪುರುಷ ಮತ್ತು ನಾರಾಯಣ ಮಹೇಶ್ವರ ರೂಪಗಳನ್ನು ಆರಾಧಿಸಿದರೆಂದೂ, ಅದಕ್ಕಾಗಿ 'ಶಂಕರನಾರಾಯಣ' ಎಂಬ ಐದು ಲಿಂಗಗಳು ಪ್ರಕಟವಾದುವೆಂದೂ ಪದ್ಮಪುರಾಣದ ಪುಷ್ಕರಖಂಡದಲ್ಲಿ ಬಂದಿರುವ 'ಕ್ರೋಡ' ಮಾಹಾತ್ಮ್ಯದಿಂದ ತಿಳಿದು ಬರುತ್ತದೆ.

**ದ್ವಾಸುಪರ್ಣೇತಿ ವೇದಾರ್ಥಭೂತೌ ತೌ ಪ್ರಾಯಶೋಽಮರೌ ।**
**ಯದೇಕೋಽಶ್ನಾತಿ ಬಹುಶೋಽನಶ್ನನ್ನನ್ಯೋ ವಿವರ್ಧತೇ ॥ ೫೨ ॥**

ಅ: ತೌ = ಆ ಕ್ಷೇತ್ರದಲ್ಲಿರುವ, ಅಮರೌ = ಶಂಕರ ಮತ್ತು ನಾರಾಯಣ ಎಂಬ ದೇವತೆಗಳು, ಪ್ರಾಯಶಃ = ನಿಶ್ಚಿತವಾಗಿಯೂ, ದ್ವಾಸುಪರ್ಣೇತಿ ವೇದಾರ್ಥಭೂತೌ = 'ದ್ವಾಸುಪರ್ಣಾ'[೧] ಎಂಬ ಶ್ರುತಿಗೆ ಅರ್ಥಭೂತವಾಗಿರುವ ಜೀವಾತ್ಮ ಮತ್ತು ಪರಮಾತ್ಮರೇ ಆಗಿರುವರು; ಯತ್ = ಏಕೆಂದರೆ; ಏಕಃ = ಅವರಲ್ಲಿ ಒಬ್ಬನು; ಬಹುಶಃ = ಅರ್ಚಕರು ಕೊಟ್ಟ ಬಹುವಿಧ ಅನ್ನಾದಿಗಳನ್ನು; ಅಶ್ನಾತಿ = ತಿನ್ನುವನು; ಅನ್ಯಃ = ಇನ್ನೊಬ್ಬನು ; ಅನಶ್ನನ್ = ನೈವೇದ್ಯವಿಲ್ಲದೆ ; ವಿವರ್ಧತೇ = ವರ್ಧಿಸಿರುವನು.

ಈ ಕ್ಷೇತ್ರದಲ್ಲಿನ, ಶಂಕರ ಮತ್ತು ನಾರಾಯಣ ಎಂಬ ದೇವತೆಗಳು, ನಿಶ್ಚಿತವಾಗಿ 'ದ್ವಾಸುಪರ್ಣಾ' ಎಂಬ ಶ್ರುತಿಗೆ ಅರ್ಥಭೂತರಾಗಿರುವ ಜೀವಾತ್ಮ ಮತ್ತು ಪರಮಾತ್ಮರೇ ಆಗಿರುವರು; ಏಕೆಂದರೆ ಅವರಲ್ಲಿ ಒಬ್ಬನು (ಶಂಕರನು) ಬಹುವಿಧ

---

೧. ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿಚಾಕಶೀತಿ ॥ – ಅಥರ್ವಣೋಪನಿಷತ್ (೩/೧)

ಅನ್ನಾದಿಗಳನ್ನು ತಿನ್ನುವವನು; ಇನ್ನೊಬ್ಬನು (ನಾರಾಯಣನು) ಅನ್ನ ಸ್ವೀಕರಿಸದೆ ಪುಷ್ಟನಾಗಿರುವವನು.

ವಿ: ೧. ಕ್ರೋಡಕ್ಷೇತ್ರದಲ್ಲಿ ಅರ್ಚಕರು ಶಿವನಿಗೆ ಅಪಾರವಾಗಿ ನೈವೇದ್ಯವನ್ನಿಡುವರು, ವಿಷ್ಣುವಿಗೆ ಮಾತ್ರ ಇಡುವುದೇ [1]ಇಲ್ಲ; ಆದರೂ ಶಿವಲಿಂಗದ ಭಾಗವು ಕೃಶವಾಗಿಯೂ, ವಿಷ್ಣುಲಿಂಗದ ಭಾಗವು ದಪ್ಪವಾಗಿಯೂ ಇವೆ. ಇದು 'ದ್ವಾಸುಪರ್ಣಾ' ಎಂಬ ಶ್ರುತಿಯಲ್ಲಿ ಬಂದಿರುವ ಜೀವೇಶಭೇದಕ್ಕೆ ನಿದರ್ಶನವಾಗಿದೆ;

೨. ಶ್ರುತಿಯಲ್ಲಿ ಬಂದಿರುವ ಜೀವನು ಶಂಕರನೂ, ಈಶನು ವಿಷ್ಣುವೂ ಆಗಿರುವರು; ಇದು ಜೀವೇಶರಾದ ಶಂಕರ ನಾರಾಯಣರಲ್ಲಿನ ಭೇದಕ್ಕೆ ಮಾತ್ರವಲ್ಲದೆ ಜೀವೇಶಭೇದ ತತ್ತ್ವಕ್ಕೆ ನಿದರ್ಶವಾಗಿದೆ ಎಂದು ಭಾವ.

**ಶ್ರುತಿಶತವರ್ಣಿತಚರಿತಂ ಯತಿಹೃನ್ನಿರತಂ ಯಥೇಷ್ಟಗುಣಭರಿತಮ್ ।**
**ಕಿಂಕರವರದಮನಿಂದ್ಯಂ ಶಂಕರನಾರಾಯಣಂ ವಂದೇ ॥ ೫೩ ॥**

ಅ: ಶ್ರುತಿಶತವರ್ಣಿತಚರಿತಂ = ನೂರಾರು ಶ್ರುತಿಗಳಿಂದ ವರ್ಣಿತವಾದ ಮಾಹಾತ್ಮ್ಯವನ್ನುಳ್ಳ; ಯತಿಹೃನ್ನಿರತಂ = ಯತಿಗಳ ಹೃದಯದಲ್ಲಿ ಬಹಳವಾಗಿ ರಮಿಸುವ; ಯಥೇಷ್ಟಗುಣಭರಿತಂ = ಯಥೇಷ್ಟವಾಗಿ ಜ್ಞಾನಾನಂದಾದಿ ಕಲ್ಯಾಣಗುಣಗಳಿಂದ ತುಂಬಿದ; ಕಿಂಕರವರದಂ = ಭಕ್ತರಿಗೆ ವರದಾಯಕರಾದ; ಅನಿಂದ್ಯಂ = ಸ್ತುತ್ಯರಾದ; ಶಂಕರ-ನಾರಾಯಣಂ = ಶಂಕರನಾರಾಯಣರನ್ನು; ವಂದೇ = ನಮಸ್ಕರಿಸುವೆನು.

ನೂರಾರು ಶ್ರುತಿಗಳು ವರ್ಣಿಸುವ ಮಹಿಮೆಯ, ಯತಿಗಳ ಹೃದಯದಲ್ಲಿ ನೆಲೆಸಿದ, ಯಥೇಷ್ಟವಾಗಿ ಗುಣಗಳಿಂದ ತುಂಬಿದ, ಭಕ್ತರಿಗೆ ವರನೀಡುವ, ಸ್ತುತ್ಯರಾದ ಶಂಕರನಾರಾಯಣರನ್ನು ನಮಸ್ಕರಿಸುವೆನು.

**ಶೂಲಸುದರ್ಶನಸುರುಚಂ ಬಾಲೇಂದೂಜ್ಜ್ವಲಕಿರೀಟಶೋಭಿತಶಿರಸಮ್।**
**ಪಂಕಜಮುಖಕರಚರಣಂ ಶಂಕರನಾರಾಯಣಂ ವಂದೇ ॥ ೫೪ ॥**

ಅ: ಶೂಲಸುದರ್ಶನಸುರುಚಂ = ತ್ರಿಶೂಲ ಮತ್ತು ಸುದರ್ಶನ ಚಕ್ರಗಳಿಂದ ಬಹಳವಾಗಿ ಕಂಗೊಳಿಸುತ್ತಿರುವ; ಬಾಲೇಂದೂಜ್ಜ್ವಲಕಿರೀಟಶೋಭಿತಶಿರಸಂ = ಬಾಲಚಂದ್ರ ಮತ್ತು ಉಜ್ಜ್ವಲಕಿರೀಟಗಳಿಂದ ಶೋಭಿತವಾದ ಶಿರಸ್ಸುಳ್ಳ; [2]ಪಂಕಜಮುಖಕರಚರಣಂ =

---

೧. ತತ್ರ ಅರ್ಚಕಾಃ ಶೈವಾಃ ಶಂಕರಾಯ ಪೂಜೋಪಹಾರಾದಿಕಂ ಬಹು ಪ್ರಯಚ್ಛಂತಿ ನಾರಾಯಣಾಯ ನ ಪ್ರಯಚ್ಛಂತಿ । ಏವಂ ಸ್ಥಿತೇ ಶೈವಾನಾಂ ಕುತ್ಸಿತವ್ಯಾಪಾರೇಣೈವ ಶಂಕರನಾರಾಯಣಯೋರ್ಭೇದಂ ಸಾಧಯಿತುಮಾಹ । -ವ್ಯಾಖ್ಯಾನ

೨. ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ । — ಮಹಾಭಾರತ
ಕರಾರವಿಂದೇನ ಪದಾರವಿಂದಂ ಮುಖಾರವಿಂದೇ ವಿನಿವೇಶಯಂತಮ್ ।

ಕಮಲದಂತಹ ಮುಖ, ಕೈ ಮತ್ತು ಕಾಲುಗಳನ್ನುಳ್ಳ; ಶಂಕರನಾರಾಯಣಂ = ಶಂಕರ-ನಾರಾಯಣರನ್ನು; ವಂದೇ = ನಮಸ್ಕರಿಸುವೆನು.

ತ್ರಿಶೂಲ ಸುದರ್ಶನಗಳಿಂದ ಬಹಳವಾಗಿ ಕಂಗೊಳಿಸುವ, ತಲೆಯ ಮೇಲೆ ಬಾಲಚಂದ್ರ ಮತ್ತು ಕಿರೀಟಗಳಿಂದ ಶೋಭಿಸುವ, ಕಮಲದಂತಹ ಮುಖ, ಕೈ ಕಾಲುಗಳನ್ನು ಹೊಂದಿರುವ ಶಂಕರನಾರಾಯಣರನ್ನು ನಮಸ್ಕರಿಸುವೆನು.

**ಪೀನೋರುಕಟಿಸುನಾಭಂ ಧ್ಯಾನಾರ್ಹೋ$\cdot$ರಃಸ್ಥಿತಾಹಿಫಣಹಾರಮ್ ।**
**ಶಂಖಾಭ್ರವರ್ಣಮನಘಂ ಶಂಕರನಾರಾಯಣಂ ವಂದೇ ॥ ೩೩ ॥**

ಅ: ಪೀನೋರುಕಟಿಸುನಾಭಂ = ಸುಪುಷ್ಟವಾದ ತೊಡೆ, ನಡು ಮತ್ತು ಉನ್ನತವಾದ ನಾಭಿಗಳನ್ನುಳ್ಳ; ಧ್ಯಾನಾರ್ಹೋ$\cdot$ರಃಸ್ಥಿತಾಹಿಫಣಹಾರಮ್ = ಧ್ಯಾನಯೋಗ್ಯವಾದ ವಕ್ಷಃಸ್ಥಲದಲ್ಲಿ ಹಾವಿನಹೆಡೆ ಮತ್ತು ಹಾರಗಳನ್ನುಳ್ಳ; ಶಂಖಾಭ್ರವರ್ಣಂ = ಶಂಖ ಮತ್ತು ಮೇಘಗಳಂತಹ ಬಣ್ಣವುಳ್ಳ; ಅನಘಂ = ದೋಷರಹಿತರಾದ; ಶಂಕರನಾರಾಯಣಂ = ಶಂಕರನಾರಾಯಣರನ್ನು; ವಂದೇ = ನಮಸ್ಕರಿಸುವೆನು.

ಸುಪುಷ್ಟ ತೊಡೆ ನಡು ಹಾಗೂ ನಾಭಿಗಳ, ಧ್ಯಾನಯೋಗ್ಯವಾದ ವಕ್ಷಃಸ್ಥಲದಲ್ಲಿ ಹಾವಿನಹೆಡೆ ಮತ್ತು ಹಾರಗಳ, ಶಂಖ ಮತ್ತು ಮೇಘಗಳ ಮೈಬಣ್ಣದ, ದೋಷರಹಿತರಾದ ಶಂಕರನಾರಾಯಣರನ್ನು ವಂದಿಸುವೆನು.

ವಿ: ೧. ಒಂದೇ ಲಿಂಗದಲ್ಲಿರುವ ಶಂಕರ ಮತ್ತು ನಾರಾಯಣರನ್ನು ಶ್ರೀವಾದಿರಾಜಸ್ವಾಮಿ-ಗಳು ಇಬ್ಬರಿಗೂ ಅನ್ವಯವಾಗುವಂತೆ ವಿಶೇಷಣಗಳನ್ನು ಬಳಸಿ ಈ ಮೂರು ಶ್ಲೋಕಗಳಲ್ಲಿ ವರ್ಣಿಸಿರುವರು;

೨. ಶಂಕರ ಮತ್ತು ನಾರಾಯಣರನ್ನು 'ಶಂಕರನಾರಾಯಣಂ' ಎಂದು ಏಕವಚನದಲ್ಲಿ ಒಂದೇ ರೀತಿಯ ವಿಶೇಷಣಗಳಿಂದ ಸ್ತುತಿಸಿದ್ದರೂ, ಸರಿಯಾಗಿ ಅರ್ಥಮಾಡಿಕೊಂಡಾಗ ಶಂಕರನಾರಾಯಣರ ಭೇದ, ನಾರಾಯಣನ ಉತ್ತಮತ್ವಗಳು ಸ್ಪಷ್ಟವಾಗುವಂತೆ, ಶಂಕರ-ನಾರಾಯಣರು ಒಂದೇ ಲಿಂಗದಲ್ಲಿದ್ದರೂ ಇಬ್ಬರಿಗೂ ಭೇದವಿರುವುದು ವಿವೇಕಿಗಳಿಗೆ ಸ್ಪಷ್ಟವಾಗಿ ಗೋಚರಿಸುವುದು ಎಂಬ ಸೂಚನೆಯೂ ಇಲ್ಲಿದೆ.

೩. ಶ್ರುತಿಶತವರ್ಣಿತಚರಿತಂ: ಇಲ್ಲಿ 'ಶತ' ಎಂಬುದಕ್ಕೆ ಶಂಕರಪಕ್ಷದಲ್ಲಿ ನೂರಾರು ಎಂದೂ, ನಾರಾಯಣ ಪಕ್ಷದಲ್ಲಿ 'ಅನಂತ' ಎಂದೂ. ಯಥೇಷ್ಟಗುಣಭರಿತಂ ಎಂಬಲ್ಲಿ 'ಗುಣ' ಎಂಬುದಕ್ಕೆ ಶಂಕರಪಕ್ಷದಲ್ಲಿ ಯಥಾಯೋಗ್ಯ ಎಂದೂ, ನಾರಾಯಣ ಪಕ್ಷದಲ್ಲಿ 'ಅನಂತ' ಎಂದೂ, ಕಿಂಕರವರದಂ ಎಂಬಲ್ಲಿ 'ವರ' ಎಂಬುದಕ್ಕೆ ಶಂಕರಪಕ್ಷದಲ್ಲಿ 'ವಿದ್ಯೆ', 'ವೈರಾಗ್ಯ' ಎಂದೂ, ನಾರಾಯಣನ ಪಕ್ಷದಲ್ಲಿ 'ಮೋಕ್ಷಾದಿಸಕಲ' ಎಂದೂ, ಅನಿಂದ್ಯಂ ಎಂಬುದಕ್ಕೆ ಶಂಕರಪಕ್ಷದಲ್ಲಿ ಇಂದ್ರಾದ್ಯುತ್ತಮತ್ವೇನ ಎಂದೂ, ವಿಷ್ಣುಪಕ್ಷದಲ್ಲಿ 'ಸರ್ವೋತ್ತಮತ್ವೇನ' ಎಂದೂ ಅರ್ಥ-ಮಾಡಿಕೊಳ್ಳಬೇಕು.

---

ವಟಸ್ಯ ಪತ್ರಸ್ಯ ಪುಟೇ ಶಯಾನಂ ಬಾಲಂ ಮುಕುಂದಂ ಮನಸಾ ಸ್ಮರಾಮಿ ॥ — ಸ್ಮೃತಿ

೪. ಯತಿಹೃನ್ನಿರತಂ, ಪಂಕಜಮುಖಚರಣಂ, ಪೀನೋರುಕಟಿಸುನಾಭಂ ಎಂಬ ಮೂರು ವಿಶೇಷಣಗಳು ಯಥಾಯೋಗ್ಯವಾಗಿ ಇಬ್ಬರಿಗೂ ಅನ್ವಯಿಸುತ್ತವೆ.

೫. ಶೂಲಸುದರ್ಶನಸುರುಚಂ, ಬಾಲೇಂದೂಜ್ಜ್ವಲಕಿರೀಟಶೋಭಿತಶಿರಸಂ, ಧ್ಯಾನಾ-ರ್ಹೋರಃಸ್ಥಿತಾಹಿಫಣಹಾರಂ, ಶಂಖಾಭ್ರವರ್ಣಂ ಎಂಬ ವಿಶೇಷಣಗಳಲ್ಲಿ ಶೂಲಸುರುಚಂ, ಬಾಲೇಂದುಶೋಭಿತಶಿರಸಂ, ಧ್ಯಾನರ್ಹೋರಃಸ್ಥಿತಾಹಿಫಣಂ, ಶಂಖವರ್ಣಂ ಎಂಬುದಾಗಿ ಶಂಕರಪಕ್ಷದಲ್ಲೂ, ಸುದರ್ಶನಸುರುಚಂ, ಉಜ್ಜ್ವಲಕಿರೀಟಶೋಭಿತಂ, ಧ್ಯಾನಾರ್ಹೋರಃ-ಸ್ಥಿತಹಾರಂ, ಅಭ್ರವರ್ಣಂ ಎಂಬುದಾಗಿ ನಾರಾಯಣ ಪಕ್ಷದಲ್ಲೂ ಅರ್ಥಮಾಡಿಕೊಳ್ಳಬೇಕು.

೬. 'ಶಂಕರನಾರಾಯಣಂ'[1] ಎಂಬುದನ್ನು 'ಶಂಕರಶ್ಚ ನಾರಾಯಣಶ್ಚ (ತಯೋರೇಕ-ವದ್ಭಾವಃ ತಂ)' ಎಂದು ದ್ವಂದ್ವಸಮಾಸವನ್ನಾಗಲೀ ಅಥವಾ 'ಶಂಕರೇಣ ಸಹಿತೋ ನಾರಾಯಣಃ ತಂ' ಎಂಬುದಾಗಿ ಮಧ್ಯಮಲೋಪೀ ತತ್ಪುರುಷ ಸಮಾಸವನ್ನಾಗಲೀ ಅರ್ಥ ಮಾಡಿಕೊಳ್ಳಬೇಕು. ದ್ವಂದ್ವಸಮಾಸದಲ್ಲಿ ಶಂಕರನಾರಾಯಣರ ಭೇದವೂ, ತತ್ಪುರುಷಸಮಾಸದಲ್ಲಿ ಅವರಿಬ್ಬರ ಭೇದ ಮತ್ತು ನಾರಾಯಣನ ಉತ್ತಮತ್ವಗಳೂ ಸ್ಫುಟವಾಗಿ ವ್ಯಕ್ತವಾಗುತ್ತವೆ. (ಮುಂದೆ ಬರುವ 'ಹರಿಹರ' (ಶ್ಲೋ. ೫೦) ಎಂಬ ಪದವನ್ನೂ ಹೀಗೆಯೇ ಅರ್ಥಮಾಡಿಕೊಳ್ಳಬೇಕು[2].)

## ಮೂಕಾಂಬಿಕಾ(ಕೊಲ್ಲೂರುಕ್ಷೇತ್ರ)

[3]ಮೂಕಾಂಬಿಕಾ ಕೃಪಾಲೋಕಾದಾಕಾಂಕ್ಷಿತಫಲಪ್ರದಾ ।
ಮೂಕಾನಕೃತ ಮೇ ಶತ್ರೂನೇಕಾಂತಿಕಜನಪ್ರಿಯಾ ॥ ೫೬ ॥

---

೧. ಶಂಕರಶ್ಚ ನಾರಾಯಣಶ್ಚ ಶಂಕರನಾರಾಯಣಾವಿತಿ ದ್ವಂದಸಮಾಸಂ ಕೃತ್ವಾ ಅಸ್ಯ ಚೈಕವದ್ಭಾವಃ ಕರ್ತವ್ಯಃ । .. ಶಂಕರೇಣ ಸಹಿತೋ ನಾರಾಯಣ ಇತಿ ಮಧ್ಯಮಪದಲೋಪೀ ತತ್ಪುರುಷೋ ವಾ ।
- ವ್ಯಾಖ್ಯಾನ

೨. ಅಯಮೇವ ನ್ಯಾಯೋ ಹರಿಹರೇಽಪಿ ॥ - ವ್ಯಾಖ್ಯಾನ

೩. ಕುಟಜಾಚಲ(ಕೊಡಚಾದ್ರಿ) ಎಂಬ ನಾಮಾಂತರವನ್ನು ಹೊಂದಿರುವ ಕೊಲ್ಲೂರು ಪರಶುರಾಮಕ್ಷೇತ್ರದ ಸಪ್ತಮಹಾಕ್ಷೇತ್ರಗಳಲ್ಲಿ ಒಂದು. ಕೋಲ ಋಷಿಯ ಕ್ಷೇತ್ರವಾದ್ದರಿಂದ 'ಕೊಲ್ಲೂರು' ಎಂದು ವಿಖ್ಯಾತವಾಗಿದೆ. ಸ್ಕಾಂದಪುರಾಣದಲ್ಲಿ ಈ ಕ್ಷೇತ್ರದ ಮಾಹಾತ್ಮ್ಯ ಬಂದಿದೆ. ಕುಂದಾಪುರಕ್ಕೆ ೪೮ ಕಿ.ಮೀ. ಗಳ ದೂರದಲ್ಲಿರುವ ಇದು ತುಂಬಾ ಪ್ರಸಿದ್ಧವಾದ ಶಕ್ತಿಕ್ಷೇತ್ರಗಳಲ್ಲಿ ಒಂದಾಗಿದೆ. ಕೊಲ್ಲೂರಿನ ಮಹಾಲಕ್ಷ್ಮಿ ಎಂದು ಪ್ರಸಿದ್ಧವಾಗಿದ್ದರೂ ಶ್ರೀವಾದಿರಾಜರು 'ಕಾತ್ಯಾಯಿನೀ' ಎಂದು ಕರೆದಿರುವುದರಿಂದ ಪಾರ್ವತೀ(ದುರ್ಗೆ)ಯೇ ಕ್ಷೇತ್ರದೇವತೆಯೆಂದೂ ಅವರಲ್ಲಿ ವಿಶೇಷ ಮಹಾಲಕ್ಷ್ಮೀ ಸನ್ನಿಧಾನವೆಂದೂ ಭಾವಿಸಬಹುದು. ಋಷಭನಾಮಕ ಭಗವಂತ ಇಲ್ಲಿ ಕೆಲಕಾಲ ನೆಲೆಸಿದ್ದ ಉಲ್ಲೇಖ ಭಾಗವತಮೂಲದಲ್ಲಿದೆ :

ಏಕದಾ ತು ಕಾಂಕಟಕರ್ಣಾಟಕಾತ್ ದಕ್ಷಿಣಕರ್ಣಾಟಕಾನ್ ದೇಶಾನ್ ಯದೃಚ್ಛಯೋಪಗತಃ ಕುಟಚಾಚಲೋಪವನೇ ಆಸ್ಯಕೃತಾಶ್ಮಕವಲ ಉನ್ಮಾದ ಇವ ಮುಕ್ತಮೂರ್ಧಜೋಽಸಂವೀತ ಏವ ವಿಚಚಾರ ॥ ...... – ಭಾಗವತ (೫/೬/೮,೯)

ಅ: ಕೃಪಾಲೋಕಾತ್ = ತನ್ನ ಕೃಪಾವಲೋಕನದಿಂದ; ಆಕಾಂಕ್ಷಿತಫಲಪ್ರದಾ = ಬಯಸಿದ ಫಲಗಳನ್ನು ನೀಡುವ; ಏಕಾಂತಿಕಜನಪ್ರಿಯಾ = ನಾರಾಯಣನ ಅನನ್ಯ ಭಕ್ತರಲ್ಲಿ ಅನುಗ್ರಹ ಮಾಡುವ; ಮೂಕಾಂಬಿಕಾ = ಮೂಕಾಂಬಿಕೆಯು; ಮೇ = ನನ್ನ; ಶತ್ರೂನ್ = ಶತ್ರುಗಳನ್ನು; ಮೂಕಾನ್ = ಮೂಕರನ್ನಾಗಿ; ಅಕೃತ = ಮಾಡಿದಳು.

ಕೃಪಾವಲೋಕನದಿಂದ ಬಯಸಿದ ಫಲಗಳನ್ನು ನೀಡುವ, ನಾರಾಯಣನ ಅನನ್ಯಭಕ್ತರಲ್ಲಿ ಅನುಗ್ರಹ ಮಾಡುವ ಮೂಕಾಂಬಿಕೆಯು ನನ್ನ ಶತ್ರುಗಳನ್ನು ಮೂಕರನ್ನಾಗಿ ಮಾಡಿದಳು.

ವಿ: ೧. ಕಂಹ ಎಂಬ ದಾನವನು ರುದ್ರದೇವರನ್ನು ಮೆಚ್ಚಿಸಿ ಲೋಕನಾಶಕವಾದ ವರಗಳನ್ನು ಕೇಳಲೆಂದು ಬಾಯಿ ತೆರೆಯಲಿದ್ದಾಗ, ದೇವತೆಗಳ ಪ್ರಾರ್ಥನೆಯಂತೆ ಅವನನ್ನು ಮೂಕನನ್ನಾಗಿ ಮಾಡಿದ್ದರಿಂದ ಇಲ್ಲಿಯ ದೇವತೆಗೆ ಮೂಕಾಂಬಿಕೆ ಎಂದು ಹೆಸರು ಎಂಬುದಾಗಿ ಸ್ಥಳ ಪುರಾಣವಿದೆ.

೨. ಶ್ರೀವಾದಿರಾಜರಸ್ವಾಮಿಗಳ[೧] ಹಿರಿಮೆಯನ್ನು ಸಹಿಸಲಾಗದ ಮತ್ಸರಿಗಳಾದ ಕೆಲವು 'ಬ್ರಾಹ್ಮಣರು ಮತ್ತು ಸನ್ಯಾಸಿಗಳು' ಒಬ್ಬ ಬಾಲಕನನ್ನು ಮೂಕಾಂಬಿಕೆಯ ಬಳಿ ಅಡಗಿಸಿಟ್ಟು 'ಶ್ರೀವಾದಿರಾಜರು ಅವನನ್ನು ಹಿಂಸಿಸಿ ಏನೋ ಮಾಡಿರುವರು' ಎಂಬುದಾಗಿ ಅಪಪ್ರಚಾರ ಮಾಡತೊಡಗಿದ್ದರಂತೆ; ಇದನ್ನು ಸಹಿಸದ ಮೂಕಾಂಬಿಕೆಯು ಆ ಬಾಲಕನನ್ನು ಸ್ವಪ್ನದಲ್ಲೂ ಎಚ್ಚೆತ್ತಿರುವಾಗಲೂ ಚಾಟಿಯಿಂದ ಹೊಡೆಯುವುದು, ಸರ್ಪಗಳನ್ನು ತೋರಿಸುವುದು ಮೊದಲಾಗಿ ಭಯಪಡಿಸಿ ಅವನನ್ನು ಶ್ರೀವಾದಿರಾಜರ ಬಳಿಗೇ ಓಡಿಸಿದಳಂತೆ, ತುಂಬಿದ ಸಭೆಯಲ್ಲಿ ಆ ಬಾಲಕನನ್ನು ಜನರಿಗೆ ತೋರಿಸಿದ ಶ್ರೀವಾದಿರಾಜರು ಕುಹಕಿಗಳ ಸಂಚನ್ನು ಬಯಲು ಮಾಡಿ ಅವರನ್ನು ಮೂಕರನ್ನಾಗಿಸಿ ಮಾನ್ಯರಾದರು ಎಂದು ಕಥೆಯ ಹಿನ್ನೆಲೆಯಲ್ಲಿ ಈ ಶ್ಲೋಕ ಹೊರಟಿದೆ ಎಂದು ವ್ಯಾಖ್ಯಾತೃಗಳಾದ ಶ್ರೀನಾರಾಯಣಾಚಾರ್ಯರು ಬರೆದಿರುವರು[೨].

---

೧. ಸ್ವಭಕ್ತಶತ್ರೂನ್ ಮೂಕಯತೀತಿ ವ್ಯುತ್ಪತ್ತ್ಯಾ ಸರ್ವಜ್ಞಾಂಬಿಕಾಯಾಃ ಮೂಕಾಂಬಿಕಾತ್ವಮಿತಿ ತತ್ಕೃಪಯೈವ ಮಮಾನುಭವಸಿದ್ಧಮಿತಿ ಜ್ಞಾಪಯಿತುಮೇವಮುಕ್ತಮ್। ಏತತ್ಪ್ರಬಂಧಕರ್ತುಃ ವಾದಿರಾಜಮುನೇಃ ಮಾಹಾತ್ಮ್ಯಮಸಹಮಾನಾಸ್ತೌಲವದೇಶಸ್ಥಾಃ ದುರ್ಜನಾಃ ಭಿಕ್ಷ್ವಾದಿವಿಪ್ರಾಃ ಕಂಚನ ಬಾಲಕಂ ಮೂಕಾಂಬಿಕಾಂ ಪ್ರತಿ ಪ್ರೇಷಯಿತ್ವಾ 'ವಾದಿರಾಜಮುನೀಶ್ವರಾಃ ತಂ ಬಾಲಂ ಹಿಂಸಿತವಂತಃ' ಇತ್ಯಪಪ್ರಥಾಂ ಪ್ರಥಯಾಂಚಕ್ರುಃ। ತದಾ ತದಸಹಮಾನಾ ಮೂಕಾಂಬಿಕಾ ತಂ ಬಾಲಂ ಸ್ವಪ್ನೇ ಜಾಗ್ರದವಸ್ಥಾಯಾಂ ಚ ಕಶಾತಾಡನಸರ್ಪಾದಿನಾ ಬಹುಧಾ ಭೀಷಯಿತ್ವಾ ವಾದಿರಾಜಮುನಿಚರಣಸಮೀಪಮೇವ ಪ್ರಾಪಿತವತೀ ಕಿಲೇತಿ ವಾದಿರಾಜಮುನಯಸ್ತಮೇವ ಬಾಲಂ ಜನಸಂಸದಿ ದರ್ಶಯಿತ್ವಾ ಸ್ವಾಪವಾದಂ ಪರಿಹೃತವಂತಃ ಇತಿ ಕಥಾಂ ಸೂಚಯಿತುಂ ಇಯಂ ಸ್ತುತಿಃ ಕೃತಾ। -ವ್ಯಾಖ್ಯಾನ

೨. ಮೂಕಾಂಬಿಕಾ ಮಹಾದೇವೀ ಪ್ರಸನ್ನಾ ಸ್ವಯಮೇವ ಹಿ।
ಅಸದಾಪಾದಿತಾವರ್ಣಂ ವಾದಿರಾಜೇ ಸಮಕ್ಷಿಣೋತ್ ॥
ಮೂಕೀ ಚಕಾರ ತಚ್ಛತ್ರೂಂಸ್ತತಸ್ತೇನ ಸ್ತುತಾಽಭವತ್। - ಶ್ರೀರಘುನಾಥಾಚಾರ್ಯರು
ವಿಷ್ಣುದಾಸಸ್ಯಾನುಕೂಲಾಃ ಸ್ವಯಮೇವ ಹಿ ದೇವತಾಃ॥ ವೃತ್ತರತ್ನಸಂಗ್ರಹ (೧/೬೪,೬೫)

೩. ಹೀಗೆ ತಮ್ಮ ಶತ್ರುಗಳನ್ನು ತನ್ನ ಮಾಹಾತ್ಮ್ಯೆಯಿಂದ ಮೂಕರನ್ನಾಗಿಸಿದ ಮೂಕಾಂಬಿಕೆಗೆ ಆ ಹೆಸರು ತುಂಬಾ ಉಚಿತವಾಗಿದೆ ಎಂದು ಭಾವ.

ಕ್ವಚಿತ್ ಪೃಥಿವ್ಯಾಂ ಪರಿತಶ್ಚರಂತೀ
ನಭಃಸ್ಥಲಂ ಚಾಪಿ ಮುಹುರ್ವ್ರಜಂತೀ ।
ವಿಪಕ್ಷವಿಧ್ವಂಸವಿಧೌ ಸ್ಫುರಂತೀ
ಕಾತ್ಯಾಯನೀ ಕಂದುಕವದ್ವಿಭಾತಿ ॥೫೭॥

ಅ: ವಿಪಕ್ಷವಿಧ್ವಂಸವಿಧೌ = ವಿರುದ್ಧ ಪಕ್ಷದವರಾದ ದೈತ್ಯರನ್ನು ವಿನಾಶಗೊಳಿಸುವ ಕಾರ್ಯದಲ್ಲಿ; ಕ್ವಚಿತ್ = ಕೆಲವೊಮ್ಮೆ; ಪೃಥಿವ್ಯಾಂ = ಭೂಮಿಯ ಮೇಲೂ; ಪರಿತಃ = ಸುತ್ತಲೂ; ಚರಂತೀ = ಸಂಚರಿಸುವವಳಾಗಿ; ನಭಃಸ್ಥಲಂ - (ಆ ದೈತ್ಯರುಗಳು ಆಕಾಶಕ್ಕೆ ನೆಗೆದಾಗ) ಚ ಅಪಿ = ತಾನೂ ಸಹ ಆಕಾಶಕ್ಕೆ; ಮುಹುಃ ವ್ರಜಂತೀ - ಮತ್ತೆ ಮತ್ತೆ ಧಾವಿಸುವವಳಾಗಿ; ಸ್ಫುರಂತೀ = ಕಂಗೊಳಿಸುತ್ತಿರುವ; ಕಾತ್ಯಾಯನೀ = ಕಾತ್ಯಾಯನಿಯು; ಕಂದುಕವತ್ = ಚೆಂಡಿನಂತೆ; ವಿಭಾತಿ = ವಿಶೇಷವಾಗಿ ಶೋಭಿಸುತ್ತಿರುವಳು.

ವಿರುದ್ಧಪಕ್ಷವನ್ನು ಸದೆಬಡೆಯಲೆಂದು ಕೆಲವೊಮ್ಮೆ ಭೂಮಿಯ ಮೇಲೆಲ್ಲಾ ಸಂಚರಿಸುವ, ಪುನಃಪುನಃ ಗಗನದತ್ತ ಧಾವಿಸುವ, ಉಜ್ಜ್ವಲಕಾಂತಿಯ ಈ ಕಾತ್ಯಾಯನಿಯು ಚೆಂಡಿನಂತೆ ಶೋಭಿಸುವಳು.

ವಿ: ೧. ಇದೊಂದು ಸಮಸ್ಯಾಪೂರಕ ಶ್ಲೋಕ 'ಕಾತ್ಯಾಯನೀ ಕಂದುಕವದ್ವಿಭಾತಿ' 'ಕಾತ್ಯಾಯನಿಯು ಚೆಂಡಿನಂತೆ ಶೋಭಿಸುತ್ತಿರುವಳು' ಎಂಬ ಸಮಸ್ಯೆಯನ್ನು ಅಂದು ವಿದ್ವತ್ಸಭೆಯಲ್ಲಿ ಕೊಟ್ಟಿದ್ದರಂತೆ; ಕಾತ್ಯಾಯನಿಗೂ ಚೆಂಡಿಗೂ ಎಲ್ಲಿಯ ಸಾಮ್ಯ ! ಎಂದು ವಿದ್ವಾಂಸರು ಕಂಗಲಾಗಿದ್ದಾಗ, ಶ್ರೀವಾದಿರಾಜರು ತಮ್ಮ ಅಪಾರ ಪ್ರತಿಭೆಯಿಂದ ಅದನ್ನು ತತ್ಷಣ ಪೂರೈಸಿದ ರೀತಿ ಇದಾಗಿದೆ. (ಸಮಸ್ಯಾಪೂರಕಮಿದಂ ಪದ್ಯಂ - ವ್ಯಾಖ್ಯಾನ)

೨. ಆಟವಾಡುತ್ತಿದ್ದಾಗ ಚೆಂಡು ಒಮ್ಮೆ ಭೂಮಿಯ ಮೇಲೂ, ಒಮ್ಮೆ ದಿಕ್ಕುದಿಕ್ಕಿಗೂ ಒಮ್ಮೆ ಆಕಾಶಕ್ಕೂ ಪುಟಿಯುತ್ತ ಶೋಭಿಸುತ್ತದೆ. ಅದರಂತೆ ಕಾತ್ಯಾಯನಿಯು ಶತ್ರುಗಳನ್ನು ಸಂಹರಿಸಲೆಂದು ಅವರು ಭೂಮಿಯ ಮೇಲಿದ್ದಾಗ ತಾನು ಭೂಮಿಗೆ ಇಳಿಯುತ್ತಾಳೆ; ಎಲ್ಲೆಲ್ಲೋ ಓಡಿದಾಗ ತಾನೂ ಅವರತ್ತನುಗ್ಗುತ್ತಾಳೆ; ಅವರು ಆಕಾಶಕ್ಕೆ ನೆಗೆದರೆ ತಾನೂ ಅಲ್ಲಿಗೆ ಧಾವಿಸುತ್ತಾಳೆ; ಅಂತೂ ಶತ್ರುಸಂಹಾರಕ್ಕೆ ತೊಡಗುವ ಅವರ ವರ್ತನೆಯು ಚೆಂಡಿನಂತೆ ಮನೋಹರವಾಗಿದೆ ಎಂದು ಭಾವ[1].

---

೧. ಕಂದುಕೋ ಯಥಾ ಭೂಮೌ ವಿಯತಿ ಚ ಮುಹುರ್ಮುಹುಃ ಸಂಚರತಿ ತಥಾ ಸಂಚರಣಾತ್ ಇಯಮಪಿ ಕಂದುಕವದ್ವಿಭಾತೀತಿ ಭಾವಃ । – ವ್ಯಾಖ್ಯಾನ

## ಸಹ್ಯ (ಪರ್ವತ)

**ಸಹ್ಯೋಽಪ್ಯಸಹ್ಯೋಽಸಿ ಗಿರೇ ಪಾಪಾನಾಮಸ್ತು ತತ್ ತಥಾ ।**
**ಅಚಲಸ್ತ್ವಂ ಚಲಸಿ ಮನ್ಮನಸಸ್ತನ್ನ ರೋಚತೇ ॥ ೫೮ ॥**

ಅ: (ಹೇ) ಗಿರೇ = ಎಲೈ ಸಹ್ಯಪರ್ವತವೇ !; ತ್ವಂ = ನೀನು; ಸಹ್ಯಃ ಅಪಿ = 'ಸಹ್ಯ' ಎಂಬ ಹೆಸರಿನವನಾದರೂ (ಸಹನಶೀಲನಾದರೂ) ಸಹ; ಪಾಪಾನಾಂ = ಪಾಪಿಗಳ ಪಾಲಿಗೆ; ಅಸಹ್ಯಃ = ಸಹಿಸಲಸಾಧ್ಯನಾಗಿ; ಅಸಿ = ಇರುವಿ; ತತ್ = ಅದು; ತಥಾ = ಹಾಗೆಯೇ; ಅಸ್ತು = ಇರಲಿ (ಆದರೆ); ಅಚಲಃ = ಅಚಲ(ಪರ್ವತ)ನಾದ; ತ್ವಂ = ನೀನು; ಮನ್ಮನಸಃ = ನನ್ನ ಮನಸ್ಸಿನಿಂದ; ಚಲಸಿ (ಇತಿ ಯತ್) ತತ್ = ನನ್ನ ಮನಸ್ಸಿನಿಂದ ಚಲಿಸುತ್ತೀ ಎಂಬುದು (ಮಾತ್ರ); ನ ರೋಚತೇ = ನನಗೆ ಹಿಡಿಸುತ್ತಿಲ್ಲ.

ಎಲೈ ಸಹ್ಯಪರ್ವತವೇ ! ನೀನು ಹೆಸರಿಗೆ 'ಸಹ್ಯ'; ಪಾಪಿಗಳ ಪಾಲಿಗೆ ಮಾತ್ರ 'ಅಸಹ್ಯ'. ಆದರೆ ಅಚಲನಾದ ನೀನು ನನ್ನ ಮನಸ್ಸಿನಿಂದ ಚಲಿಸುವಿ ಎಂಬುದು ಮಾತ್ರ ನನಗೆ ಹಿಡಿಸದು.

ವಿ: ೧. ಕೊಲ್ಲೂರಿನಿಂದ ಹರಿಹರದತ್ತ ಸಂಚಾರ ಮುಂದುವರೆಸುತ್ತ ಶ್ರೀವಾದಿರಾಜರು ಮಧ್ಯ ಬರುವ [೧]ಸಹ್ಯಾದ್ರಿಯನ್ನು ಈ ಶ್ಲೋಕದಲ್ಲಿ ಸ್ತುತಿಸುವರು.

೨. ನಿನ್ನ ಹೆಸರು 'ಸಹ್ಯ' ಪರ್ವತ ! ಆದರೆ ಪಾಪಿಗಳಿಗೆ ಮಾತ್ರ ಸಹಿಸಲೂ ಅಸಾಧ್ಯನು ! (ಪುಣ್ಯಶೀಲರಿಗೆ ಸಹ್ಯವೂ; ಪಾಪಶೀಲರಿಗೆ ಅಸಹ್ಯವೂ ಆಗಿರುವ ಪರ್ವತವಿದು ಎಂದು ಭಾವ) ಆದರೆ ಪರ್ವತವಾಗಿ 'ಅಚಲ'ನಾಗಿರುವ ನೀನು ನನ್ನ ಮನಸ್ಸಿನ ಮಟ್ಟಿಗೆ 'ಚಲ' ಎನ್ನಿಸುವುದು ಮಾತ್ರ ನನಗೆ ಇಷ್ಟವಾಗುವುದಿಲ್ಲ; ನನಗೆ ಸದಾ ಧ್ಯಾನ ವಿಷಯವಾಗಿರು ಎಂದು ಭಾವ.

೩. ಈ ಶ್ಲೋಕದ ಪೂರ್ವಾರ್ಧ ಮತ್ತು ಉತ್ತರಾರ್ಧ ಎರಡರಲ್ಲೂ ವಿರೋಧಾಭಾಸ[೨] ಅಲಂಕಾರವಿದೆ.

## ಹರಿಹರ (ಕ್ಷೇತ್ರ)

**ಮುರಪುರಹರ ಲಕ್ಷ್ಮೀಪಾರ್ವತೀಕೇಲಿಲೋಲ**
**ಸ್ಫುರದಸಿತಸಿತಾಂಗಾಸಹ್ಯಚಕ್ರತ್ರಿಶೂಲ ।**

---

೧. 'ಪಶ್ಚಿಮಘಟ್ಟ' ಎಂದೇ ಪ್ರಸಿದ್ಧವಾಗಿರುವ 'ಸಹ್ಯಾದ್ರಿ' ಯು ಸುಮಾರು ೯೬೬ ಕಿ. ಮೀ. ಉದ್ದ ಹರಡಿರುವ ವಿಶಾಲಪರ್ವತಶ್ರೇಣಿ. ಇದರ ಅತ್ಯಂತ ಎತ್ತರದ ಶಿಖರವು ೧೫೦೦ ಮೀಟರ್ ಎತ್ತರವಿದೆ. ಸುಬ್ರಹ್ಮಣ್ಯ, ಕೊಲ್ಲೂರು, ತಲಕಾವೇರಿ ಮೊದಲಾದ ಕ್ಷೇತ್ರಗಳು ಈ ಪರ್ವತಶ್ರೇಣಿಯಲ್ಲಿವೆ. ಕಾಳೀ, ನೇತ್ರಾವತೀ, ಗಂಗಾವಳಿ, ಶರಾವತೀ, ಸುವರ್ಣಾ, ಸೀತಾ ಮೊದಲಾದ ನದಿಗಳು ಇದರಲ್ಲಿ ಹುಟ್ಟಿ ಪಶ್ಚಿಮಾಭಿಮುಖವಾಗಿ ಹರಿಯುವ ನದಿಗಳು; ಕೃಷ್ಣಾ ಕಾವೇರಿ, ತುಂಗಭದ್ರಾ ಮೊದಲಾದವುಗಳು ಪೂರ್ವಾಭಿಮುಖವಾಗಿ ಹರಿಯುತ್ತದೆ.

೨. ಆಭಾಸತ್ವೇ ವಿರೋಧಸ್ಯ ವಿರೋಧಾಭಾಸ ಇಷ್ಯತೇ ॥ — ವ್ಯಾಖ್ಯಾನ

ಪರತರ ಗುರುಮೂರ್ತೇ ಪಾವನಾಪಾರಕೀರ್ತೇ
ಹರಿಹರ ತವ ಪಾದಾಂಭೋಜಯುಗ್ಮಂ ನತೋऽಸ್ಮಿ ॥ ೫೯ ॥

ಅ: (ಹೇ) ಮುರಪುರಹರ = (ಕ್ರಮವಾಗಿ) ಮುರಹರನೂ, ಪುರಹರನೂ ಆದ ಲಕ್ಷ್ಮೀಪಾರ್ವತೀಕೇಲಿಲೋಲ = ಲಕ್ಷ್ಮಿಯ ವಿಲಾಸದಲ್ಲೂ, ಪಾರ್ವತಿಯ ವಿಲಾಸದಲ್ಲೂ ಆಸಕ್ತನಾದ; ಸ್ಫುರದಸಿತಸಿತಾಂಗ = ಉಜ್ಜ್ವಲವಾದ ಕಪ್ಪು ಬಿಳುಪು ಶರೀರದ ಅಸಹ್ಯ-ಚಕ್ರತ್ರಿಶೂಲ = (ಶತ್ರುಗಳಿಂದ) ಸಹಿಸಲಶಕ್ಯವಾದ ಚಕ್ರ ತ್ರಿಶೂಲಗಳನ್ನುಳ್ಳ; ಪರತರ-ಗುರುಮೂರ್ತೇ = ಸರ್ವೋತ್ತಮನೂ, ಉಪದೇಶಕನೂ ಆದ [2]ಪಾವನಾಪಾರಕೀರ್ತೇ[3] = ಪಾವನವೂ, ಅಪಾರವೂ ಆದ ಕೀರ್ತಿಯುಳ್ಳ; ಹರಿಹರ ! = ಎಲೈ ಹರಿಹರ !; ತವ = ನಿನ್ನ; ಪಾದಾಂಭೋಜಯುಗ್ಮಂ = ತಾವರೆಯಂತಹ ಎರಡು ಪಾದಗಳನ್ನು; ನತಃ ಅಸ್ಮಿ = ವಂದಿಸುವೆನು.

ಮುರಹರ - ಪುರಹರನಾದ, ಲಕ್ಷ್ಮೀವಿಲಾಸ - ಪಾರ್ವತೀವಿಲಾಸದಲ್ಲಿ ತೊಡಗಿದ ಹೊಳೆಯುವ ಕಪ್ಪು-ಬಿಳುಪು ಶರೀರದ, ಸಹಿಸಲಶಕ್ಯವಾದ ಚಕ್ರ-ತ್ರಿಶೂಲಗಳನ್ನು ಹಿಡಿದ, ಸರ್ವೋತ್ತಮನೂ, ಉಪದೇಶಕನೂ ಆದ, ಪಾವನವೂ, ಅಪಾರವೂ ಆದ ಕೀರ್ತಿಯ ಎಲೈ ಹರಿಹರ ! ನಿನ್ನ ತಾವರೆಯಂತಹ ಎರಡು ಪಾದಗಳಿಗೆ ವಂದಿಸುವೆನು.

ವಿ: ೧. ಯಾವ ಒಬ್ಬ ದೇವತೆಯಿಂದಲೂ ತಾನು ಹತನಾಗದಂತೆ ಬ್ರಹ್ಮದೇವರಿಂದ ವರ ಪಡೆದ 'ಗುಹ' ಎಂಬ ರಾಕ್ಷಸನನ್ನು ಸಂಹರಿಸಲು ಶ್ರೀವಿಷ್ಣುವು ಶಿವನ ಸಮೇತನಾಗಿ ಒಂದೇ ರೂಪದಲ್ಲಿ ಕಾಣಿಸಿಕೊಂಡು ಅವನನ್ನು ಸಂಹರಿಸಿದ ಸ್ಥಳವೆಂದು ಸ್ಕಂದಪುರಾಣೋಕ್ತ 'ಹರಿಹರ' ಕ್ಷೇತ್ರದ ಮಾಹಾತ್ಮ್ಯದಲ್ಲಿ ಉಕ್ತವಾಗಿದೆ[4].

---

೧. ಈ ಹರಿಹರಕ್ಷೇತ್ರವು ತುಂಗಭದ್ರಾತೀರದ ಒಂದು ಕ್ಷೇತ್ರ; 'ಗುಹಾರಣ್ಯ' ಎಂಬುದು ಇದರ ಪ್ರಾಚೀನ ಹೆಸರು; ಒಂದೇ ಮೂರ್ತಿಯಲ್ಲಿ ಹರಿಹರರಿಬ್ಬರೂ ಪ್ರಕಟವಾಗಿದ್ದು, ಎಡಭಾಗ ವಿಷ್ಣುರೂಪವೂ ಬಲಭಾಗವು ಶಿವರೂಪವೂ ಆಗಿರುವ ಮೂರ್ತಿಯು ಇಲ್ಲಿದೆ; ಪರಶುರಾಮಕ್ಷೇತ್ರದ ಶಂಕರನಾರಾಯಣದಂತೆ ಇದೂ ಹರಿಹರಾತ್ಮಕವಾದ ವಿಗ್ರಹ; ಅಲ್ಲಿ ಲಿಂಗಮಾತ್ರವಿದ್ದರೆ, ಇಲ್ಲಿ ಮೂರ್ತಿಯೂ ಇರುವುದು ವಿಶೇಷ. ವಿಷ್ಣುಭಾಗದಲ್ಲಿ ಮೇಲಿನ ಹಸ್ತದಲ್ಲಿ ಚಕ್ರವಿದ್ದು, ಶಿವಭಾಗದಲ್ಲಿ ಕೆಳಗಿನ ಹಸ್ತದಲ್ಲಿ ತ್ರಿಶೂಲವಿದೆ. ಸ್ಕಂದ ಪುರಾಣದಲ್ಲಿ ಇದರ ಮಾಹಾತ್ಮ್ಯವು ಬಂದಿದ್ದು ಅದರಂತೆ ಇಲ್ಲಿನ ನದಿಯಲ್ಲಿ ಬ್ರಹ್ಮತೀರ್ಥ, ಭಾರ್ಗವತೀರ್ಥ, ನೃಸಿಂಹತೀರ್ಥ, ಪಿಶಾಚಮೋಚನತೀರ್ಥ, ಗಾಲವತೀರ್ಥ, ಚಕ್ರತೀರ್ಥ, ವಹ್ನಿತೀರ್ಥ, ಋಣಮೋಚನತೀರ್ಥ, ವಟಚ್ಛಾಯಾತೀರ್ಥ, ರುದ್ರಪಾದತೀರ್ಥ, ಪಾಪನಾಶನತೀರ್ಥ ಎಂಬ ಹನ್ನೊಂದು ತೀರ್ಥಗಳು ಇರುವಂತೆ ತಿಳಿಯುತ್ತದೆ.

೨. ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ । – ಗೀತಾ(೭/೭)

೩. ವಿದ್ಯಾಕಾಮಸ್ತು ಗಿರಿಶಮ್ – ಭಾಗವತ(೨/೩/೭)
ಜ್ಞಾನಂ ಮಹೇಶ್ವರಾದಿಚ್ಛೇತ್ – ಸ್ಮೃತಿಃ

೪. ಈ ಕೃತಿ ನನ್ನ ಸಂಗ್ರಹ(ಶ್ರೀಜಯತೀರ್ಥ ಹಸ್ತಲಿಖಿತ ಗ್ರಂಥಾಲಯ)ದಲ್ಲಿದೆ.

೨. ಒಂದೇ ಮೂರ್ತಿಯಲ್ಲಿರುವ ಹರಿಹರರನ್ನು ಏಕಕಾಲಕ್ಕೆ ಸ್ತೋತ್ರ ಮಾಡಿರುವುದು ಶ್ರೀವಾದಿರಾಜರ ಅಪಾರ ಕೌಶಲಕ್ಕೆ ನಿದರ್ಶನವಾಗಿದೆ. ಹಿಂದೆ 'ಶಂಕರನಾರಾಯಣ' ಎಂಬ ಪದ ಹೇಗೋ ಹಾಗೆ ಇಲ್ಲೂ 'ಹರಿಶ್ಚ ಹರಶ್ಚ' (ತಯೋರೇಕವದ್ಭಾವಃ) - ಎಂದು ದ್ವಂದ್ವಸಮಾಸ ಅಥವಾ ಹರಿಣಾ ಸಹಿತಃ ಹರಃ ಎಂಬ ಮಧ್ಯಮಪದಲೋಪೀ ತತ್ಪುರುಷಸಮಾಸವನ್ನಾಗಲೀ ಅರ್ಥಮಾಡಿಕೊಳ್ಳಬೇಕು.

೩. ಹರಿಯು ಮುರಾರಿ, ಹರನು ತ್ರಿಪುರಾರಿ; ಹರಿಯು ಲಕ್ಷ್ಮೀಕೇಲಿಲೋಲ, ಹರನು ಪಾರ್ವತೀಕೇಲಿಲೋಲ; ಹರಿಯು ಸ್ಫುರದಸಿತಾಂಗ, ಹರನು ಸ್ಫುರತ್ಸಿತಾಂಗ; ಹರಿಯು ಅಸಹ್ಯಚಕ್ರನು, ಹರನು ಅಸಹ್ಯತ್ರಿಶೂಲನು; ಹರಿಯು ಪರತರನು, ಹರನು ಗುರುಮೂರ್ತಿಯು, ಇಬ್ಬರೂ ಪಾವನರು, ಅಪಾರಕೀರ್ತಿಗಳು, ಹೀಗಿರುವ ಹರಿ ಮತ್ತು ಹರರೇ ನಿಮ್ಮ ಚರಣಕಮಲಗಳಿಗೆ ನಾನು ನಮಿಸುತ್ತಿರುವೆನು ಎಂದು ಅರ್ಥ.

೪. ಇಲ್ಲಿ ಇಬ್ಬರನ್ನು ಒಟ್ಟಾಗಿ ಸ್ತುತಿಸಿದ್ದರೂ 'ಅಭ್ಯರ್ಹಿತಂ ಪೂರ್ವಂ' ಎಂಬ ನ್ಯಾಯದಿಂದ ಮೊದಲು ಉಲ್ಲೇಖಿತನಾಗಿರುವ ವಿಷ್ಣುವು ಸರ್ವೋತ್ತಮ, ಅನಂತರ ಉಲ್ಲೇಖಿತನಾಗಿರುವ ಹರನು ತದಧೀನನೆಂಬ ಭಾವಿಸಬೇಕು.

**ಹರೇ ಭವಹರೇ ತೇಽಂಘ್ರೌ ಭಕ್ತಿರ್ಮುಕ್ತಿಪ್ರದಾಽಸ್ತು ಮೇ ।**
**ವೈರಾಗ್ಯಭಾಗ್ಯಂ ವಿತರ ಹರ ಗೌರೀಮನೋಹರ ॥ ೭೦ ॥**

ಅ: (ಹೇ) **ಹರೇ** = ಎಲೈ ಶ್ರೀಹರಿಯೇ !; **ಭವಹರೇ** = ಸಂಸಾರನಿವರ್ತಕವಾದ; **ತೇ** = ನಿನ್ನ; **ಅಂಘ್ರೌ** = ಚರಣದಲ್ಲಿ; **ಮುಕ್ತಿಪ್ರದಾ** = ಮುಕ್ತಿಯನ್ನು ಸಂಪಾದಿಸಿ ಕೊಡುವಂತಹ; **ಭಕ್ತಿ** = ಭಕ್ತಿಯು; **ಮೇ** = ನನಗೆ; **ಅಸ್ತು** = ಉಂಟಾಗಲಿ; **ಗೌರೀಮನೋಹರ** = ಪಾರ್ವತೀಪ್ರಿಯನಾದ; (ಹೇ) **ಹರ** = ಎಲೈ ಹರನೇ !; **ವೈರಾಗ್ಯಭಾಗ್ಯಂ** = ವೈರಾಗ್ಯಭಾಗ್ಯವನ್ನು; **ವಿತರ** = ನೀಡು.

ಶ್ರೀಹರಿಯೇ ! ನನಗೆ ಸಂಸಾರ ತೊಲಗಿಸುವ ನಿನ್ನ ಚರಣದಲ್ಲಿ ಮುಕ್ತಿನೀಡುವ ಭಕ್ತಿ ಉಂಟಾಗಲಿ; ಪಾರ್ವತೀಪ್ರಿಯನಾದ ಹರನೇ ! ನೀನು ವೈರಾಗ್ಯಭಾಗ್ಯವನ್ನು ಕರುಣಿಸು.

ವಿ: ೧. ಈ ಶ್ಲೋಕದ ಪೂರ್ವಾರ್ಧದಲ್ಲಿ ಹರಿಯನ್ನೂ, ಉತ್ತರಾರ್ಧದಲ್ಲಿ ಹರನನ್ನೂ ಸ್ತುತಿಸಿರುವರು;

೨. ಶ್ರೀಹರಿಯು ಮೋಕ್ಷಪ್ರದನಾದ್ದರಿಂದ ಆತನಲ್ಲಿ ನಿರ್ಮಲ ಭಕ್ತಿಯನ್ನೂ, ಶ್ರೀಹರನು ಮೋಕ್ಷಸಾಧನವಾಗುವ ವೈರಾಗ್ಯವನ್ನು ಕೊಡುವವನಾದ್ದರಿಂದ ಅವನಲ್ಲಿ ವೈರಾಗ್ಯ ಸಂಪತ್ತನ್ನೂ ಪ್ರಾರ್ಥಿಸಿರುವರು[೧].

---

೧. ವಿಷ್ಣುರ್ಹಿದಾತಾ ಮೋಕ್ಷಸ್ಯ ವಾಯುಶ್ಚತದನುಜ್ಞಯಾ । – ಮ.ಭಾ.ತಾ.ನಿ.(೧/೭೮)
ಮುಕ್ತಿಪ್ರದಾತಾ ಸರ್ವೇಷಾಂ ವಿಷ್ಣುರೇವ ನ ಸಂಶಯಃ । – ಹರಿವಂಶ (೩/೮೦/೩೦)

**ಯದೇಕೇನ ನ ವಧ್ಯೋಽರಿಸ್ತತೋ ಹರಿಹರಾವುಭೌ ।**
**ಸಹಾಗತಾವರ್ಧದೃಶ್ಯಾವೈಕ್ಯಂ ಚೇತ್ ಶತ್ರುಣಾ ಜಿತಮ್ ॥ ೬೧ ॥**

ಏಕೇನ = ಹರಿ ಅಥವಾ ಹರ ಎಂಬ ಒಬ್ಬನೇ ದೇವತೆಯಿಂದ; ನ ವಧ್ಯಃ (ಇತಿ) ಯತ್ ತತಃ = ಅವಧ್ಯನಾಗಿದ್ದರಿಂದಾಗಿ; ಉಭೌ ಹರಿಹರೌ = ಹರಿಹರರಿಬ್ಬರೂ; ಅರ್ಧದೃಶ್ಯೌ = ಮೂರ್ತಿಯ ಒಂದೊಂದು ಭಾಗದಲ್ಲಿ ಆರ್ಧಭಾಗ ಮಾತ್ರ ಕಾಣಿಸುವವರಾಗಿ; ಸಹ ಆಗತೌ = ಒಟ್ಟಾಗಿ ಆಗಮಿಸಿದರು; ಐಕ್ಯಂ ಚೇತ್ = ಅವರಿಬ್ಬರಿಗೂ ಐಕ್ಯವೇ ಇದ್ದಿದ್ದರೆ; ಶತ್ರುಣಾ = ಶತ್ರುವಾದ ಗುಹಾಸುರನಿಂದಲೇ; ಜಿತಂ = ಗೆಲ್ಲಲ್ಪಡಬೇಕಾಗುತ್ತಿತ್ತು

ಶತ್ರುವಾದ 'ಗುಹ' ಎಂಬ ರಾಕ್ಷಸನು ಹರಿಹರರಲ್ಲಿ ಒಬ್ಬರಿಂದ ಅವಧ್ಯನೆನ್ನಿಸಿದ್ದ; ಅದಕ್ಕೆಂದು ಹರಿಹರರಿಬ್ಬರೂ ಜೊತೆಯಾಗಿಯೇ ಬಂದು ಅವನಿಗೆ ಅರ್ಧಭಾಗ ಮಾತ್ರ ಕಾಣಿಸಿಕೊಂಡರು; ಅವರಿಬ್ಬರೂ ಒಬ್ಬರೇ ಆಗಿದ್ದಲ್ಲಿ ಶತ್ರುವಾದ ರಾಕ್ಷಸನೇ ಗೆಲ್ಲಬೇಕಾಗುತ್ತಿತ್ತು.

ವಿ: ೧. ಹರಿಹರರು ಒಂದೇ ಮೂರ್ತಿಯಲ್ಲಿರುವುದರಿಂದ ಅವರಿಬ್ಬರಲ್ಲೂ ಐಕ್ಯವಿದೆ ಎಂಬ ಕೆಲವರ ವಾದವನ್ನು ಇಲ್ಲಿ ಖಂಡಿಸಿರುವರು[೧].

೨. ಯಾವುದೇ ಒಬ್ಬ ದೇವತೆಯಿಂದ ತನಗೆ ಸಾವು ಬರದಂತೆ ಗುಹಾಸುರನು ಬ್ರಹ್ಮದೇವರಿಂದ ವರ ಪಡೆದಿದ್ದರಿಂದ ಅವನ ಸಂಹಾರಕ್ಕಾಗಿ ಹರಿಹರರಿಬ್ಬರೂ ಅವನಿಗೆ ತಮ್ಮ ಶರೀರದ ಅರ್ಧಭಾಗ ಮಾತ್ರ ಕಾಣುವಂತೆ ಜೊತೆಯಾಗಿ ಬಂದು ಅವನನ್ನು ಸಂಹರಿಸಿದರು; ಅವರಿಬ್ಬರೂ ಒಂದೇ ಆಗಿದ್ದಲ್ಲಿ ವರಬಲದಂತೆ ಗುಹಾಸುರನೇ ಗೆಲ್ಲಬೇಕಾಗಿತ್ತಲ್ಲವೇ ! ಆದ್ದರಿಂದ ಅವರಲ್ಲಿ ಐಕ್ಯವಿಲ್ಲ ಎಂದು ಭಾವ.

**ಅರ್ಧನಾರೀಶ್ವರಃ ಶಂಭುರ್ಯಥಾ ಭೇದೇಽಪಿ ದೃಶ್ಯತೇ ।**
**ಮೂರ್ತೇರೇಕೈಕಭಾಗಸ್ಥೌ ತಥಾ ಹರಿಹರಾವುಭೌ ॥ ೬೨ ॥**

ಅ: ಯಥಾ = ಹೇಗೆ; ಶಂಭುಃ = ಶಿವನು ಭೇದೇ ಅಪಿ = ಸ್ತ್ರೀಪುರುಷಭಾವದಿಂದಾಗಿ ಭೇದವನ್ನೇ ಹೊಂದಿದ್ದರೂ[೨]; ಅರ್ಧನಾರೀಶ್ವರಃ = ಅರ್ಧಭಾಗ ನಾರೀ ಮತ್ತು ಅರ್ಧಭಾಗ

---

ವೈರಾಗ್ಯಾಭಿಮಾನಿನೇ ರುದ್ರಾಯ ನಮಃ — ಪೀಠಪೂಜಾಮಂತ್ರ
ಯಮವಾಯುಶಿವೇಂದ್ರಾಶ್ಚ ಜ್ಞೇಯಾ ಧರ್ಮಾದಿದೇವತಾಃ ॥ — ತಂತ್ರಸಾರಸಂಗ್ರಹ(೧/೫೩)

೧. ಕೇಚನ ಮೂರ್ಖಾಃ ಹರಿಹರಯೋರೇಕಮೂರ್ತಿಗತತ್ವೇನ ಐಕ್ಯಮಿತಿ ವದಂತಿ । ತಾನ್ ಪ್ರತಿಯುಕ್ತ್ಯಾ ತಯೋರೈಕ್ಯಂ ದೂಷಯಿತುಮಾಹ । —ವ್ಯಾಖ್ಯಾನ

೨. ಅರ್ಧೇ ಶರೀರಾರ್ಧಭಾಗೇ ಸ್ಥಿತಾ ನಾರೀ ಅರ್ಧನಾರೀ ತಸ್ಯಾ ಈಶ್ವರಃ ।
ಶರೀರಾರ್ಧಭಾಗೇ ಸ್ಥಿತಾ ನಾರೀ ಯಸ್ಯ ಸಃ ಅರ್ಧನಾರಿಃ ಸ ಚಾಸಾವೀಶ್ವರಃ ಇತಿ ವಾ ।
ತಾದೃಶಃ ಸನ್ ನಾರೀಭೂತಾರ್ಧಶರೀರಃ ಸನ್ನಿತ್ಯರ್ಥ । —ವ್ಯಾಖ್ಯಾನ

ನರರೂಪನಾಗಿ; ದೃಶ್ಯತೇ = ಕಾಣಿಸುತ್ತಿರುವನೋ; ತಥಾ = ಹಾಗೆಯೇ; ಉಭೌ ಹರಿಹರೌ = ಈ ಹರಿ ಮತ್ತು ಹರ ಇಬ್ಬರು; ಮೂರ್ತೇಃ = ಮೂರ್ತಿಯ; ಏಕೈಕಭಾಗಸ್ಥೌ = ಎಡ ಬಲ ಎಂಬ ಒಂದೊಂದು ಭಾಗದಲ್ಲಿ ಇರುವವರಾಗಿ; (ದೃಶ್ಯತೇ = ಕಾಣಿಸುತ್ತಿರುವರು).

ಶಿವನು ಬೇರೆಯೇ ಆಗಿದ್ದರೂ ಅರ್ಧನಾರೀಶ್ವರನಾಗಿ ತೋರುವಂತೆ, ಭಿನ್ನರಾಗಿದ್ದರೂ ಹರಿಹರರಿಬ್ಬರೂ ಮೂರ್ತಿಯ ಒಂದೊಂದು ಭಾಗದಲ್ಲಿ ನೆಲೆಸಿರುವರು.

ವಿ: ೧. ಹರಿಹರರಿಬ್ಬರೂ ಒಂದೇ ಮೂರ್ತಿಯಲ್ಲಿದ್ದರೂ ಅವರಿಬ್ಬರಲ್ಲಿ ಭೇದವೇ ಉಂಟು ಎಂಬುದನ್ನು ಮತ್ತೊಂದು ಯುಕ್ತಿಯಿಂದ ಇಲ್ಲಿ ಸಮರ್ಥಿಸಿರುವರು;

೨. ಈಶ್ವರನು 'ಅರ್ಧನಾರೀಶ್ವರರೂಪ' ವನ್ನು ಹೊಂದಿರುವನೆಂದು ಪುರಾಣಗಳಲ್ಲಿ ಉಕ್ತವಾಗಿದೆ. ಆ ರೂಪವನ್ನು ಪಾರ್ವತೀಯುಕ್ತ ಹರನೆಂದು ಭಕ್ತರು ಉಪಾಸನೆ ಮಾಡುವರೇ ಹೊರತು, ಇಬ್ಬರೂ ಒಂದೇ ಎಂದಲ್ಲ; ಅಲ್ಲಿ ಹೇಗೆ ಒಂದೇ ರೂಪದಲ್ಲಿದ್ದರೂ ಅವರಿಬ್ಬರಲ್ಲೂ ಭೇದವಿದೆಯೋ ಅದೇ ರೀತಿ ಹರಿಹರರಿಬ್ಬರೂ ಒಂದೇ ಮೂರ್ತಿಯಲ್ಲಿದ್ದರೂ ಭಿನ್ನರೇ ಆಗಿರುವರು ಎಂದು ಭಾವ.

**ನಿರ್ವಿಷಂ ವತ್ಸನಾಭಿಶ್ಚ ಯಥೈಕಾಮಾಶ್ರಿತೌ ಲತಾಮ್ ।**
**ತಥಾ ಹರಿಹರೌ ಭಿನ್ನತರಾವಪ್ಯೇಕಮೂರ್ತಿಗೌ ॥ ೬೩ ॥**

ಅ: ನಿರ್ವಿಷಂ = ವಿಷನಿವರ್ತಕನಾದ 'ನಿರ್ವಿಷ' ಎಂಬ ಔಷಧಿಯೂ; ವತ್ಸನಾಭಿಃ ಚ = ವತ್ಸವೆಂಬ ವಿಷವೂ, ಭಿನ್ನತರಾವಪಿ = ಪರಸ್ಪರ ಅತ್ಯಂತ ಭಿನ್ನವಾಗಿದ್ದರೂ, ಏಕಾಂ ಲತಾಂ = ಒಂದೇ ಬಳ್ಳಿಯನ್ನು; ಯಥಾ ಆಶ್ರಿತೌ = ಹೇಗೆ ಆಶ್ರಯಿಸಿವೆಯೋ; ತಥಾ = ಹಾಗೆಯೇ; ಹರಿಹರೌ ಭಿನ್ನತರೌ ಅಪಿ = ಪರಸ್ಪರ ಅತ್ಯಂತ ಭಿನ್ನರಾಗಿದ್ದರೂ ಏಕಮೂರ್ತಿಗೌ = ಒಂದೇ ಮೂರ್ತಿಯಲ್ಲಿ ನೆಲೆಸಿರುವರು.

'ನಿರ್ವಿಷ' ಎಂಬ ಔಷಧಿ ಹಾಗೂ 'ವತ್ಸನಾಭಿ' ಎಂಬ ವಿಷ, ಎರಡೂ ಒಂದೇ ಬಳ್ಳಿಯಲ್ಲಿ ನೆಲೆಸಿರುವಂತೆ ಪರಸ್ಪರ ಅತ್ಯಂತ ಭಿನ್ನರಾಗಿದ್ದರೂ ಹರಿಹರರು ಒಂದೇ ಮೂರ್ತಿಯಲ್ಲಿ ನೆಲೆಸಿರುವರು.

ವಿ: ೧. ಹರಿಹರರ ಭೇದವನ್ನು ಮತ್ತೊಂದು ದೃಷ್ಟಾಂತದಿಂದ ಇಲ್ಲಿ ಸಮರ್ಥಿಸಿರುವರು.

೨. ಒಂದೇ ಬಳ್ಳಿಯಲ್ಲಿ ಮೇಲ್ಭಾಗವು 'ನಿರ್ವಿಷ'ವಾಗಿಯೂ, ಅಧೋಭಾಗವು ವತ್ಸನಾಭನೆಂಬ ವಿಷರೂಪವಾಗಿಯೂ ಇದೆ ಎಂದು ಆಯುರ್ವೇದದಲ್ಲಿ ಹೇಳುವರು; ಪರಸ್ಪರ ವಿರುದ್ಧ ಸ್ವಭಾವದ ಎರಡು ಔಷಧಿಗಳು ಒಂದೇ ಬಳ್ಳಿಯಲ್ಲಿ ಇರುವಂತೆ ಸ್ವಾತಂತ್ರ್ಯಾದ್ಯನಂತ ಗುಣೋಪೇತನಾದ ಹರಿಯೂ, ಅಸ್ವಂತ್ರ್ಯಾದಿಯುಕ್ತರಾದ ಹರನೂ ಪರಸ್ಪರ ಅತ್ಯಂತ ಭಿನ್ನ-ರಾಗಿದ್ದರೂ ಇಲ್ಲಿ ಒಂದೇ ಮೂರ್ತಿಯಲ್ಲಿರುವುದರಲ್ಲಿ ಯಾವ ಅನುಪಪತ್ತಿಯೂ ಇಲ್ಲ ಎಂದು ಭಾವ.

೩. ಶ್ರೀಹರಿಯು ಜಗತ್ಪಾಲಕ (ಮತ್ತು ನಿರ್ದೋಷ), ಹರನು ಜಗತ್ಸಂಹಾರಕ ಎಂಬ ಲೋಕಪ್ರಸಿದ್ಧಿಯನ್ನು ಸಹ ಈ ನಿರ್ವಿಷವತ್ಸನಾಭ ದೃಷ್ಟಾಂತದಲ್ಲಿ ಕಾಣಬಹುದು.[೧]

೪. ಒಂದೇ ಮೂರ್ತಿಯಲ್ಲಿರುವ ಈ ಹರಿಹರರ ಭೇದಸಮರ್ಥನೆಯು ಒಂದೇ ಶರೀರದಲ್ಲಿರುವ ಜೀವೇಶ್ವರಭೇದಸಮರ್ಥನೆಯನ್ನು ಧ್ವನಿಸುತ್ತದೆ ಎಂಬುದನ್ನು ಗಮನಿಸಬೇಕು. ಓಂ ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ಓಂ (೧/೨/೮) ಎಂಬ ಬ್ರಹ್ಮಸೂತ್ರವನ್ನೂ, 'ಜೀವಪರಯೋರೇಕಶರೀರಸ್ಥತ್ವೇ ಸಮಾನಭೋಗಪ್ರಾಪ್ತಿರಿತಿ ಚೇನ್ನ ಸಾಮರ್ಥ್ಯವೈಶೇಷ್ಯಾತ್ । ಉಕ್ತಂ ಹಿ ಗಾರುಡೇ । ಸರ್ವಜ್ಞಾಲ್ಪಜ್ಞತಾಭೇದಾತ್ ಸರ್ವಶಕ್ತ್ಯಲ್ಪಶಕ್ತಿತಃ। ಸ್ವಾತಂತ್ರ್ಯಪಾರತಂತ್ರ್ಯಾಭ್ಯಾಂ ಸಂಭೋಗೋ ನೇಶಜೀವಯೋಃ ಇತಿ ॥ - ಎಂಬ ಅದರ ಮಧ್ವಭಾಷ್ಯವನ್ನೂ ಗಮನಿಸಬೇಕು.

೫. ಇಲ್ಲಿಯ ಯುಕ್ತಿಗಳನ್ನು ಹಿಂದೆ ಬಂದಿರುವ ಶಂಕರನಾರಾಯಣಕ್ಷೇತ್ರಕ್ಕೂ ಸಹ ಅನ್ವಯಿಸಿಕೊಳ್ಳಬೇಕು.

## ಅಶ್ವತ್ಥನಾರಾಯಣ ([೨]ಬಿದರಹಳ್ಳಿ)

**ಮಾ ಯಾಹಿ ಪುಷ್ಕರಮಹೀಮಥವಾ ಪ್ರಯಾಗಂ**
**ಕಾಶೀಂ ಗಯಾಂ ಬದರಿಕಾಶ್ರಮಮತ್ಯಸಾಧ್ಯಮ್ ।**
**ಸೇತುಂ ಚ ರಾಘವಕೃತಂ ವರತುಂಗಭದ್ರಾ -**
**ತೀರಸ್ಥಪಿಪ್ಪಲಗೃಹಂ ಹರಿಮೇಹಿ ಸಿದ್ಧ್ಯೈ ॥ ೬೪ ॥**

ಅ : ಸಿದ್ಧ್ಯೈ = ಸಿದ್ಧಿಗೋಸ್ಕರ, **ಪುಷ್ಕರಮಹೀಂ** = ಪುಷ್ಕರಕ್ಷೇತ್ರವನ್ನು, **ಅಥವಾ** = ಅಥವಾ; **ಪ್ರಯಾಗಂ** = ಪ್ರಯಾಗ(ಕ್ಷೇತ್ರ)ವನ್ನು; **ಕಾಶೀಂ** = ಕಾಶೀಕ್ಷೇತ್ರವನ್ನು; **ಗಯಾಂ** = ಗಯಾಕ್ಷೇತ್ರವನ್ನು; **ಅತ್ಯಸಾಧ್ಯಂ** = ಅತ್ಯಾಯಾಸಸಾಧ್ಯವಾದ; **ಬದರಿಕಾಶ್ರಮಂ** = ಬದರೀ

---

೧. ಹರಿಹರಯೋರ್ಲೋಕಪ್ರಸಿದ್ಧ್ಯಾ ಪಾಲಕತ್ವಸಂಹರ್ತೃತ್ವದ್ಯೋತನಾಯ ನಿರ್ವಿಷವತ್ಸನಾಭಿದೃಷ್ಟಾಂತಃ । – ವ್ಯಾಖ್ಯಾನ

೨. ಈ ಬಿದರಹಳ್ಳಿ ಕ್ಷೇತ್ರವು ಧಾರವಾಡ ಜಿಲ್ಲೆಯ ಮುಂಡರಗಿ ತಾಲೂಕಿನಲ್ಲಿರುವ ಒಂದು ಗ್ರಾಮ. ಮಾಗಳ ನರಸಿಂಹಕ್ಷೇತ್ರವು ಇಲ್ಲಿ ನದಿಯ ಆಚೆಯ ತೀರದಲ್ಲಿದೆ. ಇಲ್ಲಿ ವೇಣುಗೋಪಾಲದೇವರ ಗುಡಿ, ಸೋಮೇಶ್ವರಗುಡಿ, ಅಶ್ವತ್ಥನಾರಾಯಣ ಮತ್ತು ವಿಷ್ಣುಪಾದಗಳಿವೆ. ಪ್ರಸಿದ್ಧ ಟಿಪ್ಪಣಿಕಾರರೂ, ಶ್ರೀಯಾದವಾರ್ಯರ ಶಿಷ್ಯರೂ, ಶ್ರೀರಾಘವೇಂದ್ರಸ್ವಾಮಿಗಳಿಂದ 'ತೀರ್ಥ' ಪ್ರಶಸ್ತಿಯಿಂದ ಆದೃತರೂ ಆದ (ಬಿದರಹಳ್ಳಿ) ಶ್ರೀನಿವಾಸತೀರ್ಥರ ಮುಖ್ಯ ಕಾರ್ಯಕ್ಷೇತ್ರವೆಂಬುದು ಇದರ ಮತ್ತೊಂದು ವೈಶಿಷ್ಟ್ಯ. ಮುಂಡರಗಿಯಿಂದ ಸುಮಾರು ೩೦ಕಿ.ಮೀ. ದೂರದಲ್ಲಿರುವ ಇಲ್ಲಿಗೆ ಮಾಗಳಕ್ಕೆ ಹೋಗಿ ಅಲ್ಲಿಂದ ನದಿಯನ್ನು ದಾಟಿಯೂ ಹೋಗಬಹುದು.

ಬಿದರಹಳ್ಳಿ ಶ್ರೀನಿವಾಸತೀರ್ಥರ ಜೀವನ ಮತ್ತು ಕೃತಿಗಳ ಸಂಕ್ಷಿಪ್ತ ಪರಿಚಯವನ್ನು ಮತ್ತು ಅವರ ಕೃತಿಗಳ ಆದ್ಯಂತ ಶ್ಲೋಕಗಳ ಸಂಗ್ರಹವನ್ನು ನನ್ನ 'ಶ್ರೀನಿವಾಸತೀರ್ಥ ಕೃತಿಮಂಜರೀ' ಎಂಬ ಗ್ರಂಥದಲ್ಲಿ ಕೊಡಲಾಗಿದೆ (ಪ್ರಕಾಶನ: ಶ್ರೀವೇದೇಶತೀರ್ಥಗ್ರಂಥಮಾಲಾ, ಮಣ್ಣೂರು).

ಕ್ಷೇತ್ರವನ್ನು; ರಾಘವಕೃತಂ = ಶ್ರೀರಾಮನಿರ್ಮಿತವಾದ; ಸೇತುಂ ಚ = ಸೇತುವನ್ನು; ಮಾ ಯಾಹಿ = ಕುರಿತು ಹೋಗಬೇಡ; (ಆದರೆ)ವರತುಂಗಭದ್ರಾತೀರಸ್ಥಪಿಪ್ಪಲಗೃಹಂ = ಶ್ರೇಷ್ಠವಾದ ತುಂಗಭದ್ರಾನದಿಯ ತೀರದ ಅಶ್ವತ್ಥ ವೃಕ್ಷದಲ್ಲಿ ನೆಲೆಸಿರುವ; ಹರಿಂ = (ಅಶ್ವತ್ಥ) ನಾರಾಯಣನನ್ನು(ಕುರಿತು), ಏಹಿ = ಬಾ.

ಎಲೈ ಯಾತ್ರಾರ್ಥಿಯೇ ! ಪುರುಷಾರ್ಥ ಸಿದ್ಧಿಗೋಸ್ಕರ, ಪುಷ್ಕರಕ್ಷೇತ್ರಕ್ಕಾಗಲೀ, ಪ್ರಯಾಗಕ್ಕಾಗಲೀ ತೆರಳದಿರು; ಕಾಶೀ, ಗಯಾ, ದುಸ್ತರವಾದ ಬದರಿಕಾಶ್ರಮ, ಶ್ರೀರಾಮನಿರ್ಮಿಸಿದ ಸೇತುವಿಗೂ ಹೋಗದಿರು; ಶ್ರೇಷ್ಠವಾದ ತುಂಗಭದ್ರಾನದಿಯ ತೀರದ ಅಶ್ವತ್ಥವೃಕ್ಷದಲ್ಲಿ ನೆಲೆಸಿರುವ ಅಶ್ವತ್ಥನಾರಾಯಣನ ಬಳಿಗೆ ಬಾ.

ವಿ: ೧. ತುಂಬಾ[೧] ಶ್ರಮಸಾಧ್ಯವಾದ ಪುಷ್ಕರಾದಿ ಕ್ಷೇತ್ರಗಳ ಯಾತ್ರೆಯಿಂದ ಲಭಿಸುವ ಪುಣ್ಯವು ಅಲ್ಪಾಯಾಸಸಾಧ್ಯವಾದ ಬಿದರಹಳ್ಳಿಕ್ಷೇತ್ರದ ಅಶ್ವತ್ಥವೃಕ್ಷದಲ್ಲಿ ಸನ್ನಿಹಿತನಾಗಿರುವ ಶ್ರೀಹರಿಯ ಆರಾಧನೆಯಿಂದಲೇ ಲಭಿಸುತ್ತದೆ ಎಂದು ಭಾವ.

೨. ಕಾರಣಾಂತರಗಳಿಂದ ಪುಷ್ಕರಾದಿ ಕ್ಷೇತ್ರಗಳ ಯಾತ್ರೆಯನ್ನು ಮಾಡಲಾಗದಿದ್ದರೂ ಅಶ್ವತ್ಥನಾರಾಯಣನ ದರ್ಶನವನ್ನಾದರೂ ತಪ್ಪದೇ ಮಾಡಲೇಬೇಕು ಎಂದು ಭಾವ.

೩. 'ಅಶ್ವತ್ಥಃ ಸರ್ವವೃಕ್ಷಾಣಾಂ(೧೦/೨೬) ಎಂಬುದಾಗಿ ಭಗವದ್ಗೀತೆಯಲ್ಲಿ [೨]ಅಶ್ವತ್ಥ-ವೃಕ್ಷದಲ್ಲಿ ಭಗವಂತನ ವಿಭೂತಿರೂಪವು ಉಕ್ತವಾಗಿದೆ.

೪. ಗೀತೆ ಹಾಗೂ ಉಪನಿಷತ್ತುಗಳಲ್ಲಿ ಜಗತ್ತನ್ನು ಅಶ್ವತ್ಥವೃಕ್ಷಕ್ಕೆ ಹೋಲಿಸಿರುವುದು ಸಹ ಗಮನಾರ್ಹ.

೫. ಬಿದರಹಳ್ಳಿಯಲ್ಲಿ ದೊಡ್ಡದಾದ ಅಶ್ವತ್ಥವೃಕ್ಷವು ತುಂಗಭದ್ರಾತೀರದಲ್ಲಿ ಅದರ ನೆರಳು ನೀರಿನ ಮೇಲೆ ಬೀಳುವಂತೆ, ಬೆಳೆದು ನಿಂತಿದೆ. ಹೀಗೆ ತನ್ನ ನೆರಳು ನೀರಿನಲ್ಲಿ ಬೀಳುವಂತೆ ಬೆಳೆಯುವ ಅಶ್ವತ್ಥವೃಕ್ಷವು ಶ್ರೀಹರಿಯ ವಿಶೇಷ ಸನ್ನಿಧಾನದಿಂದ ಕೂಡಿರುತ್ತದೆ ಎಂಬುದು ಶಾಸ್ತ್ರಗಳಲ್ಲಿ ನಿರೂಪಿತವಾಗಿರುವ ವಿಷಯ. ಇದರಂತೆ ಶ್ರೀಮುಷ್ಣದ ನಿತ್ಯಪುಷ್ಕರಣೀ, ಹಂಪೆಯ ಚಕ್ರತೀರ್ಥ ಮೊದಲಾದ ಅನೇಕ ಸ್ಥಳಗಳಲ್ಲಿ ಅಶ್ವತ್ಥವೃಕ್ಷಗಳು ಕಂಡುಬರುತ್ತವೆ. ಅಂತಹ ಸ್ಥಳಗಳಲ್ಲಿನ ತೀರ್ಥಸ್ನಾನ ಸಕಲರೋಗಹರ ಎಂದು ಪ್ರತೀತಿ. ಶ್ರೀವಾದಿರಾಜಸ್ವಾಮಿಗಳ ಈ ಮಾತುಗಳು ಅಂತಹ ಸಕಲ ಅಶ್ವತ್ಥವೃಕ್ಷಗಳ ಕ್ಷೇತ್ರಗಳಿಗೂ ಅನ್ವಯಿಸುವಂತಹ ಅಪೂರ್ವ ವಚನ ಎಂದು ತಿಳಿಯಬಹುದು.

**ಪಾದಸ್ಥಾನಲ್ಪಪಾದಃ ತನುನಿಹಿತತನುಃ ಕೋಮಲಾಗ್ರಸ್ಥಿತಾಸ್ಯಃ**
**ಸ್ಕಂಧಸ್ಕಂಧೋಽಗ್ರ್ಯಶಾಖಾಸ್ಥಿತಕರನಿಕರಃ ಶ್ರೀಧರಾಶ್ಲಿಷ್ಟಪಾರ್ಶ್ವಃ।**

---

೧. ಅತ್ಯಾಯಾಸಸಾಧ್ಯಪುಷ್ಕರಾಯಾತ್ರಯಾ ಲಭ್ಯಂ ಪುಣ್ಯಂ‌ಅಲ್ಪಾಯಾಸಸಾಧ್ಯಾಶ್ವತ್ಥಸನ್ನಿಹಿತಹರಿ-ಯಾತ್ರಯಾ ಭವತೀತಿ ಭಾವಃ॥ —ವ್ಯಾಖ್ಯಾನ

೨. ಅಶ್ವತ್ಥವೃಕ್ಷವನ್ನು ಶನಿವಾರದಂದು ಮಾತ್ರವೇ ಸ್ಪರ್ಶಿಸಿ ಸೇವಿಸಬೇಕು ಎಂಬ ವಿಶೇಷ ನಿಯಮ ಉಂಟು(ಅಶ್ವತ್ಥಂ ಮಂದವಾರೇ ಚ ಸಮುದ್ರಂ ಪರ್ವಣಿ ಸ್ಪೃಶೇತ್ - ಸ್ಮೃತಿ).

**ವ್ಯಾಪ್ಯಾಶ್ವತ್ಥಂ ಮುಕುಂದಸ್ತ್ರಿದಶಪರಿವೃತಸ್ತುಂಗಭದ್ರಾತಿಭದ್ರೇ**
**ವೇಣುಗ್ರಾಮೇ ಸದಾಽಽಸ್ತೇ ಸಕಲಜನಮನೋಽಭೀಷ್ಟದಾಯೀ ದಯಾಲುಃ ೬೫**

ಅ: ಪಾದಸ್ಥಾನಲ್ಪಪಾದಃ = ಬೇರುಗಳಲ್ಲಿ ತನ್ನ ಅನಂತ ಪಾದಗಳನ್ನುಳ್ಳವನಾಗಿ, ತನುನಿಹಿತತನುಃ = ವೃಕ್ಷಮಧ್ಯದಲ್ಲಿ ತನ್ನ ಶರೀರವನ್ನುಳ್ಳವನಾಗಿ; ಕೋಮಲಾಗ್ರಸ್ಥಿತಾಸ್ಯಃ = ಕೋಮಲವಾದ ವೃಕ್ಷದ ತುದಿಗಳಲ್ಲಿ ತನ್ನ ಮುಖವನ್ನುಳ್ಳವನಾಗಿ; ಸ್ಕಂಧಸ್ಕಂಧಃ = ವೃಕ್ಷದ ಸ್ಕಂಧದಲ್ಲಿ ತನ್ನ ಹೆಗಲನ್ನುಳ್ಳವನಾಗಿ; ಅಗ್ರ್ಯಶಾಖಾಸ್ಥಿತಕರನಿಕರಃ = ವೃಕ್ಷದ ಉತ್ತಮ ರೆಂಬೆಗಳಲ್ಲಿ ತನ್ನ ಹಸ್ತಸಮೂಹವನ್ನುಳ್ಳವನಾಗಿ; ಶ್ರೀಧರಾಶ್ಲಿಷ್ಟಪಾರ್ಶ್ವಃ = ಶ್ರೀದೇವಿ, ಭೂದೇವಿಯರಿಂದ ಆಲಂಗಿತಪಾರ್ಶ್ವನೂ; ತ್ರಿದಶಪರಿವೃತಃ = ದೇವತೆಗಳಿಂದ ಸುತ್ತುವರೆಯಲ್ಪಟ್ಟವನೂ ಸಕಲಜನಮನೋಽಭೀಷ್ಟದಾಯೀ = ಸಕಲ ಸಜ್ಜನರ ಮನದ ಅಭಿಲಾಷೆಗಳನ್ನು ಪೂರೈಸುವವನೂ; ದಯಾಲುಃ = ದಯಾಶೀಲನೂ; ಮುಕುಂದಃ = ಶ್ರೀನಾರಾಯಣನು; ತುಂಗಭದ್ರಾತಿಭದ್ರೇ = ತುಂಗಭದ್ರಾನದಿಯ ಅತ್ಯಂತ ಮನೋಹರವಾದ; ವೇಣುಗ್ರಾಮೇ = ಬಿದರಹಳ್ಳಿಗ್ರಾಮದಲ್ಲಿ; ಅಶ್ವತ್ಥಂ = ಅಶ್ವತ್ಥವೃಕ್ಷವನ್ನು; ವ್ಯಾಪ್ಯ = ವ್ಯಾಪಿಸಿದವನಾಗಿ; ಸದಾ = ಯಾವಾಗಲೂ; ಆಸ್ತೇ = ಇರುವವನು (ಸ್ವಭಾವೋಕ್ತಿ ಅಲಂಕಾರ).

**ಅಶ್ವತ್ಥವೃಕ್ಷದ ಬೇರುಗಳಲ್ಲಿ ತನ್ನ ಅನಂತಪಾದಗಳು, ವೃಕ್ಷದ ಒಡಲಿನಲ್ಲಿ ತನ್ನ ಆಕೃತಿ, ಅದರ ಕೋಮಲ ತುದಿಗಳಲ್ಲಿ ತನ್ನ ಮುಖ, ಅದರ ರೆಂಬೆಗಳಲ್ಲಿ ತನ್ನ ಭುಜಗಳು, ಅದರ ಚಾಚಿದ ರೆಂಬೆಗಳಲ್ಲಿ ತನ್ನ ತೋಳುಗಳು, ಇಕ್ಕೆಲಗಳಲ್ಲಿ ಆಲಂಗಿಸಿಕೊಂಡಿರುವ ಶ್ರೀದೇವಿ ಭೂದೇವಿಯರು; ಹೀಗೆ ಕರುಣಾಳುವಾದ, ಮುಕುಂದನಾದ ಶ್ರೀಹರಿಯು ದೇವವೃಂದದಿಂದ ಪರಿವೃತನಾಗಿ ಬಿದರಹಳ್ಳಿಯ ತುಂಗಭದ್ರೆಯ ಅತ್ಯಂತ ಮಂಗಲಕರವಾದ ತಟದಲ್ಲಿ ಅಶ್ವತ್ಥವನ್ನು ವ್ಯಾಪಿಸಿ ಸಕಲಭಕ್ತಜನರ ಮನೋಭಿಲಾಷೆಯನ್ನು ಪೂರೈಸುತ್ತಾ ಸದಾ ನೆಲೆಸಿರುವನು.**

ವಿ. ೧. ಪುರುಷಸೂಕ್ತಮೊದಲಾದ ಶಾಸ್ತ್ರಗಳಿಂದ ಪ್ರತಿಪಾದಿತನಾಗಿರುವಂತೆ ನಾರಾಯಣನು ಅನಂತಪಾದನೂ, ಅನಂತರೂಪನೂ, ಅನಂತಮುಖನೂ, ಅನಂತಭುಜನೂ, ಅನಂತಹಸ್ತನೂ ಆಗಿರುವನು[1]; ಇಂತಹ ಪರಮಾತ್ಮನು ಅಶ್ವತ್ಥವೃಕ್ಷದಲ್ಲಿ ಸದಾ ನೆಲೆಸಿರುವುದು ಯುಕ್ತವಾಗಿದೆ ಎಂದು ಶ್ರೀವಾದಿರಾಜರು ತುಂಬಾ ಸುಂದರವಾಗಿ ಇಲ್ಲಿ ವರ್ಣಿಸಿರುವರು[2].

---

೧. ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । -ಪುರುಷಸೂಕ್ತ
ಅನೇಕಬಾಹೂದರವಕ್ತ್ರನೇತ್ರಂ। -ಗೀತಾ(೧೧/೧೬)

೨. ಶ್ರೀನಾರಾಯಣಪಂಡಿತಾಚಾರ್ಯರು 'ಸ್ಥಾವರಾಣಾಂ ಹಿಮಾಲಯಃ' ಎಂಬ ಭಗವದ್ಗೀತೆಯ ಹಿನ್ನೆಲೆಯಲ್ಲಿ ಹಿಮಾಲಯಪರ್ವತವನ್ನು ನಾರಾಯಣನೆಂದು ಇದೇ ರೀತಿ ವರ್ಣಿಸಿರುವುದನ್ನು ಇಲ್ಲಿ ಸ್ಮರಿಸಬಹುದು:
ಪಾದೋಪಾಂತನಮನ್ಮಹಾಮುನಿಗಣಂ ಹೇಮಪ್ರದೀಪ್ತಾಂಬರಂ
ಶ್ರೀಮದ್ರತ್ನಕಲಾಪಮಗ್ರ್ಯಕಟಕೈರ್ವಿಭ್ರಾಜಿತಂ ಹಾಟಕೈಃ।

೨. ಅಶ್ವತ್ಥಕ್ಕೆ ಅಸಂಖ್ಯ ಬೇರುಗಳಿವೆ, ತುದಿಗಳಿವೆ, ರೆಂಬೆಗಳಿವೆ, ಸ್ಕಂಧಗಳಿವೆ, ಶ್ರೀಹರಿಯು ತನ್ನ ಪಾದಗಳಿಂದ ಅಶ್ವತ್ಥ ಬೇರುಗಳನ್ನೂ, ರೂಪಗಳಿಂದ ವೃಕ್ಷದ ಮಧ್ಯಭಾಗವನ್ನೂ, ಮುಖಗಳಿಂದ ತುದಿಗಳನ್ನೂ, ಭುಜಗಳಿಂದ ಸ್ಕಂಧಗಳನ್ನೂ ವ್ಯಾಪಿಸಿದವನಾಗಿ ಅಶ್ವತ್ಥದಲ್ಲಿ ಸದಾ ನೆಲೆಸಿರುವನು ಎಂದು ಭಾವ.

೩. ಅಶ್ವತ್ಥ ದರ್ಶನವು ಒಳಗಿನ ಭಗವದ್ರೂಪದರ್ಶನದ ಚಿಂತನೆಗೆ ನೆರವಾಗುವ ಬಗೆ ಇಲ್ಲಿ ಸುಂದರವಾಗಿ ನಿರೂಪಿತವಾಗಿದೆ.

## ಅಶ್ವತ್ಥ ವೃಕ್ಷ (ಬಿದರಹಳ್ಳಿ)

**ಮಧ್ಯಸ್ಥಕೃಷ್ಣ ಪರಿಪಾಲಯ ಭಕ್ತವರ್ಗಂ**
**ರುದ್ರಾಶ್ರಿತಾಗ್ರ ರುಜಮರ್ದಯ ಸೇವಕಸ್ಯ ।**
**ಪದ್ಮಾಸನಾವಸಥಮೂಲ ಸೃಜಾಸ್ಯ ತಂತುಂ**
**ಸದ್ವಂದ್ಯ ಪಿಪ್ಪಲತರೋ ವಿತರಾಖಿಲೇಷ್ಟಮ್[೧] ॥ ೬೬ ॥**

ಅ: (ಹೇ) ಮಧ್ಯಸ್ಥಕೃಷ್ಣ = ಎಲೈ ಮಧ್ಯಭಾಗದಲ್ಲಿ ಶ್ರೀಕೃಷ್ಣನನ್ನುಳ್ಳ ಅಶ್ವತ್ಥವೃಕ್ಷವೇ; ಭಕ್ತವರ್ಗಂ = ಭಕ್ತಸಮುದಾಯವನ್ನು; ಪರಿಪಾಲಯ = ಎಲ್ಲ ರೀತಿಯಲ್ಲೂ ಪಾಲಿಸು; (ಹೇ) ರುದ್ರಾಶ್ರಿತಾಗ್ರ= ಎಲೈ ರುದ್ರದೇವರು ನೆಲೆಸಿರುವ ತುದಿಯುಳ್ಳ ಅಶ್ವತ್ಥವೇ; ಸೇವಕಸ್ಯ = ಸೇವಕನ; ರುಜಂ[೨] = ರೋಗವನ್ನು; ಅರ್ದಯ = ನಾಶಪಡಿಸು; (ಹೇ) ಪದ್ಮಾಸನಾವಸಥಮೂಲ = ಎಲೈ ಬ್ರಹ್ಮದೇವರು ನೆಲೆಸಿರುವ ಮೂಲಭಾಗವನ್ನುಳ್ಳ ಅಶ್ವತ್ಥವೇ !; ಅಸ್ಯ = ಈ ಸೇವಕನಿಗೆ; ತಂತುಂ = ಸಂತಾನವನ್ನು; ಸೃಜ = ಉಂಟುಮಾಡು; ಸದ್ವಂದ್ಯ = ಸಜ್ಜನರಿಂದ ಸ್ತುತ್ಯವಾಗಿರುವ; ಪಿಪ್ಪಲತರೋ = ಅಶ್ವತ್ಥವೃಕ್ಷವೇ !; ಅಖಿಲೇಷ್ಟಂ = ಸಕಲವಿಧ ಬಯಕೆಯನ್ನೂ; ವಿತರ = ಈಡೇರಿಸು.

ಅಶ್ವತ್ಥವೃಕ್ಷವೇ ! ಮಧ್ಯಭಾಗದಲ್ಲಿ ಶ್ರೀಕೃಷ್ಣ ನೆಲೆಸಿರುವ ನೀನು ಭಕ್ತವರ್ಗವನ್ನು ಪರಿಪಾಲಿಸು; ತುದಿಯಲ್ಲಿ ರುದ್ರದೇವರನ್ನು ಹೊಂದಿರುವ ನೀನು ಸೇವಕನ ರೋಗವನ್ನು ಪರಿಹರಿಸು; ಬುಡದಲ್ಲಿ ಬ್ರಹ್ಮನನ್ನು ಹೊಂದಿರುವ ನೀನು ಇವನಿಗೆ ಸಂತತಿಯನ್ನು ಕರುಣಿಸು; ಸಜ್ಜನರಿಂದ ವಂದಿತನಾದ ನೀನು ಸಕಲ ಇಷ್ಟಾರ್ಥವನ್ನೂ ಈಡೇರಿಸು.

---

ದೃಷ್ಟ್ವಾ ತಂ ಧರಣೀಧರಂ ಸುವನಮಾಲೋಲ್ಲಾಸಿನಂ ಸುಂದರಂ
ಸ್ವಾನಂದಾಕೃತಿಮಸ್ಮರನ್ಮುರರಿಪುಂ ಸ್ವಾನಂದತೀರ್ಥಸ್ತದಾ ॥ –ಸುಮಧ್ವವಿಜಯ(೬/೫೭)

೧. ಮೂಲತೋ ಬ್ರಹ್ಮರೂಪಾಯ ಮಧ್ಯತೋ ವಿಷ್ಣುರೂಪಿಣೇ ।
ಅಗ್ರತಃ ಶಿವರೂಪಾಯ ವೃಕ್ಷರಾಜಾಯ ತೇ ನಮಃ ॥ – ಸ್ಮೃತಿ

೨. ರುಜಂ ದ್ರಾವಯತೇ ಯಸ್ಮಾದ್ರುದ್ರಸ್ತಸ್ಮಾಜ್ಜನಾರ್ದನಃ । – ಬ್ರಹ್ಮಸೂತ್ರಭಾಷ್ಯ(೧/೩/೩)

ವಿ: ೧. ಬ್ರಹ್ಮ ವಿಷ್ಣು ಮಹೇಶ್ವರರು ಕ್ರಮವಾಗಿ ಅಶ್ವತ್ಥವೃಕ್ಷದ ಮೂಲ, ಮಧ್ಯ ಮತ್ತು ತುದಿಗಳಲ್ಲಿ ನೆಲೆಸಿರುವರು ಎಂದು ಶಾಸ್ತ್ರಗಳಲ್ಲಿ ಉಕ್ತವಾಗಿದೆ. ಈ ಮೂವರೂ ಕ್ರಮವಾಗಿ ಸೃಷ್ಟಿ ಸ್ಥಿತಿ ಮತ್ತು ಲಯಕಾರಕರೆಂಬುದು ಲೋಕ ಪ್ರಸಿದ್ಧವಾದ ವಿಚಾರ. ಈ ತ್ರಿಮೂರ್ತಿಗಳ ಸನ್ನಿಧಾನದ ಹಿನ್ನೆಲೆಯಲ್ಲಿ ಅಶ್ವತ್ಥವೃಕ್ಷದ ಸೇವನೆಯು ²ಸಂತಾನವೃದ್ಧಿ, ಸಕಲವಿಧಸಂರಕ್ಷಣೆ ಮತ್ತು ರೋಗಪರಿಹಾರಗಳಿಗೆ ಸಾಧನವಾಗಿದೆ. ಅದಕ್ಕೆಂದೇ 'ಅಶ್ವತ್ಥ' ವೃಕ್ಷ ಮತ್ತು ಅದರ ಸೇವನೆಗಳಿಗೆ ಶಾಸ್ತ್ರದಲ್ಲಿ ತುಂಬಾ ಮಹತ್ತ್ವದ ಸ್ಥಾನವಿದೆ ಎಂದರ್ಥ.

೨. ಬಿದರಹಳ್ಳಿಯ ಅಶ್ವತ್ಥವೃಕ್ಷದ ಈ ತೆರನಾದ ವರ್ಣನೆಯಿಂದ ವಿದುರಾಶ್ವತ್ಥ ಮೊದಲಾದ ಸಕಲ ಕ್ಷೇತ್ರಗಳಲ್ಲಿನ ಅಶ್ವತ್ಥವೃಕ್ಷಗಳ ಮಹತ್ತ್ವವೂ ಸಹ ವರ್ಣಿತವಾದಂತೆಯೇ ಸರಿ; ಅವುಗಳ ಸೇವನೆಗೂ ಸಹ ಇದನ್ನೇ ಪ್ರಾರ್ಥನಾಮಂತ್ರವನ್ನಾಗಿ ಉಪಯೋಗಿಸಬಹುದು.

**ತುಂಗಾತರಂಗಪರಿವರ್ತನಪೂತವಾತ -**
**ಸಂಗೇನ ತೇಽಂಘ್ರಿಪ ಚಲಂತಿ ದಲಾನಿ ಭಾಂತಿ ।**
**ಜನ್ಮಾಂತರೋತ್ಥದೃಢಮೂಲದುರಂತದುಷ್ಕೃ -**
**ತ್ಯುನ್ಮೂಲನೋದ್ಯತಕರಾಂಗುಲಿಕಾಂತಿಮಂತಿ ॥ ೬೭ ॥**

ಅ: (ಹೇ) ಅಂಘ್ರಿಪ = ಎಲೈ (ಅಶ್ವತ್ಥ) ವೃಕ್ಷವೇ; ³ತುಂಗಾತರಂಗ-ಪರಿವರ್ತನಪೂತವಾತಸಂಗೇನ = ತುಂಗಭದ್ರಾನದಿಯ ಅಲೆಗಳ ಮೇಲೆ ಬೀಸಿ ಬರುವ ಪವಿತ್ರವಾದ ಗಾಳಿಯ ಸಂಪರ್ಕದಿಂದಾಗಿ; ಚಲಂತಿ = ಅತ್ತಿತ್ತ ಬೀಸುವ; ತೇ = ನಿನ್ನ; ದಲಾನಿ = ದಳಗಳು; ಜನ್ಮಾಂತರೋತ್ಥದೃಢಮೂಲದುರಂತದುಷ್ಕೃತ್ಯುನ್ಮೂಲನೋದ್ಯತ-ಕರಾಂಗುಲಿಕಾಂತಿಮಂತಿ = ನಮ್ಮ ಜನ್ಮಾಂತರಗಳಲ್ಲಿ ಒದಗಿದ ದುರಂತವಾದ ಪಾಪಕಾರ್ಯಗಳನ್ನು ಬುಡ ಸಮೇತ ಕೀಳುವ ಕಾರ್ಯದಲ್ಲಿ ಉದ್ಯುಕ್ತವಾದ ಕೈಬೆರಳುಗಳ ಶೋಭೆಯನ್ನು ಹೊಂದಿದವುಗಳಾಗಿ; ಭಾಂತಿ = ಕಂಗೊಳಿಸುತ್ತಿವೆ. (ಉಪಮಾಗರ್ಭ ಉತ್ಪ್ರೇಕ್ಷಾಲಂಕಾರ)

ಅಶ್ವತ್ಥವೃಕ್ಷವೇ ! ತುಂಗಭದ್ರೆಯ ಅಲೆಗಳ ಮೇಲೆ ಬೀಸಿ ಬರುವ ಪವಿತ್ರವಾದ ಗಾಳಿಯ ಸಂಪರ್ಕದಿಂದ ಓಲಾಡುವ ನಿನ್ನ ದಳಗಳು ಜನ್ಮಜನ್ಮಾಂತರಗಳಿಂದ

---

೧. ಅಶ್ವತ್ಥವು ವಿಷ್ಣುವಿನ ವಿಭೂತಿರೂಪಯುಕ್ತವಾದ್ದರಿಂದ, ಇಲ್ಲಿ ಬ್ರಹ್ಮ ವಿಷ್ಣು ಮತ್ತು ಮಹೇಶ್ವರ ಎಂಬ ಮೂರೂ ಸಹ ವಿಷ್ಣು ರೂಪಗಳೇ ಆಗಿವೆ ಎಂದೂ ಭಾವಿಸಬಹುದು. ಬ್ರಹ್ಮ ಮತ್ತು ಮಹೇಶ್ವರರಲ್ಲಿ ವಿಷ್ಣುವಿನ ಬ್ರಹ್ಮ ಮತ್ತು ಮಹೇಶ್ವರ ರೂಪಗಳು ಸನ್ನಿಹಿತವಾಗಿರುವುದು ಪ್ರಮಾಣಸಿದ್ಧವೂ ಆಗಿದೆ:

'ರಜಸಸ್ತನೌ ಚೈವ ವಿರಿಂಚ ಆಸೀತ್ತಮಸ್ತನೌ ಶರ್ವ ಇತಿ ತ್ರಯೋಽಸ್ಮಾತ್' । –ಮಭಾ.ತಾ.ನಿ.(೩/೨೧)

'ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ' । – ವಿಷ್ಣುಪುರಾಣ

೨. ಇಲ್ಲಿ ಸಂತಾನ ಎಂಬುದಕ್ಕೆ ಔರಸಸಂತತಿ ಮತ್ತು ಶಿಷ್ಯಸಂತತಿ ಎಂಬ ಎರಡೂ ಅರ್ಥಗಳೂ ಗ್ರಾಹ್ಯ.

೩. ಇಲ್ಲಿ ತುಂಗಾ ಎಂಬುದಕ್ಕೆ 'ನಾಮೈಕದೇಶೇ ನಾಮಗ್ರಹಣ' ನ್ಯಾಯದಿಂದ ತುಂಗಭದ್ರಾ ಎಂದರ್ಥ.

ಒದಗಿದ ದುರಂತದುಷ್ಕರ್ಮಗಳನ್ನು ಬುಡ ಸಮೇತ ಕೀಳುವ ಕಾರ್ಯದಲ್ಲಿ ತೊಡಗಿದ ಕೈಬೆರಳುಗಳಂತೆ ಕಂಗೊಳಿಸುತ್ತಿವೆ.

ವಿ: ೧. ತುಂಗಭದ್ರಾತೀರದ ಅಶ್ವತ್ಥ ವೃಕ್ಷದ ದಳಗಳು, ಆ ನದಿಯ ಅಲೆಗಳ ಮೇಲಿಂದ ಬೀಸಿ ಬರುವ ಗಾಳಿಯಿಂದಾಗಿ ಅತ್ತಿತ್ತ ಚಲಿಸುತ್ತವೆ. ಇಂತಹ ದಳಗಳನ್ನು ಸೇವಕ ಜನರ ಜನ್ಮಾಂತರದ ದುರಂತಪಾಪಗಳನ್ನೂ ಸಹ ಕಿತ್ತು ಹಾಕುವ ಕಾರ್ಯದಲ್ಲಿ ನಿರತವಾದ ಅಶ್ವತ್ಥದ ಕೈಬೆರಳುಗಳಂತಿವೆ ಎಂದು ಶ್ರೀವಾದಿರಾಜರು ಉತ್ಪ್ರೇಕ್ಷಿಸಿರುವರು.

೨. ಆಳವಾಗಿ ಬೇರುಬಿಟ್ಟ ಗಿಡಗಳನ್ನು ಕಿತ್ತುಹಾಕಲು ಕೈಬೆರಳುಗಳಿಂದ ಹಿಡಿದು ಬಲವಾಗಿ ಅಲುಗಾಡಿಸುವಂತೆ, ತನ್ನ ತೋಳುಗಳಂತಿರುವ ರೆಂಬೆಗಳಲ್ಲಿರುವ ದಳಗಳಂತಿರುವ ಬೆರಳುಗಳ ಚಲನೆಯಿಂದ ಅಶ್ವತ್ಥವು ಸೂಚಿಸುತ್ತದೆ ಎಂಬ ಇಲ್ಲಿಯ ಭಾವ ಅಪೂರ್ವವಾದುದು.

೩. ಅಶ್ವತ್ಥವೃಕ್ಷದ ಪ್ರದಕ್ಷಿಣಾದಿರೂಪಸೇವನೆಯಿಂದ ಜನ್ಮಾಂತರದ ಮಹಾಪಾತಕಗಳೂ ಸಹ ಪರಿಹಾರವಾಗುತ್ತವೆ ಎಂಬುದು ಇಲ್ಲಿಯ ಭಾವ.

## ಬಿದರಹಳ್ಳಿ ಸೋಮೇಶ್ವರ

ಸೋಮೇಶ್ವರಾಯ ಸಿತಭೂತಿವಿಕಸ್ವರಾಯ
ಪ್ರೇಮಪ್ರವೃದ್ಧಗಿರಿಜಾಹೃದಿ ಭಾಸ್ವರಾಯ ।
ತುಂಗೋಲ್ಲಸತ್ಪವನಪಾವಿತವಂಶಪಲ್ಲೀ -
ಮಾಂಗಲ್ಯಹೇತುಚರಿತಾಯ ನಮಃ ಶಿವಾಯ ॥ ೭೮ ॥

ಅ: ಸಿತಭೂತಿವಿಕಸ್ವರಾಯ = ಬಿಳಿದಾದ ವಿಭೂತಿಯಿಂದ ಕಂಗೊಳಿಸುವ; ಪ್ರೇಮಪ್ರವೃದ್ಧಗಿರಿಜಾಹೃದಿಭಾಸ್ವರಾಯ = ಪ್ರೇಮಪೂರ್ಣವಾದ ಗೌರೀದೇವಿಯ ಹೃದಯದಲ್ಲಿ ಹೊಳೆಯುವ; ತುಂಗೋಲ್ಲಸತ್ಪವನಪಾವಿತವಂಶಪಲ್ಲೀಮಾಂಗಲ್ಯಹೇತುಚರಿತಾಯ = ತುಂಗಭದ್ರಾನದಿಯ ಬಹಳವಾಗಿ ಶೋಭಿಸುವ ಗಾಳಿಯಿಂದ ಪಾವನವಾದ 'ಬಿದರಹಳ್ಳಿ' ಎಂಬ ಗ್ರಾಮಕ್ಕೆ ಮಂಗಲವನ್ನೀಯುವ ಚರಿತ್ರೆಯುಳ್ಳ; ಸೋಮೇಶ್ವರಾಯ = ಸೋಮೇಶ್ವರ ಎಂಬ ಹೆಸರಿನ; ಶಿವಾಯ =ಶಿವನಿಗೆ; ನಮಃ = ನಮಸ್ಕಾರವು.

ಬಿಳಿದಾದ ವಿಭೂತಿಯಿಂದ ಕಂಗೊಳಿಸುವ, ಪ್ರೇಮಪೂರ್ಣವಾದ ಗೌರೀದೇವಿಯ ಹೃದಯದಲ್ಲಿ ಹೊಳೆಯುವ, ತುಂಗಭದ್ರಾನದಿಯ ಮೇಲೆ ಬೀಸಿಬರುವ ಗಾಳಿಯಿಂದ ಪಾವನವಾದ, 'ಬಿದರಹಳ್ಳಿ' ಎಂಬ ಗ್ರಾಮಕ್ಕೆ ಮಂಗಲವನ್ನೀಯುವ ಮಹಿಮೆಯ 'ಸೋಮೇಶ್ವರ'ನಿಗೆ ನಮಸ್ಕಾರವು.

ವಿ: ೧. 'ಸೋಮೇಶ್ವರ' ಎಂದು ಪ್ರಸಿದ್ಧವಾಗಿರುವ ಬಿದರಹಳ್ಳಿ ಈಶ್ವರನನ್ನು ಈ ಶ್ಲೋಕದಲ್ಲಿ ಸ್ತುತಿಸಿರುವರು. ತುಂಗಭದ್ರಾನದಿಯ ಮೇಲೆ ಬೀಸಿ ಬರುವ ಗಾಳಿಯ ಸಂಪರ್ಕದಿಂದಾಗಿ ಪವಿತ್ರವಾದ ಬಿದರಹಳ್ಳಿಗ್ರಾಮಕ್ಕೆ ಗಂಗಾಧರನಾದ ಈ ಸೋಮೇಶ್ವರನಿಂದ ವಿಶೇಷ ಮಂಗಲಕರತ್ವ ಉಂಟಾಗಿದೆ ಎಂದು ಭಾವ.

೨. ಸಿತಭೂತಿವಿಕಸ್ವರಾಯ: ರುದ್ರದೇವರು ಪಾಶುಪತಮತವನ್ನು ಅಸುರಮೋಹನಕ್ಕಾಗಿ ಪ್ರವರ್ತನ ಮಾಡಿದವರು; ಅಸುರ ಮೋಹನಕ್ಕೆಂದೇ ವಿಭೂತಿಯನ್ನು ಧರಿಸಿರುವರು ಎಂಬ ವಿಷಯ ಪದ್ಮಪುರಾಣ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಉಕ್ತವಾಗಿದೆ, ನಿಜಕ್ಕೂ ಅವರು ಊರ್ಧ್ವಪುಂಡ್ರಧರರು, ಚಕ್ರಶಂಖಾಂಕಿತರು ಆಗಿರುವರು ಎಂಬುದನ್ನು ಶ್ರೀವಾದಿರಾಜರು ಸರಸಭಾರತೀವಿಲಾಸದಲ್ಲಿ ನಿರೂಪಿಸಿರುವರು[೧].

೩. ಪವಿತ್ರವಾದ ಗಾಳಿಯ ಸಂಪರ್ಕದಿಂದ ಅಶ್ವತ್ಥದ ಪಾಪಪರಿಹಾರಕತ್ವ ಸಾಮರ್ಥ್ಯವು ವ್ಯಕ್ತವಾಗುವಂತೆ, ಶುದ್ಧಭಾಗವತಧರ್ಮರತರಾದ ಶ್ರೀವಾಯುದೇವರ ಮತ್ತು ಅವರ ಶಾಸ್ತ್ರದ ಸಂಪರ್ಕವು ಜ್ಞಾನಿಗಳಿಗೆ ಆಶ್ರಿತಜನರ ಪಾಪಗಳನ್ನು ಪರಿಹರಿಸುವ ಸಾಮರ್ಥ್ಯವನ್ನು ತಂದುಕೊಡುತ್ತದೆ ಎಂಬ ಅಂತರಾರ್ಥವನ್ನೂ ಇದರಲ್ಲಿ ಕಾಣಬಹುದು.

೪. ನಮಃ ಶಿವಾಯ - 'ನಮಃ ಶಿವಾಯ' ಎಂಬುದು ಶಿವಪಂಚಾಕ್ಷರಮಂತ್ರ ಎಂಬುದಾಗಿ ಶ್ರೀಮದಾಚಾರ್ಯರು ತಂತ್ರಸಾರದಲ್ಲಿ ತಿಳಿಸಿರುವರು[೨]. ಆ ಶಿವಮಂತ್ರಗರ್ಭಿತವಾಗಿಯೇ ಈ ಶ್ಲೋಕವನ್ನು ರಚಿಸಿರುವುದು ಶ್ರೀವಾದಿರಾಜರ ಅಪೂರ್ವ ಕೌಶಲಕ್ಕೆ ಮತ್ತೊಂದು ನಿದರ್ಶನ.

## ಬಂಕಾಪುರದ ಕೇಶವ

ಶಂಖಾಂಭೋಜಗದಾಸುದರ್ಶನಧರಂ ಸಂಕೀರ್ತ್ಯಮಾನಂ ಸುರೈಃ
ಕೈಂಕರ್ಯಪ್ರಿಯಲಕ್ಷ್ಮಣೇಂದ್ರರಚಿತಾಲಂಕಾರಪೂಜೋತ್ಸವಮ್ ।
ಪಂಕೋದ್ಭೂತಸಮಾನಲೋಚನಯುಗಂ ಬಂಕಾಪುರಶ್ರೀಕರಂ
ಹುಂಕಾರಸ್ವನಧಿಕ್ಕೃತಾಶ್ರಿತಜನಾತಂಕಂ ಭಜೇ ಕೇಶವಮ್ ॥ ೭೯ ॥

ಅ: ಶಂಖಾಂಭೋಜಗದಾಸುದರ್ಶನಧರಂ = (ಪಾಂಚಜನ್ಯ)ಶಂಖ, ಪದ್ಮ, ಗದಾ ಮತ್ತು ಸುದರ್ಶನಗಳನ್ನು (ಕ್ರಮವಾಗಿ ಮೇಲಿನ ಬಲಗೈ, ಕೆಳಗಿನ ಬಲಗೈ, ಕೆಳಗಿನ ಎಡಗೈ ಮತ್ತು ಮೇಲಿನ ಎಡಗೈಗಳಲ್ಲಿ) ಧರಿಸಿರುವ; ಸುರೈಃ = ಬ್ರಹ್ಮಾದಿ ದೇವತೆಗಳಿಂದ; ಸಂಕೀರ್ತ್ಯಮಾನಂ = ಚೆನ್ನಾಗಿ ಸ್ತುತಿಸಲ್ಪಡುವ; ಕೈಂಕರ್ಯಪ್ರಿಯಲಕ್ಷ್ಮಣೇಂದ್ರರಚಿತಾ-ಲಂಕಾರಪೂಜೋತ್ಸವಂ = ದಾಸ್ಯಪ್ರಿಯನಾದ ಲಕ್ಷ್ಮಣೇಂದ್ರನಿಂದ ಮಾಡಲ್ಪಟ್ಟ ಅಲಂಕಾರ, ಪೂಜೆ, ಉತ್ಸವಗಳನ್ನುಳ್ಳ; ಪಂಕೋದ್ಭೂತಸಮಾನಲೋಚನಯುಗಂ = ಪಂಕಜದಂತಹ ಎರಡು ಕಣ್ಣುಗಳನ್ನುಳ್ಳ; ಬಂಕಾಪುರಶ್ರೀಕರಂ = [೪]ಬಂಕಾಪುರ ಪಟ್ಟಣಕ್ಕೆ ಸಂಪತ್ಕರನಾದ;

---

೧. ತ್ರಿನೇತ್ರಪಂಕ್ತ್ಯಾಲಸಿತಪಂಚವಕ್ತ್ರಂ ಶುಚಿಸ್ಮಿತಮ್ ।
ಊರ್ಧ್ವಪುಂಡ್ರಧರಂ ಚಕ್ರಶಂಖಾಂಕಿತಭುಜದ್ವಯಮ್ ॥
ಪದ್ಮಾಕ್ಷತುಲಸೀಮಾಲಾವಿದ್ಯೋತಿತಶಿರೋಧರಮ್ ॥ –(೨/೩೬,೩೭)

೨. ಉದ್ದೇಶನತಿಯುಜ್ಮಂತ್ರಃ ಸ್ವಯಮೇವ ಶಿವಸ್ಯ ತು ॥ –(೪/೭೬)

೩. ಅಂತೇ ಶಿವಮಂತ್ರಭೂತನಮಃಶಿವಾಯೇತಿ ಪಂಚಾಕ್ಷರೀಗರ್ಭಿತಮಿದಂ ಪದ್ಯಂ। – ವ್ಯಾಖ್ಯಾನ

೪. ಈ ಬಂಕಾಪುರವು ಧಾರವಾಡಜಿಲ್ಲೆಯ ಶಿಗ್ಗಾವಿ ತಾಲೂಕಿಗೆ ಸೇರಿರುವ ಒಂದು ಗ್ರಾಮ. ಹುಬ್ಬಳ್ಳಿ

ಹುಂಕಾರಸ್ವನಧಿಕ್ಕೃತಾಶ್ರಿತಜನಾತಂಕಂ = ಹುಂಕಾರಧ್ವನಿಯಿಂದ ಆಶ್ರಿತ ಜನಗಳ ಭಯವನ್ನು ಪರಿಹರಿಸುವ ಕೇಶವಂ = ಕೇಶವ(ದೇವ)ರನ್ನು; ಭಜೇ = ಸೇವಿಸುವೆನು.

ಶಂಖ ಪದ್ಮ ಗದೆ ಮತ್ತು ಸುದರ್ಶನಗಳನ್ನು ಧರಿಸಿದ, ದೇವತೆಗಳು ಸ್ತುತಿಸುವ, ಸೇವಾಪ್ರಿಯನಾದ ಲಕ್ಷ್ಮಣೇಂದ್ರನು ಸಲ್ಲಿಸುವ ಅಲಂಕಾರ ಪೂಜೆ ಉತ್ಸವಗಳ, ಕಮಲದಂತೆ ಹೊಳೆಯುವ ಎರಡು ಕಣ್ಣುಗಳ, ಬಂಕಾಪುರಕ್ಕೆ ಶೋಭೆನೀಡುವ, ಹುಂಕಾರದಿಂದ ಭಕ್ತಜನರ ಆತಂಕವನ್ನು ಕಳೆಯುವ, ಕೇಶವನನ್ನು ಭಜಿಸುವೆನು.

ವಿ: ೧. ಬಂಕಾಪುರದಲ್ಲಿರುವ ಕೇಶವ ಮೂರ್ತಿಯನ್ನು ಶ್ರೀವಾದಿರಾಜರು ಈ ಶ್ಲೋಕದಲ್ಲಿ ವರ್ಣಿಸಿರುವರು. ಅಲ್ಲಿರುವ ಕೇಶವನು ಬಲಗೈಯಿಂದ ಪ್ರದಕ್ಷಿಣ ಕ್ರಮದಲ್ಲಿ ನಾಲ್ಕು ಕೈಗಳಲ್ಲಿ ಪದ್ಮ, ಶಂಖ, ಚಕ್ರ ಮತ್ತು ಗದೆಗಳನ್ನು ಧರಿಸಿರುವನು; ಬ್ರಹ್ಮಾದಿಗಳಿಂದ ಸ್ತುತ್ಯನಾಗಿರುವನು; ಲಕ್ಷ್ಮಣೇಂದ್ರನಿಂದ ಮಾಡಲ್ಪಡುವ ಅಲಂಕಾರ, ಪೂಜೆ, ಉತ್ಸವಗಳನ್ನು ಸ್ವೀಕರಿಸುತ್ತಿರುವನು; ಕಮಲನೇತ್ರನೂ, ಬಂಕಾಪುರಕ್ಕೆ ಶ್ರೀಕರನೂ ಆಗಿದ್ದು ತನ್ನ ಹುಂಕಾರ ಧ್ವನಿಯಿಂದಲೇ ಭಕ್ತಜನರ ಭಯವನ್ನು ಪರಿಹರಿಸುತ್ತಿರುವನು; ಅಂತಹವನನ್ನು ನಾನು ಭಜಿಸುವೆ ಎಂದು ಭಾವ.

೨. ಇಲ್ಲಿಯ ಕೇಶವವಿಗ್ರಹವು ತಂತ್ರಸಾರೋಕ್ತಕೇಶವಲಕ್ಷಣಗಳಿಂದ[1] ಕೂಡಿದೆ; ವಿಶೇಷ ಶಾಸ್ತ್ರೋಕ್ತವಿಗ್ರಹವಾಗಿರುವುದರಿಂದಲೇ ಅಲ್ಲಿ ಕೇಶವನ ವಿಶೇಷ ಸನ್ನಿಧಾನವಿದೆ ಎಂದೂ ಭಾವ.

---

ಬೆಂಗಳೂರು ರಸ್ತೆಯಲ್ಲಿ ಹುಬ್ಬಳ್ಳಿಗೆ ೫೦ಕಿ.ಮೀ. ದೂರದಲ್ಲೂ, ಹಾವೇರಿಗೆ ೧೦ಕಿ.ಮೀ ದೂರದಲ್ಲೂ ಇದೆ. ಇಂದು ಬಂಕಾಪುರ ಊರಿನಲ್ಲಿ ಯಾವ ಕೇಶವಮೂರ್ತಿಯೂ ಕಂಡುಬರುವುದಿಲ್ಲ. ಆದರೆ ಊರಹೊರಗಿನ ಹೊಲವೊಂದರಲ್ಲಿ ಚಿಕ್ಕ ಗುಡಿಯೊಂದಿದ್ದು ಅದರಲ್ಲಿ ಸುಂದರವಾದ ಕೇಶವ ವಿಗ್ರಹ ಕಾಣಸಿಗುತ್ತದೆ(ಈ ವಿಗ್ರಹದ ಚಿತ್ರವನ್ನು ನಮ್ಮ 'ಶ್ರೀವ್ಯಾಸಮಧ್ವ' (ಡಿಸೆಂಬರ್ ೨೦೦೮)ಪತ್ರಿಕೆಯಲ್ಲಿ ಕೊಡಲಾಗಿದೆ). ಅದೇ ಈ ಕೇಶವಮೂರ್ತಿ ಎಂಬುದು ಸ್ಪಷ್ಟ. ಪೂಜಾವ್ಯವಸ್ಥೆ ಇತ್ಯಾದಿಗಳು ಇಲ್ಲದೆ ಈ ವಿಗ್ರಹ ಕ್ರಮವಾಗಿ ಶಿಥಿಲಾವಸ್ಥೆಯನ್ನು ತಲುಪುತ್ತಿದೆ. ಶ್ರೀಕನಕದಾಸರು ತಮ್ಮ ಕೃತಿಗಳಲ್ಲಿ ಕಾಗಿನೆಲೆ, ಬಂಕಾಪುರ ಹಾಗೂ ಬಾಡಾ ಎಂಬ ಮೂರುಸ್ಥಳಗಳಲ್ಲಿಯ ಕೇಶವನನ್ನು ಉಲ್ಲೇಖಿಸಿದ್ದಾರೆ. ಕಾಗಿನೆಲೆಯ ಆದಿಕೇಶವಮೂರ್ತಿ ಸುಪ್ರಸಿದ್ಧ. ಬಂಕಾಪುರದ ಕೇಶವನ ಸ್ಥಿತಿ ಹೀಗಿದೆ. ಇನ್ನು 'ಬಾಡ'ದ ಕೇಶವಮೂರ್ತಿ ಇದ್ದಿರಬಹುದಾದ ಸ್ಥಳ ಸಂಪೂರ್ಣ ಭಗ್ನವಾಗಿದ್ದು ಅಲ್ಲಿಯೂ ಸಹ ಒಂದು ಕೇಶವ ವಿಗ್ರಹ ಇದ್ದ ಪ್ರತೀತಿಯನ್ನು ಆ ಊರಿನ ಹಿರಿಯರು ಹೇಳುವರು. ಬಂಕಾಪುರ ಹಾಗೂ ಕಾಗಿನೆಲೆಯ ಕೇಶವಮೂರ್ತಿ ಶ್ರೀವ್ಯಾಸರಾಜ ಪ್ರತಿಷ್ಠಿತ ಎಂದು ಐತಿಹ್ಯ. ತಮ್ಮಲ್ಲಿ ಗುರುಭಾವ ಹೊಂದಿದ್ದ ಶ್ರೀಕನಕದಾಸರ ಈ ಕ್ಷೇತ್ರಗಳ ಕೇಶವರೂಪದ ಶ್ರೀಹರಿಯನ್ನು ಶ್ರೀವಾದಿರಾಜರು ಈ ಶ್ಲೋಕದ ಮೂಲಕ ಒಟ್ಟಾಗಿಯೇ ವರ್ಣಿಸಿರುವರು ಎಂದು ತಿಳಿಯಬಹುದು.

೧. ಕೇಶವೋ ಮಧುಸೂದನಃ ಸಂಕರ್ಷಣದಾಮೋದರೌ
ಸವಾಸುದೇವ ಪ್ರದ್ಯುಮ್ನಾ ದಕ್ಷೋಚ್ಚ(ರ್ಧ್ವ)ಕರಶಂಖಿನಃ ॥ -ತಂತ್ರಸಾರಸಂಗ್ರಹ (೧/೨೨)
ಶ್ರೀಮತ್ಪಂಕಜಶಂಖಚಕ್ರಗದಯಾ ಸಂಭೂಷಿತೇ ಕೇಶವೇ
-ಶ್ರೀವಾದಿರಾಜಕೃತಕೇಶವಾದಿಚತುರ್ವಿಂಶತಿಮೂರ್ತಿಸ್ತುತಿ.

## ವರದಾ(ನದೀ)

ಸ್ಮರದಾಶ್ರಿತದುಷ್ಕರ್ಮಗುರುದಾಹವಿದಾರಿಣೀಮ್ ।
ವರದಾಂ ಹರಿದಾಸೇಷ್ಟವರದಾನರತಾಂ ಭಜೇ ॥ ೭೦ ॥

ಅ: ಸ್ಮರದಾಶ್ರಿತದುಷ್ಕರ್ಮಗುರುದಾಹವಿದಾರಿಣೀಂ = ತನ್ನನ್ನು ಸ್ಮರಿಸುವ ಭಕ್ತಜನರ ದುಷ್ಕರ್ಮಗಳೆಂಬ ತೀವ್ರಸಂತಾಪವನ್ನು ಹೋಗಲಾಡಿಸುವ; ಹರಿದಾಸೇಷ್ಟವರದಾ-ನರತಾಂ = ಶ್ರೀಹರಿದಾಸರಿಗೆ ಇಷ್ಟವಾದ ವರಗಳನ್ನು ಕೊಡುವಲ್ಲಿ ನಿರತಳಾದ; ವರದಾಂ = ವರದಾ ನದಿಯನ್ನು; ಭಜೇ = ನಾನು ಸೇವಿಸುವೆನು.

ಸ್ಮರಿಸುವ ಭಕ್ತರ ದುಷ್ಕರ್ಮಗಳ ತೀವ್ರಸಂತಾಪವನ್ನು ನೀಗಿಸುವ, ಶ್ರೀಹರಿದಾಸರಿಗೆ ಇಷ್ಟವರಗಳನ್ನು ನೀಡುವಲ್ಲಿ ತೊಡಗಿದ [೧]ವರದೆಯನ್ನು ನಾನು ಸೇವಿಸುವೆನು.

ವಿ: ೧. 'ವರದಾ' ಎಂಬ ಹೆಸರಿನ ಔಚಿತ್ಯವನ್ನು ನದಿಗೆ ಶ್ರೀವಾದಿರಾಜರು ಎರಡು ರೀತಿಯಲ್ಲಿ ಇಲ್ಲಿ ವರ್ಣಿಸಿರುವರು[೨]:

೨. ವರದೆಯು ಜಲರೂಪಳಾಗಿರುವುದರಿಂದ 'ದಾಹನಿವರ್ತಕತ್ವ'ವು ಆದಕ್ಕೆ ಯುಕ್ತ-ವಾಗಿದೆ ಎಂದು ಭಾವ[೩].

೩. 'ಗುರುದಾಹವಿದಾರಿಣೀ' ಮತ್ತು 'ವರದಾನರತಾ' ಎಂಬ ಎರಡು ಅರ್ಥಗಳೂ ಹೀಗೆ ಸಾರ್ಥಕ ಎಂದು ಭಾವ.

೪. ಹರಿದಾಸೇಷ್ಟವರದಾನರತಾಂ – ಶ್ರೀಜಗನ್ನಾಥದಾಸರು ಮೊದಲಾದ ಅನೇಕ ಪ್ರಸಿದ್ಧ ಹರಿದಾಸರು ವರದಾತೀರದಲ್ಲಿ ಶ್ರೀಸತ್ಯಬೋಧತೀರ್ಥರು, ಶ್ರೀಧೀರೇಂದ್ರತೀರ್ಥರು ಮೊದಲಾದ ಜ್ಞಾನಿಗಳೊಡನೆ ಕೆಲವು ಕಾಲ ನೆಲೆಸಿದ್ದರೆಂದೂ, ಶ್ರೀಜಗನ್ನಾಥದಾಸರ ಮೇರುಕೃತಿ 'ಹರಿಕಥಾಮೃತಸಾರ'ದ ಕೆಲವು ಭಾಗಗಳ ರಚನೆಯೂ ವರದಾ ತೀರದಲ್ಲೇ ಆಯಿತೆಂದೂ

---

೧. ವರದಾನದಿಯು ಇಕ್ಕೇರಿಯ ಸಮೀಪದ ವರದಾಮೂಲ ಎಂಬಲ್ಲಿ ಹುಟ್ಟಿ ಸುಮಾರು ೧೮೫ ಕಿ.ಮೀ. ದೂರ ಹರಿದು, ಹಾವೇರಿ ತಾಲೂಕಿನ ಗಳಗನಾಥ ಎಂಬಲ್ಲಿ ತುಂಗಭದ್ರಾ ನದಿಯನ್ನು ಸೇರುತ್ತದೆ. 'ಧರ್ಮಾ' ಎಂಬುದು ಇದರ ಮುಖ್ಯ ಉಪನದಿ ಶಿವನು ತನ್ನ ಬ್ರಹ್ಮಹತ್ಯಾದೋಷವನ್ನು ಕಳೆದುಕೊಳ್ಳಲು ಶೃಂಗಋಷಿಯ ಆಶ್ರಮ(ಇಂದಿನ ವರದಾಮೂಲ)ದಲ್ಲಿ ತಪೋನಿರತನಾಗಿದ್ದಾಗ, ನಾರಾಯಣನು ಭಾಗೀರಥೀಜಲವನ್ನು ಆತನ ತಲೆಯಮೇಲೆ ಸುರಿದು ಅನುಗ್ರಹಿಸಿದನೆಂದೂ ಆ ಅಭಿಷೇಕ ಜಲವೇ ವರದಾ ನದಿಯಾಯಿತೆಂದೂ ಸ್ಥಳಪುರಾಣದಲ್ಲಿದೆ.

೨. ೧) ವರಂ - (ಸ್ಮರದಾಶ್ರಿತದುಷ್ಕರ್ಮ) ಗುರುದಾಹಂ, ದ್ಯತೀತಿ ವರದಾ ಎಂದರೆ ತನ್ನನ್ನು ಸ್ಮರಿಸುವ ಭಕ್ತಜನರ ದುಷ್ಕರ್ಮಗಳ ಗುರುದಾಹ(ತೀವ್ರಸಂತಾಪ)ವನ್ನು ಪರಿಹರಿಸುವಳು.
೨) ವರಂ -(ಹರಿದಾಸೇಷ್ಟ)ವರಂ, ದದಾತೀತಿ ವರದಾ: ಎಂದರೆ ಹರಿದಾಸರಿಗೆ ಇಷ್ಟವರಗಳನ್ನು ಕರುಣಿಸುವಲ್ಲಿ ಸದಾ ನಿರತಳು ಎಂದರ್ಥ.

೩. ಜಲಸ್ಯ ದಾಹನಿವರ್ತಕತ್ವಾದಿ ಭಾವಃ – ವ್ಯಾಖ್ಯಾನ

ಪ್ರತೀತಿಯಿದೆ. ಶ್ರೀವಾದಿರಾಜರಂತಹ ಶ್ರೇಷ್ಠ ಜ್ಞಾನಿಗಳ ಮಾತು ಬಹುಕಾಲದ ಅನಂತರದ ಈ ವಿಷಯವನ್ನೂ ಸಹ ಸೂಚಿಸುವಂತಿದೆ ಎಂಬುದೂ ಗಮನಾರ್ಹ.

## ವರದಾತೀರದ ಮಧುಕೇಶ್ವರ

**ಹರ ಸಾಯಕನಿರ್ದಗ್ಧಪುರ ಗಾಯಕಧೂರ್ಧರ ।**
**ಸುರನಾಯಕ ದೈತ್ಯೇಂದ್ರವರದಾಯಕ ಪಾಹಿ ಮಾಮ್ ॥ ೭೧ ॥**

ಅ: ಸಾಯಕನಿರ್ದಗ್ಧಪುರ = ತ್ರಿಪುರಾಸುರನನ್ನು ಬಾಣದಿಂದ ಭಸ್ಮಗೊಳಿಸಿದ; **ಗಾಯಕಧೂರ್ಧರ** = ತನ್ನನ್ನು ಸ್ತುತಿಸುವ ಭಕ್ತಜನರ ಭಾರವನ್ನು ಹೊತ್ತಿರುವ **ದೈತ್ಯೇಂದ್ರವರದಾಯಕ** = 'ಮಧು' ಎಂಬ ದೈತ್ಯಶ್ರೇಷ್ಠನಿಗೆ ವರವನ್ನಿತ್ತ; **ಸುರನಾಯಕ** = (ಇಂದ್ರಾದಿ) ದೇವತೆಗಳಿಗೆ ಪ್ರಭುವಾದ; **(ಹೇ) ಹರ !** = ಎಲೈ ಹರನೇ !; **ಮಾಂ** = ನನ್ನನ್ನು; **ಪಾಹಿ** = ಪಾಲಿಸು.

ತ್ರಿಪುರಾಸುರನನ್ನು ಬಾಣದಿಂದ ಬೂದಿಗೈದ, ಸ್ತುತಿಸುವ ಭಕ್ತಜನರ ಭಾರ ಹೊತ್ತ, ಸುರರಿಗೆ ಪ್ರಭುವಾದ, 'ಮಧು' ಎಂಬ ದೈತ್ಯಶ್ರೇಷ್ಠನಿಗೆ ವರನೀಡಿದ, ಎಲೈ ಹರನೇ ! ನನ್ನನ್ನು ಪಾಲಿಸು.

ವಿ: ೧. ವರದಾತೀರದ [೧]ಬನವಾಸಿಯಲ್ಲಿರುವ 'ಮಧುಕೇಶ್ವರ' ಎಂಬ ರುದ್ರದೇವರನ್ನು ಇಲ್ಲಿ ಸ್ತುತಿಸಿರುವರು.

೨. ಒಂದೇ ಬಾಣದಿಂದ ತ್ರಿಪುರರನ್ನು ನಾಶಮಾಡಿದವರೂ, ಇಂದ್ರಾದಿ ದೇವತೆಗಳಿಗೆ ಒಡೆಯರೂ, ಭಕ್ತರ ಭಾರವನ್ನು ಹೊರುವ ಕರುಣಾಳುವೂ ಆದ ಶ್ರೀರುದ್ರದೇವರು 'ಮಧು'ವೆಂಬ ದೈತ್ಯಶ್ರೇಷ್ಠನಿಗೆ ವರವಿತ್ತು 'ಮಧುಕೇಶ್ವರ ಎಂದು ಪ್ರಸಿದ್ಧರಾಗಿರುವರು ಎಂದು ಭಾವ.

## ಧರ್ಮಗಂಗಾ (ನದೀ)

**ಹೇ ಧರ್ಮಗಂಗೇ ಪಾಪೌಘಭಂಗೇ ತುಂಗತರಂಗಿಣಿ ।**
**ಚೇತೋ ಮದೀಯಂ ಸದ್ಧರ್ಮಕರ್ಮಣ್ಯೇವ ಸ್ಥಿರಂ ಕುರು ॥ ೭೨ ॥**

---

೧. ಬನವಾಸಿಯು ಉತ್ತರಕನ್ನಡದ ಶಿರಸಿ ಎಂಬ ಪಟ್ಟಣದಿಂದ ಆಗ್ನೇಯಕ್ಕೆ ೨೨ ಕಿ ಮೀ. ದೂರದಲ್ಲಿದೆ. ಇದು ಹಿಂದೆ ಜಯಂತೀ, ಜಯಂತೀಪುರ, ಸಂಜಯಂತೀ, ವೈಜಯಂತೀ ಎಂಬ ನಾಮಾಂತರಗಳಿಂದಲೂ ಪ್ರಸಿದ್ಧವಾಗಿದ್ದಂತೆ ತಿಳಿಯುತ್ತದೆ. ಐತಿಹಾಸಿಕವಾಗಿ ಕದಂಬರ ರಾಜಧಾನಿ ಎಂದು ಪ್ರಸಿದ್ಧವಾಗಿದ್ದ ಮಧುಕೇಶ್ವರ ದೇವಾಲಯದ ಗರ್ಭಗೃಹ, ಸುಕನಾಸಿಯ ಭಾಗಗಳು, ಕಕ್ಷಾಸನಗಳು ಮಂಟಪ ಮೊದಲಾದವುಗಳು ಚಾಲುಕ್ಯ ಶೈಲಿಯಲ್ಲಿವೆ; ಇಲ್ಲಿಗೆ ಹತ್ತು ಕಿ.ಮೀ. ದೂರದಲ್ಲಿ 'ಕೈಟಭೇಶ್ವರ' ದೇವಾಲಯವೆಂಬ ಮತ್ತೊಂದು ಶೈವ ಕ್ಷೇತ್ರವಿದೆ.

ಅ: ಪಾಪೌಘಭಂಗೇ = ಪಾಪರಾಶಿಯನ್ನು ಪರಿಹರಿಸುವ; ತುಂಗತರಂಗಿಣಿ = ಉನ್ನತವಾದ ಅಲೆಗಳಿಂದ ಕೂಡಿದ; (ಹೇ) ಧರ್ಮಗಂಗೇ = ಧರ್ಮಗಂಗೇ ಎಂಬ ಹೆಸರಿನ ನದಿಯೇ; ಮದೀಯಂ = ನನ್ನ; ಚೇತಃ = ಮನಸ್ಸನ್ನು; ಸದ್ಧರ್ಮಕರ್ಮಣ್ಯೇವ = ಉತ್ತಮವಾದ (ಧರ್ಮಕಾರ್ಯ) ಗಳಲ್ಲಿಯೇ; ಸ್ಥಿರಂ ಕುರು = [೧]ನೆಲೆಗೊಳಿಸು (ಹೇತುಮದಲಂಕಾರ).

ಪಾಪರಾಶಿಯನ್ನು ತೊಡೆಯುವ, ಉನ್ನತವಾದ ಅಲೆಗಳಿಂದ ಕೂಡಿದ, ಧರ್ಮಗಂಗೆಯೇ ! ನನ್ನ ಮನಸ್ಸನ್ನು ಉತ್ತಮವಾದ ಧರ್ಮಕಾರ್ಯಗಳಲ್ಲಿಯೇ ನೆಲೆಗೊಳಿಸು.

ವಿ: ೧. 'ಧರ್ಮಾ' ಎಂಬ ನದಿಯು ವಿಶೇಷ 'ಗಂಗಾ' ಸನ್ನಿಧಾನದಿಂದಾಗಿ 'ಧರ್ಮಗಂಗಾ' ಎಂದು ಪ್ರಸಿದ್ಧವಾಗಿದೆ; 'ಧರ್ಮಾ' ಎಂಬ ಹೆಸರಿನಿಂದಲೇ ಇದು ಧರ್ಮದಲ್ಲಿ ನೆಲೆಗೊಳಿಸುವ ಶಕ್ತಿಯನ್ನು ಹೊಂದಿದೆ ಎಂದು ಸ್ಫುಟಪಡುತ್ತದೆ ಎಂದರ್ಥ;

೨. ಈ 'ಧರ್ಮಾ' ನದಿಯು 'ವರದಾ' ನದಿಯ ಉಪನದಿ, ಒಟ್ಟು ೮೮ ಕಿ.ಮೀ. ಉದ್ದದ ಈ ನದಿಯು ಕೊನೆಗೆ ಹಾನಗಲ್ ತಾಲ್ಲೂಕಿನಲ್ಲಿ ವರದಾನದಿಯನ್ನು ಸೇರುತ್ತದೆ.

೩. ಪುಣ್ಯ ನದಿಗಳ ಸ್ನಾನದಿಂದ ಧರ್ಮಶ್ರದ್ಧೆ ಹೆಚ್ಚಿ ಮನಸ್ಸು ಹೆಚ್ಚು ಹೆಚ್ಚಾಗಿ ಪುಣ್ಯಕಾರ್ಯಗಳಲ್ಲೇ ತೊಡಗುವುದು ಎಂದು ಭಾವ.

೪. ಇಲ್ಲಿಯ ಸದ್ಧರ್ಮಕರ್ಮಣಿ ಎಂಬ ಪದದಲ್ಲಿನ ಸತ್ ಎಂಬುದಕ್ಕೆ ಮುಖ್ಯಪ್ರಾಣ (ಸದಿತಿ ಪ್ರಾಣಃ) ಎಂದೂ, ಧರ್ಮ ಎಂಬುದಕ್ಕೆ ಶ್ರೀಹರಿ (ಧರ್ಮೋ ಧರ್ಮವಿದುತ್ತಮಃ - ಶ್ರೀವಿಷ್ಣುಸಹಸ್ರನಾಮ)ಎಂದೂ ಅರ್ಥ. ಇದರಿಂದ ಶ್ರೀಹರಿವಾಯುಗಳಿಗೆ ಪ್ರಿಯವಾಗುವ ಕರ್ಮಗಳಲ್ಲಿ ನಿರತನನ್ನಾಗಿಸು ಎಂಬ ಅರ್ಥ ಸೂಚಿತವಾಗುವುದು.

## ಶಾಲ್ಮಲೀ(ನದೀ)

**ನದೀ ಮುದೇಽಸ್ತ್ವಿಯಂ ಪ್ರತ್ಯಜ್ನದೀನಹೃದಯಂಗಮಾ ।**
**ಗಂಗೋತ್ತುಂಗಾ ದೃಶ್ಯತೇಽದ್ಧಾ ರಮ್ಯಾಽಷ್ಟಮ್ಯಾಂ ಯದಂಭಸಿ ॥ ೭೩ ॥**

ಅ: ಪ್ರತ್ಯಜ್‌ನದೀನಹೃದಯಂಗಮಾ = ಪಶ್ಚಿಮಸಮುದ್ರಕ್ಕೆ ಪ್ರಿಯಳಾದ; ಇಯಂ = ಈ; ನದೀ = ([೨]ಶಾಲ್ಮಲೀ)ನದಿಯು; ಮುದೇ ಅಸ್ತು - (ನಮಗೆ) ಸಂತೋಷಕರವಾಗಲಿ;

---

೧. ಧರ್ಮಗಂಗಾಪದೇನ ಧರ್ಮೇ ಸ್ಥಿರೀಕರಣಶಕ್ತಿರಸ್ತೀತಿ ಸೂಚನಾಯ ಹೇತುಮದಲಂಕಾರಃ ।

— ವ್ಯಾಖ್ಯಾನ

೨. ಶಾಲ್ಮಲೀ ನದಿಯು ಶಿರಸಿಯ ಬಳಿ ಲಿಂಗದಕೋಣ ಎಂಬಲ್ಲಿ ಹುಟ್ಟಿ ಸೋದೆಯ ಬಳಿ ಹರಿದು ಬೇಡ್ತೀ ನದಿಯನ್ನು ಸೇರಿ 'ಗಂಗಾವಳಿ' ಎಂಬ ಹೆಸರನ್ನು ಪಡೆಯುತ್ತದೆ. ಅನಂತರ ಅಂಕೋಲಕ್ಕೆ ೮ ಕಿ.ಮೀ. ಉತ್ತರದಲ್ಲಿ 'ಗಂಗಾವಳಿ' ಎಂಬಲ್ಲಿ ಪಶ್ಚಿಮ (ಅರಬ್ಬೀ) ಸಮುದ್ರವನ್ನು ಸೇರುತ್ತದೆ. ಅಲ್ಲಿ ಒಂದು ಗಂಗಾದೇವಿಯ ದೇವಸ್ಥಾನವೂ ಇದ್ದು ಗಂಗಾಷ್ಟಮಿಯಂದು ವಿಶೇಷ ಪೂಜೆ ನಡೆಯುತ್ತದೆ.

ಯದಂಭಸಿ = ಈ ನದಿಯ ಜಲದಲ್ಲಿ; ರಮ್ಯಾ = ಮನೋಹರಳಾದ; ಉತ್ತುಂಗಾ ಗಂಗಾ = ಉತ್ತಮಳಾದ ಭಾಗೀರಥಿಯು; ಅಷ್ಟಮ್ಯಾಂ = ಗಂಗಾಷ್ಟಮೀ ಎಂದು ಪ್ರಸಿದ್ಧವಾದ ಅಷ್ಟಮೀ ತಿಥಿಯಂದು; ಅದ್ಧಾ = ಚೆನ್ನಾಗಿ ಪ್ರತ್ಯಕ್ಷವಾಗಿಯೇ; ದೃಶ್ಯತೇ = ಕಾಣಿಸುವಳು.

ಪಶ್ಚಿಮಸಮುದ್ರಕ್ಕೆ ಪ್ರಿಯಳಾದ ಈ ಶಾಲ್ಮಲಿಯು ನಮಗೆ ಮುದನೀಡಲಿ; ಇದರ ಜಲದಲ್ಲಿ ಮನೋಹರಳಾದ, ಉತ್ತಮಳಾದ ಭಾಗೀರಥಿಯು ಅಷ್ಟಮಿಯಂದು ಪ್ರತ್ಯಕ್ಷವಾಗಿಯೇ ಕಾಣಿಸಿಕೊಳ್ಳುವಳು.

ವಿ: ೧. ಶಾಲ್ಮಲೀ ನದಿಯು ಪಶ್ಚಿಮ ಸಮುದ್ರದಲ್ಲಿ ಸೇರುವ ನದಿಗಳಲ್ಲಿ ಒಂದಾದ್ದರಿಂದ ಅದನ್ನು 'ಪ್ರತ್ಯಜ್‌ನದೀನಹೃದಯಂಗಮಾ' ಎಂದು ಕರೆದಿರುವರು. ಇದು ಸಮುದ್ರವನ್ನು ಸೇರುವ ಸ್ಥಳದಲ್ಲಿ ಪ್ರತಿವರ್ಷವೂ ಭಾದ್ರಪದ ಶುಕ್ಲ ಅಷ್ಟಮಿಯಂದು ಗಂಗೆಯು ಆಗಮಿಸುವಳು ಎಂದು ಪುರಾಣ ಪ್ರಸಿದ್ಧಿಯುಂಟು; ಗಂಗೆಯು ವರುಣ ಪತ್ನಿ; ಅದರ ಸನ್ನಿಧಾನದಿಂದಾಗಿಯೇ ಶಾಲ್ಮಲೀಯು ಸಮುದ್ರರಾಜನಿಗೆ ತುಂಬಾ ಪ್ರಿಯಳು ಎಂದು ಭಾವ.ಗಂಗೆಯು ಆಗಮಿಸುವ ಭಾದ್ರಪದ ಶುಕ್ಲ ಅಷ್ಟಮಿಯನ್ನು 'ಗಂಗಾಷ್ಟಮೀ' ಎಂದೇ ಕರೆಯುವರು.(ನದೀನ - ನದೀ + ಇನ - ನದಿಗಳಿಗೆ ಒಡೆಯ ಸಮುದ್ರ ಎಂದರ್ಥ)

೨. ಗಂಗೆಯು ಆಗಮಿಸಿದ ಸೂಚನೆಯಾಗಿ ಅಂದು ಆ ಭಾಗದಲ್ಲಿ ನೀರು ಹೆಚ್ಚು ಬಿಳಿದಾಗಿಯೂ, ಸಿಹಿಯಾಗಿಯೂ ಇರುತ್ತದೆ ಎಂದು ಪ್ರಸಿದ್ಧಿಯಿದೆ.

೩. ಸೋದೆಯ ಬಳಿಯ ಇದರ ತೀರದಲ್ಲೇ ಶ್ರೀವಾದಿರಾಜರು ಅನೇಕ ವರ್ಷಗಳ ಕಾಲ ತಪೋನಿರತರಾಗಿದ್ದರೆಂದು ಅವರ ಚರಿತ್ರೆಯಲ್ಲಿ ಉಕ್ತವಾಗಿದೆ; ಆದ್ದರಿಂದ ಇದು ಶ್ರೀವಾದಿರಾಜರಿಗೆ ತುಂಬಾ ಪ್ರಿಯವಾದ ನದಿ ಎಂಬುದು ಸ್ಪಷ್ಟ ಅವರು ತಪಸ್ಸು ಮಾಡಿದ ಸ್ಥಳವು 'ತಪೋವನ' ಎಂದೇ ಪ್ರಸಿದ್ಧವಾಗಿದೆ. ಅಲ್ಲಿ ಒಂದು ಶ್ರೀಹಯಗ್ರೀವ ಮೂರ್ತಿಯೂ, ಶ್ರೀವಾದಿರಾಜರ ಪಾದಗಳ ಚಿಹ್ನೆಯೂ ಇವೆ.

೪. ಇಲ್ಲಿ ತಪೋನಿರತರಾಗಿದ್ದಾಗಲೇ ಶತ್ರುಗಳಿಂದ ಪರಾಜಿತನಾಗಿದ್ದ ಸೋದೆಯ ಅರಸಪ್ಪನಾಯಕನು ಇವರನ್ನು ಶರಣು ಹೊಕ್ಕನೆಂದೂ, ಇವರ ಅನುಗ್ರಹದಿಂದ ಶತ್ರುಗಳನ್ನು ಸೋಲಿಸಿ ಪುನಃ ರಾಜ್ಯ ಪಡೆದನೆಂದೂ, ಜೀವನಪೂರ್ತಿ ಇವರ ದಾಸಾನುದಾಸನಾಗಿದ್ದನೆಂದೂ ಪ್ರಸಿದ್ಧಿಯುಂಟು.

**ಭರ್ತುರಗ್ರೇ ಸ್ವಲಾವಣ್ಯವಿಸ್ತೃತೇರವಿವೇಕಿನೀಮ್ ।**
**ಸ್ವಾಸೇವಿತಾಂ ಸಖೀಮೇತಾಂ ಸರ್ವಸೇವ್ಯಾಂ ಕರೋತಿ ಸಾ ॥ ೭೪ ॥**

ಅ: ಭರ್ತುಃ = ಸ್ವಾಮಿಯಾದ ಸಮುದ್ರರಾಜನ; ಅಗ್ರೇ = ಎದುರಿನಲ್ಲಿ; ಸ್ವ-ಲಾವಣ್ಯವಿಸ್ತೃತೇಃ = ತನ್ನ ಲಾವಣ್ಯ ವಿಸ್ತಾರದಿಂದಾಗಿ; ಅವಿವೇಕಿನೀಂ = ವಿವೇಕರಹಿತಳಾದ;

---

ಗಂಗಾಷ್ಟಮಿಯಂದು ಈ ನದಿಯಲ್ಲಿ ಗಂಗೆಯು ಆಗಮಿಸುವ ಪ್ರಸಿದ್ಧಿ ಅಲ್ಲಿಯ ಜನಗಳಲ್ಲೂ ಉಂಟು.

ಸ್ವಾಸೇವಿತಾಂ = (ಆದ್ದರಿಂದಾಗಿ) ತನ್ನವರಿಂದ ಸೇವಿಸಲ್ಪಡದಿರುವ; ಸಖೀಂ ಏತಾಂ = ತನ್ನ ಸಖೀ(ಸವತಿ)ಯಾದ ಈ ನದಿಯನ್ನು; ಸಾ = ಆ ಭಾಗೀರಥಿಯು; ಸರ್ವಸೇವ್ಯಾಂ = ಸರ್ವರಿಂದಲೂ ಸ್ನಾನಪಾನಾದಿರೂಪ ಸೇವನೆಗೆ ಅರ್ಹಳನ್ನಾಗಿ; ಕರೋತಿ = ಮಾಡುವಳು.

ಪತಿಯಾದ ಸಮುದ್ರರಾಜನ ಎದುರಿನಲ್ಲಿ ತನ್ನ ಅಪಾರ ಲಾವಣ್ಯದ ಹಮ್ಮಿನಿಂದ ವಿವೇಕಹೀನಳಾಗಿ ತನ್ನವರಿಂದ ದೂರಾಗುವ ಇವಳನ್ನು, ಈ ಗಂಗೆಯು ಎಲ್ಲರೂ ಸೇವಿಸುವಂತೆ ಮಾಡುವಳು.

ವಿ: ೧. ಸಮುದ್ರ ಸಂಗಮದ ಬಳಿ ಶಾಲ್ಮಲೀ ನದಿಯಲ್ಲಿ ಗಂಗಾಷ್ಟಮಿಯಂದು ಭಾಗೀರಥಿಯು ಆಗಮಿಸುವುದನ್ನೇ ಇದರಲ್ಲಿ ಪ್ರಕಾರಾಂತರದಿಂದ ವರ್ಣಿಸಿರುವರು.

೨. ಸಂಗಮಸ್ಥಳದಲ್ಲಿ ಸಮುದ್ರಜಲದ ಸಂಪರ್ಕದಿಂದಾಗಿ ಶಾಲ್ಮಲಿಯು ಉಪ್ಪಾಗಿರುವುದರಿಂದ ಜನರು ಅದನ್ನು ಸ್ನಾನಪಾನಾದಿಗಳಿಗೆ ಉಪಯೋಗಿಸುವುದಿಲ್ಲ. ಆದರೆ ಗಂಗಾಷ್ಟಮಿಯಂದು ಗಂಗಾದೇವಿಯ ಆಗಮನದಿಂದ ನೀರು ಸಿಹಿಯಾಗಿರುವುದರಿಂದ ಅಂದು ಮಾತ್ರ ಎಲ್ಲರೂ ಅದನ್ನು ಸೇವಿಸುವರು ಎಂದು ಭಾವ.

೩. ತನ್ನ ಲಾವಣ್ಯದ ಹಮ್ಮಿನಿಂದ ಗಂಡನೆದುರು ವಿವೇಕಶೂನ್ಯಳಾಗಿ ವರ್ತಿಸುವ ಒಬ್ಬ ಸ್ತ್ರೀಯನ್ನು ಜನರು ಸಾಮಾನ್ಯವಾಗಿ ಉಪೇಕ್ಷಿಸುವರು; ಆದರೆ ಸಖಿಯೊಬ್ಬಳು ಅವಳ ಬಳಿ ಬಂದು ತನ್ನ ಪ್ರಭಾವದಿಂದ ಅವಳಲ್ಲಿ ವಿವೇಕವುಂಟುಮಾಡಿದಾಗ ಜನರು ಪುನಃ ಅವಳನ್ನು ಆದರಿಸತೊಡಗುವರು. ಇದು ಆ ಸಖಿಯ ಪ್ರಭಾವದಿಂದ ಪುನಃ ಸಾಧ್ಯವಾಗುವಂತೆ ಸಮುದ್ರಸಂಗಮದ ಬಳಿ ಶಾಲ್ಮಲಿಯು ಗಂಗಾಷ್ಟಮಿಯಂದು ಮಾತ್ರ ಸರ್ವ ಸೇವ್ಯಳಾಗಲು ಅದರಲ್ಲಿಯ ಗಂಗಾಸನ್ನಿಧಾನವೇ ಕಾರಣ ಎಂದು ಭಾವ.[೧] ಲಾವಣ್ಯ(ಉಪ್ಪು, ಸೌಂದರ್ಯ) ಮತ್ತು ಅವಿವೇಕಿನೀ(ವಿವೇಕಹೀನತೆ,ವ್ಯತ್ಯಾಸವಿಲ್ಲದಿರುವಿಕೆ) - ಎಂಬಲ್ಲಿ ಶ್ಲೇಷಾಲಂಕಾರವಿದೆ.

## ತ್ರಿವಿಕ್ರಮ (ಸೋದಾ ಕ್ಷೇತ್ರ)[೨]

**ಗಂಗಾ ಮಾಧ್ವಯತೇಃ ಕೀರ್ತ್ಯೈ ಸ್ಥಾನಶ್ರೀಭೂಮನೋಹರಮ್।**
**ಕೃತ್ವಾ ತ್ರಿವಿಕ್ರಮಂ ಚಕ್ರೇ ಪಿತೃಮಾತ್ರಗ್ರಜೋತ್ಸವಮ್ ॥ ೭೫ ॥**

ಅ: ಗಂಗಾ = ಭಾಗೀರಥಿಯು; ಮಾಧ್ವಯತೇಃ = ಮಧ್ವಮುನಿಗಳಿಗೆ ಸಂಬಂಧಿಸಿದ (ಮಧ್ವಶಿಷ್ಯಪರಂಪರೆಯ) ಶ್ರೀವಾದಿರಾಜಯತಿಯ; ಕೀರ್ತ್ಯೈ = ಕೀರ್ತಿಗೋಸುಗ;

---

೧. ಭರ್ತುರಗ್ರೇ ಸ್ವಸೌಂದರ್ಯವಿಸ್ತಾರೇಣ ಗರ್ವವತೀಯಮಿತಿ ಸ್ವಭರ್ತೃಬಂಧುಭಿಶ್ಚೋಪೇಕ್ಷಿತಾಂ ವಿವೇಕಶೂನ್ಯಾಂ ಕಾಂಚನ ನಾರೀಂ ತಸ್ಯಾಃ ಬುದ್ಧಿಮತೀ ಸಖೀ ಸ್ವಯಮೇವಾಗತ್ಯ ಪ್ರಿಯೋಕ್ತ್ಯಾದಿನಾ ಭರ್ತ್ರಾ ಅನ್ಯೈಶ್ಚ ಸತ್ಕೃತಾಂ ಯಥಾ ಕರೋತಿ ತಥೇತಿ ಧ್ವನಿತೋಽರ್ಥಃ। - ವ್ಯಾಖ್ಯಾನ

೨. ಸೋದಾ(ಸೋಂದಾ)ವು ಶಿರಸಿ ತಾಲೂಕಿನಲ್ಲಿಯ ಒಂದು ಗ್ರಾಮ. ಶಿರಸಿಯಿಂದ ಯಲ್ಲಾಪುರ ಮಾರ್ಗದಲ್ಲಿ ೧೬ ಕಿ.ಮೀ. ದೂರದಲ್ಲಿದೆ. ಸ್ವಾದಿ, ಸೋಂದಕರ, ಸುಂಧಾ, ಸುಧಾಪುರ ಮೊದಲಾದ ನಾಮಾಂತರಗಳೂ ಇದಕಿದ್ದಂತೆ ಉಲ್ಲೇಖ ಉಂಟು;

ತ್ರಿವಿಕ್ರಮಂ = ತಾನು ಕಳುಹಿಸಿರುವ ಶ್ರೀತ್ರಿವಿಕ್ರಮನನ್ನು; ಸ್ಥಾನಶ್ರೀಭೂಮನೋಹರಮ್ = ಸ್ಥಾನಶ್ರೀಯಾದ ದೇವಾಲಯಕ್ಕೂ, ತಾನು ನೆಲೆಸಿದ ಭೂಮಿಗೂ ಮನಃಪ್ರಿಯವನ್ನಾಗಿ; ಕೃತ್ವಾ = ಮಾಡಿ; ಪಿತೃಮಾತೃಗ್ರಜೋತ್ಸವಂ = ತನ್ನ ತಂದೆಯಾದ ತ್ರಿವಿಕ್ರಮ ದೇವರಿಗೂ, ಮಾತೃಸ್ಥಾನೀಯರಾದ ಶ್ರೀದೇವಿ,ಭೂದೇವಿಯರಿಗೂ; ಅಗ್ರಜರೆನ್ನಿಸಿದ ಶ್ರೀವಾಯುರೂಪ-ಮಧ್ವಾಚಾರ್ಯರಿಗೂ, ಸಂಭ್ರಮವನ್ನು; ಚಕ್ರೇ = ಉಂಟು ಮಾಡಿದಳು. (ಉತ್ಪ್ರೇಕ್ಷಾಲಂಕಾರ) (ಅದ್ಭುತರಸ)

ಭಾಗೀರಥಿಯು ಮಾಧ್ವಯತಿಯಾದ ಶ್ರೀವಾದಿರಾಜರ ಕೀರ್ತಿಗೋಸ್ಕರ ತಾನು ಕಳುಹಿಸಿದ ಶ್ರೀತ್ರಿವಿಕ್ರಮನನ್ನು ದೇವಾಲಯಕ್ಕೆ ಹಾಗೂ ಭೂಮಿಗೆ ಅಲಂಕಾರವಾಗಿಸಿ, ತನ್ನ ತಂದೆ ತ್ರಿವಿಕ್ರಮನಿಗೂ, ತಾಯಿ ಶ್ರೀದೇವಿ-ಭೂದೇವಿಗೂ, ಅಣ್ಣನಾದ ಮಧ್ವರೂಪದ ವಾಯುದೇವರಿಗೂ ಸಂಭ್ರಮವನ್ನುಂಟು ಮಾಡಿದಳು.

ವಿ: ೧. ಶ್ರೀವಾದಿರಾಜರು ಸೋದಾಗ್ರಾಮದಲ್ಲಿ ದೇವಾಲಯ ತಟಾಕಾದಿಗಳ ನಿರ್ಮಾಣ-ಗಳಿಂದ ಪೂಜಿತನೂ, ಗಂಗಾತೀರದಿಂದ ತನಗೆ ಒಲಿದು ಬಂದವನೂ ಆದ ಶ್ರೀತ್ರಿವಿಕ್ರಮದೇವರನ್ನು ಈ ಶ್ಲೋಕದಲ್ಲಿ ವರ್ಣಿಸಿರುವರು.

೨. ಶ್ರೀವಾದಿರಾಜರ ಸತ್ಕೀರ್ತಿಗೋಸ್ಕರ ತನ್ನ ತೀರದಲ್ಲಿದ್ದ ಶ್ರೀತ್ರಿವಿಕ್ರಮದೇವರನ್ನು ಸೋದೆಗೆ ಕಳುಹಿಸಿ ಕೊಡುವ ಮೂಲಕ ತನ್ನ ತಂದೆಯಾದ ಶ್ರೀತ್ರಿವಿಕ್ರಮದೇವರಿಗೂ ತಾಯಂದಿರಾದ ಸೋದಾಗ್ರಾಮ ಶ್ರೀ ಮತ್ತು ಸ್ಥಾನಭೂಮಿ ರೂಪರಾದ ಶ್ರೀದೇವಿ-ಭೂದೇವಿ-ಯರಿಗೂ, ಅಣ್ಣಂದಿರಾದ ಮಧ್ವರೂಪೀವಾಯುದೇವರಿಗೂ ಸಂಭ್ರಮವನ್ನು ಗಂಗೆಯು ಉಂಟು ಮಾಡಿದಳು ಎಂದು ಭಾವ.

೩. ಶ್ರೀವಾದಿರಾಜರು ಒಮ್ಮೆ ತಮ್ಮ ಒಂದು ಪರ್ಯಾಯವನ್ನು ತಮ್ಮ ಶಿಷ್ಯರಾದ ವೇದವೇದ್ಯರಿಗೆ ಬಿಟ್ಟುಕೊಟ್ಟು ತಾವು ಈ ಸೋದೆಯಲ್ಲಿ ಶ್ರೀತ್ರಿವಿಕ್ರಮದೇವರನ್ನು ಪೂಜಿಸಿದರೆಂದು ಅವರ ಚರಿತ್ರೆಯಲ್ಲಿ ಬಂದಿದೆ.

೪. ಇಲ್ಲಿ ಇಂದು ಶ್ರೀತ್ರಿವಿಕ್ರಮದೇವರು, ಶ್ರೀರಮಾದೇವಿಯರು ಇರುವ ದೇವಸ್ಥಾನವೂ, ಶ್ರೀವಾದಿರಾಜರು ನಿರ್ಮಿಸಿದ ಧವಲಗಂಗಾ, ಅಮೃತಗಂಗಾ, ಶೀತಲಗಂಗಾ, ಅಂತರಗಂಗಾ, ಪಾತಾಳಗಂಗಾ ಎಂಬ ಪಂಚಸರೋವರಗಳೂ, ಹಯಗ್ರೀವಸಮುದ್ರವೆಂಬ ತಟಾಕವೂ, ಚಂದ್ರಮೌಳೀಶ್ವರ ಹಾಗೂ ಶ್ರೀಗೋಪಾಲಕೃಷ್ಣದೇವರ ದೇವಾಲಯಗಳೂ ಇವೆ.

೫. ತ್ರಿವಿಕ್ರಮದೇವಸ್ಥಾನದ ಮುಂದೆ ಶ್ರೀವಾದಿರಾಜರ ತಪೋಮಹಿಮೆಯಿಂದ ನಿಂತ ಧ್ವಜಸ್ಥಂಭವೂ, ಧವಲಗಂಗಾತೀರದಲ್ಲಿ ಅವರ ತಪೋಬಲದಿಂದ ಬೀಳದೆ ನಿಂತಿರುವ ಒಂದು ದೊಡ್ಡ ಬಂಡೆಯೂ ಇದೆ.

೬. ಶ್ರೀವಾದಿರಾಜರು ಸಶರೀರ ಬೃಂದಾವನ ಪ್ರವೇಶ ಮಾಡಿದ ಸ್ಥಳವೂ ಸಹ ಇದೇ ಆಗಿದೆ. ಇಲ್ಲಿ ಇಂದು ಅವರ ಮೂಲಬೃಂದಾವನವೂ, ದಶಾವತಾರಯುಕ್ತವಾದ ಇತರ ನಾಲ್ಕು ವೃಂದಾವನಗಳೂ (ಒಟ್ಟು ಪಂಚವೃಂದಾವನಗಳು) ಉಂಟು.

೭. ಬೃಂದಾವನದ ಹೊರವಲಯದಲ್ಲಿ ಶ್ರೀವೇದವೇದ್ಯರ ಮೂಲಬೃಂದಾವನವೂ ಅದರ ಆಚೆ ಶ್ರೀವೇದನಿಧಿತೀರ್ಥರು ಮೊದಲಾದ ಒಂಭತ್ತು ಯತಿಗಳ ವೃಂದಾವನವೂ ಇವೆ.

೮. ಶ್ರೀವಾದಿರಾಜರ ಬೃಂದವನದ ಎದುರು ಅವರೇ ಪ್ರತಿಷ್ಠಾಪಿಸಿದ ಸುಂದರವಾದ ಶ್ರೀವೇದವ್ಯಾಸರ ವಿಗ್ರಹವೂ, ಬಲಗಡೆ ಹೊರಭಾಗದಲ್ಲಿ ಭೂತರಾಜರ ಗುಡಿಯೂ ಇವೆ.

೯. ಮಾಧ್ವರ ಪವಿತ್ರಯಾತ್ರಾಸ್ಥಳಗಳಲ್ಲಿ ಅಗ್ರಗಣ್ಯಕ್ಷೇತ್ರಗಳಲ್ಲಿ ಒಂದು ಎಂಬುದು ಇದರ ಹಿರಿಮೆ.

೧೦. ಸೋದೆಯಿಂದ ಮೂರು ಮೈಲು ದೂರದಲ್ಲಿ ಶಾಲ್ಮಲೀ ನದಿಯೂ, ಅದರ ತೀರದಲ್ಲಿ ಶ್ರೀವಾದಿರಾಜರು ಅನೇಕ ವರ್ಷಗಳ ಕಾಲ ತಪಸ್ಸು ಮಾಡಿ ತಪೋವನವೆಂದು ಪ್ರಸಿದ್ಧವಾಗಿರುವ ಸ್ಥಳವೂ ಇದೆ.

೧೧. ತ್ರಿವಿಕ್ರಮರೂಪದ ಶ್ರೀಹರಿಯು ಪಾದನಖದಿಂದ ಉದ್ಭವಿಸಿದ ಗಂಗೆಯು ಶ್ರೀತ್ರಿವಿಕ್ರಮ ಪುತ್ರಿಯೇ ಸರಿ; ಆತನು ಗಂಗಾತೀರದಿಂದ ಸೋದೆಗೆ ಬಂದನೆಂದರೆ ತನ್ನ ಮಗಳಾದ ಗಂಗೆಯೇ ಕಳುಹಿಸಿಕೊಟ್ಟಳು ಎಂದರ್ಥ. ಇದು ತ್ರಿಮಿಕ್ರಮ ದೇವಾಲಯದಲ್ಲಿನ 'ಕಾಶೀಕ್ಷೇತ್ರದಿಂದ ಬಂದ' ಎಂಬ ಉಲ್ಲೇಖಕ್ಕೆ ಸಂವಾದಿಯಾಗಿದೆ.

೧೨. ಶ್ರೀಸೋದೆಯಲ್ಲಿ ಶ್ರೀತ್ರಿವಿಕ್ರಮ ದೇವರು ಪ್ರತಿಷ್ಠಾಪನೆಯಾದದ್ದು ಶ್ರೀಹರಿಗೂ, ಶ್ರೀಮಹಾಲಕ್ಷ್ಮಿಗೂ, ವಾಯುದೇವರಿಗೂ ತುಂಬಾ ಪ್ರಿಯವಾದ ಕಾರ್ಯ[೧] ಎಂದು ಭಾವ.

**ತ್ರಿವಿಕ್ರಮಂ ರಮ್ಯಗದಾರಿಶಂಖ-**
**ಸರೋಜಮಾಲಾಧರಮಿಂದುವರ್ಣಮ್ ।**
**ಮನೋಹರಾಂಗಂ ಯತಿವಾದಿರಾಜ-**
**ಪ್ರತಿಷ್ಠಿತಂ ನೌಮಿ ಸದಾ ಪ್ರಸನ್ನಮ್ ॥೭೬॥**

ಅ: ರಮ್ಯಗದಾರಿಶಂಖಸರೋಜಮಾಲಾಧರಂ = ರಮಣೀಯವಾದ ಗದಾ, ಚಕ್ರ, ಶಂಖ, ಪದ್ಮ ಮತ್ತು ಅಕ್ಷಮಾಲೆಗಳನ್ನು (ಕ್ರಮವಾಗಿ ಕೈಗಳಲ್ಲಿ) ಧರಿಸಿರುವ; ಇಂದುವರ್ಣಂ = ಚಂದ್ರಸದೃಶವಾದ ಬಣ್ಣವುಳ್ಳ; ಮನೋಹರಾಂಗಂ = ಮನೋಹರವಾದ ಹಸ್ತಪಾದಾದಿಅವಯವಗಳುಳ್ಳ; ಯತಿವಾದಿರಾಜಪ್ರತಿಷ್ಠಿತಂ = ಯತಿಗಳಾದ ಶ್ರೀವಾದಿರಾಜರಿಂದ ಪ್ರತಿಷ್ಠಾಪಿತನಾದ; ಸದಾ ಪ್ರಸನ್ನಂ = ಸದಾ ಪ್ರಸಾದಾಭಿಮುಖನಾಗಿರುವ; ತ್ರಿವಿಕ್ರಮಂ = ಶ್ರೀತ್ರಿವಿಕ್ರಮದೇವರನ್ನು; (ಸದಾ) ನೌಮಿ = ಸದಾ ನಮಸ್ಕರಿಸುವೆನು.

ಕೈಗಳಲ್ಲಿ ರಮ್ಯವಾದ ಗದೆ ಚಕ್ರ ಶಂಖ ಪದ್ಮ ಹಾಗೂ ಅಕ್ಷಮಾಲೆಗಳು, ಕೊರಳಲ್ಲಿ ಮಾಲೆಗಳು, ಚಂದ್ರನಂತಹ ಮೈಬಣ್ಣ, ಮನೋಹರವಾದ

---

೧. ಸ್ವಭಕ್ತಪ್ರಿಯಸ್ಯ ಪ್ರೀತಿಕರಣಾತ್ ಗಂಗಾಪಿತೋರೇವ ಸ್ವಪಿತೃತ್ವಾತ್ ಸ್ವಪಿತೃಮಾತೃ ಪ್ರೀತಿಕರಣಾತ್ ಮಧ್ವಸ್ಯೋತ್ಸವಃ । ಸ್ವಪುತ್ರಸ್ಯ ಮನಃಪ್ರೀತಿಕರಣಾತ್ ಶ್ರೀಭೂಮ್ಯೋಃ ಸ್ವಪತ್ನಿಸಂಯೋಗಕರಣಾತ್ ಸ್ವಭಕ್ತಿಪ್ರೀತಿಕರಣಾಚ್ಚ ಸ್ವಪಿತುರಿತಿ ತ್ರೇಧಾ ವಿಭಾಗೋ ದ್ರಷ್ಟವ್ಯಃ । -ವ್ಯಾಖ್ಯಾನ

ಅಂಗಗಳು, ಪ್ರಸನ್ನ ಮುಖ - ಹೀಗಿರುವ ಯತಿ ಶ್ರೀವಾದಿರಾಜ ಪ್ರತಿಷ್ಠಿತನಾದ ಶ್ರೀತ್ರಿವಿಕ್ರಮದೇವರನ್ನು ಸದಾ ವಂದಿಸುವೆನು.

ವಿ: ೧. ಸೋದೆಯಲ್ಲಿರುವ ಶ್ರೀತ್ರಿವಿಕ್ರಮದೇವರು ತಂತ್ರಸಾರೋಕ್ತ ಲಕ್ಷಣಗಳುಳ್ಳ ಸುಂದರ ವಿಗ್ರಹ. ಇದು ಗಂಗಾತೀರದ ಕಾಶಿಯಿಂದ ಬಂದ ವಿಗ್ರಹ ಎಂಬ ಉಲ್ಲೇಖ ಆ ದೇವಸ್ಥಾನದಲ್ಲಿರುವ ಶಿಲಾಶಾಸನದಲ್ಲಿದೆ. ರಥಾರೂಢವಾಗಿರುವುದು ಈ ವಿಗ್ರಹದ ಮತ್ತೊಂದು ವೈಶಿಷ್ಟ್ಯ. ಇದನ್ನು ಶ್ರೀವಾದಿರಾಜರು ತಮ್ಮ ಶಿಷ್ಯರಾದ ಭೂತರಾಜರಿಂದ ತರಿಸಿದರೆಂದು ಪ್ರತೀತಿ; ರಥಸಮೇತವಾಗಿಯೇ ವಿಗ್ರಹವನ್ನು ತರುತ್ತಿದ್ದಾಗ್ಯೆ, ದೈತ್ಯನೊಬ್ಬನು ಅಡ್ಡಿಮಾಡಿದನೆಂದೂ, ಪ್ರತಿಷ್ಠಾಪನೆಯ ಮುಹೂರ್ತವು ಅತಿಕ್ರಮಿಸೀತೆಂಬ ಯೋಚನೆಯಿಂದ ಭೂತರಾಜರು ಆ ಶಿಲಾರಥದ ಒಂದು ಗಾಲಿಯಿಂದ ಆ ದೈತ್ಯನನ್ನು ಸಂಹರಿಸಿದರೆಂದೂ, ಅದಕ್ಕೇ ಇಲ್ಲಿಯ ರಥಕ್ಕೆ ಮೂರೇ ಚಕ್ರಗಳಿವೆಯೆಂದೂ ಹೇಳುವರು. ಇಂದಿಗೂ ಶಿಲಾರಥವೇ ಗರ್ಭಗುಡಿಯಾಗಿದ್ದು ಅದಕ್ಕೆ ಪ್ರತ್ಯೇಕ ಗರ್ಭಗುಡಿ ಇಲ್ಲವೆಂಬುದು ಇಲ್ಲಿಯ ಮತ್ತೊಂದು ವಿಶೇಷ.

೨. ಶ್ರೀವಾದಿರಾಜರು ಪ್ರತ್ಯೇಕ ತ್ರಿವಿಕ್ರಮ ಸ್ತೋತ್ರವೊಂದನ್ನು ರಚಿಸಿದ್ದು, ಅದರಲ್ಲಿ ಒಟ್ಟು ೧೮ ಶ್ಲೋಕಗಳು ಇವೆ; ಅವುಗಳಲ್ಲಿ ಕೆಲವು ಶ್ಲೋಕಗಳು ಹೀಗಿವೆ:

ವಾದಿರಾಜೇಂದ್ರವರದಂ ಸೋದಾಪುರನಿವಾಸಿನಮ್ ।
ಮೋದಪ್ರದಂ ಸದಾ ವಂದೇ ಮಾಧವಂ ತಂ ತ್ರಿವಿಕ್ರಮ್ ॥
ಯೋಽಸೌ ಧವಲಗಂಗಾಯಾಃ ಪಾರ್ಶ್ವೇ ತಿಷ್ಠತಿ ಸರ್ವದಾ ।
ದೇಶೇದೇಶೇ ಚ ವಿಖ್ಯಾತಮಾಸೇವೇ ತಂ ತ್ರಿವಿಕ್ರಮ್ ॥
ಅಗ್ರೇ ನಿಧಾಯ ಶ್ರೀದೇವೀಂ ಪೃಷ್ಠೇ ಪಾರ್ಶ್ವೇ ಚ ಸಜ್ಜನಾನ್ ॥
ಸ್ವರ್ಗಿಭಿಃ ಪರಿತಃ ಸೇವ್ಯೋ ಮಧ್ಯೇ ಭಾತಿ ತ್ರಿವಿಕ್ರಮಃ ।
ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ ॥
ತಾವತ್ತ್ರಿವಿಕ್ರಮಃ ಸೋಽಯಂ ಪೂಜ್ಯಸ್ತಿಷ್ಠತು ಸಜ್ಜನೈಃ ॥

೩. ಪ್ರತಿವರ್ಷ ಫಾಲ್ಗುಣ ಪೂರ್ಣಿಮೆಯಂದು, ಶ್ರೀತ್ರಿವಿಕ್ರಮದೇವರ ರಥೋತ್ಸವವೂ, ಫಾಲ್ಗುಣ ಕೃಷ್ಣತೃತೀಯಾದಂದು ಶ್ರೀವಾದಿರಾಜಸ್ವಾಮಿಗಳ ಆರಾಧನೆಯೂ ಸೋದೆಯಲ್ಲಿ ಅತ್ಯಂತ ವೈಭವದಿಂದ ನಡೆಯುತ್ತವೆ.

೪. ತ್ರಿವಿಕ್ರಮದೇವರ ಮುಂದಿನ ಆವರಣದಲ್ಲಿ ಸುಂದರವಾದ ರಮಾವಿಗ್ರಹವೂ ಇದೆ. ತ್ರಿವಿಕ್ರಮರೂಪದ ಪತ್ನಿಯ ಹೆಸರು 'ರಮಾ' ಎಂದು ಪಂಚರಾತ್ರದಲ್ಲಿ ಉಕ್ತವಾಗಿದೆ. ಹೀಗೆ ಅನೇಕ ಕಾರಣಗಳಿಂದ ತುಂಬಾ ವೈಶಿಷ್ಟ್ಯೋಪೇತವಾಗಿರುವ ಈ ಮೂರ್ತಿಯ ಮೇಲೆ ವಾದಿರಾಜರು ಒಂದು ಪ್ರತ್ಯೇಕ ಕೃತಿಯನ್ನೇ ರಚಿಸಿರುವರು.

೫. ರಮ್ಯಗದಾರಿಶಂಖಸರೋಜಮಾಲಾಧರಂ: ಕೆಳ ಬಲಗೈಯಲ್ಲಿ ಪದ್ಮ, ಮೇಲಿನ ಬಲಗೈಯಲ್ಲಿ ಗದ, ಮೇಲಿನ ಎಡಗೈಯಲ್ಲಿ ಚಕ್ರ ಮತ್ತು ಕೆಳಗಿನ ಎಡಗೈಯಲ್ಲಿ ಶಂಖಗಳನ್ನು ಧರಿಸಿರುವುದು ತ್ರಿವಿಕ್ರಮರೂಪದ ಲಕ್ಷಣ ಎಂದು ತಂತ್ರಸಾರದಲ್ಲೂ ಶ್ರೀವಾದಿರಾಜಕೃತ

'ಕೇಶವಾದಿ ಚತುರ್ವಿಂಶತಿಮೂರ್ತಿಲಕ್ಷಣಸ್ತುತಿ'ಯಲ್ಲೂ[೧] ಉಕ್ತವಾಗಿದೆ. ಪದ್ಮವನ್ನು ಹಿಡಿದ ಕೈಯಲ್ಲೇ ಅಕ್ಷಮಾಲೆಯೂ ಇದೆ[೨].

೬. ಇಂದುವರ್ಣಂ: ಬಹು ಮಾಣಿಕ್ಯ ಶಿಲಾರೂಪವಾದ ವಿಗ್ರಹವಾದ್ದರಿಂದ 'ಇಂದುವರ್ಣಂ' ಎಂಬುದಾಗಿ ವರ್ಣಿಸಿರುವರು[೩].

## ವೇಂಕಟೇಶ (ಮಂಜುಗುಣಿ ಕ್ಷೇತ್ರ)[೪]

**ಮನೋಹರಗಿರಿದ್ರೋಣೀವಾಸಂ ಶ್ರೀಶಂ ಸತಾಂ ವಶಮ್ ।**
**ಧನುರ್ಬಾಣಧರಂ ಭಾಗ್ಯಕರಂ ಪಾಪಹರಂ ಭಜೇ ॥ ೭೭ ॥**

ಅ: ಮನೋಹರಗಿರಿದ್ರೋಣೀವಾಸಂ = 'ಮಂಜುಗುಣಿ' ಎಂಬ ಗ್ರಾಮದ ಮನೋಹರವಾದ ಪರ್ವತಗುಹೆಯಲ್ಲಿ ನೆಲೆಸಿರುವ, ಧನುರ್ಬಾಣಧರಂ = ಬಿಲ್ಲು ಬಾಣಗಳನ್ನು ಧರಿಸಿರುವ, ಭಾಗ್ಯಕರಂ = ಸಂಪತ್ಕರನಾದ; ಪಾಪಹರಂ = ಪಾಪಪರಿಹಾರಕನಾದ; ಸತಾಂ = ಸಜ್ಜನರಿಗೆ; ವಶಂ = ವಶನಾಗುವ; ಶ್ರೀಶಂ = ಲಕ್ಷ್ಮೀರಮಣನಾದ ವೇಂಕಟಪತಿಯನ್ನು; (ಅಹಂ) ಭಜೇ = ನಾನು ಸೇವಿಸುವೆನು (ಸ್ವಭಾವೋಕ್ತಿ ಅಲಂಕಾರ)

'ಮಂಜುಗುಣಿ' ಎಂಬ ಗ್ರಾಮದ ಮನೋಹರ ಪರ್ವತಗುಹೆಯಲ್ಲಿ ನೆಲೆಸಿರುವ, ಬಿಲ್ಲು ಬಾಣಗಳನ್ನು ಧರಿಸಿರುವ, ಪಾಪಪರಿಹಾರಕನಾದ, ಸಂಪತ್ಕರನಾದ, ಸಜ್ಜನರಿಗೆ ವಶನಾಗುವ, ಲಕ್ಷ್ಮೀರಮಣನಾದ ಶ್ರೀನಿವಾಸನನ್ನು ನಾನು ಸೇವಿಸುವೆನು.

ವಿ: ೧. ಶ್ರೀವೇಂಕಟೇಶನು ಬೇಟೆಗೋಸ್ಕರ ಸಂಚರಿಸುತ್ತಾ ಬಂದ ರೂಪವೇ ಮಂಜು-ಗುಣಿಯಲ್ಲಿ 'ತಿರುಮಲ'ನೆಂಬ ಮುನಿಯಿಂದ ಪ್ರತಿಷ್ಠಿತವಾಗಿದೆ ಎಂದು ಸ್ಥಳಪುರಾಣದಲ್ಲಿ ಉಕ್ತವಾಗಿದೆ. ಬೇಟೆಗೋಸ್ಕರ ಬಂದ ರೂಪವಾದ್ದರಿಂದ ಕೈಯಲ್ಲಿ ಬಿಲ್ಲುಬಾಣಗಳನ್ನು ಹಿಡಿದಿರುವನು ಎಂದು ಭಾವ.

---

೧. ನಿತ್ಯಂ ಪದ್ಮಗದಾರಿಶಂಖಸಹಿತಶ್ಚಿತ್ತೇ ಮಮ ತ್ರಿಕ್ರಮೋ...
೨. ಪದ್ಮಧಾರಿಹಸ್ತಾಗ್ರೇ ಮಾಲಾ ತಿಷ್ಠತೀತಿ ಭಾವಃ । —ವ್ಯಾಖ್ಯಾನ
೩. ಬಹುಮಾಣಿಕ್ಯಶಿಲಾರೂಪತ್ವತೋಽತಿಧವಲತ್ವಾದೇವಮುಕ್ತಮ್ । —ವ್ಯಾಖ್ಯಾನ
೪. ಮಂಜುಗುಣಿ ಗ್ರಾಮವು ಸಿರ್ಸಿಯಿಂದ ಗೋಕರ್ಣಕ್ಕೆ ಹೋಗುವ ದಾರಿಯಲ್ಲಿನ ಸಂಪಖಂಡ ಎಂಬ ಸ್ಥಳಕ್ಕೆ ಸ್ವಲ್ಪ ದೂರದಲ್ಲಿದೆ. ಸ್ಕಂದಪುರಾಣದ ಸಹ್ಯಾದ್ರಿಖಂಡದಲ್ಲಿ ಈ ಮಂಜುಗುಣಿ ಕ್ಷೇತ್ರದ ಮಹಿಮೆಯು ವರ್ಣಿತವಾಗಿದೆ. ಈ ಶ್ಲೋಕ ಮತ್ತು ಮುಂದಿನ ಶ್ಲೋಕ(ಶ್ಲೋಕ೭೭ಮತ್ತು ೭೮)ಗಳು ಪುರಾಣಸ್ಥ ಸ್ಥಳಮಾಹಾತ್ಮ್ಯದಲ್ಲೂ ದೊರೆಯುತ್ತದೆ. ಆದರಿಂದ ಈ ಶ್ಲೋಕಗಳು ಮೂಲತಃ ಪುರಾಣಶ್ಲೋಕಗಳು, ಹಿಂದೆ ಉಲ್ಲೇಖಿಸಿದ ದುರ್ಗಾಸ್ತೋತ್ರದಂತೆ (೧.೨೦) ಎಂದು ತಿಳಿಯಬಹುದು. ಅಥವಾ ಮೂಲತಃ ಶ್ರೀವಾದಿರಾಜರ ರಚನೆಯಾದ ಈ ಶ್ಲೋಕಗಳು ಅನಂತರ ಸ್ಥಳಪುರಾಣದಲ್ಲಿ ಸೇರಿರುವ ಸಂಭವವೂ ಉಂಟು.

೨. ಮನೋಹರಗಿರಿದ್ರೋಣೀವಾಸಃ: ಮಂಜುಗುಣಿಯು ಆ ಪರ್ವತಗುಹೆಯು ಅತ್ಯಂತ ಮನೋಹರವಾದ ಸ್ಥಳವಾದ್ದರಿಂದಲೇ ಶ್ರೀವೇಂಕಟೇಶನು ಅಲ್ಲಿ ನೆಲೆಸಿರುವನು ಎಂದು ಭಾವ[೧].

೩. ಧನುರ್ಬಾಣಧರಃ: ಧನುರ್ಬಾಣಗಳೊಂದಿಗೆ ಚಕ್ರಶಂಖಗಳನ್ನು ಇತರ ಎರಡು ಕೈಗಳಲ್ಲಿ ಶ್ರೀನಿವಾಸನು ಹಿಡಿದಿರುವನು. ಮುಂದಿನ ಶ್ಲೋಕದಲ್ಲಿ ಅವುಗಳ ವರ್ಣನೆ ಬಂದಿದೆ.[೨]

ಖಲಮೃಗಮೃಗಯಾರ್ಥಂ ಪಾದುಕಾಶೋಭಿಪಾದಃ
ಕರಧೃತಶರಚಕ್ರೋದ್ದಾಮಶಂಖಾಗ್ರ್ಯಚಾಪಃ ।
ಸಕಲಭುವಿ ಚರಿತ್ವಾ ಮಂಜುಗುಣ್ಯಾಖ್ಯರಮ್ಯ -
ಸ್ಥಲಸದನಗತೋऽಭೂದ್ವೇಂಕಟೇಶೋ ಮುಕುಂದಃ ॥ ೭೮ ॥

ಅ: ಪಾದುಕಾಶೋಭಿಪಾದಃ = ಪಾದುಕೆಗಳಿಂದ ಶೋಭಿತವಾದ ಪಾದಗಳುಳ್ಳ, ಕರಧೃತಶರಚಕ್ರೋದ್ದಾಮಶಂಖಾಗ್ರ್ಯಚಾಪಃ = ಕೈಗಳಲ್ಲಿ ಕ್ರಮವಾಗಿ ಬಾಣ, ಚಕ್ರ, ಶ್ರೇಷ್ಠವಾದ ಶಂಖ ಮತ್ತು ಉತ್ತಮವಾದ ಧನುಸ್ಸುಗಳನ್ನು ಹಿಡಿದಿರುವ; ವೇಂಕಟೇಶೋ ಮುಕುಂದಃ = ಶ್ರೀನಿವಾಸ ರೂಪದ ಶ್ರೀಹರಿಯು; ಖಲಮೃಗಮೃಗಯಾರ್ಥಂ = ದುರ್ಜನರೆಂಬ ಮೃಗಗಳನ್ನು ಬೇಟೆಯಾಡಲೋಸ್ಕರ; ಸಕಲಭುವಿ = ಸಕಲಭೂಮಂಡಲದಲ್ಲೂ; ಚರಿತ್ವಾ= ಸಂಚರಿಸಿ; ಮಂಜುಗುಣ್ಯಾಖ್ಯರಮ್ಯಸ್ಥಲಸದನಗತಃ = ಮಂಜುಮಣಿ ಎಂಬ ರಮಣೀಯ ಸ್ಥಳದ ಮಂದಿರದಲ್ಲಿ ನೆಲೆಸಿರುವವನಾಗಿ; ಅಭೂತ್ = ಆದನು.

ಪಾದುಕೆ ಶೋಭಿಸುವ ಪಾದಗಳು, ಕೈಗಳಲ್ಲಿ ಬಾಣ ಚಕ್ರ ಶಂಖ ಹಾಗೂ ಧನುಸ್ಸುಗಳು; ಇಂತಹ ಶ್ರೀನಿವಾಸರೂಪದ ಶ್ರೀಹರಿಯು ದುರ್ಜನರೆಂಬ ಮೃಗಗಳನ್ನು ಬೇಟೆಯಾಡಲೋಸ್ಕರ ಸಕಲಭೂಮಂಡಲದಲ್ಲೂ ಸಂಚರಿಸಿ ಮಂಜುಮಣಿ ಎಂಬ ರಮಣೀಯಸ್ಥಳದ ಮಂದಿರದಲ್ಲಿ ನೆಲೆಸಿರುವನು.

ವಿ: ೧. ದುರ್ಜನರೆಂಬ ಮೃಗಗಳ ಬೇಟೆಗೋಸ್ಕರ ಸಕಲಭೂಮಂಡಲವನ್ನೂ ಸಂಚರಿಸಿದ ಶ್ರೀವೇಂಕಟೇಶನು ಮಂಜುಗುಣಿಯ ಸೌಂದರ್ಯವನ್ನು ಮೆಚ್ಚಿ ಅಲ್ಲಿಯೇ ನೆಲೆಸಿಬಿಟ್ಟಿರುವನು ಎಂದು ಭಾವ.ಮಂಜುಗುಣಿಯ ಶ್ರೀವೇಂಕಟೇಶನ ವಿಗ್ರಹವನ್ನು ಧ್ಯಾನಿಸುತ್ತ ಪುನಃ ಹೀಗೆ ವರ್ಣಿಸಿರುವರು.

೨. ಖಲಮೃಗಯಾರ್ಥಂ: ಇಲ್ಲಿ 'ಖಲಮೃಗ' ಎಂಬುದಕ್ಕೆ 'ದುಷ್ಟರೆಂಬ ಮೃಗ' ಎಂದೂ ಅರ್ಥ (ಶ್ಲೇಷಾಲಂಕಾರ); ದುಷ್ಟರು ಮೃಗರೂಪದಲ್ಲಿದ್ದಾಗ, ಶ್ರೀಹರಿಯು ಅವರನ್ನು ಬೇಟೆಯ ನೆಪದಲ್ಲಿ ಸಂಹರಿಸುವನು ಎಂಬ ಧ್ವನಿಯೂ ಇಲ್ಲಿದೆ. ಶ್ರೀಭೀಮಸೇನದೇವರು ಸಿಂಹ, ಹುಲಿ

---

೧. ತತ್ಸ್ಥಲಸ್ಯ ಮನೋಹರತ್ವಾದೇವ ವಾಸಃ । ಅನ್ಯಥಾ ಪಾದುಕಾಶೋಭಿಪಾದತ್ವಾತ್ ಗಮನಮೇವ ನ ಸಂಭಾವಿತಮಿತಿ ಭಾವಃ । -ವ್ಯಾಖ್ಯಾನ

೨. ಏತಚ್ಚೋಪಲಕ್ಷಣಂ,ಚಕ್ರಶಂಖಾವಪಿ ಗ್ರಾಹ್ಯೌ, ಪ್ರಸಿದ್ಧತ್ವಾತ್ ತದನುಕ್ತಿಃ। ವ್ಯಾಖ್ಯಾನ

ಮೊದಲಾದ ರೂಪದಲ್ಲಿದ್ದ ದೈತ್ಯರನ್ನು ಸಂಹರಿಸಿದ ಮಹಾಭಾರತತಾತ್ಪರ್ಯನಿರ್ಣಯದಲ್ಲಿನ ವಿವರವನ್ನು ಇಲ್ಲಿ ಗಮನಿಸಬಹುದು[೧].

## ಭೈರವ[೨] (ಏಣಭೈರವ ಕ್ಷೇತ್ರ)

**ಯಸ್ಯ ಭೈರವನಾದೇನ ವಿದ್ರವಂತ್ಯಘರಾಶಯಃ ।**
**ಏಣಾ ಇವ ಭಯಾನ್ನಿತ್ಯಂ ತಂ ನತೋಽಸ್ಮ್ಯೇಣಭೈರವಮ್ ॥ ೭೯ ॥**

ಅ: ಯಸ್ಯ = ಯಾರ; ಭೈರವನಾದೇನ = ಭಯಂಕರವಾದ ಗರ್ಜನ ಧ್ವನಿಯಿಂದ ಅಘರಾಶಯಃ = ಪಾಪರಾಶಿಗಳು; ಭಯಾತ್ = ಭಯದಿಂದ; ನಿತ್ಯಂ = ಸದಾಕಾಲವೂ; ಏಣಾಃ ಇವ = ಜಿಂಕೆಗಳಂತೆ; ವಿದ್ರವಂತಿ = ದಿಕ್ಕೆಟ್ಟು ಓಡುವವೋ; ತಂ = ಅಂತಹ; ಏಣಭೈರವಂ = ಏಣಭೈರವನಾಮಕ ಶಿವನನ್ನು; ನತೋಽಸ್ಮಿ = ನಮಸ್ಕರಿಸುವೆನು.

ಯಾರ ಭಯಂಕರ ಗರ್ಜನಧ್ವನಿಯಿಂದ ಪಾಪರಾಶಿಗಳು ಭಯದಿಂದ ಸದಾಕಾಲವೂ ಜಿಂಕೆಗಳಂತೆ ದಿಕ್ಕೆಟ್ಟು ಓಡುವವೋ, ಅಂತಹ 'ಏಣಭೈರವ'ನಾಮಕ ಶಿವನನ್ನು ನಮಸ್ಕರಿಸುವೆನು.

ವಿ: ೧. ಏಣಭೈರವನು ಭಸ್ಮಾಸುರನಿಗೆ ಅಂಜಿ ಜಿಂಕೆಯಂತೆ ಓಡಿಬಂದ ರುದ್ರದೇವರೇ ಆದರೂ, ಇವರ ಭಯಂಕರನಾದಕ್ಕೆ ಭಕ್ತರ ಪಾಪಗಳೆಲ್ಲ ಜಿಂಕೆಯಂತೆ ಪಲಾಯನ ಮಾಡುತ್ತವೆ. ಹೀಗೆ ಪಾಪಗಳನ್ನು ಜಿಂಕೆಗಳಂತೆ ಓಡಿಸುವ ಭೈರವನಾದ್ದರಿಂದಲೇ ಈತನಿಗೆ 'ಏಣಭೈರವ' ಎಂಬ ಹೆಸರು ಸಾರ್ಥಕವಾಗಿದೆ ಎಂದು ಭಾವ.

೨. **'ಯಾಣ'** ಎಂದು ಇಂದು ವ್ಯವಹರಿಸಲ್ಪಡುವ ಈ ಏಣಭೈರವ ಕ್ಷೇತ್ರವು ಉತ್ತರಕನ್ನಡಜಿಲ್ಲೆಯ ಕುಮಟಾದಿಂದ ಈಶಾನ್ಯಕ್ಕೆ ಸುಮಾರು ೨೪ಕಿ.ಮೀ. ದೂರದಲ್ಲಿದೆ. ಸಿರ್ಸಿಯಿಂದ ದೇವೀಮನಿ ಘಾಟಿನ ಕೆಳಗೆ ಒಂದು ಕಿ.ಮೀ. ದೂರದಲ್ಲಿರುವ 'ಹರಿತ' ಎಂಬ ಗ್ರಾಮಕ್ಕೆ೧೩ಕಿ.ಮೀ. ದೂರದಲ್ಲೂ ವಡ್ಡಿಕಣಿವೆಯಿಂದ ೫ಕಿ.ಮೀ.ದೂರದಲ್ಲೂ ಇರುವ ೪೬ಮೀ. ಎತ್ತರದ 'ಯಾಣದ ಗುಡ್ಡ' ಎಂಬ ಬೆಟ್ಟದಲ್ಲಿ ೩೦ಮೀ ಉದ್ದ ೩ಮೀ ಅಗಲ ಮತ್ತು ೩ ಮೀ. ಎತ್ತರವಿರುವ ಭೈರವೇಶ್ವರ ಗುಹೆಯಲ್ಲಿ ಭೈರವ ಎಂಬ ಶಿವನ ಮೂರ್ತಿಯಿದೆ. ಈ ಗುಹೆಯ ದಕ್ಷಿಣಕ್ಕೆ ಇರುವ ಒಂದು ಚಿಕ್ಕ ಗುಹೆಯಲ್ಲಿ ೩ ಮೀ ಎತ್ತರವಿರುವ 'ಚಂಡಿಕಾ' ಎಂಬ ಪಾರ್ವತೀ ವಿಗ್ರಹವೂ ಇದೆ. ಸಮೀಪದಲ್ಲಿ ಒಂದು ನಾರಾಯಣ ದೇವಸ್ಥಾನವೂ ಉಂಟು.

೩. ವೃಕಾ(ಭಸ್ಮಾ)ಸುರನಿಗೆ ಅಂಜಿ ಜಿಂಕೆಯಂತೆ ಓಡಿದ ರುದ್ರದೇವರನ್ನು ಮಹಾವಿಷ್ಣುವು ಸಂರಕ್ಷಣೆ ಮಾಡಿದ ಸ್ಥಳ ಎಂಬುದು ಇದರ ಪೌರಾಣಿಕ ಮಹತ್ತ್ವ. ಮಾರ್ಗಮಧ್ಯದಲ್ಲಿ ಕಾಣುವ ಸುಣ್ಣದ ಕಲ್ಲು ಗುಡ್ಡವೆಂಬುದು ವಿಷ್ಣುವಿನಿಂದ ಭಸ್ಮವಾದ ಭಸ್ಮಾಸುರನ ಭಸ್ಮದರಾಶಿ ಎಂದು ಪ್ರತೀತಿ. ಮಂಜುಗುಣಿಕ್ಷೇತ್ರದ ವಾಯುವ್ಯ ಕ್ಷೇತ್ರಪಾಲಕ ಎಂದೂ ಏಣಭೈರವೇಶ್ವರನನ್ನು

---

೧. ಮೃತ್ಯನ್ ದೈತ್ಯಾನ್ ಸಿಂಹಶಾರ್ದೂಲರೂಪಾನ್ । – ಮ. ಭಾ. ತಾ. ನಿ.(೨೨/೨೯೩)

೨. ಗೋಕರ್ಣಪೂರ್ವಭಾಗೇ ಸಹ್ಯಾಚಲಶೃಂಗೇ ಏಣಭೈರವಾಖ್ಯಂ ಪುಣ್ಯಕ್ಷೇತ್ರಮಸ್ತಿ – ವ್ಯಾಖ್ಯಾನ

ಕರೆಯುವರು. ಏಣಭೈರವಮೂರ್ತಿಯ ಮೇಲೆ ಸದಾ ಸಣ್ಣ ಝರಿಯೊಂದು ತೊಟ್ಟಿಕ್ಕುತ್ತಿರುತ್ತದೆ. ಬೆಟ್ಟದ ಬುಡದಲ್ಲಿ ಒಂದು ಗಣಪತಿ ವಿಗ್ರಹವೂ, ಥಂಡಿತೀರ್ಥವೆಂಬ ಕೊಳವೂ, ಸಮೀಪದಲ್ಲಿ ಚಂಡಿಕಾ ಎಂಬ ನದಿಯೂ ಇವೆ.(ಈ ಚಂಡಿಕಾ ನದಿಯು ಮುಂದೆ ಅಘನಾಶಿನೀ ನದಿಯನ್ನು ಸೇರುತ್ತದೆ).ನೂರಾರು ಅಡಿ ಎತ್ತರದ ನಾಲ್ಕಾರು ಬಂಡೆಗಳೂ, ತುಂಬಾ ದೊಡ್ಡದಾದ ಗುಹೆಗಳು ಸಹಾ ಇಲ್ಲಿವೆ. ಶಿವರಾತ್ರಿಯಂದು ಇಲ್ಲಿ ವಿಶೇಷ ಉತ್ಸವ ನಡೆಯುತ್ತದೆ. ಜೇನುಹುಟ್ಟುಗಳು ತುಂಬಿರುವ ಈ ಸ್ಥಳದಲ್ಲಿ ಸ್ವಲ್ಪ ಮೈಲಿಗೆಯಾದರೂ ಜೇನ್ನೊಣಗಳು ಕಚ್ಚಿ ಸಾಯಿಸುತ್ತವೆ ಎಂದು ಪ್ರತೀತಿ ಇದೆ. ತುಂಬಾ ದುರ್ಗಮವಾಗಿರುವ ಕಾರಣದಿಂದಾಗಿಯೇ 'ಸೊಕ್ಕಿದ್ರೆ ಯಾಣ ರೊಕ್ಕಿದ್ರೆ ಗೋಕರ್ಣ'; 'ಮೈ ಸೊಕ್ಕಿದ್ದರೆ ಯಾಣ ನೋಡು' ಎಂಬ ಗಾದೆ ಮಾತುಗಳು ಇದರ ಬಗ್ಗೆ ಹುಟ್ಟಿಕೊಂಡಿವೆ.

## ಶ್ರೀರುದ್ರದೇವರು (ಗೋಕರ್ಣಕ್ಷೇತ್ರ)[೧]

ಯೇ ವಿಷ್ಣೋಃ ಪದಪದ್ಮಚಿಂತನರತಾಸ್ತತ್ಕರ್ಮನಿಷ್ಠಾಶ್ಚ ಯೇ
ಯೇ ತದ್ಭಕ್ತಪರಾಯಣಾಃ ಶುಭಧಿಯಃ ಯೇಽರ್ಚಂತಿ ಮಾಂ ಚಾನಿಶಮ್ ।
ಏಕಾಂತೇ ತದಭೀಷ್ಟಮಾಶು ವಸುಧೇ ದೇಹೀತಿ ಗಾಂ ಬೋಧಯನ್
ಶ್ರೀಗೋಕರ್ಣಕೃತಾಲಯೋ ವಿಜಯತೇ ದೇವಃ ಸ ಗೌರೀಧವಃ ॥ ೮೦ ॥

ಅ: (ಹೇ) ವಸುಧೇ = ಎಲೈ ಭೂದೇವಿಯೇ !; ಯೇ (ಜನಾಃ) = ಯಾವ ಜನರು; ವಿಷ್ಣೋಃ= ಶ್ರೀಮಹಾವಿಷ್ಣುವಿನ; ಪದಪದ್ಮಚಿಂತನರತಾಃ = ಚರಣಕಮಲಗಳ ಸ್ಮರಣೆಯಲ್ಲಿ ನಿರತರಾಗಿ; ತತ್ಕರ್ಮನಿಷ್ಠಾಶ್ಚ = ಆತನ ಪೂಜಾರೂಪವಾದ ಸ್ವಕರ್ಮಗಳಲ್ಲಿ ತೊಡಗಿರುವರೋ; (ಮತ್ತು) ಯೇ = ಯಾವ ಜನರು; ತದ್ಭಕ್ತಪರಾಯಣಾಃ = ಆ ಮಹಾವಿಷ್ಣುವಿನ ಭಕ್ತರನ್ನು ಆಶ್ರಯಿಸಿರುವರೋ; (ಮತ್ತು) ಯೇ = ಯಾವ ಜನರು; ಶುಭಧಿಯಃ = ನಿರ್ಮಲಚಿತ್ತರಾಗಿ; ಮಾಂ ಚ = ನನ್ನನ್ನೂ ಸಹ; ಅನಿಶಂ = ಸರ್ವದಾ; ಅರ್ಚಂತಿ = (ವಿಷ್ಣುಭಕ್ತತ್ವೇನ) ಪೂಜಿಸುವರೋ; ತದಭೀಷ್ಟಂ = ಅಂತಹ ಜನರ

---

೧. ಉತ್ತರಕನ್ನಡ ಜಿಲ್ಲೆಯ ಕುಮಟಾದಿಂದ ೧೬ಕಿ.ಮೀ. ದೂರದಲ್ಲಿ ಈ ಗೋಕರ್ಣಕ್ಷೇತ್ರವಿದೆ. ಪರಶುರಾಮಕ್ಷೇತ್ರದ ಸಪ್ತಮಹಾಕ್ಷೇತ್ರಗಳಲ್ಲಿ ಒಂದಾಗಿರುವ ಇದು ಕಾಶಿ, ರಾಮೇಶ್ವರ ಮತ್ತು ಗೋಕರ್ಣ ಎಂಬ ತ್ರಿಸ್ಥಳಗಳಲ್ಲಿ ಒಂದಾಗಿದೆ. ದೂರದಿಂದ ಗೋವಿನ ಕಿವಿಯಂತೆ ಕಾಣುವುದರಿಂದಲೂ, ಇಲ್ಲಿಯ ಲಿಂಗವು ಗೋಕರ್ಣಾಕೃತಿಯಲ್ಲಿರುವುದರಿಂದಲೂ, ಭೂಮಿಗೆ ಕರ್ಣಸ್ಥಾನೀಯವಾಗಿರುವುದರಿಂದಲೂ ಇದಕ್ಕೆ 'ಗೋಕರ್ಣ' ಎಂದು ಹೆಸರು. ಇಲ್ಲಿಯ ಶಿವಲಿಂಗಕ್ಕೆ ಮಹಾಬಲೇಶ್ವರ ಎಂದು ಹೆಸರು. ಇಲ್ಲಿ ಕೋಟಿತೀರ್ಥ, ಸೂರ್ಯತೀರ್ಥ, ಚಂದ್ರತೀರ್ಥ ಮೊದಲಾದ ಮೂವತ್ತು ತೀರ್ಥಗಳಿದ್ದು ಇವುಗಳಲ್ಲಿ ಕೋಟಿತೀರ್ಥವೇ ತುಂಬಾ ದೊಡ್ಡದು; ಇದರ ತೀರದಲ್ಲಿ ಒಂದು ನೃಸಿಂಹದೇವಸ್ಥಾನ ಉಂಟು.

ಬಯಕೆಯನ್ನು; ಆಶು = ಶೀಘ್ರವಾಗಿ; ದೇಹಿ = ಪೂರೈಸು; ಇತಿ = ಎಂಬುದಾಗಿ; ಏಕಾಂತೇ[೧] = ಗುಪ್ತವಾಗಿ; ಗಾಂ = ಭೂಮಿಯನ್ನು; (ಕುರಿತು) ಬೋಧಯನ್ = ಉಪದೇಶಿಸುತ್ತ; ಶ್ರೀಗೋಕರ್ಣಕೃತಾಲಯಃ = ಶ್ರೀಗೋಕರ್ಣ ಕ್ಷೇತ್ರದಲ್ಲಿ ನೆಲೆಸಿರುವ; ಗೌರೀಧವಃ = ಪಾರ್ವತೀಪತಿಯಾದ; ಸಃ ದೇವಃ = ಆ ಶ್ರೀರುದ್ರದೇವರು; ವಿಜಯತೇ = (ಯಥೋಚಿತವಾಗಿ) ಉತ್ಕೃಷ್ಟರಾಗಿರುವರು.

ಭೂದೇವಿಯೇ ! ಯಾರು ಶ್ರೀಮಹಾವಿಷ್ಣುವಿನ ಚರಣಕಮಲಗಳ ಸ್ಮರಣೆಯಲ್ಲಿ ನಿರತರಾಗಿ ಅವನ ಪೂಜಾರೂಪವಾದ ಸತ್ಕರ್ಮಗಳಲ್ಲಿ ತೊಡಗಿರುವರೋ, ಯಾರು ಆ ಶುದ್ಧಮನಸ್ಕರಾಗಿ ಮಹಾವಿಷ್ಣುವಿನ ಭಕ್ತರನ್ನು ಆಶ್ರಯಿಸಿರುವರೋ ಹಾಗೂ ಯಾರು ನನ್ನನ್ನೂ ಸಹ ಸರ್ವದಾ ಪೂಜಿಸುವರೋ, ಅಂತಹವರ ಬಯಕೆಯನ್ನು ಶೀಘ್ರವಾಗಿ ಪೂರೈಸು ಎಂಬುದಾಗಿ ಗುಟ್ಟಾಗಿ ಭೂಮಿಗೆ ತಿಳಿಸುತ್ತಾ, ಶ್ರೀಗೋಕರ್ಣ ಕ್ಷೇತ್ರದಲ್ಲಿ ನೆಲೆಸಿರುವ ಪಾರ್ವತೀಪತಿಯಾದ ಆ ಶ್ರೀರುದ್ರದೇವರು ಶೋಭಿಸುತ್ತಿರುವರು.

ವಿ: ೧. ಗೋಕರ್ಣವು ಭೂಮಿಗೆ ಕರ್ಣಸ್ಥಾನೀಯವಾಗಿರುವುದರಿಂದ 'ಗೋಕರ್ಣ'-ವೆನ್ನಿಸಿದೆ. ಕ್ಷೇತ್ರಂ ತೀರೇ ನದೀನದಪತೇಃ ಶ್ರವಣಂ ಧರಿತ್ರ್ಯಾಃ - ಮ.ತಾ.ನಿ.(೫/೨೯)

೨. ಗೋಕರ್ಣದ ಕ್ಷೇತ್ರದೇವತೆಯಾದ ಶ್ರೀರುದ್ರದೇವರು ಮೂಲತಃ ಪರಮ ವೈಷ್ಣವರು[೨]; ತಾವೇ ಸರ್ವೋತ್ತಮ ಎಂಬ ಪಾಶುಪತಮತವನ್ನು ಅವರು ಪ್ರಚಾರ ಮಾಡಿದ್ದು ಶ್ರೀ ಮಹಾವಿಷ್ಣುವಿನ ಆಜ್ಞೆಯಿಂದ ಅಸುರ ಮೋಹನಕ್ಕಾಗಿ ಮಾತ್ರ; (ಶೈವರು ಶಿವನೇ ಸರ್ವೋತ್ತಮನೆಂಬ ಅನುಸಂಧಾನದಿಂದ ಆ ಕ್ಷೇತ್ರಕ್ಕೆ ಬಂದರೂ) ಎಲೈ ಭೂದೇವಿಯೇ ನೀನು ಮಾತ್ರ ವಿಷ್ಣುಪದಕಮಲ ಚಿಂತಕರೂ, ವಿಷ್ಣುಪೂಜಾ ರೂಪವಾದ ಸತ್ಕರ್ಮರತರೂ, ನಿರ್ಮಲ ಚಿತ್ತರೂ, ತಾರತಮ್ಯದಲ್ಲಿ ತನ್ನನ್ನು ಪೂಜಿಸುವವರೂ ಆದ ವೈಷ್ಣವರ ಅಭೀಷ್ಟಗಳನ್ನು ಮಾತ್ರವೇ ಪೂರೈಸು ಎಂಬ ಗುಪ್ತ ಸಂದೇಶವನ್ನು ಭೂಮಿಗೆ ಕಿವಿಯಲ್ಲಿ ಹೇಳುತ್ತಿರುವರೋ ಎಂಬಂತೆ ಈ ಗೋಕರ್ಣ ಕ್ಷೇತ್ರದಲ್ಲಿ ನೆಲೆಸಿರುವರು ಎಂದು ಶ್ರೀವಾದಿರಾಜರು ಉತ್ಪ್ರೇಕ್ಷಿಸಿರುವರು.

೩. ಗೋಕರ್ಣಯಾತ್ರೆಯು ವೈಷ್ಣವರಿಗೂ ಅವಶ್ಯ ಕರ್ತವ್ಯವೆಂದೂ ಅವರಿಗೆ ಮಾತ್ರವೇ ನಿಜವಾದ ಫಲವು ಲಭಿಸುವುದೆಂದೂ, ಇತರರಿಗೆ ಎಂದೂ ಆ ಭಾಗ್ಯ ದೊರೆಯದು ಎಂದೂ ಭಾವ.

---

೧. ಏಕಾಂತೇ ರಹಸಿ; ಪ್ರಕಾಶತಯಾ ಕಥನೇ ಸ್ವಸ್ಯ ಶೈವಮತಪ್ರವರ್ತಕಕತ್ವೇನ ಮೂರ್ಖಾಣಾಂ ಶೈವಮತೇ ಪ್ರವೃತ್ತಿರ್ನ ಸ್ಯಾದಿತಿ ಭಾವಃ। – ವ್ಯಾಖ್ಯಾನ

೨. ಶ್ರೀರುದ್ರದೇವರು ಪರಮವೈಷ್ಣವರು ಎಂಬ ವಿಚಾರವು 'ವೈಷ್ಣವಾನಾಂ ಯಥಾ ಶಂಭುಃ' (ಭಾಗವತ೧೨/೧೩/೧೬) ಮೊದಲಾದ ಶಾಸ್ತ್ರವಾಕ್ಯಗಳಿಂದ ಸಿದ್ಧವಾಗಿದೆ; ಪದ್ಮಪುರಾಣದ ಉತ್ತರಖಂಡದ ಉಮಾಮಹೇಶ್ವರಸಂವಾದದಲ್ಲೂ ಅವರ ವೈಷ್ಣವತ್ವವು ವಿಶೇಷವಾಗಿ ನಿರೂಪಿತವಾಗಿದೆ.

೪. ಪಾಶುಪತಮತಪ್ರಸಾರಕರಾದ ತಾವು ಇಂತಹ ಸಂದೇಶವನ್ನು ಪ್ರಕಟವಾಗಿ ತಿಳಿಸಿದರೆ, ಅಯೋಗ್ಯರಿಗೂ ಅದು ತಿಳಿದು ಬಿಡುವುದೆಂಬ ಭಾವನೆಯಿಂದ ಈ ರಹಸ್ಯವನ್ನು ಭೂದೇವಿಗೆ ರಹಸ್ಯವಾಗಿ ಕಿವಿಯಲ್ಲಿ ತಿಳಿಸುತ್ತಿರುವರು ಎಂದೂ ಭಾವ[೧].

೫. ಅಸುರ ಮೋಹನಕ್ಕಾಗಿ ಸ್ಕಾಂದಮತವನ್ನು ಪ್ರಸಾರ ಮಾಡಿದ ಷಣ್ಮುಖನು, ಸ್ವಮತವಾದ ವಿಷ್ಣುಸರ್ವೋತ್ತಮತ್ವವನ್ನು ಸುಬ್ರಹ್ಮಣ್ಯದ ಗುಹೆಯಲ್ಲಿ ಕುಳಿತು ಉಪಾಸನೆ ಮಾಡುತ್ತಿರುವನು ಎಂದು ಶ್ಲೋ.೬೦ರಲ್ಲಿ ಉತ್ಪ್ರೇಕ್ಷಿಸಿದ ಶ್ರೀವಾದಿರಾಜರು ಶ್ರೀರುದ್ರದೇವರ ಗೋಕರ್ಣ ಕ್ಷೇತ್ರ ವಾಸವನ್ನು ಅದರಂತೆಯೇ ಉತ್ಪ್ರೇಕ್ಷಿಸಿರುವರು.

**ಗೋಕರ್ಣಭಾಸಿತಾಂಗಃ ಪ್ರತ್ಯುಪಕುರ್ವನ್ನಿವಾಂಬಿಕಾರಮಣಃ ।**
**ಗೋಕರ್ಣಸಂಜ್ಞಮಧುನಾ ಭಾಸಯತಿ ಕ್ಷೇತ್ರಮಂಬುಧೇಸ್ತೀರೇ ॥ ೮೧ ॥**

**ಅ:** **ಗೋಕರ್ಣಭಾಸಿತಾಂಗಃ** = ಕಣ್ಣುಗಳನ್ನೇ ಕಿವಿಯನ್ನಾಗುಳ್ಳ ಸರ್ಪಗಳಿಂದ ಶೋಭಿತವಾದ ಅವಯವಗಳನ್ನುಳ್ಳ ('ನಾಗಭೂಷಣನಾದ' ಎಂದರ್ಥ); **ಅಂಬಿಕಾರಮಣಃ** = ಪಾರ್ವತೀಪತಿಯಾದ ಶ್ರೀರುದ್ರದೇವನು; **ಅಧುನಾ** = ಈಗಲೂ; **ಪ್ರತ್ಯುಪಕುರ್ವನ್ ಇವ** = ಗೋಕರ್ಣದಿಂದ ಭೂಷಿತನಾದ ತಾನು ಆ ಗೋಕರ್ಣಕ್ಕೆ ಶೋಭೆಯನ್ನುಂಟುಮಾಡುತ್ತ ಪ್ರತ್ಯುಪಕಾರವನ್ನು ಮಾಡುತ್ತಿರುವನೋ ಎಂಬಂತೆ; **ಅಂಬುಧೇಃ** = ಸಮುದ್ರದ; **ತೀರೇ** = ತೀರದಲ್ಲಿ; **ಗೋಕರ್ಣಸಂಜ್ಞಂ** = ಗೋಕರ್ಣವೆಂಬ ಹೆಸರಿನ; **ಕ್ಷೇತ್ರಂ** = ಕ್ಷೇತ್ರವನ್ನು; **ಭಾಸಯತಿ** = ಪ್ರಕಾಶಗೊಳಿಸುತ್ತಿರುವನು (ಶ್ಲೇಷೋಜ್ಜೀವಿತ ಉತ್ಪ್ರೇಕ್ಷಾಲಂಕಾರ) (ಆರ್ಯಾವೃತ್ತ).

**ಕಣ್ಣುಗಳನ್ನೇ ಕಿವಿಯನ್ನಾಗುಳ್ಳ ಸರ್ಪಗಳಿಂದ ಶೋಭಿಸುವ ಅವಯವಗಳ, ಪಾರ್ವತೀಪತಿಯಾದ, ಶ್ರೀರುದ್ರದೇವರು ಈಗಲೂ ಪ್ರತ್ಯುಪಕಾರ ಮಾಡುವವರಂತೆ ಸಮುದ್ರದ ತೀರದಲ್ಲಿ ಗೋಕರ್ಣವೆಂಬ ಹೆಸರಿನ ಕ್ಷೇತ್ರವನ್ನು ಬೆಳಗುತ್ತಿರುವರು.**

ವಿ: ೧. ಗೋಕರ್ಣ[೨] ಎಂಬುದಕ್ಕೆ ಸರ್ಪ ಮತ್ತು ಗೋಕರ್ಣ ಎಂಬ ಎರಡು ಅರ್ಥಗಳನ್ನಿಟ್ಟುಕೊಂಡು (ಶ್ಲೇಷಾಲಂಕಾರ) ಶ್ರೀವಾದಿರಾಜರು ಹೀಗೆ ಉತ್ಪ್ರೇಕ್ಷಿಸಿರುವರು; ನಾಗಭೂಷಣ ಎಂದು ಪ್ರಸಿದ್ಧವಾಗಿರುವುದರಿಂದ ಅವರು ಗೋಕರ್ಣ(ಸರ್ಪ)ಗಳಿಂದ ಭೂಷಿತರಾದಂತಾಯಿತು. ಹೀಗೆ ತಾನು ಅವುಗಳಿಂದ ಶೋಭಿತರಾದ್ದರಿಂದ ಗೋಕರ್ಣಕ್ಕೆ

---

೧. ಯಥಾ ಕಸ್ಯಾಶ್ಚಿದೇಕಾಂತೇ ಬೋಧಯನ್ ಪುರುಷಃ ದೂರೇ ಸ್ಥಿತ್ವಾ ಬೋಧ್ಯತೇ ಚೇತ್ ಅನ್ಯೇಷಾಂ ಶ್ರವಣಂ ಸ್ಯಾದಿತಿ ಭೀತ್ಯಾ ಕರ್ಣಸಮೀಪೇ ಏವ ಸ್ಥಿತ್ವಾ ಬೋಧಯತಿ, ತಥೈವೈಷ ಮಹಾದೇವೋऽಪಿ ಅನ್ಯೇಷಾಮನಧಿಕಾರಿಣಾಂ ಶ್ರವಣಂ ಸ್ಯಾದಿತಿ ಭಯೇನ ಗೋಕರ್ಣಶಬ್ದವಾಚ್ಯಾಯಾಃ ಭೂಮೇಃ ಕರ್ಣಸಮೀಪ ಏವ ಕೃತಾಲಯಃ ಸನ್ ಉಪದಿಶತೀತಿ ಭಾವಃ। -ವ್ಯಾಖ್ಯಾನ

೨. ಸ್ವರ್ಗೇಷು ಪಶುವಾಗ್ವಜ್ರದಿಙ್ನೇತ್ರಘೃಣಿಭೂಜಲೇ।
ಲಕ್ಷ್ಯದೃಷ್ಟ್ಯಾ ಸ್ತ್ರಿಯಾಂ ಪುಂಸಿ ಗೌಃ... ॥ -ಕೋಶ
'ಕುಂಡಲೀ ಗೂಢಪಾಚ್ಚಕ್ಷುಶ್ರವಾಃ ಕಾಕೋದರಃ ಫಣೀ' - ಅಮರಕೋಶ

ಪ್ರತ್ಯುಪಕಾರ ಮಾಡಲೋ ಎಂಬಂತೆ 'ಗೋಕರ್ಣ' ಎಂಬ ಹೆಸರಿನ ಕ್ಷೇತ್ರಕ್ಕೆ ತಮ್ಮ ಸನ್ನಿಧಾನದಿಂದ ಶ್ರೀರುದ್ರದೇವರು ಶೋಭೆಯನ್ನುಂಟು ಮಾಡುತ್ತಿರುವರು ಎಂದು ಭಾವ. (ಉತ್ಪ್ರೇಕ್ಷಾಲಂಕಾರ)

೨. [1]ಗೋಕರ್ಣಯಾತ್ರೆಯನ್ನು ವಿಧ್ಯುಕ್ತವಾಗಿ ಮಾಡಿದ ವೈಷ್ಣವರ ಕರ್ಣಗಳಿಗೆ ರುದ್ರಾನುಗ್ರಹದಿಂದ ಹರಿಕಥಾಶ್ರವಣಯೋಗವು ಲಭಿಸಿ ಸದ್ಗತಿಯಾಗುವುದು ಎಂದರ್ಥ.

**ಪೂರ್ಣೇಂದುವರ್ಣ ಗೋಕರ್ಣಾಕಾರ ಮಾರಭಯಂಕರ ।**
**ಭವಾಯ ಭವ ಮೇ ದೇವ ಭವಾನೀಪ್ರಿಯ ಶಂಕರ ॥ ೮೨ ॥**

ಅ: **ಪೂರ್ಣೇಂದುವರ್ಣ** = ಪೂರ್ಣಚಂದ್ರನಂತಹ ಮೈಬಣ್ಣವುಳ್ಳ; **ಗೋಕರ್ಣಾಕಾರ** = ಗೋವಿನ ಕರ್ಣದಂತಹ ಆಕೃತಿಯುಳ್ಳ; **ಮಾರಭಯಂಕರ** = ಮನ್ಮಥನಿಗೆ ಭಯಂಕರನಾದ; **ಭವಾನೀಪ್ರಿಯ** = ಪಾರ್ವತಿಗೆ ಪ್ರಿಯನಾದ; **(ಹೇ) ಶಂಕರ ದೇವ !** = ಎಲೈ ರುದ್ರದೇವನೇ !; **(ತ್ವಂ** = ನೀನು); **ಮೇ** = ನನ್ನ; **ಭವಾಯ** = ಮಂಗಲಕ್ಕೆ; **ಭವ** = ಕಾರಣನಾಗು.

ಪೂರ್ಣಚಂದ್ರನಂತಹ ಮೈಬಣ್ಣದ, ಗೋವಿನ ಕರ್ಣದಂತಹ ಆಕೃತಿಯ, ಮನ್ಮಥನಿಗೆ ಭಯಹುಟ್ಟಿಸುವ, ಪಾರ್ವತಿಗೆ ಪ್ರಿಯನಾದ, ಎಲೈ ರುದ್ರದೇವನೇ ! ನೀನು ನನ್ನ ಮಂಗಲಕ್ಕೆ ಕಾರಣನಾಗು.

ವಿ: ೧. ಗೋಕರ್ಣದಲ್ಲಿನ ಶಿವಲಿಂಗವು ಗೋಕರ್ಣಾ(ಹಸುವಿನ ಕಿವಿ)ಕಾರದ ಎಂಬುದು ಮತ್ತೊಂದು ವಿಶೇಷ. ಹೀಗೆ ಗೋಕರ್ಣಾಕಾರದ ಲಿಂಗದಲ್ಲಿರುವ ಶ್ರೀರುದ್ರದೇವರನ್ನು ಧವಳವರ್ಣ, ಕಾಮಹರ,ಭವಾನೀಪ್ರಿಯ ಮೊದಲಾಗಿ ಸ್ತುತಿಸಿ, ನಮಗೆ ಮಂಗಲವನ್ನು ಕರುಣಿಸುವಂತೆ ಪ್ರಾರ್ಥಿಸಿಕೊಳ್ಳಬೇಕು ಎಂದು ಭಾವ[2].

೨. 'ಮಾರಭಯಂಕರ'ರಾಗಿದ್ದು 'ಭವಾನೀಪ್ರಿಯ'ರಾಗಿರುವುದು ಶ್ರೀರುದ್ರದೇವರ ದಾಂಪತ್ಯದ ಪಾವಿತ್ರ್ಯಕ್ಕೆ ದ್ಯೋತಕ.

## ವಿಘ್ನೇಶ್ವರ (ಗೋಕರ್ಣಕ್ಷೇತ್ರ)

**ದುಷ್ಟಾನಾಂ ವಿಘ್ನಕರ್ತಾ ಸುಚರಿತಸುಜನಸ್ತೋಮವಿಘ್ನಾಪಹರ್ತಾ**
**ತಸ್ಮಾದ್ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।**

---

೧. ರೌಪ್ಯಪೀಠಂ ಕುಮಾರಾದ್ರಿಃ ಕುಂಭಾಸಿಶ್ಚ ಧ್ವಜೇಶ್ವರಃ ।
ಕ್ರೋಡಗೋಕರ್ಣಮೂಕಾಂಬಾಃ ಸಪ್ತೈತೇ ಮೋಕ್ಷದಾಯಕಾಃ ॥
- ಎಂಬ ಪರಶುರಾಮಕ್ಷೇತ್ರದ ಸಪ್ತಕ್ಷೇತ್ರಗಳಲ್ಲಿ ಈ 'ಗೋಕರ್ಣವೂ' ಒಂದು.

೨. ಕರುಣಿಸೆಮಗೆ ಸದಾ ಸುಮಂಗಳವ । - ಹರಿಕಥಾಮೃತಸಾರ (೧/೯)

**ಪೌಲಸ್ತ್ಯೇಚ್ಛಾಂತರಾಯಃ ಸುರಮುನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ**
**ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿ ಗೌರೀತನೂಜಃ ॥ ೮೫ ॥**

ಅ: ಅಹಂ = ನಾನು; ದುಷ್ಟಾನಾಂ = ದುರ್ಜನರಿಗೆ; ವಿಘ್ನಕರ್ತಾ = ವಿಘ್ನಗಳನ್ನುಂಟು ಮಾಡುವವನೂ; ಸುಚರಿತಸುಜನಸ್ತೋಮವಿಘ್ನಾಪಹರ್ತಾ = ಪುಣ್ಯಶೀಲರಾದ ಸಜ್ಜನ ಸಮೂಹಕ್ಕೆ ವಿಘ್ನಪರಿಹಾರಕನೂ(ಆಗಿರುವೆನೋ) ತಸ್ಮಾತ್ = ಆಗಿರುವ ಕಾರಣದಿಂದ; ವಿಘ್ನಾಧಿಪಃ = 'ವಿಘ್ನೇಶ' ಎಂಬುದಾಗಿ; ಮತಃ = ಪ್ರಸಿದ್ಧನಾಗಿರುವೆನು; ಇತಿ = ಹೀಗೆಂದು; ಸುಧಿಯಾಂ = ಜ್ಞಾನಿಗಳಿಗೆ; ಸ್ಪಷ್ಟಂ = ಸ್ಪಷ್ಟವಾಗಿ; ಆಜ್ಞಾಪನಾಯ = ಚೆನ್ನಾಗಿ ತಿಳಿಸಿಕೊಡುವ ಸಲುವಾಗಿ; ಪೌಲಸ್ತ್ಯೇಚ್ಛಾಂತರಾಯಃ = ಪುಲಸ್ತ್ಯವಂಶದಲ್ಲಿ ಜನಿಸಿದ ಕಾರಣ ಪೌಲಸ್ತ್ಯನೆನ್ನಿಸಿದ ರಾವಣನ ಇಚ್ಛೆಗೆ ವಿಘ್ನವನ್ನುಂಟುಮಾಡಿದವನೂ; ಸುರಮುನಿನಿಕರಾಭೀಷ್ಟಸಂಪ್ರಾಪ್ತ್ಯು-ಪಾಯಃ = ಸುರರು ಮತ್ತು ಮುನಿಗಳ ಸಮುದಾಯಕ್ಕೆ ಅಭೀಷ್ಟಪ್ರಾಪ್ತಿಯ ಉಪಾಯವೂ(ಆಗಿರುವ); ಗೌರೀತನೂಜಃ = ಪಾರ್ವತೀಪುತ್ರನಾದ; ವಿಘ್ನಾಧಿರಾಜಃ = ವಿಘ್ನಗಳಿಗೆ ಮಹಾಸ್ವಾಮಿ ಎನ್ನಿಸಿರುವ ವಿನಾಯಕನು; ಭೂರಿ = ವಿಪುಲವಾದ; ಶ್ರೇಯಃ = ಶ್ರೇಯಸ್ಸ(ಪುಣ್ಯವ)ನ್ನೂ; ಸತತಂ = ಸದಾ; ಪ್ರದಿಶತು = ನೀಡಲಿ.

''ನಾನು ದುರ್ಜನರಿಗೆ ವಿಘ್ನಕಾರಕ; ಸಜ್ಜನವೃಂದಕ್ಕೆ ವಿಘ್ನಪರಿಹಾರಕ; ಇದರಿಂದಾಗಿ 'ವಿಘ್ನೇಶ' ಎಂಬುದಾಗಿ ಪ್ರಸಿದ್ಧನಾಗಿರುವೆ'' ಎಂಬುದಾಗಿ ಜ್ಞಾನಿಗಳಿಗೆ ಸ್ಪಷ್ಟವಾಗಿ ತಿಳಿಸಿಕೊಡಲೆಂದು ಪುಲಸ್ತ್ಯವಂಶದ ರಾವಣನ ಬಯಕೆಗೆ ವಿಘ್ನ ಒಡ್ಡಿದ, ಸುರಮುನಿಗಳ ಸಮುದಾಯಕ್ಕೆ ಅಭೀಷ್ಟಪ್ರಾಪ್ತಿಯ ಉಪಾಯನಾದ, ಪಾರ್ವತೀ-ಪುತ್ರನಾದ, ವಿಘ್ನಾಧಿರಾಜನು ನಮಗೆ ವಿಪುಲವಾದ ಶ್ರೇಯಸ್ಸನ್ನು ಸದಾ ನೀಡಲಿ.

ವಿ : ೧. ಗೋಕರ್ಣದಲ್ಲಿ ಮಹಾಬಲೇಶ್ವರದೇವಸ್ಥಾನದ ಎಡಭಾಗದಲ್ಲಿರುವ ಗಣೇಶ-ನನ್ನು ಶ್ರೀವಾದಿರಾಜಸ್ವಾಮಿಗಳು ಈ ಶ್ಲೋಕದಲ್ಲಿ ಸ್ತುತಿಸಿರುವರು.

೨. ರಾವಣನ ತಪಸ್ಸಿಗೆ ಪ್ರಸನ್ನನಾದ ಶಿವನು ತನ್ನ ಸನ್ನಿಧಾನದಿಂದ ಕೂಡಿದ ಲಿಂಗವನ್ನು ಅವನಿಗೆ ಕೊಟ್ಟು, 'ಇದು ನಿನ್ನ ಮನೆಯಲ್ಲಿರುವವರೆಗೂ ನಿನ್ನನ್ನು ಯಾರೂ ಗೆಲ್ಲಲಾರರು; ಆದರೆ ಈ ಲಿಂಗವನ್ನು ಮಾರ್ಗದಲ್ಲಿ ಎಲ್ಲೂ ಕೆಳಕ್ಕೆ ಇರಿಸಬಾರದು; ಒಂದು ವೇಳೆ ಇರಿಸಿದೆಯಾದಲ್ಲಿ ಅದನ್ನು ಮತ್ತೆ ಮೇಲಕ್ಕೆತ್ತಲು ಸಾಧ್ಯವಾಗುವುದೇ ಇಲ್ಲ' ಎಂದು ನುಡಿದರಂತೆ; ರಾವಣನು ಅದನ್ನು ತೆಗೆದುಕೊಂಡು ಹೋಗುತ್ತಿದ್ದಾಗ ಗೋಕರ್ಣದ ಬಳಿ ಅವನಿಗೆ ಮೂತ್ರಬಾಧೆಯುಂಟಾಗಲು ಅಲ್ಲಿಗೆ ಬಂದ ಗಣೇಶನ ಕೈಗೆ ಅದನ್ನು ಕೊಟ್ಟು ತೆರಳಿದನಂತೆ. ದೇವಕಾರ್ಯಕ್ಕಾಗಿಯೇ ಬಂದಿದ್ದ ಗಣೇಶನು ಆ ಲಿಂಗವನ್ನು ನೆಲದ ಮೇಲಿಟ್ಟನಂತೆ, ಹೀಗೆ ಕೊನೆಗೂ ರಾವಣನ ಕೈಗೆ ಸಿಕ್ಕದ ಆ ಲಿಂಗವು ಗೋಕರ್ಣದಲ್ಲೇ ಉಳಿದು 'ಗೋಕರ್ಣೇಶ್ವರ'ವಾಯಿತು ಎಂದು ಪೌರಾಣಿಕ ಕಥೆಯಿದೆ[೧]. ಆ ಹಿನ್ನೆಲೆಯಲ್ಲಿ ತಿಳಿಯುವ ತತ್ತ್ವವನ್ನು ಶ್ರೀವಾದಿರಾಜರು ಇಲ್ಲಿ ವಿವರಿಸಿರುವರು.

---

೧. ಪುರಾ ಕಿಲಾ ರಾವಣತಪಸಾ ಪ್ರಸನ್ನಃ ಶಿವಃ ಸ್ವಸನ್ನಿಧಾನಯುಕ್ತಲಿಂಗಂ ದತ್ವಾ ಏತಲ್ಲಿಂಗಂ ಯಾವತ್ಕಾಲಪರ್ಯಂತಂ ಭವದ್ಗೃಹೇ ತಿಷ್ಠತಿ ತಾವತ್ಕಾಲಪರ್ಯಂತಂ ತ್ವಾಂ ನ ಕೋऽಪಿ ಜೇಷ್ಯತಿ।

೩. ರಾವಣನು ಆಗ ಕೋಪದಿಂದ ಗಣೇಶನನ್ನು ತಲೆಯ ಮೇಲೆ ಅಪ್ಪಳಿಸಿದನೆಂದೂ, ಅವನ ಪೆಟ್ಟಿಗೆ ಗಣೇಶನು ಲಿಂಗವಿದ್ದ ಸ್ಥಳದಿಂದ ನಾಲ್ವತ್ತು ಹೆಜ್ಜೆ ಹಿಂದೆ ಸರಿದನೆಂದೂ, ಅವನ ತಲೆಯ ಮೇಲೆ ಇಂದೂ ರಾವಣನು ಅಪ್ಪಳಿಸಿದ ಗುರುತು ಉಳಿದುಕೊಂಡಿದೆಯೆಂದೂ ಹೇಳುವರು. ಗೋಕರ್ಣದಲ್ಲಿ ಈ ಗಣೇಶನನ್ನು ಮೊದಲು ದರ್ಶನಮಾಡಿ ಅನಂತರವೇ ಶಿವನನ್ನು ದರ್ಶನ ಮಾಡಬೇಕೆಂದೂ, ಇಲ್ಲವಾದಲ್ಲಿ ಗೋಕರ್ಣದ ಯಾತ್ರೆಯು ನಿಷ್ಫಲವಾಗುವುದೆಂದೂ ಸಹ ಪ್ರಸಿದ್ಧಿಯುಂಟು.

೪. ಹೀಗೆ ವಿಘ್ನೇಶ್ವರನು ರಾವಣನ ಇಚ್ಛೆಗೆ ಪ್ರತಿಕೂಲವನ್ನೂ, ದೇವಮುನಿಗಳ ಇಚ್ಛೆಗೆ ಅನುಕೂಲವನ್ನೂ ಉಂಟುಮಾಡಿದ್ದರಿಂದಾಗಿ 'ಆತನು ದುರ್ಜನರಿಗೆ ವಿಘ್ನಪ್ರಾಪಕನೂ, ಸಜ್ಜನರಿಗೆ, ವಿಘ್ನನಾಶಕನೂ ಆಗಿರುವುದರಿಂದಲೇ ವಿಘ್ನೇಶ್ವರ ಎಂದು ಪ್ರಸಿದ್ಧನಾಗಿರುವನೆಂಬ ತತ್ತ್ವವೂ' ಸ್ವತಃ ಆತನಿಂದಲೇ ತಿಳಿಸಲ್ಪಟ್ಟಿದೆ; ಇಂತಹ ಗಣೇಶನು ನಮಗೆ ಸದಾ ವಿಶೇಷ ಶ್ರೇಯಸ್ಸನ್ನು ಕರುಣಿಸಲಿ ಎಂದು ಭಾವ[೧].

೫. ಒಂದು ವಸ್ತುವಿಗೆ [೨]ಅಧಿಪತಿ ಎನ್ನಿಸಬೇಕಾದರೆ, ಅದನ್ನು ಅವನು ಸ್ವೇಚ್ಛೆಯಿಂದ ಕೊಡಲೂ, ನಿರಾಕರಿಸಲೂ ಸಮರ್ಥನಾಗಿದ್ದರೆ ಮಾತ್ರ ಸಾಧ್ಯ;

೬. [೩]ಗಣೇಶನು ಹೀಗೆ ವಿಘ್ನಪರಿಹಾರಕನೂ ಮತ್ತು ವಿಘ್ನಪ್ರಾಪಕನೂ ಆಗಿರುವುದರಿಂದಲೇ ಆತನಿಗೆ 'ವಿಘ್ನಾಧಿಪ'ನೆಂಬ ಹೆಸರು ಯುಕ್ತವಾಗಿದೆ ಎಂದು ಭಾವ.

---

ಲಿಂಗಂ ತು ತ್ವಯಾ ಮಾರ್ಗೇ ನ ಸ್ಥಾಪನೀಯಂ। ಸ್ಥಾಪಿತಂ ಚೇತ್ ಪುನರ್ನೇತುಂ ನ ಶಕ್ಯ ಇತ್ಯುಕ್ತ್ವಾ ದತ್ತವಾನ್ । ರಾವಣೋಽಪಿ ಲಿಂಗಂ ಗೃಹೀತ್ವಾ ಗಚ್ಛನ್ ಗೋಕರ್ಣೇ ಮೂತ್ರಪೀಡಿತಃ ಸನ್ ವಿಘ್ನೇಶ್ವರಹಸ್ತೇ ತಲ್ಲಿಂಗಂ ದತ್ವಾ ಮೂತ್ರೋತ್ಸರ್ಜನಾರ್ಥಂ ಗತವಾನ್ । ತತೋ ಭವಿಷ್ಯದ್ದೇವಕಾರ್ಯಂ ವಿಜಾನತಾ ವಿಘ್ನೇಶ್ವರೇಣ ಹಸ್ತಗತಂ ಲಿಂಗಂ ಭೂಮೌ ನಿಕ್ಷಿಪ್ತಮಿತಿ ಪೌರಾಣಿಕಕಥಾಪ್ರಮಾಣಕೋಽಯಂ ಶ್ಲೋಕಾರ್ಥಃ। - ವ್ಯಾಖ್ಯಾನ

೧. ಶ್ರೀವಾದಿರಾಜರು ತಮ್ಮ 'ಸರಸಭಾರತೀವಿಲಾಸ' ಗ್ರಂಥದಲ್ಲೂ ಗಣೇಶನನ್ನು ಸ್ತುತಿಸಿದ್ದು ಅಲ್ಲಿಯ ಶ್ಲೋಕಗಳು ಹೀಗಿವೆ:
ಕರಸ್ಥಬೀಜಪೂರಾಕ್ತಶುಂಡಾದಂಡಪಿಚಂಡಿಲ।
ವಿಘ್ನಾಧಿರಾಜ ಹಸ್ತೀಂದ್ರಮಸ್ತಕಾಯಾಸ್ತು ತೇ ನಮಃ॥
ಹೇರಂಬ ಕುಂಭಲಸಿತಾಮಲಕುಂಕುಮಾಂಕ ಮಾರಾರಿಪುತ್ರ ಕರಿವಕ್ತ್ರ ಪವಿತ್ರಗಾತ್ರ।ಕಾರುಣ್ಯರೂಪ ಸುಕಲಾಪ ಮಹಾಪ್ರತಾಪ ಪ್ರಾರಬ್ಧಕಾರ್ಯಮುರುಧೈರ್ಯ ಭವೇದವಿಘ್ನಮ್ ॥ (೨/೪೨,೪೩)

೨. ಯೋ ಯತ್ ಸ್ವೇಚ್ಛಯೈವ ದದಾತಿ ಸ್ವೇಚ್ಛಯೈವ ನ ದದಾತಿ ಚ ಸ ತದಧಿಪಃ।
ಅಹಂ ಚ ಸ್ವೇಚ್ಛಯೈವ ವಿಘ್ನಾನ್ ದದಾಮಿ ನ ದದಾಮಿ ಚ। ಅತಶ್ಚ 'ವಿಘ್ನಾಧಿಪ' ಇತಿ ಭಾವಃ।
-ವ್ಯಾಖ್ಯಾನ

೩. ಶ್ರೀವಿಘ್ನೇಶಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವಿಶ್ವಮೂರ್ತಿಯನ್ನೇ ಉಪಾಸಿಸಬೇಕಾದ್ದು ವೈಷ್ಣವರ ಕರ್ತವ್ಯ.

## ಮಹಾಲಕ್ಷ್ಮೀ (ಕೊಲ್ಹಾಪುರ ಕ್ಷೇತ್ರ)

ಅಮಾನವನಜಸ್ಥಾನಸರಸೀಕುಲಸಂಕುಲೇ ।
ರಮಾ ಕೊಲ್ಹಾಪುರಕ್ಷೇತ್ರೇ ವಸತೀತಿ ಕಿಮದ್ಭುತಮ್ ॥ ೮೪ ॥

ಅ: ಅಮಾನವನಜಸ್ಥಾನಸರಸೀಕುಲಸಂಕುಲೇ = ಅಸಂಖ್ಯ ಕಮಲಪುಷ್ಪಗಳಿಗೆ ನೆಲೆಯಾದ ಅನೇಕ ಸರೋವರಗಳಿಂದ ತುಂಬಿರುವ; [೧]ಕೊಲ್ಹಾಪುರಕ್ಷೇತ್ರೇ = ಕೊಲ್ಹಾಪುರ ಕ್ಷೇತ್ರದಲ್ಲಿ; ರಮಾ = ಮಹಾಲಕ್ಷ್ಮಿಯು; ವಸತಿ ಇತಿ = ನೆಲೆಸಿರುವರು ಎಂಬಲ್ಲಿ; ಕಿಂ ಅದ್ಭುತಂ = ಆಶ್ಚರ್ಯವೇನಿದೆ?

ಅಸಂಖ್ಯ ಕಮಲಪುಷ್ಪಗಳಿಗೆ ನೆಲೆಯಾದ ಅನೇಕ ಸರೋವರಗಳಿಂದ ತುಂಬಿರುವ, ಕೊಲ್ಹಾಪುರ ಕ್ಷೇತ್ರದಲ್ಲಿ ಮಹಾಲಕ್ಷ್ಮಿಯು ನೆಲೆಸಿರುವಳು ಎಂಬಲ್ಲಿ ಆಶ್ಚರ್ಯವೇನಿದೆ?

ವಿ: ೧. ಕೊಲ್ಹಾಪುರದಲ್ಲಿ ಪಂಚಗಂಗಾತೀರ್ಥ ಮೊದಲಾದ ಅನೇಕ ಸರೋವರಗಳಿದ್ದು[೨] ಅವುಗಳಲ್ಲಿ ಕಮಲಪುಷ್ಪಗಳು ವಿಶೇಷವಾಗಿ ಬೆಳೆಯುತ್ತವೆ. ಕಮಲಪುಷ್ಪವು ಮಹಾಲಕ್ಷ್ಮಿಯ ವಾಸಸ್ಥಾನವೆಂಬುದು ಶಾಸ್ತ್ರಸಿದ್ಧವಾದ ವಿಚಾರ; 'ಪದ್ಮಾ ಪದ್ಮಾಲಯಾ' ಮೊದಲಾಗಿ ವೇದಗಳಲ್ಲೂ ಕೋಶಗಳಲ್ಲೂ ಉಲ್ಲೇಖವಿದೆ. ಹೀಗೆ ಅಸಂಖ್ಯ ಪದ್ಮಗಳಿಗೆ ನೆಲೆಯಾದ ಸರೋವರಗಳಿಂದ ತುಂಬಿದ ಕೊಲ್ಹಾಪುರ ಕ್ಷೇತ್ರದಲ್ಲಿ ಮಹಾಲಕ್ಷ್ಮಿಯು ನೆಲೆಸಿರುವುದು ತೀರಾ ಸಹಜ; ಕಮಲಗಳಿರುವಲ್ಲಿ ಕಮಲೆಯಿರುವುದು ಏನಾಶ್ಚರ್ಯ! ಎಂದು ಭಾವ[೩].

---

೧. ಕೊಲ್ಹಾಪುರವು ಇಂದು ಮಹಾರಾಷ್ಟ್ರಕ್ಕೆ ಸೇರಿರುವ ಒಂದು ಅಪೂರ್ವಕ್ಷೇತ್ರ; ಮೀರಜ್‌ನಿಂದ ೬೦ ಕಿ.ಮೀ. ದೂರದಲ್ಲಿದೆ, ವೈಕುಂಠದಿಂದ ಮಹಾಲಕ್ಷ್ಮಿಯು ಕೊಲ್ಹಾಪುರಕ್ಕೂ, ಶ್ರೀನಾರಾಯಣನು ವೇಂಕಟಾದ್ರಿಗೂ ಆಗಮಿಸಿದ ವಿವರ ಭವಿಷ್ಯೋತ್ತರಪುರಾಣ ವೇಂಕಟೇಶಮಾಹಾತ್ಮ್ಯದಲ್ಲಿದೆ. ಶ್ರೀಮದಾಚಾರ್ಯರು ಮಹಾಭಾರತತಾತ್ಪರ್ಯನಿರ್ಣಯದಲ್ಲಿ 'ಮಹಾಲಕ್ಷ್ಮ್ಯಾಃ ಕ್ಷೇತ್ರಂ' ಎಂಬುದಾಗಿ ಇದನ್ನು ಉಲ್ಲೇಖಿಸಿರುವರು(೧೪/೨೮); ಶ್ರೀಕೃಷ್ಣನು ಇಲ್ಲಿಗೆ ಆಗಮಿಸಿ ಶೃಗಾಲವಾಸುದೇವನನ್ನು ಸಂಹರಿಸಿದ ವಿವರ ಭಾಗವತ, ಮಹಾಭಾರತತಾತ್ಪರ್ಯನಿರ್ಣಯಾದಿಗಳಲ್ಲಿದೆ. 'ಕರವೀರ' ಎಂದು ಪುರಾಣಗಳಲ್ಲಿ ವರ್ಣಿತವಾದ ಈ ಕ್ಷೇತ್ರದ ಮಾಹಾತ್ಮ್ಯವು ಸ್ಕಾಂದಪುರಾಣದ ಸಹ್ಯಾದ್ರಿ ಖಂಡದಲ್ಲಿ ಉಕ್ತವಾಗಿದೆ.

೨. ಆದರೆ ಇಂದು ಕೊಲ್ಹಾಪುರಕ್ಷೇತ್ರದಲ್ಲಿ ಅಷ್ಟಾಗಿ ಸರೋವರಗಳು ಕಂಡುಬರುವುದಿಲ್ಲ. ಬೆಂಗಳೂರು, ಮೊದಲಾದ ಅನೇಕ ಸ್ಥಳಗಳಲ್ಲಿನ ನೂರಾರು ಕೆರೆಗಳು ವಸತಿಯ ಬಡಾವಣೆಗಳಾಗಿರುವಂತೆ, ಇಲ್ಲೂ ಸಹ ಪ್ರಾಚೀನ ಸರೋವರಗಳೆಲ್ಲಾ ಬಡಾವಣೆಗಳಾಗಿ ಪರಿವರ್ತಿತವಾಗಿವೆ ಎಂಬುದು ಸ್ಪಷ್ಟ. ಅಲ್ಲಿನ ಹೆಚ್ಚಿನ ಬಡಾವಣೆಗಳಿಗೆ ತೀರ್ಥಗಳ ಹೆಸರುಗಳೇ ಇರುವುದು ಈ ಅಂಶವನ್ನು ದೃಢಪಡಿಸುತ್ತದೆ. ಮಹಾಲಕ್ಷ್ಮೀ ದೇವಸ್ಥಾನದ ಹಿಂಭಾಗದಲ್ಲಿ ಒಂದು ವಿಶಾಲವಾದ ಸರೋವರವಿದ್ದು ಅಲ್ಲಿ ಇಂದೂ ಸಹ ಅಸಂಖ್ಯ ಕಮಲಪುಷ್ಪಗಳನ್ನು ಕಾಣಬಹುದು.

೩. ಕಮಲಾಯಾಃ ಕಮಲವತಿ ಸ್ಥಲೇ ನಿವಾಸಸ್ಯಾನಾಶ್ಚರ್ಯತಮತ್ವಾದಿತಿ ಭಾವಃ । -ವ್ಯಾಖ್ಯಾನ

೨. ಕೊಲ್ಹಾಪುರ: ಕೊಲ್ಹಾಪುರದಲ್ಲಿ ಶಿವಾ, ಭದ್ರಾ, ಭೋಗವತೀ, ಕುಂಭೀ ಮತ್ತು ಸರಸ್ವತೀ ಎಂಬ ಐದು ನದಿಗಳಿರುವುದರಿಂದ ಅದಕ್ಕೆ 'ಪಂಚಗಂಗಾ' ಕ್ಷೇತ್ರ ಎಂದು ಪ್ರಸಿದ್ಧಿ.

**ಧ್ಯಾತಾಽಽಧ್ಯಾ ತಾಂತಶಾಂತಪ್ರಿಯಜನವಿಭವಾಯಾನ್ವಹಂ ಯಾ ಹೃದಂತಃ**
**ಖ್ಯಾತಾಖ್ಯಾ ತಾದೃಶಾಭ್ಯುನ್ನತಿವಿತರಣಶಕ್ತ್ಯಾಲಯಾ ಯಾ ಪಯೋಬ್ಧೇಃ।**
**ಜಾತಾಽಜಾತಾದಿದೇವವ್ರಜಮನುಜತತೇಃ ಶ್ರೇಯಸೇ ಭೂಯಸೇ ಸಾ**
**ಮಾತಾ ಮಾ [1]ತಾಪಸಾರಾಧಿತಪದಕಮಲಾಽಧೋಕ್ಷಜಪ್ರೇಯಸೀ ಸ್ಯಾತ್ ೮॥**

ಅ: [2]ಆಧ್ಯಾ ತಾಂತಶಾಂತಪ್ರಿಯಜನವಿಭವಾಯ = ಮನೋವ್ಯಥೆಯಿಂದ ಬಹಳವಾಗಿ ಬಳಲಿದ ಜ್ಞಾನಿಗಳಾದ ಭಕ್ತಜನರ ಐಶ್ವರ್ಯಕ್ಕೋಸ್ಕರ; ಯಾ = ಯಾರು; ಹೃದಂತಃ = ಹೃದಯಮಧ್ಯದಲ್ಲಿ; ಅನ್ವಹಂ = ಪ್ರತಿದಿನವೂ; ಧ್ಯಾತಾ = ಧ್ಯಾನಿಸಲ್ಪಟ್ಟಿರುವಳೋ; ಖ್ಯಾತಾಖ್ಯಾ = ಶ್ರೀಭೂ ಮಂಗಲದೇವತಾ ಮೊದಲಾದ ಪ್ರಸಿದ್ಧನಾಮಗಳನ್ನುಳ್ಳ; ಯಾ = ಯಾರು; ತಾದೃಶಾಭ್ಯುನ್ನತಿವಿತರಣಶಕ್ತ್ಯಾಲಯಾ = ತನ್ನ ಹೆಸರುಗಳಿಗೆ ತಕ್ಕ ಅಭ್ಯುದಯವನ್ನು ಕರುಣಿಸುವ ಸಾಮರ್ಥ್ಯವನ್ನು ಹೊಂದಿರುವಳೋ; ಪಯೋಬ್ಧೇಃ = ಕ್ಷೀರಸಾಗರದಿಂದ; ಜಾತಾ = ಪ್ರಾದುರ್ಭವಿಸಿದಳೋ; ಯಾ = ಯಾರು; ಅಜಾತಾದಿದೇವವ್ರಜಮನುಜ-ತತೇಃ = ವಿಷ್ಣುವಿನ ನಾಭಿಕಮಲದಿಂದ ಜನಿಸಿದ ಚತುರ್ಮುಖಬ್ರಹ್ಮನೇ ಮೊದಲಾದ ದೇವಸಮೂಹಕ್ಕೂ, ಮನುಷ್ಯ ಸಮೂಹಕ್ಕೂ; ಮಾತಾ = ತಾಯಿಯಾಗಿರುವಳೋ; ತಾಪಸಾರಾಧಿತಪದಕಮಲಾ = ಜ್ಞಾನಿಗಳಾದ ಬ್ರಹ್ಮಾದಿಗಳಿಂದಲೂ, ಮುನಿಗಳಿಂದಲೂ, ಆರಾಧಿತವಾದ ಪಾದಕಮಲಳಾಗಿರುವಳೋ; ಸಾ = ಅಂತಹ; ಅಧೋಕ್ಷಜಪ್ರೇಯಸೀ = ಅಧೋಕ್ಷಜನಿಗೆ ಅತ್ಯಂತ ಪ್ರಿಯಳಾದ; ಮಾ = ಮಹಾಲಕ್ಷ್ಮಿಯು; ಭೂಯಸೇ = ಬಹುತರವಾದ; ಶ್ರೇಯಸೇ = ಶ್ರೇಯಸ್ಸಿಗೆ; ಸ್ಯಾತ್ = (ಕಾರಣಳಾಗಿ) ಆಗಲಿ (ಯಮಕಾಲಂಕಾರ).

ಮನೋವ್ಯಥೆಯಿಂದ ಬಳಲುವ ಜ್ಞಾನಿಜನರಿಂದ ಒಳಿತಿಗೋಸ್ಕರ ಹೃದಯದಲ್ಲಿ ಸದಾ ಧ್ಯಾನಿಸಲ್ಪಡುವ, ತನ್ನ ಹೆಸರಿಗೆ ಒಪ್ಪುವಂತೆ ಅಭ್ಯುದಯ ನೀಡುವ ಸಾಮರ್ಥ್ಯಕ್ಕೆ ನೆಲೆಯಾದ, ಕ್ಷೀರಸಾಗರದಿಂದ ಪ್ರಾದುರ್ಭವಿಸಿದ, ಬ್ರಹ್ಮಾದಿದೇವತೆ-ಗಳಿಗೂ ಮನುಕುಲಕ್ಕೂ ಜನನಿಯಾದ, ತಪಸ್ವಿಜನರಿಂದ ಆರಾಧಿತ

---

೧. 'ತಾಪಸಾರಾಧಿತಾಪದಕಮಲಾಽಧೋಕ್ಷಜಪ್ರೇಯಸೀ' - ಎಂದು ಒಂದು ಪದವನ್ನಾಗಿಯೂ ಇದನ್ನು ಅರ್ಥಮಾಡಿಕೊಳ್ಳಬಹುದು, ಆಗ ಇದಕ್ಕೆ 'ಜ್ಞಾನಿಗಳಾದ ಬ್ರಹ್ಮಾದಿಗಳಿಂದ ಆರಾಧಿತಪಾದ-ಕಮಲನಾದ ಅಧೋಕ್ಷಜನಿಗೆ ಅತ್ಯಂತ ಪ್ರಿಯಳಾಗಿರುವ' ಎಂದು ಅರ್ಥ.

೨. "ಯಾ, ಆಧ್ಯಾ ತಾಂತಶಾಂತಪ್ರಿಯಜನವಿಭವಾಯ ಅನ್ವಹಂ ಹೃದಂತಃ ಧ್ಯಾತಾ, ಖ್ಯಾತಾಖ್ಯಾ (ಯಾ) ತಾದೃಶಾಭ್ಯುನ್ನತಿವಿತರಣಶಕ್ತ್ಯಾಲಯಾ, (ಯಾ) ಪಯೋಬ್ಧೇಃ ಜಾತಾ, (ಯಾ) ಅಜಾತಾದಿ-ದೇವವ್ರಜಮನುಜತತೇಃ ಮಾತಾ, (ಯಾ) ತಾಪಸಾರಾಧಿತಪದಕಮಲಾ, (ಯಾ) ಅಧೋಕ್ಷಜ-ಪ್ರೇಯಸೀ, ಸಾ, ಮಾ, ಭೂಯಸೇ, ಶ್ರೇಯಸೇ, ಸ್ಯಾತ್ ॥" - ಎಂಬುದು ಈ ಶ್ಲೋಕದ ಅನ್ವಯಕ್ರಮ.

ಪಾದಕಮಲಳಾದ, ಅಧೋಕ್ಷಜನಾದ ಶ್ರೀಹರಿಗೆ ಪ್ರಿಯಳಾದ ಮಹಾಲಕ್ಷ್ಮಿಯು ನಮ್ಮ ಬಹುತರ ಶ್ರೇಯಸ್ಸಿಗೆ ಕಾರಣಳಾಗಲಿ.

## ತಾಪಾ(ನದೀ)

**ಕಥಂ ತಾಪಾಭಿಧಾ ತೇಽಂಬ ತಾಪಘ್ನ್ಯಾ ಇತಿ ಸಂಶಯಃ।**
**ಅಘತಾಪಪ್ರದಾಯಿನ್ಯಾಸ್ತವ ಸಂದರ್ಶನಾದ್ಗತಃ ॥ ೮೬ ॥**

ಅ: (ಹೇ) ಅಂಬ ! = ಅಮ್ಮ (ತಾಪೀ ನದಿಯೇ!); **ತಾಪಘ್ನ್ಯಾಃ** = (ಸ್ನಾನಪಾನಾದಿಗಳಿಂದ) ಸಂತಾಪವನ್ನು ಪರಿಹರಿಸುವ; **ತೇ** = ನಿನಗೆ; **ತಾಪಾಭಿಧಾ** = 'ತಾಪಾ' ಎಂಬ ಹೆಸರು, **ಕಥಂ** (ಘಟತೇ) = ಹೇಗೆ ಹೊಂದುತ್ತದೆ; **ಇತಿ** = ಎಂಬ; **ಸಂಶಯಃ** = ಸಂಶಯವು; **ಅಘತಾಪಪ್ರದಾಯಿನ್ಯಾಃ** = ಪಾಪಗಳಿಗೆ ಸಂತಾಪವೀಯುವ; **ತವ** = ನಿನ್ನ; **ಸಂದರ್ಶನಾತ್** = ಸಂದರ್ಶನದಿಂದ; **ಗತಃ** = ಪರಿಹಾರವಾಯಿತು.

ಅಮ್ಮ (ತಾಪೀ ನದಿಯೇ)! ಸಂತಾಪವನ್ನು ಪರಿಹರಿಸುವ ನಿನಗೆ 'ತಾಪಾ' ಎಂಬ ಹೆಸರು ಹೇಗೆ ಹೊಂದೀತು? ಎಂಬ ಸಂದೇಹವು ಪಾಪಗಳಿಗೆ ಸಂತಾಪವೀಯುವ ನಿನ್ನ ಸಂದರ್ಶನದಿಂದ ಪರಿಹಾರವಾಯಿತು.

ವಿ: ೧. ಪಾಪಪರಿಹಾರಕತ್ವ ಮತ್ತು ತಾಪದಾಯಕತ್ವ ಎಂಬ ಎರಡು ನಿಮಿತ್ತಗಳಿಂದಲೂ 'ತಾಪಾ' ಎಂಬ ಹೆಸರು ಬರಲು ಸಾಧ್ಯ. ಪ್ರಕೃತ '[1]ತಾಪಾ' ಎಂಬ ನದಿಯು ಭಕ್ತರ ಸಂತಾಪವನ್ನು ಪರಿಹರಿಸುವ ಅಪೂರ್ವ ನದಿಗಳಲ್ಲೊಂದು; ಅಂದ ಮೇಲೆ ಇದಕ್ಕೆ ತಾಪದಾಯಕತ್ವವು ಹೇಗೆ ಕೂಡುತ್ತದೆ ಎಂದರೆ,ಅದು ತನ್ನನ್ನು ಸೇವಿಸುವವರಿಗೆ ತಾಪನಿವಾರಕವಾಗಿರುವಂತೆ, ಅವರ ಪಾಪಗಳಿಗೆ ದರ್ಶನಮಾತ್ರದಿಂದಲೇ ತಾಪದಾಯಕಳೂ ಆಗಿರುವುದೇ ಕಾರಣ ಎಂದು ಭಾವ[2].

೨. 'ತಾಪಾ' ನದಿಯ ಸಂದರ್ಶನ ಮಾತ್ರದಿಂದಲೇ ಪಾಪಬಾಧೆಯು ನಿವೃತ್ತಿಯಾಗುವುದು ಎಂದರ್ಥ. ಪಾಪಿಗಳಿಗೆ ಇದರ ದರ್ಶನಾದಿ ಭಾಗ್ಯವೂ ದುರ್ಲಭ ಎಂಬ ಧ್ವನಿಯೂ ಇಲ್ಲಿದೆ. ಸುಜನರಿಗೆ ವಿಘ್ನನಿವಾರಕನೂ ದುರ್ಜನರಿಗೆ ವಿಘ್ನದಾಯಕನೂ ಆದ 'ವಿಘ್ನೇಶ್ವರ' ಎನ್ನಿಸಿರುವ ಗಣೇಶನ ಬಗ್ಗೆ ಬಂದ ವಿವರವನ್ನು(ಶ್ಲೋ.೮೩) ಇಲ್ಲಿ ಸ್ಮರಿಸಬಹುದು.

---

೧. 'ತಪತೀ', 'ತಾಪೀ' ಎಂಬ ನಾಮಾಂತರಗಳನ್ನು ಹೊಂದಿರುವ ಈ ತಾಪಾನದಿಯು ವಿಂಧ್ಯಪರ್ವತದಲ್ಲಿ ಹುಟ್ಟಿ ಸೂರತ್‌ನಗರದ ಬಳಿ ಪಶ್ಚಿಮಸಮುದ್ರವನ್ನು ಸೇರುತ್ತದೆ. ಸೂರ್ಯ ಮತ್ತು ಛಾಯೆಯರ ಪುತ್ರಿಯಾದ ತಪತೀ ಮತ್ತು ಅವಳ ಸೋದರಿಯಾದ ಯಮುನೆ ಇಬ್ಬರೂ ಒಮ್ಮೆ ವಿವಾದದಲ್ಲಿ ನದಿಯಾದರೆಂದೂ ಪ್ರತೀತಿ; ತಪತಿಯು ಸಂವರಣನೆಂಬವನಿಂದ ಪಡೆದ ಮಗುವೇ'ಕುರು' ಎಂಬವನು; ಈತ ನಿರ್ಮಿಸಿದ ಕ್ಷೇತ್ರವೇ ಕುರುಕ್ಷೇತ್ರ. ಕುರು 'ತಾಪತ್ಯ' ನಾದ್ದರಿಂದ, ಆತನ ವಂಶದವರೆಗೂ 'ತಾಪತ್ಯ'ರೆಂದು ಹೆಸರಿದೆ (ಮಹಾಭಾರತ-ಆದಿಪರ್ವ(೬೭/೭೯) ಮತ್ತು ವಾಯುಪುರಾಣ (೨೧)); ಭವಿಷ್ಯತ್‌ಪುರಾಣದಲ್ಲೂ'ತಪತೀ' ನದಿಯ ಉಲ್ಲೇಖವುಂಟು.

೨. ಅಸ್ಮತ್ಸಂತಾಪಹರ್ತ್ರ್ಯಾ ಅಪಿ ಪಾಪಸಂತಾಪಹೇತುತ್ವಾತ್ ತಾಪೇತ್ಯಭಿಧಾನಂ ಘಟತೇ ಇತಿ ನಿಶ್ಚೀಯತೇ ಇತಿ ಭಾವಃ। ದರ್ಶನಮಾತ್ರೇಣ ಸಕಲಪಾಪಹಂತ್ರೀ ತಾಪಾನದೀತಿ ಭಾವಃ। -ವ್ಯಾಖ್ಯಾನ

೩. 'ನರ್ಮದಾ' ನದಿಯು 'ತಪತೀ' ನದಿಯ ಮತ್ತೊಂದು ರೂಪ ಎಂದೂ ಭವಿಷ್ಯತ್ಪುರಾಣದಲ್ಲಿದೆ(೬-೪೭)

## ನರ್ಮದಾ (ನದೀ)

ಸ್ವಾವಗಾಹನಮಾತ್ರೇಣ ಯಾ ಸ್ವರ್ಗವನಿತಾಜನೈಃ ।
ಸಹ ನರ್ಮಗಿರಾಂ ದಾತ್ರೀ ಭಜೇ ತಾಂ ನರ್ಮದಾನದೀಮ್ ॥ ೮೭ ॥

ಅ: ಯಾ = ಯಾವುದು; ಸ್ವಾವಗಾಹನಮಾತ್ರೇಣ = ತನ್ನಲ್ಲಿ ಮುಳುಗು ಹಾಕಿದ ಮಾತ್ರಕ್ಕೇ; ಸ್ವರ್ಗವನಿತಾಜನೈಃ ಸಹ = ಸ್ವರ್ಗಲೋಕದ ಅಪ್ಸರೆಯರೊಂದಿಗೆ; ನರ್ಮಗಿರಾಂ= ವಿಲಾಸವಚನಗಳನ್ನು; ದಾತ್ರೀ = ಒದಗಿಸುವುದೋ; ತಾಂ = ಅಂತಹ; ನರ್ಮದಾನದೀಂ = ನರ್ಮದಾನದಿಯನ್ನು; (ಅಹಂ) ಭಜೇ = ನಾನು ಸೇವಿಸುವೆನು.

ತನ್ನಲ್ಲಿ ಮಿಂದ ಮಾತ್ರದಿಂದಲೇ ಸ್ವರ್ಗಲೋಕದ ಅಪ್ಸರೆಯರೊಂದಿಗೆ ವಿಲಾಸ-ವಚನಗಳನ್ನು ಒದಗಿಸುವ ನರ್ಮದಾನದಿಯನ್ನು ನಾನು ಸೇವಿಸುವೆನು.

ವಿ: ೧. [೧]ನರ್ಮದಾನದಿಯ ಸ್ನಾನಮಾತ್ರದಿಂದಲೇ ಸ್ವರ್ಗವು ಲಭಿಸುವುದು ಎಂದು ಭಾವ. 'ನರ್ಮಗಿರಾಂ ದಾತ್ರೀ - ನರ್ಮದಾ' ಎಂಬುದಾಗಿ ನದಿಯ ಹೆಸರೇ ಇದರ ಸ್ವರ್ಗಪ್ರಾಪಕಸಾಮರ್ಥ್ಯವನ್ನು ತಿಳಿಸಿಕೊಡುತ್ತದೆ ಎಂದು ಅದರ ಹಿರಿಮೆಯ ಮರ್ಮವನ್ನು ಶ್ರೀವಾದಿರಾಜರು ಚಮತ್ಕಾರಪೂರ್ವಕ ಇಲ್ಲಿ ವರ್ಣಿಸಿರುವರು.

೨. ನರ್ಮದಾನದಿಯು ವಿಂಧ್ಯಪರ್ವತದ 'ಅಮರಕಂಟಕ' ಎಂಬಲ್ಲಿ ಹುಟ್ಟಿ ಭರೂಚ್ ಎಂಬಲ್ಲಿ ಪಶ್ಚಿಮಸಮುದ್ರವನ್ನು ಸೇರುತ್ತದೆ. ಸೋಮಪರೆಂಬ ಪಿತೃಗಳ ಮಾನಸಪುತ್ರಿಯಾದ ನರ್ಮದೆಯು ಸೂರ್ಯವಂಶದ ಪುರುಕುತ್ಸನನ್ನು ವಿವಾಹವಾಗಿ 'ತ್ರಸದ್ದಸ್ಯು'ವಿನ ತಾಯಿಯೆನ್ನಿಸಿದಳು ಎಂದು ಹರಿವಂಶದಲ್ಲಿದೆ (೮/೨೮); ನರ್ಮದಾ ನದಿಯು ಹುಟ್ಟುವ ಪರ್ವತಭಾಗಕ್ಕೆ 'ಮೇಕಲ'ವೆಂದು ಹೆಸರಿರುವುದರಿಂದ ಇದಕ್ಕೆ 'ಮೇಕಲಕನ್ಯಕಾ' ಎಂಬ ಹೆಸರೂ ಉಂಟು. 'ರೇವಾ' ಎಂಬುದು ಇದರ ನಾಮಾಂತರ. ನದೀತಾರತಮ್ಯದಲ್ಲಿ ಯಮುನಾನದಿಯ ಅನಂತರದ ಸ್ಥಾನ ಇದರದು[೨]. ಇದರಲ್ಲಿ ಮಹಾವಿಷ್ಣು'ವನ್ನು[೩] ಧ್ಯಾನಿಸಬೇಕು.

---

೧. ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರೀ ಜಲೇಽಸ್ಮಿನ್ ಸನ್ನಿಧಿಂ ಕುರು ॥
- ಎಂದು ಸುಪ್ರಸಿದ್ಧವಾಗಿರುವ ಸಪ್ತಮಹಾನದಿಗಳಲ್ಲಿ ಇದೂ ಒಂದು.

೨. 'ಕಾಲಿಂದ್ಯೂನಾ ತತೋಽಧಮಾ ನರ್ಮದಾ' -ಶ್ರೀರಾಘವೇಂದ್ರಸ್ವಾಮಿಗಳ ನದೀತಾರತಮ್ಯಸ್ತೋತ್ರ

೩. ನರ್ಮದಾಯಾಂ ಮಹಾವಿಷ್ಣುಂ ಚತುರ್ಬಾಹುಂ ನೃಪೋತ್ತಮಂ ।
- ನದ್ಯಭಿಮಾನಿದೇವತಾಸ್ತೋತ್ರ (ಬ್ರಹ್ಮಾಂಡಪುರಾಣ)

೩. ಅರ್ಜುನನು ತನ್ನ ಒಂದು ವರ್ಷದ ತೀರ್ಥಯಾತ್ರೆಯ ಕಾಲದಲ್ಲಿ ಇದನ್ನು ಸಂದರ್ಶಿಸಿದ್ದ ವಿವರ ಮಹಾಭಾರತದಲ್ಲಿದೆ; ಇದರ ತೀರದ 'ಭೃಗುಕಚ್ಚ'ವೆಂಬಲ್ಲಿ ಬಲಿಚಕ್ರವರ್ತಿಯು ಅಶ್ವಮೇಧಯಾಗಗಳನ್ನು ಮಾಡಿದನೆಂದೂ, ಶ್ರೀಹರಿಯು ವಾಮನ-ರೂಪದಿಂದ ಅಲ್ಲಿಗೆ ಬಂದು ಮೂರು ಹೆಜ್ಜೆ ಭೂಮಿಯನ್ನು ದಾನ ಕೇಳುವ ನೆಪದಲ್ಲಿ ಮೂರು ಲೋಕಗಳನ್ನು ಅಳೆದು, ಅವನನ್ನು ಉದ್ಧರಿಸಿದನೆಂದೂ ಭಾಗವತ ಪುರಾಣದಲ್ಲಿದೆ. ದಕ್ಷಪ್ರಜಾಪತಿಯು ಇದರ ಬಳಿಯ 'ಅಘಮರ್ಷಣತೀರ್ಥ'ದಲ್ಲಿ ಶ್ರೀಹರಿಯನ್ನು ಹಂಸಗುಹ್ಯಸ್ತೋತ್ರದಿಂದ ಸ್ತುತಿಸಿ ಸಾಕ್ಷಾತ್ಕಾರ ಮಾಡಿಕೊಂಡನೆಂದು ಭಾಗವತಪುರಾಣದಲ್ಲಿದೆ. ಮಹಾಭಾರತದಲ್ಲೂ ಪುರಾಣಗಳಲ್ಲೂ ಇದರ ಮಹತ್ತ್ವವು ವರ್ಣಿತವಾಗಿದೆ[೧]. ಇದು ತಪತಿ ನದಿಯ ಮತ್ತೊಂದು ರೂಪ ಎಂದು ಭವಿಷ್ಯತ್ಪುರಾಣದಲ್ಲಿದೆ.

## ಪ್ರಭಾಸ (ಕ್ಷೇತ್ರ)

**ಸರಸ್ವತೀಹಿರಣ್ಯಾಭ್ಯಾಂ ಸಂಗೋ ಯತ್ರಾಪರಾಂಬುಧೇಃ ।**
**ಪ್ರಭಾಸಾಖ್ಯಂ ತದಾಭಾತಿ ಪ್ರಭಾಽಽಸ ಹಿ ಯತೋ ಭುವಃ ॥ ೮೮ ॥**

ಅ: ಯತ್ರ = ಯಾವ ಕ್ಷೇತ್ರದಲ್ಲಿ; ಅಪರಾಂಬುಧೇಃ = ಪಶ್ಚಿಮಸಮುದ್ರಕ್ಕೆ; ಸರಸ್ವತೀಹಿರಣ್ಯಾಭ್ಯಾಂ (ಸಹ) = ಸರಸ್ವತೀ ಮತ್ತು ಹಿರಣ್ಯಾ ಎಂಬ ನದಿಗಳೊಂದಿಗೆ; ಸಂಗಃ = ಸಂಗಮವು; (ಜಾತಃ = ಉಂಟಾಗಿದೆಯೋ); ತತ್ = ಅಂತಹ; ಪ್ರಭಾಸಾಖ್ಯಂ = ಪ್ರಭಾಸವೆಂಬ ಕ್ಷೇತ್ರವು; ಆಭಾತಿ = ಬಹಳವಾಗಿ ಕಂಗೊಳಿಸುತ್ತಿದೆ[೨]; ಯತಃ = ಈ ಕ್ಷೇತ್ರದಿಂದ; ಭುವಃ = ಭೂಮಂಡಲಕ್ಕೆ; ಪ್ರಭಾ = ಶೋಭೆಯು; [೩]ಆಸ = ಉಂಟಾಯಿತು; ಹಿ = (ಇದು) ಪ್ರಸಿದ್ಧ.

ಪಶ್ಚಿಮಸಮುದ್ರದೊಂದಿಗೆ ಸರಸ್ವತೀ ಹಾಗೂ ಹಿರಣ್ಯಾ ನದಿಗಳ ಸಂಗಮ-ವುಂಟಾಗುವ ಪ್ರಭಾಸವೆಂಬ ಕ್ಷೇತ್ರವು ಬಹಳವಾಗಿ ಕಂಗೊಳಿಸುತ್ತಿದೆ; ಈ ಕ್ಷೇತ್ರದಿಂದ ಭೂಮಂಡಲಕ್ಕೆ ಶೋಭೆ ಲಭಿಸಿತಲ್ಲವೆ !

---

೧. ತ್ರೈಲೋಕ್ಯೇ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।
ಸರಿದ್ವನಾನಿ ಶೈಲೇಂದ್ರಾ ದೇವಾಶ್ಚ ಸಪಿತಾಮಹಾಃ ॥
ನರ್ಮದಾಯಾಂ ಕುರುಶ್ರೇಷ್ಠ ಸಹ ಸಿದ್ಧರ್ಷಿಚಾರಣೈಃ ।
ಸ್ನಾತುಮಾಯಾಂತಿ ಪುಣ್ಯೌಘೈಃ ಸದಾ ವಾರಿಷು ಭಾರತ ॥ -ಮಹಾಭಾರತ(೩/೮೯/೩-೪)
ಸದ್ಯಃ ಪುನಾತಿ ಗಾಂಗೇಯಂ ದರ್ಶನಾದೇವ ನಾರ್ಮದಮ್ । - ಪದ್ಮಪುರಾಣ

೨. ಏವಂ ತು ತೀರ್ಥಪ್ರವರಂ ಪೃಥಿವ್ಯಾಂ ಪ್ರಭಾಸನಾತ್ ತಸ್ಯ ತತಃ ಪ್ರಭಾಸಃ ॥
– ಮ.ಭಾ(ಶಲ್ಯ. ೩೫/೪೨)

೩. ಭೂಮೇಃ ಶೋಭಾಜನಕಮಿದಂ ಕ್ಷೇತ್ರಮಿತಿ ಭಾವಃ । –ವ್ಯಾಖ್ಯಾನ
ಆಸೇತಿ ಕ್ರಿಯಾಪದಪ್ರತಿರೂಪಕಮವ್ಯಯಂ । 'ಅನ್ಯಥಾ ಅಸ್ತೇರ್ಭೂ'ರಿತಿ (ಪಾ.ಸೂ. ೨/೪/೫೨)
ಭ್ವಾದೇಶೇತಿ ಬಭೂವೇತಿ ಸ್ಯಾತ್ । –ವ್ಯಾಖ್ಯಾನ

ವಿ: ೧. ಈ ಪ್ರಭಾಸವು ಭರತ ಭೂಮಿಯ ಅತ್ಯಂತ ಪವಿತ್ರಕ್ಷೇತ್ರಗಳಲ್ಲೊಂದು; ಇಂದು ಸೋಮನಾಥವೆಂದು ಪ್ರಸಿದ್ಧವಾಗಿರುವ ಸ್ಥಳವೇ ಈ ಪ್ರಭಾಸ. ಇದಕ್ಕೆ ಪೂರ್ವದಿಕ್ಕಿನಲ್ಲಿಸರಸ್ವತೀ, ಹಿರಣ್ಯಾ (ಮತ್ತು ಕಪಿಲಾ) ಎಂಬ ಮೂರು ನದಿಗಳು ಒಟ್ಟಾಗಿ ಅನಂತರ ಸಮುದ್ರವನ್ನು ಸೇರುತ್ತವೆ. ಈ ನದೀತ್ರಯಸಂಗಮವನ್ನು 'ಪ್ರಾಚೀತ್ರಿವೇಣೀ' ಎನ್ನುವರು(ಮೊದಲು ಕಪಿಲೆಯು ಸರಸ್ವತಿಯಲ್ಲೂ, ಅದು ಹಿರಣ್ಯೆಯಲ್ಲೂ ಸೇರಿ ಅನಂತರ ಅದು ಸಮುದ್ರವನ್ನು ಸೇರುವುದು). ಈ ಸರಸ್ವತಿಯು ಮಾತೃಗಯಾದಿಂದ ಹರಿದು ಬರುವ ಸರಸ್ವತೀನದಿಯೇ ಆಗಿದೆ.

೨. ಮಹಾಭಾರತಾದಿಗಳಲ್ಲಿ ಬಹಳವಾಗಿ ವರ್ಣಿತವಾಗಿರುವ ಈ ಕ್ಷೇತ್ರವನ್ನು ಅಲ್ಲಿ ಶ್ರೀಕೃಷ್ಣನನ್ನು ಪಾಂಡವರು ವನವಾಸಕಾಲದಲ್ಲಿ ತೀರ್ಥಯಾತ್ರಾಪ್ರಸಂಗದಲ್ಲಿ ಸಂದರ್ಶಿಸಿದ್ದರು. (ಮಹಾಭಾರತ೩/೮/೧೨ ಮ.ಭಾ.ತಾ.ನಿ. ೨೨/೨೫೦). ಚಂದ್ರನು ತಪಸ್ಸು ಮಾಡಿ ಸಿದ್ಧಿಗಳಿಸಿದ ಸ್ಥಳವೆಂಬ ಕಾರಣಕ್ಕಾಗಿ 'ಸೋಮನಾಥ'ವೆಂದೂ ಇದು ಪ್ರಸಿದ್ಧಿ ಪಡೆದಿದೆ. ಶ್ರೀಕೃಷ್ಣನು ಯಾದವಕುಲವನ್ನು ಉಪಸಂಹರಿಸಿದ ಸ್ಥಳವೂ ಇದೆ ಆಗಿದೆ(ಮ.ಭಾ.ತಾ.ನಿ.೩೨/೧೪). ವಿದುರನು ತೀರ್ಥಯಾತ್ರಾ ಪ್ರಸಂಗದಲ್ಲಿ ಈ ಕ್ಷೇತ್ರವನ್ನು ಸಂದರ್ಶಿಸಿದ ವಿವರ ಶ್ರೀಮದ್ಭಾಗವತಪುರಾಣದಲ್ಲಿಬಂದಿದೆ(ಸ್ಕಂದ ೩, ಅಧ್ಯಾಯ ೧).

೩. ಸ್ಕಾಂದಪುರಾಣದಲ್ಲಿ ಪ್ರಭಾಸಖಂಡವೆಂಬ ಭಾಗವು ಪೂರ್ಣವಾಗಿ ಈ ಪ್ರಭಾಸದ ವರ್ಣನೆಗೇ ಮೀಸಲಾಗಿದೆ. ಇದು ನಿತ್ಯಸ್ಮರಣೀಯ ಮಹಾಪುಣ್ಯಕ್ಷೇತ್ರಗಳಲ್ಲೊಂದು.

೪. ಪ್ರಭಾ + ಆಸ = (ಪ್ರಭಾಸ) ಎಂಬ ಹೆಸರಿನಲ್ಲೇ ಅದರ ವೈಶಿಷ್ಟ್ಯ ಅಡಗಿದೆ. (ಭೂಮಂಡಲಕ್ಕೆ ಭೂಷಣಪ್ರಾಯವಾದ ಕ್ಷೇತ್ರ ಎಂದರ್ಥ.) ಎಂಬುದನ್ನು ಶ್ರೀವಾದಿರಾಜರು ಎಂದಿನಂತೆ ತಮ್ಮ ಸಹಜ ಕೌಶಲದಿಂದ ವರ್ಣಿಸಿರುವರು.

೫. ಶಾಸ್ತ್ರತತ್ತ್ವಗಳು ಮನಸ್ಸಿನಲ್ಲಿ ಪ್ರಕರ್ಷೇಣ ಭಾಸವಾಗಲು ಈ ಪ್ರಭಾಸದ ಯಾತ್ರೆ ಅತ್ಯವಶ್ಯ ಎಂಬ ತತ್ವವೂ ಸೂಚಿತ.

## ಬಾಣಗಂಗಾ (ಪ್ರಭಾಸ ಕ್ಷೇತ್ರ)

**ಬಾಣಪ್ರಯೋಗಸಂಜಾತಾ ಬಾಣಗಂಗಾ ವಿಭಾತಿ ಸಾ ।**
**ಸ್ವಚ್ಛಾ ಸ್ಮರದಘುಚ್ಛೇತ್ರೀ ಕೃಷ್ಣಕೀರ್ತಿರಿವೋನ್ಮುಖೀ ॥ ೮೯ ॥**

ಅ: (ಯಾವುದು) ಬಾಣಪ್ರಯೋಗಸಂಜಾತಾ = ಶ್ರೀಕೃಷ್ಣನು ಪ್ರಯೋಗಿಸಿದ (ಕಿತ್ತೆಸೆದ) ಬಾಣದಿಂದ ಉದ್ಭವಿಸಿತೋ; ಸ್ವಚ್ಛಾ = ಅಂತಹ ನಿರ್ಮಲವೂ; ಸ್ಮರದಘುಚ್ಛೇತ್ರೀ = ಸ್ಮರಿಸುವವರ ಪಾಪಗಳನ್ನು ಪರಿಹರಿಸುವಂತಹುದೂ; ಉನ್ಮುಖೀ = ಭೂಮಿಯನ್ನು ಭೇದಿಸಿ ಮೇಲಕ್ಕೆ ಚಿಮ್ಮಿದಂತಹುದೂ (ಆದ); ಸಾ = ಆ; ಬಾಣಗಂಗಾ = ಬಾಣಗಂಗೆಯು; ಕೃಷ್ಣಕೀರ್ತಿಃ ಇವ = ಶ್ರೀಕೃಷ್ಣನ ಕೀರ್ತಿಯಂತೆ; ವಿಭಾತಿ = ವಿಶೇಷವಾಗಿ ಶೋಭಿಸುತ್ತಿದೆ. (ಉಪಮಾಲಂಕಾರ)

ಬಾಣಪ್ರಯೋಗದಿಂದ ಉದ್ಭವಿಸಿದ, ನಿರ್ಮಲವಾದ, ಸ್ಮರಿಸುವವರ ಪಾಪಗಳನ್ನು ಪರಿಹರಿಸುವ, ಭೂಮಿಯನ್ನು ಭೇದಿಸಿ ಮೇಲಕ್ಕೆ ಚಿಮ್ಮಿದ, ಈ ಬಾಣಗಂಗೆಯು ಶ್ರೀಕೃಷ್ಣನ ಕೀರ್ತಿಯಂತೆ ವಿಶೇಷವಾಗಿ ಶೋಭಿಸುತ್ತಿದೆ.

ವಿ: ೧. ಪ್ರಭಾಸದಲ್ಲಿರುವ ಈ ಬಾಣಗಂಗೆಯು ಇಂದು ಭಾಲುಕತೀರ್ಥವೆಂದು ಪ್ರಸಿದ್ಧವಾಗಿದೆ. ಜರಾನಾಮಕ ಬೇಡನು ಮೃಗವೆಂದು ಭ್ರಮಿಸಿ ತನ್ನ ಪಾದಕ್ಕೆ ಪ್ರಯೋಗಿಸಿದ ಬಾಣವನ್ನು ಶ್ರೀಕೃಷ್ಣನು ಕಿತ್ತು ಭೂಮಿಯತ್ತ ಎಸೆದಾಗ ಉದ್ಭವಿಸಿದ ತೀರ್ಥವೆಂಬುದು ಇದರ ಮಹತ್ತ್ವ. ಇದು ಸೋಮನಾಥ ದೇವಾಲಯದಿಂದ ಸುಮಾರು ೩ಕಿ.ಮೀ. ದೂರದಲ್ಲಿದೆ. ಇದರ ಪಕ್ಕದಲ್ಲೇ ಶ್ರೀಕೃಷ್ಣನು ಕುಳಿತಿದ್ದನೆಂದು ಹೇಳಲಾಗುವ ಪಿಪ್ಪಲವೃಕ್ಷವೂ ಅಲ್ಲಿಂದ ಸುಮಾರು ೨ ಕಿ.ಮೀ. ದೂರದಲ್ಲಿ ಜರಾವ್ಯಾಧನು ಬಾಣ ಪ್ರಯೋಗಿಸಿದ ಸ್ಥಳವೂ ಇವೆ. ಬಾಣಗಂಗೆಯು ಆಳವಿಲ್ಲದ ತೀರ್ಥವಾದರೂ ಅದರ ನೀರು ಯಾವಾಗಲೂ ತುಂಬಾ ಸ್ವಚ್ಛವಾಗಿರುತ್ತದೆ ಎಂಬುದು ಅದರ ವೈಶಿಷ್ಟ್ಯ.

೨. ಸೋಮನಾಥ ದೇವಾಲಯದಿಂದ ಪೂರ್ವಕ್ಕೆ ಹಿರಣ್ಯಾನದಿಯ ತೀರದಲ್ಲಿ ಶ್ರೀಕೃಷ್ಣನು ಅಸುರಮೋಹನಕ್ಕಾಗಿ ಸೃಷ್ಟಿಸಿ ಹಾಕಿದ್ದ ಕೃತಕದೇಹವನ್ನು ಅರ್ಜುನನು ದಹನ ಮಾಡಿದನೆಂದು ಹೇಳಲಾಗುವ 'ದೇಹೋತ್ಸರ್ಗತೀರ್ಥ'ವೂ, ಅದರ ಬಳಿ ಸಮಗ್ರ ಭಗವದ್ಗೀತೆಯನ್ನು ಅಮೃತಶಿಲೆಯಲ್ಲಿ ಕೆತ್ತಿರುವ ಒಂದು ಗೀತಾಮಂದಿರವೂ ಇವೆ.

೩. ಶ್ರೀಕೃಷ್ಣನ ಕೀರ್ತಿಯು ಆತನು ಶತ್ರುಗಳ ಮೇಲೆ ಬಾಣ ಪ್ರಯೋಗ ಮಾಡಿದಾಗ ಜನಕ್ಕೆ ತಿಳಿಯಿತು[೧]; ಅಂತಹ ಕೀರ್ತಿಯು ನಿರ್ಮಲವೂ, ಸ್ಮರಿಸುವವರ ಪಾಪಗಳನ್ನು ಪರಿಹರಿಸುವಂತಹದೂ, ಮೇಲಿನ ಲೋಕಗಳಿಗೂ ಪಸರಿಸುವಂತಹದೂ ಆಗಿದೆ. ಅದರಂತೆಯೇ ಈ ಬಾಣಗಂಗೆಯು ಸಹ ನೈರ್ಮಲ್ಯಾದಿ ಗುಣೋಪೇತವಾಗಿದೆ ಎಂದು ಭಾವ. ಬಾಣಗಂಗೆಯ ದರ್ಶನವು ಶ್ರೀಕೃಷ್ಣಮಾಹಾತ್ಮ್ಯಕ್ಕೆ ಅಪೂರ್ವ ಸ್ಮಾರಕ ಎಂದರ್ಥ.

೪. ಶ್ರೀಕೃಷ್ಣನು ಬಾಣ ಪ್ರಯೋಗದಿಂದ ಶರೀರ ಬಿಡಲಿಲ್ಲ, ಆತನ ಅವತಾರಕಾರ್ಯವು ಪೂರೈಸಿದ್ದರಿಂದ ಅದೇ ಶರೀರದಿಂದ ಪರಂಧಾಮಕ್ಕೆ ತೆರಳಿದನೆಂದೂ ಅಸುರ ಮೋಹನಕ್ಕೆ ಮಾತ್ರವೇ ಈ ದೇಹತ್ಯಾಗವನ್ನು ಪ್ರದರ್ಶಿಸಿದನೆಂದೂ ಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿರುವ ವಿಷಯವನ್ನು ಸ್ಮರಿಸಿದಾಗಲೇ ಈ ಬಾಣಗಂಗೆಯ ದರ್ಶನವು ತಾರಕ ಎಂಬ ಧ್ವನಿಯೂ ಇಲ್ಲಿದೆ. ಬಾಣಗಂಗಾ ಸೇವನೆಯು ಪಾಪಗಳ ಪಾಲಿಗೆ ಬಾಣಪ್ರಯೋಗದಂತೆ ಮಾರಕವಾಗಿದೆ ಎಂದರ್ಥ.

## ದ್ವಾರಕಾ (ಕ್ಷೇತ್ರ)

**ವಿಶ್ವಂಭರಾಂ ಘನತರಾಮಪಿ ಭೂರಿಯತ್ನೈ -**
**ರ್ನಿರ್ಭಿದ್ಯ ಯತ್ಪದಮುಪೇತ್ಯ ಬಲೀಂದ್ರಗೇಹಾತ್ ।**

---

೧. ಕೀರ್ತಿರಪಿ ಶತ್ರುಷು ಬಾಣಪ್ರಯೋಗೇಣ ಸಂಜಾಯತೇ ।
ಸ್ವಚ್ಛೇತ್ಯಾದಿ ವಿಶೇಷಣಾನಿ ಕೀರ್ತಿಪಕ್ಷೇಽಪಿ ಯೋಜ್ಯಾನಿ । – ವ್ಯಾಖ್ಯಾನ

ಆಸ್ತೇ ತ್ರಿವಿಕ್ರಮತನುರ್ಹರಿರದ್ವಿತೀಯಾ
ಸಾ ದ್ವಾರಕೇಪ್ಸಿತಪುಮರ್ಥಕರೀ ಪುರೀ ನಃ ॥ ೯೦ ॥

ಅ: ತ್ರಿವಿಕ್ರಮತನುಃ = ತ್ರಿವಿಕ್ರಮರೂಪನಾದ; ಹರಿಃ = ಶ್ರೀಹರಿಯು; ಘನತರಾಂ ವಿಶ್ವಂಭರಾಂ ಅಪಿ = ಅತ್ಯಂತ ನಿಬಿಡವಾದ ಭೂಮಿಯನ್ನು ಸಹ; ಭೂರಿಯತ್ನೈಃ ಮುಸಲಪ್ರಹಾರಾದಿ ಬಹುಪ್ರಯತ್ನದಿಂದ; ನಿರ್ಭಿದ್ಯ = ಭೇದಿಸಿ; ಬಲೀಂದ್ರಗೇಹಾತ್ = ಬಲಿಚಕ್ರವರ್ತಿಯ ಮನೆಯಿಂದ; ಯತ್ಪದಂ = ಯಾವ ಸ್ಥಾನಕ್ಕೆ; ಉಪೇತ್ಯ = ಆಗಮಿಸಿ; ಆಸ್ತೇ = ನೆಲೆಸಿರುವನೋ; ಅದ್ವಿತೀಯಾ = ಅನುಪಮವಾದ; ಸಾ = ಅಂತಹ; ದ್ವಾರಕಾ ಪುರೀ - ದ್ವಾರಕಾಪುರಿಯು; ನಃ = ನಮಗೆ; ಈಪ್ಸಿತಪುಮರ್ಥಕರೀ (ಭವೇತ್) = ಬಯಸಿದ ಪುರುಷಾರ್ಥಗಳನ್ನು ಕೊಡುವಂತಹುದಾಗಿ ಆಗಲಿ.

ಬಹಳ ನಿಬಿಡವಾದ ಭೂಮಿಯನ್ನು ಸಹ ಬಹುಪ್ರಯತ್ನದಿಂದ ಭೇದಿಸಿ ಬಲೀಂದ್ರನ ಮನೆಯಿಂದ ಬಂದ ಅನುಪಮವಾದ ತ್ರಿವಿಕ್ರಮರೂಪದ ಶ್ರೀಹರಿಯು ನೆಲೆಸಿರುವ ದ್ವಾರಕಾಪುರಿಯು ನಮಗೆ ಸಕಲಪುರುಷಾರ್ಥಗಳನ್ನು ನೀಡಲಿ.

ವಿ: ೧. ಮೋಕ್ಷದಾಯಕವೆಂದು ಪ್ರಸಿದ್ಧವಾಗಿರುವ ಸಪ್ತಮಹಾಕ್ಷೇತ್ರಗಳಲ್ಲಿ ಒಂದು ಎಂಬುದು ಈ ದ್ವಾರಕೆಯ ಹಿರಿಮೆ.[೧] ಕೃತಯುಗದಲ್ಲಿ ರೇವತನೆಂಬ ರಾಜನು ಕುಶಗಳನ್ನು ಹರಡಿ ಅನೇಕ ಯಜ್ಞಗಳನ್ನು ಮಾಡಿದ ಕ್ಷೇತ್ರವು 'ಕುಶಸ್ಥಲೀ' ಎಂದು ಪ್ರಸಿದ್ಧವಾಗಿತ್ತು. ಮುಂದೊಮ್ಮೆ ಕುಶನೆಂಬ ರಾಕ್ಷಸನು ಅಲ್ಲಿ ನೆಲೆಸಿ ಲೋಕಕಂಟಕನಾದಾಗ ದೇವತೆಗಳ ಪ್ರಾರ್ಥನೆಯಂತೆ ಸುತಲಲೋಕದಿಂದ ತ್ರಿವಿಕ್ರಮರೂಪಿ ಶ್ರೀಹರಿಯು ಭೂಮಿಯನ್ನು ಭೇದಿಸಿ ಪ್ರಾದುರ್ಭವಿಸಿ ಕುಶಾಸುರನನ್ನು ಸಂಹರಿಸಿ ಜಗತ್ತನ್ನು ಸಲಹಿ ತಾನು ಇಲ್ಲಿ ನೆಲಸಿದನೆಂದು ಪುರಾಣಗಳಲ್ಲಿ ಉಕ್ತವಾಗಿದೆ. ಇದೂ ಸಹ ಅನಂತರ[೨] ದ್ವಾರಕೆಯೆಂದು ಪ್ರಸಿದ್ಧವಾಯಿತು.

೨. ದ್ವಾರಕೆಯಲ್ಲಿರುವ ಶ್ರೀಕೃಷ್ಣವಿಗ್ರಹ(ದ್ವಾರಕಾಧೀಶ)ವನ್ನು ತ್ರಿವಿಕ್ರಮ ಎಂಬುದಾಗಿ ಅಲ್ಲಿಯ ಜನರು ವ್ಯವಹರಿಸುವರು. ಇಲ್ಲಿಯ ಮಾಹಿತಿ ಅದಕ್ಕೆ ಅನುಗುಣವಾಗಿದೆ.

೩. ದೇವತೆಗಳ ಋಷಿಗಳ ಪ್ರಾರ್ಥನೆಯಂತೆ ಅತ್ಯಂತ ದಟ್ಟವಾದ ಭೂಮಿಯನ್ನು ಸೀಳಿ ಪ್ರಾದುರ್ಭವಿಸಿದ ತ್ರಿವಿಕ್ರಮರೂಪೀ ಶ್ರೀಹರಿಯು ಕುಶಾಸುರರನ್ನು ಸಂಹರಿಸಿ ಕುಶಸ್ಥಲಿಯಲ್ಲಿ

---

೧. ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ।
ಪುರೀ ದ್ವಾರವತೀ ಚೈವ ಸಪ್ತೈತೇ ಮೋಕ್ಷದಾಯಿಕಾ ॥

೨. ಗರ್ಗಸಂಹಿತಾ, ಸ್ಕಂದಪುರಾಣದ ಪ್ರಭಾಸಖಂಡ, ಮಹಾಭಾರತ, ಹರಿವಂಶ, ಶ್ರೀಮದ್ಭಾಗವತಾ, ಶ್ರೀವಿಷ್ಣುಪುರಾಣ ಮೊದಲಾದ ಆಕರಗ್ರಂಥಗಳಲ್ಲಿ ಈ ದ್ವಾರಕಾಕ್ಷೇತ್ರದ ಮಾಹಾತ್ಮ್ಯ ವರ್ಣಿತವಾಗಿದೆ. ಇವುಗಳಲ್ಲಿನ ಮುಖ್ಯವಿವರಗಳ ಸಂಕಲನವನ್ನು ನನ್ನ ಅನುವಾದ ಸಮೇತ ಉಡುಪಿಯ ಶ್ರೀ ಪಲಿಮಾರುಮಠಾಧೀಶರಾದ ಪರಮಪೂಜ್ಯ ಶ್ರೀವಿದ್ಯಾಧೀಶತೀರ್ಥರು ತಮ್ಮ ಉಡುಪಿಯ ಶ್ರೀವಿದ್ಯಾಮಾನ್ಯ ಪ್ರಕಾಶನದಿಂದ ಪ್ರಕಾಶನಪಡಿಸಿರುವರು.

ನೆಲೆಸಿದನು[೧] ಎಂಬ ಪುರಾಣ ಪ್ರಸಿದ್ಧಿಯ ಹಿನ್ನೆಲೆಯಲ್ಲಿ ದ್ವಾರಕೆಯನ್ನು ಇಲ್ಲಿ [೨] ವರ್ಣಿಸಿರುವರು. ಹೀಗೆ ಪರಮಾತ್ಮನು ವಿಶೇಷ ರೀತಿಯಲ್ಲಿ ನೆಲೆಸಿರುವ ದ್ವಾರಕೆಯು ಪಾಪಗಳಿಗೆ ಮಾರಕವಾಗಿರುವ ತಪಃಸಿದ್ಧಿಕರವಾದ ಕ್ಷೇತ್ರ ಎಂದು ಭಾವ.

೪. ಶ್ರೀವಾದಿರಾಜರು ಈ ಕ್ಷೇತ್ರವನ್ನು ಸಂದರ್ಶಿಸಿದ್ದು ಮಾತ್ರವಲ್ಲದೆ ಇಲ್ಲೇ ಬಹುಕಾಲ ತಪಸ್ಸನ್ನು ಆಚರಿಸಿದ್ದರೆಂದೂ ಅವರ ಚರಿತ್ರೆಯಲ್ಲಿ [೩] ವರ್ಣಿತವಾಗಿದೆ. ಇಲ್ಲಿದ್ದ ಕಾಲಕ್ಕೆ ಕೃಷ್ಣತೀರ್ಥರು ಎಂಬ ಯತಿಗಳಿಗೆ ತಮ್ಮ ಮಧ್ವಮುನಿಪ್ರತಾಪಾಷ್ಟಕವನ್ನು ಉಪದೇಶಿಸಿ ಅವರ ಜ್ವರವನ್ನು ಪರಿಹರಿಸಿದರೆಂದೂ ಪ್ರತೀತಿ. ಈ ಪ್ರಾಂತದಲ್ಲಿ ಅವರಿಗೆ ಬಹು ಜನರು ಶಿಷ್ಯರಾಗಿ ವೈಷ್ಣವ ಮಾರ್ಗವನ್ನು ಅನುಸರಿಸಿ ಧನ್ಯರಾದರೆಂದೂ ಸಹ ಐತಿಹ್ಯ ಉಂಟು[೪].

---

೧. ಮಹಾಬಲೇಃ ಪ್ರಸನ್ನಃ ತದ್ದ್ವಾರಿಸ್ಥಿತಃ ತ್ರಿವಿಕ್ರಮಃ ಕುಶಾಸುರವಧಾರ್ಥಂ ಋಷಿಭಿರ್ಯಾಚಿತಃ ಸನ್ ಮುಸಲೇನಾವನಿಂ ನಿರ್ಭಿದ್ಯ ದ್ವಾರಕಾಮುಪೇತ್ಯ ಕುಶಾಸುರಂ ಹತ್ವಾ ತತ್ರೈವಾಸ್ತೇ ಇತಿ ಪೌರಾಣಿಕೀ ಪ್ರಸಿದ್ಧಿಃ । -ವ್ಯಾಖ್ಯಾನ

೨. ಶ್ರೀವಾದಿರಾಜರು ತಮ್ಮ ರುಗ್ಮಿಣೀಶವಿಜಯದಲ್ಲೂ ದ್ವಾರಕೆಯನ್ನು ಬಹುವಾಗಿ ವರ್ಣಿಸಿರುವರು (ಸರ್ಗ ೧೭); ಅದರಲ್ಲಿನ ಕೆಲವು ಶ್ಲೋಕಗಳು ಹೀಗಿವೆ:

ಇಹಾಖಿಲೈಶ್ವರ್ಯಸುಭೋಗವೃದ್ಧೇಃ ಪರತ್ರ ನಿಃಶ್ರೇಯಸಸೌಖ್ಯಸಿದ್ಧೇಃ ।
ಮಹಃಪರಂ ದ್ವಾರಮವಾಪ್ಯ ಪೃಥ್ವ್ಯಾಮಸೌ ಪುರೀ ದ್ವಾರವತೀ ಬಭೂವ ॥
ಯತೋಽಭಿತೋಽಚ್ಛಸ್ಫಟಿಕಾವದಾತಲಸತ್ಕವಾಟಾಂತರಿತಾಽಪಿ ಸೇಯಮ್ ।
ಪುರೀ ನೃಣಾಂ ದ್ವಾರವತೀವ ಭಾತಿ ತತೋಽಪಿ ತಾಂ ದ್ವಾರವತೀಂ ವದಂತಿ ॥
ಯತಃ ಕವಾಟೇ ವಿವೃತೇಽಪಿ ಸೇಯಂ ಪುರೀ ಕವಾಟಾಂತರಿತೇವ ಭಾತಿ ।
ಹರಿನ್ಮಣೀನಾಂ ಪ್ರಭಯಾ ಮಹತ್ಯಾ ಕಥಂ ನು ಸಾ ದ್ವಾರವತೀತಿ ಮನ್ಯೇ ॥
ಯದೀಯರತ್ನಾವೃತಹೈಮವಪ್ರಸಕಾಶಮಭ್ಯೇತ್ಯ ನಿವರ್ತತೇ ಸ್ಮ ।
ಸಮುದ್ಯತಾಽಽಸೀತ್ ಪ್ರತಿಬಿಂಬರಾಶೀನ್ನಿರೀಕ್ಷ್ಯ ದೀನಾ ಬಹುಶೋಽರಿಸೇನಾ ॥
ಮುಕ್ತಾವಲೀರಾಜಿತಸರ್ವಗೇಹಾ ನಿತ್ಯಂ ಪ್ರಮೋದಾಶನಸತ್ಸಮೂಹಾ ।
ದುಷ್ಪ್ರೈರಗಮ್ಯಾ ದಯಿತಾ ಮುರಾರೇರ್ಮುಕ್ತಿಪ್ರಭಾ ದ್ವಾರವತೀ ಪುರೀ ಸಾ ॥
ವಿಚಿತ್ರರತ್ನಾವೃತವಪ್ರಸೌಧಗೃಹಾಂಗಣಾಗೋಪುರವಾಪಿಕೌಘಮ್ ।
ಇದಂ ಪುರೀರತ್ನಮವಾಪ್ಯ ನೂನಂ ಬಭೂವ ರತ್ನಾಕರಶಬ್ದಿತೋಽಬ್ಧಿಃ ।
ಯದಂಘ್ರಿತೀರ್ಥೇನ ಯದೀಯನಾಮ್ನಾ ಬಲೇನ ಕಾಶೀ ಪ್ರಥಿತಾ ಕಿಲಾಸೀತ್ ।
ಮುರದ್ವಿಷಸ್ತಸ್ಯ ನಿವಾಸಭೂತಾ ಪುರೀ ತ್ರಿಲೋಕ್ಯಾಮಿಯಮದ್ವಿತೀಯಾ ॥
-ರುಗ್ಮಿಣೀಶವಿಜಯ(೧೭/೨೬ -೬೮)

೩. ಅತಸ್ತತ್ರ ಬಹುತರತಪಶ್ಚರಣಾದಿನಾ ಹಯಗ್ರೀವಪ್ರಸಾದಃ ಸ್ವಾತ್ಮನಾ ಲಬ್ಧ ಇತಿ ಭಾವಃ ವ್ಯಾಖ್ಯಾನ

೪. ತತ್ರಾಸೀತ್ ಕೃಷ್ಣನಾಮಾ ಯತಿರಪಿ ಸುಜನಃ ಸುಜ್ವರಗ್ರಸ್ತದೇಹೋ
ಭೂತ್ವಾ ಸ್ವಪ್ನಂ ಚ ದೃಷ್ಟ್ವಾ ಯದಿ ಪಠಸಿ ಕೃತಂ ವಾದಿರಾಜಾಷ್ಟಕಂ ತ್ವಮ್ ।
ಶಾಂತಿಃ ಸ್ಯಾದಿತ್ಯಥೈನಂ ಯತಿವರಮುಪಗಮ್ಯೋಕ್ತವಾನ್ ಸ್ವಾಪ್ನಮರ್ಥಂ
ತತ್ಪಾಠಾನ್ಮುಕ್ತರೋಗೋಽಭವದಥ ಸತತಂ ಜೈತ್ರ ಆಸೀತ್ ಸ್ವಯಂ ಚ ॥ (೧/೨೦)
ದ್ವಾರಾವತೀಂ ಸಕಲಭಾಗ್ಯವತೀಮುಪೇಕ್ಷ್ಯ ಗೋಪಾಲಬಾಲಲಲನಾಕರಪೂಜನಂ ಚ ।
ವಾರ್ಧಿಂ ವಧೂಗೃಹಮತೀತ್ಯ ಸ ಮಧ್ವನಾಥೋ ಯತ್ರಾಸ್ತಿ ತದ್ರಜತಪೀಠಪುರಂ ಗರೀಯಃ ॥

೫. ದ್ವಾಪರಯುಗದಲ್ಲಿ ಶ್ರೀಕೃಷ್ಣನು ಸಮುದ್ರಮಧ್ಯದಲ್ಲಿ ವಿಶ್ವಕರ್ಮನಿಂದ ನಿರ್ಮಾಣ ಮಾಡಿಸಿದ ದ್ವಾರಕೆಯೇ ಮುಖ್ಯ ದ್ವಾರಕೆ. ಅದು ಚಿನ್ನದ ಪಟ್ಟಣ; ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ ಏಳನೆಯ ದಿನವೇ ಅದು ಸಮುದ್ರದಲ್ಲಿ ಮರೆಯಾಯಿತೆಂದು ಭಾಗವತಪುರಾಣದಲ್ಲೂ ಮಹಾಭಾರತದಲ್ಲೂ ಸ್ಪಷ್ಟ ಉಲ್ಲೇಖವಿದೆ[೧]. ಇದರ ವರ್ಣನೆಯು ಮಹಾಭಾರತ, ಹರಿವಂಶ, ಭಾಗವತಾದಿಗಳಲ್ಲಿ ವಿವರವಾಗಿ ಬಂದಿದೆ. ವರ್ಣನೆಯು ಕಾಣುವ ದ್ವಾರಕೆಯು ಕುಶಸ್ಥಲಿಯೇ ಇರಬೇಕು. ಮೂಲದ್ವಾರಕೆಯು ಸಮುದ್ರತೀರದ ಪಟ್ಟಣವಲ್ಲ, ಸಮುದ್ರಮಧ್ಯದ ಪಟ್ಟಣ ಎಂಬುದನ್ನೂ ಗಮನಿಸಬೇಕು.

## ತ್ರಿವಿಕ್ರಮ (ದ್ವಾರಕಾ)[೨]

---

೧. ನಿರ್ಯಾತೇ ತು ಜಲೇ ತಸ್ಮಿನ್ ಸಾಗರೋ ಮಕರಾಲಯಃ ।
ದ್ವಾರಕಾಂ ರತ್ನಸಂಪೂರ್ಣಾಂ ಜಲೇನಾಪ್ಲಾವಯತ್ ತದಾ ॥
ಯದ್ಯದ್ಧಿ ಪುರುಷವ್ಯಾ....ರಘೋ ಭೂಮೇಸ್ತಸ್ಯಾ ವ್ಯಮುಂಚತ ।
ತತ್ತತ್ ಸಂಪ್ಲಾವಯಾಮಾಸ ಸಲಿಲೇನ ಸ ಸಾಗರಃ ॥ – ಮಹಾಭಾರತ ೧೬/೭/೪೧/೪೨
ದ್ವಾರಕಾಯಾಂ ಚ ನ ಸ್ಥೇಯಂ ಭವದ್ಭಿಶ್ಚ ಸ್ವಬಂಧುಭಿಃ ।
ಮಯಾ ತ್ಯಕ್ತಾಂ ಯದುಪುರೀಂ ಸಮುದ್ರಃ ಪ್ಲಾವಯಿಷ್ಯತಿ॥ –ಭಾಗವತ(೧೧/೩೦/೪೭)
ದ್ವಾರಕಾಂ ಹರಿಣಾ ತ್ಯಕ್ತಾಂ ಸಮುದ್ರೋಽಪ್ಲಾವಯತ್ ಕ್ಷಣಾತ್ ।
ವರ್ಜಯಿತ್ವಾ ಮಹಾರಾಜ ಶ್ರೀಮದ್ಭಗವದಾಯಲಮ್ ॥ -ಭಾಗವತ(೧೧/೩೧/೨೩)
ಮಹೋದಕಸ್ಯ ಮಧ್ಯತಶ್ಚಕಾರ ತಾಂ ಪುರೀಂ ಶುಭಾಮ್ ।
ದ್ವಿಷಟ್ಕಯೋಜನಾಯತಾಂ ಪಯೋಬ್ಧಿಮಧ್ಯಗೋಪಮಾಮ್ ॥ - ಮ.ಭಾ.ತಾ.ನಿ.೧೭/೧೧೩
... ವಿನಿರ್ಯಯೌ ದ್ವಾರವತ್ಯಾಸ್ತಾಂ ಜಗ್ರಾಹ ಚ ಸಾಗರಃ । - ಮ.ಭಾ.ತಾ.ನಿ.೩೨/೪೨
ಇತಿ ಸಂಮಂತ್ರ್ಯ ಭಗವಾನ್ ದುರ್ಗಂ ದ್ವಾದಶಯೋಜನಮ್ ।
ಅಂತಃ ಸಮುದ್ರೇ ನಗರಂ ಕೃತ್ಸ್ನಾಽದ್ಭುತಮಚೀಕರತ್ ॥ -ಭಾಗವತ
ಪುಣ್ಯಾ ದ್ವಾರಾವತೀ ತತ್ರ ಯತ್ರಾಸ್ತೇ ಮಧುಸೂದನಃ ।
ಸಾಕ್ಷಾದ್ದೇವಃ ಪುರಾಣೋಽಸೌ ಸ ಹಿ ಧರ್ಮಃ ಸನಾತನಃ ॥ –ಮಹಾಭಾರತ(೩/೮೦/೨೪)
ಪಾಂಸವೋ ದ್ವಾರಕಾಯಾ ವೈ ವಾಯುನಾ ಸಮುದೀರಿತಾಃ ।
ಪಾಪಿನಾಂ ಮುಕ್ತಿದಾಃ ಪ್ರೋಕ್ತಾಃ ಕಿಂ ಪುನರ್ದ್ವಾರಕಾ ಭುವಿ ॥ – ಸ್ಕಂದಪುರಾಣ ಪ್ರಭಾಸಖಂಡ

೨. ದ್ವಾರಕೆ ಜಗತ್ತು ಕಂಡ ಅತ್ಯಪೂರ್ವವಾದ ಪಟ್ಟಣ; 'ಸುವರ್ಣನಗರಿ' ಎಂಬುದು ಇದರ ವಿಶೇಷ; ಸಾಕ್ಷಾದ್ಭಗವಂತನಾದ ಶ್ರೀಕೃಷ್ಣನಿಂದ ನಿರ್ಮಿತವಾದ ಅಮೋಘ ನಗರ.ಒಂದರ್ಥದಲ್ಲಿ ಭೂವೈಕುಂಠ, ಇತಿಹಾಸ ಪುರಾಣಗಳು ನಿರೂಪಿಸಿದ ಅಲ್ಲಿಯ ಸಂಪತ್ತು, ಅಲ್ಲಿಯ ಜನ, ಅಲ್ಲಿಯ ವೈಭವ ಎಲ್ಲವೂ ಸಹ ಅದನ್ನು ವೈಕುಂಠ ಎಂದೇ ಬಿಂಬಿಸುವಂತಿದೆ. ಸಪ್ತಮೋಕ್ಷದಾಯಕ ಮಹಾಕ್ಷೇತ್ರಗಳಲ್ಲಿ ಅದು ಶ್ರೇಷ್ಠವಾದುದು ಎಂಬ ಮಾತು ಪುರಾಣಗಳಲ್ಲಿದೆ. ಸುಮಧ್ವವಿಜಯದಲ್ಲಿ ಇದನ್ನು ಶ್ರೀಮನ್ಮಧ್ವಾ-ಚಾರ್ಯರ ಪರಿಪೂರ್ಣವಾದ ಮನಸ್ಸಿಗೆ ಹೋಲಿಸಿರುವುದು ಗಮನಾರ್ಹ (೮/೩). ಸ್ವತಃ ಸಾಕ್ಷಾತ್ ಶ್ರೀಕೃಷ್ಣನೇ ಅನೇಕ ದಶಕಗಳ ಕಾಲ ನೆಲೆಸಿದ ಆ ಕ್ಷೇತ್ರ ಸಹಜವಾಗಿಯೇ ಇತರ ಕ್ಷೇತ್ರಗಳಿಗಿಂತ ಮಿಗಿಲಾಗಿದೆ. ಅದು ಶ್ರೀಕೃಷ್ಣನ ಪರಂಧಾಮಗಮನದೊಂದಿಗೆ ಸಮುದ್ರದಲ್ಲಿ ಮುಳುಗಿಹೋಗಿದ್ದರೂ

ತ್ರಿವಿಕ್ರಮೋ ವಿಜಯತೇ ತ್ರಯೀವಿಖ್ಯಾತವಿಕ್ರಮಃ ।

ಶ್ರೀಕೃಷ್ಣಮಂದಿರ ಮಾತ್ರ ಹಾಗೆಯೇ ಉಳಿಯಿತು ಎಂಬದು ವಿಶೇಷ. ಗಂಗೆಯ ಮತ್ತೊಂದು ಕವಲಾದ ಮಹಾನದಿ ಗೋಮತಿಯು ಸಮುದ್ರವನ್ನು ಸೇರುವ ಪುಣ್ಯಭೂಮಿಯೂ ಈ ದ್ವಾರಕೆಯೇ. ಆದರಿಂದಾಗಿ ಇದಕ್ಕೆ ಗೋಮತೀದ್ವಾರಕೆ ಎಂಬ ಹೆಸರೂ ರೂಢಿಯಲ್ಲಿದೆ. ಗಂಗೆಯ ಕವಲಾದ್ದರಿಂದಲೇ ಗೋಮತಿಗೆ ಅನನ್ಯವಾದ ಮಹತ್ತ್ವ. ಅಲ್ಲಿಯ ಸಂಗಮದ ಬಳಿಯೇ ಇರುವ ಚಕ್ರತೀರ್ಥ ವೈಷ್ಣವರ ನಿತ್ಯಪೂಜಾಧಿಷ್ಠಾನಗಳಲ್ಲೊಂದಾದ ಚಕ್ರಾಂಕಿತಗಳ ತವರು. ದ್ವಾರಕೆಯ ಬಳಿಯ ಗೋಪೀಹ್ರದದಲ್ಲಿ ದೊರೆಯುವ ಗೋಪೀಚಂದನ ವೈಷ್ಣವರ ಪರಮಮುಖ್ಯಲಾಂಛನವಾದ ಊರ್ಧ್ವಪುಂಡ್ರದ ಮೂಲದ್ರವ್ಯ. ಹೀಗೆ ವೈಷ್ಣವರಿಗೆ ಮೂಲ ನೆಲೆಯೆನ್ನಿಸುವ ಹಿರಿಮೆ ಈ ದ್ವಾರಕೆಯದು.

ಹೀಗೆ ಗಂಗೆಯಾದ ಗೋಮತಿಯಲ್ಲಿ ಸ್ನಾನಮಾಡಿಸಿ, ಗೋಪೀಹ್ರದದ ಗೋಪೀಚಂದನವನ್ನು ಲೇಪನೆಗೆ ನೀಡಿ, ನಿತ್ಯಪೂಜೆಗೆಂದು ಚಕ್ರಾಂಕಿತಗಳನ್ನು ಒದಗಿಸಿ, ಸಾಧಕರನ್ನು ಪರಿಪೂರ್ಣವೈಷ್ಣವರನ್ನಾಗಿಸುವ ಪರಮಪಾವನಕ್ಷೇತ್ರ ಈ ದ್ವಾರಕೆ.

ಮಹಾಭಾರತತಾತ್ಪರ್ಯನಿರ್ಣಯದಲ್ಲಿ ದೊರೆಯುವ ಮಾಹಿತಿಯಂತೆ ಮಧ್ವಾವತಾರಕಾಲಕ್ಕೆ ಕಲಿಯುಗದ ೪೩೦೦ವರ್ಷಗಳು ಕಳೆದಿದ್ದವು. ಎಂದರೆ ಕೃಷ್ಣಾವತಾರ ಪೂರೈಸಿ ೪೩೦೦ ವರ್ಷಗಳು ಪೂರೈಸಿದ್ದವು ಎಂದರ್ಥ. ಆದಕ್ಕೆ ಶ್ರೀಕೃಷ್ಣನು ಒಟ್ಟು ಲೋಕದಲ್ಲಿ ಕಾಣಿಸಿಕೊಂಡ ೧೦೬ ೧/೨ ವರ್ಷಗಳನ್ನು ಸೇರಿಸಿದರೆ ೪೪೦೬ ೧/೨ ವರ್ಷಗಳಾಗುತ್ತವೆ. ಶ್ರೀಮಧ್ವಾವತಾರ ಕ್ರಿ.ಶ. ೧೨೦೦ ಎಂದರೆ ಇಂದಿಗೆ ೮೦೭ವರ್ಷಗಳು ಪೂರೈಸಿದವು. ಎಂದರೆ ದ್ವಾರಕೆಯು ಮುಳುಗಿ ೫೧೧೦೭ ವರ್ಷಗಳು ಪೂರೈಸಿದವು ಎಂದು ತಿಳಿಯುತ್ತದೆ. ಇದರಿಂದ ಕೃಷ್ಣಾವತಾರವಾಗಿ ಒಟ್ಟು ೫೨೧೩ ೧/೨ ವರ್ಷಗಳು ಕಳೆದಿವೆ ಎಂದಾಗುವುದು. ಇದು ಸುಮಾರು ಕ್ರಿ.ಪೂ. ೩೧೦೫ ಎನ್ನ ಬಹುದು.

ಪ್ರಸಿದ್ಧ ಪ್ರಾಚ್ಯಶಾಸ್ತ್ರಜ್ಞರಾದ ಡಾ ॥ ಎಸ್.ಆರ್.ರಾವ್ ರವರ ನೇತೃತ್ವದಲ್ಲಿ ಅನೇಕ ವರ್ಷಗಳವರೆಗೆ ದ್ವಾರಕೆಯ ಬಳಿಯ ಸಮುದ್ರದಲ್ಲಿ ನಡೆದ ಉತ್ಖನನಗಳು ಅಲ್ಲಿ ಪುರಾತನ ಪಟ್ಟಣವಿದ್ದುದನ್ನು ಸಾಧಾರವಾಗಿ ನಿರೂಪಿಸಿವೆ. ಅವೆಲ್ಲವೂ ನಿಃಸಂದೇಹವಾಗಿ ಪ್ರಾಗೈತಿಹಾಸಿಕ ಕಾಲದ ಸ್ಮಾರಕಗಳು ಎಂಬುದನ್ನು ವೈಜ್ಞಾನಿಕವಿಶ್ಲೇಷಣೆಗಳು ಖಚಿತಪಡಿಸಿವೆ. ಇದರಂತೆ ಶ್ರೀರಾಮನು ನಿರ್ಮಿಸಿದ ಸೇತುವೆಯೂ ಸಹ ಐತಿಹಾಸಿಕವೆಂದು ಇತ್ತೀಚಿಗೆ ಬೆಳಕಿಗೆ ಬಂದಿರುವ ಪ್ರಬಲ ಆಧಾರಗಳು ನಿರೂಪಿಸಿವೆ. ಇದರಿಂದ ನಮ್ಮ ರಾಮಾಯಣ, ಮಹಾಭಾರತಗಳು ಐತಿಹಾಸಿಕ ಎಂಬದು ಸ್ಫುಟಪಡುವುದು.

ಸಮುದ್ರ ಮುಳುಗಿಸಲಾಗದ ಭಗವದಾಲಯವೇ ಇಂದಿನ ದ್ವಾರಕಾಧೀಶಮಂದಿರ ಎಂದು ಪ್ರತೀತಿ. ಇದು ಶ್ರೀಕೃಷ್ಣನ ಮರಿಮೊಮ್ಮಗನಾದ ವಜ್ರನಿಂದ ನಿರ್ಮಿತ ಎಂದೂ ಪ್ರತೀತಿ. ಇದು ಕಾಲಾಂತರಗಳಲ್ಲಿ ಅನೇಕ ಬಾರಿ ಜೀರ್ಣೋದ್ಧಾರಗೊಂಡ ವಿವರವನ್ನು ಇತ್ತೀಚಿನ ಸಂಶೋಧನೆಗಳು ನಿರೂಪಿಸಿವೆ.

ಶ್ರೀಮದ್ಭಾಗವತಾದಿಗಳ ನಿರೂಪಣೆಯಂತೆ ಶ್ರೀಕೃಷ್ಣನಿರ್ಮಿತದ್ವಾರಕೆಯು ಸಮುದ್ರಮಧ್ಯದ ದ್ವೀಪದಲ್ಲಿನ ನಗರಿ. ಹನ್ನೆರಡು ಯೋಜನ ಉದ್ದ ಹಾಗೂ ಎಂಟು ಯೋಜನ ಅಗಲದಷ್ಟು ವಿಸ್ತಾರವಾಗಿದ್ದ ವಿಶಾಲ ನಗರಿ. ಅದು ವಿಶ್ವಕರ್ಮನಿಂದ ನಿರ್ಮಿತವಾದ ಸುವರ್ಣಪಟ್ಟಣ. ಪುರಾಣಗಳು ದಾಖಲಿಸಿರುವ ಮತ್ತೊಂದು ಚಿನ್ನದ ನಗರಿ ಲಂಕೆ. ಅದೂ ಸಹ ವಿಶ್ವಕರ್ಮನ ನಿರ್ಮಾಣ ಎಂಬುದು ವಿಶೇಷ. ಅದೂ ದ್ವೀಪದ ಮಧ್ಯದ ನಗರಿ ಎಂಬುದೂ ಗಮನಾರ್ಹ. ದ್ವಾರಕೆಯು ಸಮುದ್ರದಲ್ಲಿ ಮುಳುಗಿದರೆ ಲಂಕೆಯು ಹನುಮಂತನ ಬಾಲದ ಬೆಂಕಿಗೆ ದಗ್ಧವಾಯಿತು. ಎಂದರೆ ಅವೆರಡನ್ನೂ ಸಹ ಇಂದು ಅವುಗಳ ಮೂಲರೂಪದಲ್ಲಿ ಕಾಣಲಾಗುವುದಿಲ್ಲ ಎಂದಾಗುವುದು.

ಯಃ ಕುಶಂ ದಮಯಿತ್ವೇಮಾಂ ಚಕ್ರೇ ವಿಪ್ರಕುಶಸ್ಥಲೀಮ್ ॥ ೯೧ ॥

ದ್ವಾರಕೆಯ ಬಳಿಯ ಸಮುದ್ರದ ರೀತಿ ತುಂಬಾ ವಿಚಿತ್ರವಾದುದು. ದಿನವಿಡೀ ಅದು ಬಗೆ ಬಗೆಯ ಏರಿಳಿತಗಳನ್ನು ಹೊಂದುತ್ತಲೇ ಇರುತ್ತದೆ. ನಡುಮಧ್ಯಾಹ್ನದ ವೇಳೆಗೆ ಅದರ ಏರುವಿಕೆ ಉತ್ತುಂಗದಲ್ಲಿರುತ್ತದೆ. ಕ್ರಮೇಣ ಇಳಿತ ಪ್ರಾರಂಭವಾಗಿ ಮಾರನೆಯ ದಿನ ಸೂರ್ಯೋದಯದ ವೇಳೆಗೆ ಸಾಮಾನ್ಯವಾಗಿ ಪರಮಾವಧಿ ಇಳಿತವನ್ನು ಕಂಡಿರುತ್ತದೆ. ಈ ಮಧ್ಯದ ಅವಧಿಯಲ್ಲೂ ಅದರ ಏರಿಳಿತಗಳು ನಿಯಮಿತ ಪ್ರಮಾಣದಲ್ಲಿರುವುದಿಲ್ಲ, ವಿಭಿನ್ನ ಮಾಸಗಳಲ್ಲಿ, ವಿಭಿನ್ನ ದಿನಗಳಲ್ಲಿ ಅದು ವ್ಯತ್ಯಾಸ ಹೊಂದುತ್ತಲೇ ಇರುತ್ತದೆ. ಹೀಗಾಗಿ ತುಂಬಾ ದುರ್ಗಮ ಎನ್ನಿಸುವ ಸಮುದ್ರಗಳ ಸಾಲಿಗೆ ಇದು ಸೇರುತ್ತದೆ. ಇದ್ದಕ್ಕಿದ್ದಂತೆಯೇ ಇದರಲ್ಲಿ ಆರೇಳು ಮೀಟರುಗಳಷ್ಟು ಎತ್ತರದ ಅಲೆಗಳು ನಿರ್ಮಿತವಾಗಿ ಆಘಾತವುಂಟುಮಾಡುವುದನ್ನು ಅಲ್ಲಿಯ ವಿವರಗಳಲ್ಲಿ ದಾಖಲಿಸಲಾಗಿದೆ.

ದ್ವಾರಕಾಧೀಶಮಂದಿರದ ಮೇಲೆ ಸದಾ ಹಾರಾಡುವ ಧ್ವಜವು ಅದನ್ನು ತಲುಪುವ ೮-೧೦ಕಿ.ಮೀ. ಮುಂಚಿತವಾಗಿಯೇ ಕಾಣಲು ತೊಡಗುತ್ತದೆ. ಪುರಾಣಗಳಲ್ಲಿ ಬಂದಿರುವ ವಿವರದಂತೆ ಅದರ ದರ್ಶನವಾಗುತ್ತಿದ್ದಂತೆಯೇ ಇದ್ದ ಸ್ಥಳದಿಂದಲೇ ಸಾಷ್ಟಾಂಗ ನಮಸ್ಕರಿಸಿ ಪ್ರಯಾಣ ಮುಂದುವರೆಸಬೇಕು ಎಂದು ವಿಧಿ. ಗೋಮತೀಸ್ನಾನ, ಗೋಮತೀಸಮುದ್ರಸಂಗಮಸ್ನಾನ, ಚಕ್ರತೀರ್ಥಸ್ನಾನ, ಶ್ರೀದ್ವಾರಕಾಧೀಶ ಶ್ರೀಕೃಷ್ಣನ ಸಂದರ್ಶನ, ಅಲ್ಲಿಂದ ಸುಮಾರು ೨.ಕಿ.ಮೀ. ದೂರದಲ್ಲಿರುವ ರುಗ್ಮಿಣೀದರ್ಶನ ಇವು ದ್ವಾರಕೆಯಲ್ಲಿನ ಮುಖ್ಯಕಾರ್ಯಗಳು. ಚಕ್ರತೀರ್ಥ ಗೋಮತೀ ಹಾಗೂ ಸಂಗಮ ಮೂರರಲ್ಲೂ ತೀರ್ಥಶ್ರಾದ್ಧ ವಿಹಿತ ಎಂಬುದು ಇಲ್ಲಿಯ ವಿಶೇಷ. ಸಂಗಮಸ್ಥಳದಲ್ಲಿರುವ ಸಮುದ್ರನಾರಾಯಣ ದೇವಸ್ಥಾನದಲ್ಲೂ ತ್ರಿವಿಕ್ರಮಮೂರ್ತಿಯೇ ಇದ್ದು ಅದೇ ಪ್ರಾಚೀನ ದ್ವಾರಕಾಧೀಶಮಂದಿರ ಎಂಬ ವಾದವೂ ಉಂಟು. ದ್ವಾರಕೆಯಿಂದ ೩೭ಕಿ.ಮೀ. ಇಂದು ಬೇಟ್‌ದ್ವಾರಕಾ ಎಂದು ಪ್ರಸಿದ್ಧವಾಗಿರುವ ಶಂಖೋದ್ಧಾರಕ್ಷೇತ್ರವಿದೆ. ಅಲ್ಲಿ ಶಂಖೋದ್ಧಾತತೀರ್ಥವೂ ಇದೆ. ಗೋಪೀಚಂದನ ದೊರೆಯುವ ಗೋಪೀಹ್ರದ, ಇಂದು ಗೋಪೀತಲಾಬ್ ಎಂದು ಪ್ರಸಿದ್ಧವಾಗಿದ್ದು, ಅದು ದ್ವಾರಕೆಯಿಂದ ೨೧ ಕಿ.ಮೀ. ದೂರದಲ್ಲಿದೆ. ದ್ವಾರಕೆಯ ಪೂರ್ವಕ್ಕೆ ೧೬.ಕಿ.ಮೀ. ದೂರದಲ್ಲಿ ಪಿಂಡಾರಕಕ್ಷೇತ್ರವಿದೆ.

ಗೋಮತೀನದಿಯ ಹಿರಿಮೆಯನ್ನು ತಿಳಿಸುವ ಪುರಾಣವಾಕ್ಯವನ್ನು ಶ್ರೀಮದಾಚಾರ್ಯರು ಗೀತಾಭಾಷ್ಯದಲ್ಲಿ ಉಲ್ಲೇಖಿಸಿದ್ದು ಅದು ಇಂದಿನ ಸ್ಕಾಂದಪುರಾಣದ ಪ್ರಭಾಸಖಂಡದ ದ್ವಾರಕಾ-ಮಾಹಾತ್ಮ್ಯೆಯಲ್ಲಿ ಉಪಲಬ್ಧವಿದೆ :

'ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ ।
ಅಥವಾ ಸ್ನಾನಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧೌ ॥'

ಅದರ ನಿರ್ಣಯವನ್ನು ಶ್ರೀಮದಾಚಾರ್ಯರು ಅಲ್ಲಿಯೇ ತಿಳಿಸಿದ್ದು ಅದನ್ನು ಪುಟ ೧೭ರಲ್ಲಿ ಕೊಡಲಾಗಿದೆ. ಅದರಿಂದ ಸ್ಫುಟಪಡುವಂತೆ ಮುಕ್ತಿಗೆ ಬ್ರಹ್ಮಜ್ಞಾನವೊಂದೇ ಸಾಧನ, ತೀರ್ಥಯಾತ್ರೆ ದಾನ ಮೊದಲಾದವೆಲ್ಲವೂ ಜ್ಞಾನಪ್ರಾಪ್ತಿಗೆ ಸಾಧನವಾಗುವ ಅಂಗಗಳು ಮಾತ್ರ. ಅದರಂತೆ ಇಲ್ಲಿ ಬಂದಿರುವ ದ್ವಾರಕೆಯ ಮಹಿಮೆ ಇತ್ಯಾದಿಗಳು ಮೂಲತಃ ಶ್ರೀವಿಷ್ಣುಸರ್ವೋತ್ತಮತ್ವ, ವಾಯುಜೀವೋತ್ತಮತ್ವ ಮೊದಲಾದ ಮಹಾಪ್ರಮೇಯಗಳ ನಿರ್ಣಯಕ್ಕೆ ನೆರವಾಗುವ ಅರ್ಥದಲ್ಲಿ ವಿಶೇಷವಾಗಿ ಗ್ರಾಹ್ಯವೆನ್ನಿಸುತ್ತವೆ.

ದ್ವಾರಕಾಮಾಹಾತ್ಮ್ಯವು ಸ್ಕಂದಪುರಾಣದ ಪ್ರಭಾಸಖಂಡದ ದ್ವಾರಕಾಮಾಹಾತ್ಮ್ಯ ಎಂಬ ಭಾಗದಲ್ಲಿ ಒಟ್ಟು ೪೪ ಅಧ್ಯಾಯಗಳಲ್ಲೂ (ಶ್ಲೋಕಸಂಖ್ಯೆ ೨೨೮೦), ಗರ್ಗಸಂಹಿತೆಯಲ್ಲಿ ಒಟ್ಟು ೧೩

ಅ: ತ್ರಯೀವಿಖ್ಯಾತವಿಕ್ರಮಃ = ಋಗ್ವೇದ, ಯಜುರ್ವೇದ ಮತ್ತು ಅಥರ್ವಣಗಳೆಂಬ ಮೂರುವೇದಗಳಿಂದ ವಿಶೇಷವಾಗಿ ಹೊಗಳಲ್ಪಡುವ ಪರಾಕ್ರಮವುಳ್ಳ; ತ್ರಿವಿಕ್ರಮಃ = ತ್ರಿವಿಕ್ರಮರೂಪಿಯಾದ ಶ್ರೀಹರಿಯು; ವಿಜಯತೇ = ಉತ್ಕೃಷ್ಟನಾಗಿರುವನು; ಯಃ = ಅವನು; ಕುಶಂ = 'ಕುಶ' ಎಂಬ ಅಸುರನನ್ನು; ದಮಯಿತ್ವಾ = ಸಂಹರಿಸಿ; ಇಮಾಂ = ಕುಶಾಸುರನು ನೆಲೆಸಿದ್ದ ಈ 'ಕುಶಸ್ಥಲೀ' ಎಂಬ ಕ್ಷೇತ್ರವನ್ನು; ವಿಪ್ರಕುಶಸ್ಥಲೀಂ = ಬ್ರಾಹ್ಮಣರಿಗೆ ಯಜ್ಞಾದಿಸತ್ಕ್ರಿಯೆಗಳಿಗೆ ಸಾಧನವಾಗುವ ದರ್ಭೆಗಳನ್ನುಳ್ಳ ಪವಿತ್ರಸ್ಥಳವನ್ನಾಗಿ; ಚಕ್ರೇ = ಮಾಡಿದನು (ಚಾತುರ್ಯೋಕ್ತಿ)

**ಕುಶಾಸುರನನ್ನು ಸಂಹರಿಸಿ ವಿಪ್ರರಿಗೆ ಅಗತ್ಯವಾದ ಕುಶಗಳಿಂದ ಕೂಡಿದ ಈ ಕುಶಸ್ಥಳವನ್ನು ನಿರ್ಮಿಸಿದ ತ್ರಿವಿಕ್ರಮನು ಸರ್ವೋತ್ತಮನಾಗಿರುವನು; ಇವನ ಕೀರ್ತಿ ವೇದವಿಖ್ಯಾತವಾದುದು.**

ವಿ: ೧. ರೇವತರಾಜನು ನಿರ್ಮಿಸಿದ 'ಕುಶಸ್ಥಲೀ' ಎಂಬ ಪವಿತ್ರ ಕ್ಷೇತ್ರವು, ಒಂದು ಕಾಲಕ್ಕೆ ಕುಶಾಸುರನೆಂಬ ರಾಕ್ಷಸನ ವಾಸದಿಂದಾಗಿ, ಪಾವಿತ್ರ್ಯವನ್ನು ಕಳೆದುಕೊಂಡು ಹೆಸರಿಗೆ ಮಾತ್ರವೇ

---

ಅಧ್ಯಾಯಗಳಲ್ಲಿ (ಶ್ಲೋಕಸಂಖ್ಯೆ ೫೬೬) ನಿರೂಪಿತವಾಗಿದೆ. ಅವುಗಳ ಆಧಾರದಲ್ಲಿ ಇಲ್ಲಿ ದ್ವಾರಕಾಮಾಹಾತ್ಮ್ಯೆಯನ್ನು ಸಂಗ್ರಹಿಸಿ ಕೊಡಲಾಗಿದೆ. ದ್ವಾರಕೆಯು ಮಹಾಕ್ಷೇತ್ರವಾದ್ದರಿಂದ ಸಾಕಷ್ಟು ವಿವರವಾಗಿಯೇ ತಿಳಿಯುವಂತೆ ಹೆಚ್ಚಿನ ಸಂಖ್ಯೆಯಲ್ಲಿ ಮೂಲಕೃತಿಗಳ ಶ್ಲೋಕಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಶಂಖೋದ್ಧಾರ, ಪಿಂಡಾರಕ, ಗೋಮತೀ ನದಿಯ ಹಿರಿಮೆ, ಚಕ್ರತೀರ್ಥದ ವೈಶಿಷ್ಟ್ಯ ಮೊದಲಾದವುಗಳ ಬಗ್ಗೆ ಪ್ರಪ್ರಥಮಬಾರಿಗೆ ಅಮೂಲ್ಯವಿಷಯಗಳು ಈ ಕೃತಿಯ ಮೂಲಕ ಬೆಳಕಿಗೆ ಬರುತ್ತಿವೆ ಎಂಬದನ್ನು ಗಮನಿಸಬೇಕು.

ಶ್ರೀಮನ್ಮಧ್ವಾಚಾರ್ಯರು ದ್ವಾರಕೆಗೆ ಸಂದರ್ಶನ ನೀಡಿ ಅಲ್ಲಿ ಋಗ್ವೇದದ ಓಷಧೀ-ಸೂಕ್ತದ ಪಠನೆಯಿಂದ ಹೆಸರಿನ ಕಾಳುಗಳನ್ನು ತಮ್ಮ ಕೈಯಲ್ಲಿರಿಸಿಕೊಂಡೇ ಮೊಳಕೆಯೊಡೆಸಿ, ಗಿಡವಾಗಿಸಿ ಫಲತರಿಸಿದ ಅಪೂರ್ವ ವಿವರ ಸುಮಧ್ವವಿಜಯದಲ್ಲಿ ದಾಖಲಾಗಿದೆ. ಶ್ರೀವಾದಿರಾಜರು ದ್ವಾರಕೆಯನ್ನು ಸಂದರ್ಶಿಸಿ, ಆರುತಿಂಗಳುಗಳ ಕಾಲ ನಿರಾಹಾರವ್ರತದಿಂದಿದ್ದು (ಭಕ್ತಿಂ ಶ್ರೀರಮಣಸ್ಯ ಎಂಬ)ಶ್ರೀಮಧ್ವಾಷ್ಟಕವನ್ನು ರಚಿಸಿದ ಅಪೂರ್ವ ಉಲ್ಲೇಖ ವೃತ್ತರತ್ನಸಂಗ್ರಹದಲ್ಲಿದೆ. ಆ ಸಮಯದಲ್ಲಿ ತೀವ್ರಜ್ವರದಿಂದ ಬಳಲುತ್ತಿದ್ದ ಆ ಕ್ಷೇತ್ರದ ಕೃಷ್ಣ ಎಂಬ ಯತಿಯೊಬ್ಬರಿಗೆ ಶ್ರೀವಾದಿರಾಜರು ರಚಿಸಿದ ಆ ಮಧ್ವಾಷ್ಟಕವನ್ನು ಪಠಿಸಿದರೆ ಜ್ವರವು ಪರಿಹಾರವಾಗುವುದೆಂದು ಸ್ವಪ್ನಸೂಚನೆಯಾಗಿ ಅವರು ಅದರಂತೆ ಮಾಡಿ ರೋಗಮುಕ್ತರಾದುದಲ್ಲದೆ ವಾದಿಗಳನ್ನು ಜಯಿಸುವ ವಿದ್ವಾಂಸರೂ ಸಹ ಆದರು ಎಂಬ ವಿವರವೂ ಅಲ್ಲಿದೆ. ಇದರಿಂದ ಆ ಕಾಲದಲ್ಲಿ ವೈಷ್ಣವ ಸಂಪ್ರದಾಯದ ಯತಿಗಳೊಬ್ಬರು ಅಲ್ಲಿ ನೆಲೆಸಿದ್ದ ಅಪೂರ್ವವಿವರ ತಿಳಿಯುತ್ತದೆ. ಮುಂದೆ ಶ್ರೀವಾದಿರಾಜರು ಪಿಂಡಾರಕಕ್ಷೇತ್ರವನ್ನೂ ಸಂದರ್ಶಿಸಿದರೆಂದು ಐತಿಹ್ಯ.

ಉಡುಪಿಯ ಶಿರೂರು ಮಠದ ಶ್ರೀವಾಸುದೇವತೀರ್ಥರು (ಸುಮಾರು ಕ್ರಿ.ಶ. ೧೩೫೬); ಅದಮಾರು ಮಠದ ಶ್ರೀವಿದ್ಯಾಧೀಶತೀರ್ಥರು (ಸುಮಾರು ಕ್ರಿ.ಶ. ೧೩೬೧), ಶ್ರೀಕಾಣಿಯೂರು ಮಠದ ಶ್ರೀವಿಶ್ವನಾಥತೀರ್ಥರು (ಸುಮಾರು ಕ್ರಿ.ಶ. ೧೫೨೬), ದ್ವಾರಕೆಯಲ್ಲಿ ಹರಿಪದ ಸೇರಿದ ವಿವರ ಅಷ್ಟಮಠದ ಕೈಫಿಯತ್ತುಗಳಿಂದ ತಿಳಿದು ಬರುತ್ತದೆ. ಶ್ರೀಪಲಿಮಾರು ಮಠದ ಶ್ರೀ ರಘುನಾಥತೀರ್ಥರು (ಕ್ರಿ.ಶ.೧೬೨೪) ಸಹ ಇಲ್ಲಿಯೇ ಹರಿಪದವನ್ನೈದಿದ ವಿವರ ಆ ಮಠದ ದಾಖಲೆಗಳಲ್ಲಿದೆ.

'ಕುಶಸ್ಥಲೀ' ಎನ್ನಿಸಿತ್ತು. ಆದರೆ ಬ್ರಹ್ಮಾದಿ ದೇವತೆಗಳ, ಮುನಿಗಳ ಪ್ರಾರ್ಥನೆಯಂತೆ ಸುತಲದಿಂದ ಧಾವಿಸಿ ಬಂದ ತ್ರಿವಿಕ್ರಮದೇವರು, ಆ ಕುಶಾಸುರನನ್ನು ಸಂಹರಿಸಿ ತಾನು ಅಲ್ಲಿ ನೆಲೆಸಿದ್ದರಿಂದ, ಅದು ಪುನಃ ಬ್ರಾಹ್ಮಣರಿಗೆ ಸತ್ಕಾರ್ಯಗಳಿಗೆಲ್ಲ ಅತ್ಯುಪಯುಕ್ತವಾದ ಕುಶ(ದರ್ಭೆ)ಗಳನ್ನು ಹೊಂದಿದ ಪವಿತ್ರಕ್ಷೇತ್ರವಾಗಿ ಪರಿವರ್ತಿತವಾಯಿತು ಎಂದು ಭಾವ.

೨. ಹೀಗೆ ಈ ಕ್ಷೇತ್ರವನ್ನು ನಿಜವಾದ ಅರ್ಥದಲ್ಲಿ 'ಕುಶಸ್ಥಲಿ'ಯನ್ನಾಗಿಸಿದ ತ್ರಿವಿಕ್ರಮರೂಪಿ ಶ್ರೀಹರಿಯು ಋಗಾದಿ ವೇದಗಳಿಂದ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾದ ಸರ್ವೋತ್ತಮ ದೇವತೆಯೇ ಆಗಿರುವನು ಎಂದು ಭಾವ.

೩. ಕ್ಷೇತ್ರ ಮೊದಲಾಗಿ ಒಂದು ವಸ್ತುವು ನಿಜವಾದ ಅರ್ಥದಲ್ಲಿ ಪವಿತ್ರವೆನ್ನಿಸಬೇಕಾದರೆ ಅಲ್ಲಿ ಶ್ರೀಹರಿಯ ವ್ಯಾಪಾರವಿರಲೇಬೇಕು ಎಂಬ ತತ್ತ್ವವು ಇಲ್ಲಿ ಸೂಚಿತವಾಗಿದೆ.

**ಸಗದೋಽಪಿ ಹ್ಯಸೌ ದೇವಃ ಸಂಸಾರೇಽಗದತಾಮಗಾತ್ ।**
**ತ್ರಿವಿಕ್ರಮೋಽಪ್ಯಸೌ ಯೋಗಿಮನಸೋಽವಿಕ್ರಮೋಽಭವತ್ ॥ ೯೨ ॥**

**ಅ:** **ಅಸೌ** = ಈ; **ದೇವಃ** = ತ್ರಿವಿಕ್ರಮದೇವರು; **ಸಗದಃ ಅಪಿ** = 'ಕೌಮೋದಕೀ' ಎಂಬ ಗದೆಯಿಂದ ಯುಕ್ತನಾಗಿದ್ದರೂ; **ಸಂಸಾರೇ** = ಸಂಸಾರದಲ್ಲಿ; **ಅಗದತಾಂ** = ಔಷಧರೂಪತ್ವವನ್ನು; **ಅಗಾತ್** = ಹೊಂದಿದನು; **ಅಸೌ** = ಇವನು; **ತ್ರಿವಿಕ್ರಮಃ ಅಪಿ** = ಮೂರುಲೋಕಗಳಲ್ಲಿ ಹೆಜ್ಜೆಗಳನ್ನಿರಿಸಿದವನಾದರೂ[೧]; **ಯೋಗಿಮನಸಃ** = ಧ್ಯಾನಾಸಕ್ತರಾದ ಮುನಿಗಳ ಮನಸ್ಸಿನಿಂದ; **ಅವಿಕ್ರಮಃ** = ಒಂದು ಹೆಜ್ಜೆಯನ್ನೂ ಮುಂದಿಡದವನಾಗಿ; **ಅಭವತ್** = ಆದನು; (ವಿರೋಧಾಭಾಸಲಂಕಾರ)

**ಈ ತ್ರಿವಿಕ್ರಮದೇವನು 'ಕೌಮೋದಕೀ' ಗದೆಯಿಂದಾಗಿ 'ಸಗದ'ನು. ಆದರೂ ಸಂಸಾರವನ್ನು ಪರಿಹರಿಸುವ ಕಾರ್ಯದಲ್ಲಿ 'ಅಗದ'ನು(ಔಷಧಪ್ರಾಯನು). ಇವನು ಮೂರುಲೋಕಗಳನ್ನು ಮೂರುಹೆಜ್ಜೆಗಳಿಂದಳೆದ 'ತ್ರಿವಿಕ್ರಮ'. ಆದರೆ ಭಕ್ತರ ಮನಸ್ಸಿನಿಂದ ಒಂದು ಹೆಜ್ಜೆಯೂ ಮುಂದಿಡದ 'ಅವಿಕ್ರಮ'.**

ವಿ: ೧. ಸಗದನಾದ[೨] ಇವನು ಅಗದನಾಗಿರುವನು; ತ್ರಿವಿಕ್ರಮನಾದ[೩] ಇವನು ಅವಿಕ್ರಮನಾಗಿರುವನು - ಎಂಬ ಮಾತುಗಳು ಮೇಲ್ನೋಟಕ್ಕೆ ವಿರುದ್ಧವಾಗಿ ತೋರುತ್ತವೆ. ಆದರೆ ಸಗದ - ಎಂದರೆ ಗದಾಪಾಣಿ, ಅಗದ ಎಂದರೆ ಔಷಧಿ ಎಂದೂ, ತ್ರಿವಿಕ್ರಮ ಯೋಗಿಗಳ ಮನಸ್ಸಿನಲ್ಲಿ

---

೧. ಅನೇನ ತ್ರಿಷು ವಿಕ್ರಮೋ ಯಸ್ಯೇತಿ ತ್ರಿವಿಕ್ರಮಶಬ್ದಸ್ಯ ಅರ್ಥಾಂತರಮುಕ್ತಂ ಭವತಿ । ವೇದತ್ರಯಪ್ರತಿಪಾದ್ಯ ಇತ್ಯರ್ಥಃ । —ವ್ಯಾಖ್ಯಾನ

೨. ಸಗದಸ್ಯ ಅಗದತ್ವಮಾಪಾತತೋ ವಿರುದ್ಧಮ್ । ಅಗದಶಬ್ದಸ್ಯ ಔಷಧಾರ್ಥತ್ವೇನ ವಿರೋಧ ಪರಿಹಾರಃ । ಅತ ಏವ ವಿರೋಧಾಭಾಸಾಲಂಕಾರಃ । —ವ್ಯಾಖ್ಯಾನ

೩. ತ್ರಿವಿಕ್ರಮನು ಮೇಲಿನ ಬಲಗೈಯಲ್ಲಿ ಗದೆಯನ್ನು ಧರಿಸಿರುವ ವಿಚಾರವು ಈಗಾಗಲೇ (ಶ್ಲೋಕ ೭೬ ರಲ್ಲಿ) ವರ್ಣಿತವಾಗಿದೆ.

ಅಚಲವಾಗಿ ಗೋಚರಿಸುವನು[1] ಎಂದೂ ಸರಿಯಾಗಿ ಅರ್ಥ ಮಾಡಿಕೊಂಡರೆ ಯಾವ ವಿರೋಧವೂ ಇರುವುದಿಲ್ಲ. ಆದ್ದರಿಂದ ಇಲ್ಲಿ ವಿರೋಧಾಭಾಸವೆಂಬ ಅಲಂಕಾರವಿದೆ.

೨. ತ್ರಿವಿಕ್ರಮನು ಭವರೋಗಕ್ಕೆ ಔಷಧಿರೂಪನಾಗಿರುವನು ಮತ್ತು ಮೂರು ಲೋಕಗಳನ್ನು ಮೂರುಹೆಜ್ಜೆಗಳಿಂದ ವ್ಯಾಪಿಸಿದ ಇವನು ಭಕ್ತರ ಮನಸ್ಸಿನಲ್ಲಿ ಮಾತ್ರ ಸದಾ ಗೋಚರಿಸುವ ಕರುಣಾಳುವೂ ಆಗಿರುವನು ಎಂದು ಭಾವ. ತ್ರಿವಿಕ್ರಮನ ಧ್ಯಾನವು ಭವರೋಗ ಪರಿಹಾರದ ಪರಮೌಷಧಿ ಎಂದೂ, ವ್ಯಾಪ್ತನಾದ ಅವನು ಭಕ್ತರ ಧ್ಯಾನಕ್ಕೆ ಯಥಾಯೋಗ್ಯವಾಗಿ ಗೋಚರಿಸಿ, ಅನುಗ್ರಹಿಸುವ ಮಹಾಮಹಿಮನು ಎಂದೂ ತಾತ್ಪರ್ಯ.

## [2]ಗೋಮತೀ (ನದೀ)

**ಶ್ರೀಕೃಷ್ಣಚರಣಾಂಭೋಜರಜೋರಂಜಿತಗೋಮತೀಮ್ ।**
**ಗೋಮತೀಮಬ್ಧಿರಮಣೀಂ ಭಜೇ ತಾಪತ್ರಯಾಪಹಾಮ್ ॥ ೬೩ ॥**

ಅ: ಶ್ರೀಕೃಷ್ಣಚರಣಾಂಭೋಜರಜೋರಂಜಿತಗೋಮತೀಮ್ = ಶ್ರೀಕೃಷ್ಣನ ಚರಣಕಮಲಗಳ ಧೂಳಿನಿಂದ ಶೋಭಿತವಾದ ಜಲವನ್ನುಳ್ಳ; ತಾಪತ್ರಯಾಪಹಾಂ = ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕವೆಂಬ ಮೂರುವಿಧ ತಾಪಗಳನ್ನು ಹೋಗಲಾಡಿಸುವ; ಅಬ್ಧಿರಮಣೀಂ = ಸಮುದ್ರನ ಪತ್ನಿಯಾದ, ಗೋಮತೀಂ = ಗೋಮತೀ ನದಿಯನ್ನು; (ಅಹಂ) ಭಜೇ = ನಾನು ಸೇವಿಸುವೆನು.

**ಶ್ರೀಕೃಷ್ಣನ ಚರಣಕಮಲಗಳ ಧೂಳಿನಿಂದ ಶೋಭಿಸುವ ಜಲವನ್ನುಳ್ಳ, ಮೂರು ಬಗೆಯ ತಾಪ ನೀಗಿಸುವ, ಸಮುದ್ರಪತ್ನಿಯಾದ, ಗೋಮತೀನದಿಯನ್ನು ಸೇವಿಸುವೆನು.**

ವಿ: ೧. ಶ್ರೀಕೃಷ್ಣನ ಪಾದಕಮಲಗಳ ಸ್ಪರ್ಶದಿಂದ ಪುನೀತವಾದ ನದಿ ಎಂಬುದು ಈ ಗೋಮತೀ ನದಿಯ ವೈಶಿಷ್ಟ್ಯ. ಆದರಿಂದಾಗಿಯೇ ಇದರ ಸೇವನೆಯು ತಾಪತ್ರಯ ಪರಿಹಾರಕ ಎಂದು ಭಾವ.

೨. **ಗೋಮತೀಂ:** 'ಗೋ' ಎಂಬುದಕ್ಕೆ ಇರುವ ಅನೇಕ ಅರ್ಥಗಳಲ್ಲಿ 'ಜಲ' ಎಂಬುದೂ

---

೧. ಯೋಗಿಮನೋ ವಿಹಾಯ ಪಾದಮಾತ್ರಮಪಿ ಗಂತುಂ ನ ಸಮರ್ಥೋ ಜಾತಃ ಇತ್ಯರ್ಥಃ। ಸದಾ ಯೋಗಿಮನೋಗೋಚರೋಽಭವದಿತಿ ಭಾವಃ । ತ್ರಿವಿಕ್ರಮಸ್ಯಾವಿಕ್ರಮತ್ವಂ ಆಪಾತತೋ ವಿರುದ್ಧಂ। ತಾತ್ಪರ್ಯಾರ್ಥಮಾದಾಯ ವಿರೋಧಪರಿಹಾರಃ। –ವ್ಯಾಖ್ಯಾನ

೨. ಈ ಗೋಮತೀನದಿಯು ಗೋದಾವರಿಯಂತೆ ಗಂಗೆಯ ಮತ್ತೊಂದು ಕವಲು. ದ್ವಾರಕೆ ಸಮುದ್ರದಬಳಿಯೇ ಇದು ಉಗಮಹೊಂದಿ ಅಲ್ಲಿಯೇ ಸಮುದ್ರ ಸೇರುವ ವಿಶಿಷ್ಟನದಿ ಎಂಬುದು ಇದರ ಹಿರಿಮೆ. ದ್ವಾರಕೆಯ ದ್ವಾರಕಾಧೀಶ ಮಂದಿರದ ಬಳಿಯೇ ಗೋಮತೀನದಿಯ ಉಗಮಸ್ಥಾನವನ್ನು ಸೂಚಿಸುವ ಗೋಮತೀದೇವಿ ಮಂದಿರವೊಂದಿದೆ. ಈ ಸ್ಥಳ 'ಗೋಮತೀ ಘಾಟ್' ಎಂದೇ ಪ್ರಸಿದ್ಧ. ಒಂದು ಮಹಾನದಿಯ ಒಟ್ಟು ಉದ್ದ ಕೆಲವೇ ಮೀಟರುಗಳಷ್ಟು ಎಂಬುದು ಮಹಾ ಆಶ್ಚರ್ಯಗಳಲ್ಲೊಂದು.

ಒಂದು; 'ಗೌರ್ಜಲಂ ಅಸ್ಯಾ ಅಸ್ತೀತಿ ಗೋಮತೀ' ಎಂದು 'ಗೋಮತೀ' ಶಬ್ದಕ್ಕೆ ಅರ್ಥ; ಎಲ್ಲಾ ನದಿಗಳು ಜಲಯುಕ್ತವೇ ಆಗಿದ್ದರೂ, ಶ್ರೀಕೃಷ್ಣಪಾದಸ್ಪರ್ಶ ಹೊಂದಿದ ವಿಶಿಷ್ಟ ಜಲದಿಂದ ಕೂಡಿರುವುದು ಎಂಬ ಹಿನ್ನೆಲೆಯನ್ನು ಈ ನದಿಗೆ 'ಗೋಮತೀ' ಎಂಬ ಹೆಸರು ಸಾರ್ಥಕವಾಗಿದೆ ಎಂದು ಭಾವ. [೧]ಗೋಮತೀ ಸ್ನಾನದಿಂದ ಸುಮತಿಪ್ರಾಪ್ತಿ ಎಂದೂ ತಿಳಿಯಬೇಕು.

೩. ಗೋಮತೀ ನದಿಯು ತುಂಬಾ ಪ್ರಸಿದ್ಧವಾದ ನದಿಗಳಲ್ಲೊಂದಾಗಿದೆ; ದ್ವಾರಕೆಯ ಬಳಿ ಇದು ಸಮುದ್ರವನ್ನು ಸೇರುತ್ತದೆ; ಇದರಲ್ಲಿ ಸ್ನಾನ ಮಾತ್ರದಿಂದಲೇ ಮುಕ್ತಿ ಲಭಿಸುವುದೆಂದು ಪುರಾಣಗಳು ವರ್ಣಿಸಿವೆ:

ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ ।
ಅಥವಾ ಸ್ನಾನಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧೌ ॥

- ಶ್ರೀಮದಾಚಾರ್ಯರಿಂದ ಗೀತಾಭಾಷ್ಯದಲ್ಲಿ ಉದ್ಧೃತವಾದ ಬ್ರಹ್ಮಪುರಾಣದ ವಚನ.

೪. ನೈಮಿಷಾರಣ್ಯದ ಬಳಿ ಹರಿಯುವ ಗೋಮತೀ ಎಂಬ ನದಿಯು ಇದರಿಂದ ಬೇರೆಯಾಗಿದ್ದು ಅದು ಮುಂದೆ ಗಂಗಾನದಿಯನ್ನು ಸೇರುತ್ತದೆ. ಆದರೆ ಈ ಗೋಮತೀ ನದಿಯು ಸಾಕ್ಷಾತ್ ಸಮುದ್ರವನ್ನು ಸೇರುವ ಮಹಾನದಿ ಎಂಬುದನ್ನು ಗಮನಿಸಬೇಕು. ಇದು ಸಮುದ್ರವನ್ನು ಸೇರುವ ಸ್ಥಳವನ್ನು ಗೋಮತೀಘಾಟ್ ಎನ್ನುವರು.

೫. ಶ್ರೀಮದಾಚಾರ್ಯರು ಒಮ್ಮೆ ಈ ಗೋಮತೀ ತೀರದಲ್ಲಿ ಸಂಚರಿಸುತ್ತಿದ್ದಾಗ, ಶೂದ್ರರಾಜನೊಬ್ಬನು ಎತ್ತಿದ ಆಕ್ಷೇಪವನ್ನು ಪರಿಹರಿಸಿ ವೇದಪ್ರಾಮಾಣ್ಯವನ್ನು ಸ್ಥಾಪಿಸಿದ ವಿವರ ಸುಮಧ್ವವಿಜಯದಲ್ಲಿ ಬಂದಿದೆ. (೧೬/೨-೫)

**ಫುಲ್ಲಫೇನಸಿತಾಂಭೋಧಿಕಲ್ಲೋಲಧೃತಯಾ ತಯಾ ।**
**ವಲ್ಲಭಾಲಿಂಗನಸುಖಂ ದುರ್ಲಭಂ ಲಭ್ಯತೇಽನಿಶಮ್ ॥ ೯೪ ॥**

ಅ: **ಫುಲ್ಲಫೇನಸಿತಾಂಭೋಧಿಕಲ್ಲೋಲಧೃತಯಾ** = ಅರಳಿರುವ ನೊರೆಗಳಿಂದಾಗಿ ಬಿಳಿದಾಗಿ ಕಾಣುವ ಸಮುದ್ರದ ಅಲೆಗಳಿಂದ ಆಲಂಗಿತಳಾದ; **ತಯಾ** = ಆ ಗೋಮತೀ ನದಿಯಿಂದ; **ದುರ್ಲಭಂ** = ಸುಲಭವಲ್ಲದ; **ವಲ್ಲಭಾಲಿಂಗನಸುಖಂ** = ಪತಿಯ ಆಲಿಂಗನದ ಸುಖವು; **ಅನಿಶಂ** = ಸದಾಕಾಲವೂ; **ಲಭ್ಯತೇ** = ಹೊಂದಲ್ಪಡುತ್ತಿದೆ.

**ಅರಳಿದ ನೊರೆಗಳಿಂದಾಗಿ ಬಿಳಿದಾಗಿ ಕಾಣುವ ಸಮುದ್ರದ ಅಲೆಗಳಿಂದ ಆಲಿಂಗಿತಳಾದ ಈ ಗೋಮತೀನದಿಯು ಸುಲಭವಾಗಿ ದೊರೆಯದ ಪತಿಯ ಆಲಿಂಗನದ ನಲಿವನ್ನು ಸದಾ ಹೊಂದಿದೆ.**

ವಿ: ೧. ಯಾವುದೇ ಸ್ತ್ರೀಗೂ ತನ್ನ ಪತಿಯ ಆಲಿಂಗನದ ಭಾಗ್ಯವು ಸದಾ ದೊರೆಯುವುದು

---

೧. ಅನೇನ 'ಅಸಾಧಾರಣ್ಯೇನ ವ್ಯಪದೇಶಾ ಭವಂತೀತಿ' ಗೋಮತೀಶಬ್ದಸ್ಯ ನಿರ್ವಚನಮ್। – ವ್ಯಾ
೨. ಇದರ ಅಭಿಪ್ರಾಯವನ್ನು ಶ್ರೀಮದಾಚಾರ್ಯರೇ ನಿರ್ಣಯಿಸಿದ್ದು ಅದನ್ನು ಮುನ್ನುಡಿಯಲ್ಲಿ ವಿವರಿಸಲಾಗಿದೆ.

ಸುಲಭವಲ್ಲ; ಆದರೆ ಗೋಮತಿಗೆ ಅನುಕೂಲವಾದ ಪತಿಯ ಅಂತಹ ಆಲಿಂಗನ ಸೌಖ್ಯವು ಸದಾ ದೊರೆಯುತ್ತದೆ ಎಂಬುದು ತನ್ನ ಆನಂದವನ್ನು ಸೂಚಿಸುವ ಸಮುದ್ರರಾಜನ ನೊರೆಯಿಂದಾಗಿ ಬಿಳಿದಾದ ಅಲೆಗಳಿಂದ ವ್ಯಕ್ತವಾಗುತ್ತಿದೆ ಎಂದು ಭಾವ[೧].

೨. ಪತಿಯ ಇಂತಹ ನಿತ್ಯ ಪ್ರೀತಿಗೆ ಭಾಗಿಯಾಗುವ ಸ್ತ್ರೀಯು ನಿಜಕ್ಕೂ ಭಾಗ್ಯವತಿಯೇ ಸರಿ. ಗೋಮತಿಯು ಅಂತಹ ಸೌಭಾಗ್ಯವತಿ ಎಂದು ಭಾವ.

## ಚಕ್ರತೀರ್ಥ (ದ್ವಾರಕಾಕ್ಷೇತ್ರ)

**ಚಕ್ರತೀರ್ಥಸ್ಯ ಮಹಿಮಾ ವರ್ಣಿತುಂ ಕೇನ ಶಕ್ಯತೇ ।**
**ಯಚ್ಛಿಲಾಮಪಿ ಸಂಗೇನ ವಿಧತ್ತೇ ವಿಶ್ವವಂದಿತಾಮ್ ॥ ೯೫ ॥**

ಅ: ಚಕ್ರತೀರ್ಥಸ್ಯ = ಚಕ್ರತೀರ್ಥದ; ಮಹಿಮಾ = ಮಹಿಮೆಯನ್ನು (ಸಾಮರ್ಥ್ಯವು); ವರ್ಣಿತುಂ = ವರ್ಣಿಸಲು; ಕೇನ = ಯಾರಿಂದ; ಶಕ್ಯತೇ = ಸಾಧ್ಯವಾದೀತು?; ಯತ್ = (ಏಕೆಂದರೆ) ಆ ಚಕ್ರತೀರ್ಥವು; ಸಂಗೇನ = ತನ್ನ ಸಂಪರ್ಕದಿಂದ; ಶಿಲಾಂ = ಶಿಲೆಯನ್ನು; ಅಪಿ = ಸಹ; ವಿಶ್ವವಂದಿತಾಂ = ಸಮಸ್ತ ಜನರಿಂದಲೂ (ಸಾಲಿಗ್ರಾಮದಂತೆ) ಪೂಜ್ಯವಾದುದನ್ನಾಗಿ; ವಿಧತ್ತೇ = ಮಾಡುವುದು.

ತನ್ನ ಸಂಪರ್ಕದಿಂದ ಶಿಲೆಯನ್ನೂ ಸಹ ಸಮಸ್ತಜನರಿಂದ ಪೂಜ್ಯವಾಗಿಸುವ ಈ ಚಕ್ರತೀರ್ಥದ ಮಹಿಮೆಯನ್ನು ವರ್ಣಿಸಲು ಯಾರಿಂದ ಸಾಧ್ಯವಾದೀತು?

ವಿ: ೧. ಜ್ಞಾನಿಗಳಾದ ಶ್ರೀವಾದಿರಾಜರು ಚಕ್ರತೀರ್ಥವನ್ನು ಈ ಶ್ಲೋಕದಲ್ಲಿ ವರ್ಣಿಸಿರುವರು. ಚಕ್ರತೀರ್ಥದ ಸಂಪರ್ಕವನ್ನು ಹೊಂದುವ [೨]ಜ್ಞಾನಾದಿಗುಣಶೂನ್ಯವಾದ ಶಿಲೆಯೂ ಸಹ ಸಾಲಿಗ್ರಾಮದಂತೆ ಪೂಜ್ಯವಾಗುತ್ತದೆ[೩]. ಜಡಕ್ಕೂ ಸಹ ತನ್ನ ಸಂಪರ್ಕದಿಂದ ಇಂತಹ ಮಹತ್ತ್ವವನ್ನು ತಂದು ಕೊಡುವ ಚಕ್ರತೀರ್ಥದ ಮಹಿಮೆ ವರ್ಣಿಸಲಸದಳವಾದುದು ಎಂದು ಭಾವ[೪]. ಇದನ್ನು ಸ್ನಾನಾದಿಗಳಿಂದ ಸೇವಿಸುವ ಜನರು ಸಹ ಯಥಾಯೋಗ್ಯವಾಗಿ ವಂದ್ಯರಾಗುತ್ತಾರೆ ಎಂಬ ಧ್ವನಿಯೂ ಇಲ್ಲಿದೆ. (ಸಂಸಾರಚಕ್ರದಿಂದ ಪಾರಾಗಲು ಚಕ್ರತೀರ್ಥದ ಸೇವನೆಯು ಅತ್ಯವಶ್ಯ)[೫].

---

೧. ಅನೇನ ನಾಯಕಸ್ಯ ಅನುಕೂಲತ್ವಂ ನಾಯಿಕಾಯಾಃ ಸ್ವಾಧೀನಪತಿಕಾತ್ವಂ ಚ ದ್ಯೋತ್ಯತೇ । ವ್ಯಾ

೨. ಜ್ಞಾನಾದಿಗುಣಶೂನ್ಯಪಾಷಾಣಮಪಿ । — ವ್ಯಾಖ್ಯಾನ

೩. ಚಕ್ರತೀರ್ಥೇ ಪತಿತಾಃ ಶಿಲಾ ಅಪಿ ಚಕ್ರಾಂಕಾ ಭೂತ್ವಾ ಸಾಲಗ್ರಾಮವದ್ವಂದಿತಾ ಭವಂತೀತಿ ಸರ್ವಜನಪ್ರಸಿದ್ಧಿಃ । — ವ್ಯಾಖ್ಯಾನ

೪. ಜಡಸ್ಯಾಪ್ಯೇತಾದೃಶಮಹತ್ತ್ವಸಂಪಾದಕಸ್ಯ ಚಕ್ರತೀರ್ಥಸ್ಯ ಮಹಿಮಾತಿಶಯಃ ಕಥಂ ಕಥನೀಯ ಇತಿ ಭಾವಃ । — ವ್ಯಾಖ್ಯಾನ

೫. ಸಾಲಿಗ್ರಾಮದಂತೆ ಚಕ್ರಾಂಕಿವನ್ನು ಸಹ ಪ್ರತಿನಿತ್ಯ ಪೂಜಿಸಬೇಕು ಎಂದು ಶ್ರೀಮದಾಚಾರ್ಯರು ತಮ್ಮ ಕೃಷ್ಣಾಮೃತಮಹಾರ್ಣವ ಗ್ರಂಥದಲ್ಲಿ ತಿಳಿಸಿರುವರು;

೨. ಈ ಚಕ್ರತೀರ್ಥವು ಈಗ ದ್ವಾರಕೆಯಲ್ಲಿ ಅದೃಶ್ಯವಾಗಿದೆ. ಇದರ ಸಂಪರ್ಕವನ್ನು ಹೊಂದುವ ಶಿಲೆಯು ಚಕ್ರಚಿಹ್ನೆಗಳಿಂದ ಕೂಡಿ ಸಾಲಿಗ್ರಾಮದಂತೆ ಪೂಜ್ಯವಾಗುತ್ತದೆ ಎಂದು ಶ್ರೀವಾದಿರಾಜರು ನಿರೂಪಿಸಿರುವರು. ಚಕ್ರಾಂಕಿತಗಳು ಹೇರಳವಾಗಿ ದೊರೆಯುವ ಈ ಸ್ಥಳವೇ ಈ ಚಕ್ರತೀರ್ಥ. ಇಂದು ಗೋಮತೀನದಿಯು ಸಮುದ್ರವನ್ನು ಸೇರುವ ಸ್ಥಳ ಎಂದು ಪ್ರಸಿದ್ಧವಾದ ಸ್ಥಳದಲ್ಲಿ ಇಂದೂ ಅಪಾರಸಂಖ್ಯೆಯ ಚಕ್ರಾಂಕಿತ(ಚಕ್ರಾಣಿಕೆ)ಗಳು ದೊರೆಯುತ್ತವೆ ಎಂದ ಮೇಲೆ ಪ್ರಾಯಃ ಈ ಸಂಗಮಸ್ಥಳದಲ್ಲೇ ಚಕ್ರತೀರ್ಥವಿದ್ದಿರಬೇಕು. ಸಮುದ್ರದ ಅಲೆಗಳೊಂದಿಗೆ ಚಕ್ರಾಂಕಿತಗಳು ತೀರಕ್ಕೆ ಬಂದು ಬೀಳುವ ದೃಶ್ಯವನ್ನು ಇಂದೂ ಅಲ್ಲಿ ಕಾಣಬಹುದು.

## ಶಂಖೋದ್ಧಾರ ಕ್ಷೇತ್ರ

**ಪಾಪೇನಾಪಿ ಸಮಾವೃತಸ್ಯ ವಿಮಲಜ್ಞಾನೋಜ್ಝಿತಸ್ಯಾಪ್ಯಲಂ**
**ಮಗ್ನಸ್ಯಾಪಿ ಭವಾಂಬುಧಾವಿಹ ಭವೇತ್ ಪೂತಸ್ಯ ಜಾತ್ಯೋದ್ಧೃತಿಃ ।**
**ಇತ್ಯಾಖ್ಯಾಪಯಿತುಂ ದರಂ ಮುರಹರೋ ಯತ್ರೋದ್ದಧಾರಾದರಾತ್**
**ಶಂಖೋದ್ಧಾರಪದಂ ವಿಭಾತಿ ತದಿದಂ ಕ್ಷೇತ್ರಂ ಪವಿತ್ರಂ ಭುವಿ ॥ ೯೬ ॥**

ಅ: **ಪಾಪೇನ** = ಪಾಪ(ದುಷ್ಕೃತ್ಯ)ದಿಂದ; **ಸಮಾವೃತಸ್ಯ ಅಪಿ** = ಕೂಡಿದವನಾಗಿದ್ದರೂ; **ವಿಮಲಜ್ಞಾನೋಜ್ಝಿತಸ್ಯ ಅಪಿ** = ನಿರ್ಮಲವಾದ ಜ್ಞಾನ ಇಲ್ಲದವನಾದರೂ; **ಅಲಂ** = ಬಹಳವಾಗಿ; **ಭವಾಂಬುಧೌ** = ಸಂಸಾರ ಸಮುದ್ರದಲ್ಲಿ; **ಮಗ್ನಸ್ಯ ಅಪಿ** = ಮುಳುಗಿಹೋದವನಾಗಿದ್ದರೂ ಸಹ; **ಜಾತ್ಯಾ** = ಸ್ವರೂಪತಃ; **ಪೂತಸ್ಯ** = ಶುದ್ಧನಾದಂತಹ ಜೀವನಿಗೆ; **ಇಹ** = ಸಂಸಾರದಿಂದ; **ಉದ್ಧೃತಿಃ** = ಉದ್ಧಾರವು; **ಭವೇತ್** = ಆಗುವುದು; **ಇತಿ** = ಎಂಬುದಾಗಿ; **ಆಖ್ಯಾಪಯಿತುಂ** = ಚೆನ್ನಾಗಿ ತಿಳಿಸಲೆಂದು; **ಮುರಹರಃ** = ಮುರವೈರಿಯಾದ ಶ್ರೀಕೃಷ್ಣನು; **ಆದರಾತ್** = ಪ್ರೀತಿಯಿಂದ; **ಯತ್ರ (ಕ್ಷೇತ್ರೇ)** = ಯಾವ ಕ್ಷೇತ್ರದಲ್ಲಿ; **ದರಂ** = (ಪಾಂಚಜನ್ಯ) ಶಂಖವನ್ನು; **ಉದ್ದಧಾರ** = ಮೇಲಕ್ಕೆ ಎತ್ತಿದನೋ; **ತತ್** = ಅಂತಹ; **ಇದಂ** = ಈ; **ಪವಿತ್ರಂ** = ಪಾವನವಾದ; **ಶಂಖೋದ್ಧಾರಪದಂ** = ಶಂಖೋದ್ಧಾರವೆಂಬ ಹೆಸರನ್ನು ಹೊಂದಿರುವ; **ಕ್ಷೇತ್ರಂ** = ಕ್ಷೇತ್ರವು; **ಭುವಿ** = ಭೂಮಂಡಲದಲ್ಲಿ; **ವಿಭಾತಿ** = ಕಂಗೊಳಿಸುತ್ತಿದೆ.

---

ಸಾಲಗ್ರಾಮೋದ್ಭವೋ ದೇವೋ ಶೈಲಂ ಚಕ್ರಾಂಕಮಂಡಿತಮ್ ।
ಯತ್ರಾಪಿ ನೀಯತೇ ತತ್ರ ವಾರಾಣಸ್ಯಾಃ ಶತಾಧಿಕಮ್ ॥ (೧೦೬)
ಸಾಲಗ್ರಾಮೋದ್ಭವೋ ದೇವೋ ದೇವೋ ದ್ವಾರವತೀಭವಃ ।
ಉಭಯೋಃ ಸಂಗಮೋ ಯತ್ರ ಮುಕ್ತಿಸ್ತತ್ರ ನ ಸಂಶಯಃ ॥ (೧೦೭)
ಚಕ್ರಾಂಕಿತಗಳ ಸಂಖ್ಯೆಯು ಸಾಲಿಗ್ರಾಮಗಳ ಸಂಖ್ಯೆಯ ಎರಡರಷ್ಟಿರಬೇಕು ಎಂಬ ವಿಶೇಷಾಂಶ ಪಂಚರಾತ್ರದಲ್ಲಿದೆ.
ಚಕ್ರಾಂಕಮಿಥುನಂ ಪೂಜ್ಯಂ ಸಾಲಿಗ್ರಾಮ ಪ್ರತಿ ಪ್ರತಿ ॥ – ಪಂಚರಾತ್ರ

ಪಾಪಗಳಿಂದ ಕೂಡಿದ್ದರೂ, ನಿರ್ಮಲಜ್ಞಾನರಹಿತನಾಗಿದ್ದರೂ, ಸಂಸಾರಸಾಗರದಲ್ಲಿ ಮುಳುಗಿದ್ದರೂ, ಸ್ವಭಾವತಃ ಶುದ್ಧನಾದವನಿಗೆ ಉದ್ಧಾರವು ಖಚಿತ ಎಂದು ತಿಳಿಸಿಕೊಡಲೆಂದು ಮುರಾರಿಯಾದ ಶ್ರೀಕೃಷ್ಣ ಆದರದಿಂದ ಶಂಖವನ್ನು ಮೇಲೆತ್ತಿದ ಈ ಶಂಖೋದ್ಧಾರಕ್ಷೇತ್ರವು ಭೂಮಿಯಲ್ಲಿ ಅತ್ಯಂತ ಪವಿತ್ರವಾಗಿ ಕಂಗೊಳಿಸುತ್ತಿದೆ.

ವಿ: ೧. ಸಾಂದೀಪನ್ಯಾಚಾರ್ಯರ ಮೃತಪುತ್ರನನ್ನು ಅವರ ಅಪೇಕ್ಷೆಯಂತೆ ಕರೆ ತರಲು ಹೊರಟ ಶ್ರೀಕೃಷ್ಣನು ಸಮುದ್ರದಲ್ಲಿದ್ದ 'ಪಂಚಜನ' ರೆಂಬ ಅಸುರರನ್ನು ಸಂಹರಿಸಿ ಪಾಂಚಜನ್ಯವೆಂಬ ಶಂಖವನ್ನು ಮೇಲೆತ್ತಿದನೆಂಬ ವಿವರ ಭಾಗವತಾದಿ ಪುರಾಣಗಳಲ್ಲಿ ಬಂದಿದೆ. ಶ್ರೀಕೃಷ್ಣನು ಹಾಗೆ ಪಾಂಚಜನ್ಯ ಶಂಖವನ್ನು ಸಮುದ್ರದಿಂದ ಮೇಲೆತ್ತಿದ ಸ್ಥಳವೇ 'ಶಂಖೋದ್ಧಾರ' ವೆಂದು ಪ್ರಸಿದ್ಧವಾಗಿರುವ ಕ್ಷೇತ್ರ. ಬೇಟ್ ದ್ವಾರಕಾ ಎಂದು ಪ್ರಸಿದ್ಧವಾಗಿರುವ ದ್ವಾರಕೆಯಿಂದ ಸುಮಾರು ೩೦ ಕಿ.ಮೀ. ದೂರದಲ್ಲಿರುವ ಒಂದು ದ್ವೀಪವೇ ಈ ಶಂಖೋದ್ಧಾರ ಕ್ಷೇತ್ರ. ಇದರಲ್ಲಿ ಶಂಖೋದ್ಧಾರತೀರ್ಥವೆಂಬ ಒಂದು ತೀರ್ಥವನ್ನು ಇಂದೂ ಕಾಣಬಹುದು. ಈ ತೀರ್ಥ-ನಿರ್ಮಾಣದ ಹಿನ್ನೆಲೆ ಗರ್ಗಸಂಹಿತೆಯಲ್ಲಿ ಬಂದಿದೆ[೧]. ಶ್ರೀಕೃಷ್ಣನು ಪರಂಧಾಮಕ್ಕೆ ತೆರಳುವ ಮುನ್ನ ಯಾದವರನ್ನು ತನ್ನೊಂದಿಗೆ ಕರೆದೊಯ್ಯುತ್ತಾ ಸ್ತ್ರೀಯರು, ಬಾಲಕರು ಮೊದಲಾದವರನ್ನು ಈ ಶಂಖೋದ್ಧಾರಕ್ಷೇತ್ರಕ್ಕೆ ಕಳುಹಿಸಿಕೊಟ್ಟ ಎಂಬ ವಿವರ ಶ್ರೀಮದ್ಭಾಗವತಪುರಾಣದಲ್ಲಿದೆ[೨].

೨. ಶಂಖವು[೩] ಪಾಪಿಷ್ಠನಾದ ಪಂಚಜನನೆಂಬ ಅಸುರನಿಂದ ಆವೃತವಾಗಿತ್ತು; ಜಡ-ವಾದ್ದರಿಂದ ಶೂನ್ಯವಾಗಿತ್ತು; ಸಮುದ್ರದಲ್ಲಿ ಮುಳುಗಿತ್ತು.ಆದರೆ ಸ್ವಭಾವತಃ ಶುಭ್ರ(ವರ್ಣ) ವಾಗಿತ್ತು; ಅಂತಹ ಪಾಂಚಜನ್ಯವನ್ನು ಶ್ರೀಕೃಷ್ಣನು ಮೇಲೆತ್ತುವ ಮೂಲಕ ತೋರಿಸಿದ ತತ್ತ್ವವನ್ನು ಶ್ರೀವಾದಿರಾಜ ಸ್ವಾಮಿಗಳು ಇಲ್ಲಿ ವಿವರಿಸಿರುವರು.

೪. ಸ್ವರೂಪತಃ ಸುಜೀವಿಯಾದವನು ಯಾವುದೋ ಕಾರಣಕ್ಕಾಗಿ ಪಾಪಕಾರ್ಯಗಳನ್ನು ಮಾಡಿದರೂ, [೪]ತತ್ತ್ವಜ್ಞಾನಶೂನ್ಯನಾಗಿದ್ದರೂ, ಸಂಸಾರದಲ್ಲಿ ಮುಳುಗಿದ್ದರೂ, ಶ್ರೀಹರಿಯು

---

೧. ವಿವರಗಳನ್ನು 'ದ್ವಾರಕಾಮಹಾತ್ಮ್ಯ' ಕೃತಿಯಿಂದ ಪಡೆಯಬಹುದು.

೨. ದಿವಿ ಭುವ್ಯಂತರಿಕ್ಷೇ ಚ ಮಹೋತ್ಪಾತಾನ್ ಸಮುತ್ಥಿತಾನ್ ।
ದೃಷ್ಟ್ವಾऽऽಸೀನಾನ್ ಸುಧರ್ಮಾಯಾಂ ಕೃಷ್ಣಃ ಪ್ರಾಹ ಯದೂನಿದಮ್ ॥
ಏತೇ ಘೋರಾ ಮಹೋತ್ಪಾತಾ ದ್ವಾರ್ವತ್ಯಾಂ ಯಮಕೇತವಃ ।
ಮುಹೂರ್ತಮಪಿ ನ ಸ್ಥೇಯಮತ್ರ ನೋ ಯದುಪುಂಗವಾಃ ॥
ಸ್ತ್ರಿಯೋ ಬಾಲಾಶ್ಚವೃದ್ಧಾಶ್ಚ ಶಂಖೋದ್ಧಾರಂ ವ್ರಜಂತ್ವಿತಃ ।
ವಯಂ ಪ್ರಭಾಸಂ ಯಾಸ್ಯಾಮೋ ಯತ್ರ ಪ್ರತ್ಯಕ್ಸರಸ್ವತೀ ॥ – ಭಾಗವತ (೧೧/೩೦/೪-೬)

೩. ಶಂಖೋऽಪಿ ಪಾಪಿಷ್ಠೇನ ಅಸುರೇಣ ಪಂಚಜನೇನ ಆವೃತಃ । ಜಡತ್ವಾತ್ ಜ್ಞಾನಶೂನ್ಯಃ ಸಮುದ್ರೇ ಮಗ್ನಃ । ಜಾತ್ಯಾ ಪೂತಃ ಶುಭ್ರಃ । ಏತಾದೃಶಶಂಖೋದ್ಧಾರೇಣ ಏತಾದೃಶಜೀವಸ್ಯಾಪ್ಯುದ್ಧಾರೋ ಭವೇದಿತ್ಯಯಮರ್ಥೋ ಭವತೀತಿ । – ವ್ಯಾಖ್ಯಾನ

೪. ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥

ಅವನನ್ನು ತಪ್ಪದೇ ಉದ್ಧರಿಸುವನು ಎಂದು ಭಾವ. ಅಜಾಮಿಳ, ಮಾಧವ ಮೊದಲಾದವರು ಇದಕ್ಕೆ ನಿದರ್ಶನ ಎಂಬುದನ್ನು ಗಮನಿಸಬೇಕು.

೫. ಜೀವನ ಸ್ವರೂಪ ಯೋಗ್ಯತೆಯನ್ನು ಗಮನಿಸಿ ಪರಮಾತ್ಮನು ಅವನಿಗೆ ಉಚಿತವಾದ ಗತಿಯನ್ನು ಕೊಡುವನು. ಆದ್ದರಿಂದ ಸ್ವರೂಪತಃ ಶುದ್ಧನಾದ ಜೀವನನ್ನು ಶ್ರೀಹರಿಯು ಖಚಿತವಾಗಿ ಉದ್ಧರಿಸುವನು ಎಂದು ಭಾವ. ಸ್ವರೂಪತಃ ಅಯೋಗ್ಯನಾದವನ ಪುಣ್ಯಕಾರ್ಯ, ಪಾಂಡಿತ್ಯ ಮೊದಲಾದವುಗಳೆಲ್ಲ ನಿರರ್ಥಕ, ಅದರಂತೆ ಸ್ವರೂಪತಃ ಯೋಗ್ಯನಾದವನ ಪಾಪಾದಿಗಳೂ ಸಹ ಅವನಿಗೆ ಅತ್ಯಂತಿಕ ಅನರ್ಥಕ್ಕೆ ಕಾರಣವಾಗುದಿಲ್ಲ ಎಂದು ಭಾವ. ಈ ತತ್ತ್ವವು ಶಂಖೋದ್ಧಾರ ಪ್ರಸಂಗದಿಂದ ತಿಳಿಯುತ್ತದೆ. ಶಂಖೋದ್ಧಾರವು ಸಕಲ ಸುಜೀವಿಗಳ ಉದ್ಧಾರಕ್ಕೂ ಉಪಲಕ್ಷಕ.

## ಗೋಪೀಚಂದನ (ದ್ವಾರಕಾಕ್ಷೇತ್ರ)

**ಫಾಲೇ ಯಲ್ಲಿಖಿತಂ ಧುನೋತಿ ವಿವಿಧಾಂ ಲೇಖಾಂ ವಿಧಾತ್ರಾ ಕೃತಾಂ**
**ಲೀಲಾರ್ಥಂ ತಿಲಕೀಕೃತಂ ವಿತನುತೇ ವಿದ್ವಲ್ಲಲಾಮಾಯಿತಾನ್ ।**
**ಊರ್ಧ್ವಂ ಯದ್ಧೃತಮುಚ್ಚಲೋಕಪದವೀಸೋಪಾನಮನ್ವೇತಿ ತದ್**
**ಗೋಪೀಚಂದನಮಂಜಸಾ ವಿಜಯತೇ ತಾಪತ್ರಯಧ್ವಂಸನಮ್ ॥ ೯೭ ॥**

ಅ: ಯತ್ = ಯಾವುದು; ಫಾಲೇ = ಲಲಾಟದಲ್ಲಿ; ಲಿಖಿತಂ - (ಸತ್) ಲೇಪಿಸಿಕೊಳ್ಳಲ್ಪಟ್ಟಾಗ, ವಿಧಾತ್ರಾ = ಚತುರ್ಮುಖ ಬ್ರಹ್ಮದೇವರಿಂದ; ಕೃತಾಂ = ಬರೆಯಲ್ಪಟ್ಟ; ವಿವಿಧಾಂ = ಜನನ ಮರಣ ಸ್ವರ್ಗ ನರಕಾದಿ ಸಂಪಾದಕವಾದ; ಲೇಖಾಂ = (ಹಣೆ) ಬರಹವನ್ನು; ಧುನೋತಿ = ಅಳಿಸಿ ಹಾಕುವುದೋ; ಯತ್ = ಯಾವುದು; ಲೀಲಾರ್ಥಂ ತಿಲಕೀಕೃತಂ = ಅಲಂಕಾರಕ್ಕಾಗಿ ತಿಲಕವಾಗಿ ಧರಿಸಲ್ಪಟ್ಟಾಗ; ವಿದ್ವಲ್ಲಲಾಮಾಯಿತಾನ್ = ವಿದ್ವಚ್ಛ್ರೇಷ್ಠರನ್ನಾಗಿ; ವಿತನುತೇ = ಮಾಡುವುದೋ; ಯತ್ = ಯಾವುದು; ಊರ್ಧ್ವಂ ಧೃತಂ = ಊರ್ಧ್ವಪುಂಡ್ರವಾಗಿ ಧರಿಸಲ್ಪಟ್ಟಾಗ; ಉಚ್ಚಲೋಕಪದವೀಸೋಪಾನಂ = ಅತ್ಯುಚ್ಚಲೋಕವಾದ ವೈಕುಂಠಕ್ಕೆ ಕರೆದೊಯ್ಯುವ ಮೆಟ್ಟಿಲಾಗಿ; ಅನ್ವೇತಿ = ಆಗುವುದೋ; ತಾಪತ್ರಯಧ್ವಂಸನಂ = ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂಬ ಮೂರುವಿಧವಾದ ಪಾಪಗಳನ್ನು ನಾಶಪಡಿಸುವಂತಹ, ತತ್ = ಆ; ಗೋಪೀಚಂದನಂ = ಗೋಪೀಚಂದನವು; ಅಂಜಸಾ = ತುಂಬಾ; ವಿಜಯತೇ = ಉತ್ಕೃಷ್ಟವಾಗಿದೆ.

---

ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ॥ –(ಗೀತಾ ೯/೩೦,೩೧)

ಏತಚ್ಚ ದೇವದೇವಾಂಶಋಷ್ಯಾದಿವಿಷಯಂ ಜ್ಞೇಯಂ । –(ಗೀತಾವಿವೃತಿ)

೧. ಸ್ವಭಾವಾಖ್ಯಾ ಯೋಗ್ಯತಾ ಯಾ ಹಠಾಖ್ಯಾ ಯಾಽನಾದಿಸಿದ್ಧಾ ಸರ್ವಜೀವೇಷು ನಿತ್ಯಾ । ಸಾ ಕಾರಣಂ ಪ್ರಥಮಂ.. –(ಮ.ಭಾ.ತಾ.ನಿ.೨೨/೮೪)

ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ॥ – ಗೀತಾ(೧೬/೫)

ಹಣೆಯಲ್ಲಿ ಧರಿಸಿದಾಗ ಬ್ರಹ್ಮ ಬರೆದ ಬಗೆಬಗೆಯ ಬರಹಗಳನ್ನು ತೊಡೆಯುವ, ಅಲಂಕಾರಕ್ಕಾಗಿ ತಿಲಕವನ್ನಾಗಿ ಧರಿಸಿದಾಗ ವಿದ್ವಚ್ಛ್ರೇಷ್ಠರನ್ನಾಗಿಸುವ, ಊರ್ಧ್ವ-ಮುಖವಾಗಿ ಧರಿಸಿದಾಗ ಊರ್ಧ್ವಲೋಕಗಮನಕ್ಕೆ ಸೋಪಾನವೆನ್ನಿಸುವ, ತಾಪ-ತ್ರಯಗಳನ್ನು ತೊಡೆಯುವ ಗೋಪೀಚಂದನವು ಅತ್ಯಂತ ಹಿರಿದಾದುದು.

ವಿ: ೧. ಊರ್ಧ್ವಪುಂಡ್ರಧಾರಣೆಯು ವೈಷ್ಣವರ ಮುಖ್ಯಲಕ್ಷಣಗಳಲ್ಲೊಂದು; ಅದಕ್ಕೆ ವಿಹಿತವಾದ ದ್ರವ್ಯ ಎಂಬುದು ಗೋಪೀಚಂದನದ ಹಿರಿಮೆ. 'ದ್ವಾರಕೆ'ಯಲ್ಲಿ ವಿಪುಲವಾಗಿ ದೊರೆಯುವ ಗೋಪೀಚಂದನದ ಮಹಿಮೆಯನ್ನು ಶ್ರೀವಾದಿರಾಜರು ಈ ಶ್ಲೋಕದಲ್ಲಿ ವರ್ಣಿಸಿರುವರು.

೨. ಗೋಪೀಚಂದನವನ್ನು ಹಣೆಯ ಮೇಲೆ ಧರಿಸುವುದು ಹಣೆಬರಹವನ್ನೇ ಬದಲಾಯಿಸಿ ಬಿಡುತ್ತದೆ. ಇದರಿಂದ ಧರಿಸುವ ತಿಲಕಗಳು ವಿದ್ವಚ್ಛ್ರೇಷ್ಠನೆಂಬ ಮನ್ನಣೆಯನ್ನು ತಂದುಕೊಡುತ್ತದೆ. ಇದರಿಂದ ಧರಿಸುವ ಊರ್ಧ್ವಪುಂಡ್ರವು ಅತ್ಯುನ್ನತ ಲೋಕ (ವೈಕುಂಠ)ವನ್ನು ತಲುಪಿಸುವ ಸೋಪಾನವಾಗಿದೆ. ತಾಪತ್ರಯಗಳನ್ನು ಪರಿಹರಿಸುತ್ತದೆ. ಆದ್ದರಿಂದ ಈ ಗೋಪೀಚಂದನವು ತುಂಬಾ ಉತ್ಕೃಷ್ಟವಾದುದು ಎಂದು ಭಾವ.

೩. ಗೋಪೀಚಂದನ ಧಾರಣೆಯಿಂದ ಸಂಸಾರಬಂಧನವು ದೂರವಾಗುತ್ತದೆ; ವಿದ್ವತ್ತು ಲಭಿಸುತ್ತದೆ. ತಾಪತ್ರಯಗಳು ಪರಿಹಾರವಾಗುತ್ತವೆ. ಕೊನೆಗೆ ಜ್ಞಾನದ್ವಾರಾ ವೈಕುಂಠ ಲೋಕವೇ ಲಭಿಸುತ್ತದೆ ಹೀಗೆ ಅನೇಕ ರೀತಿಯಲ್ಲಿ ಉನ್ನತಿಗೆ ಸಾಧನವಾಗಿರುವ ಗೋಪೀಚಂದನವನ್ನು ವೈಷ್ಣವನು ತಪ್ಪದೆ ಧರಿಸಲೇಬೇಕು ಎಂದರ್ಥ. ಗೋಪೀಚಂದನದ ಮಹತ್ತ್ವವನ್ನು[1] ಪುರಾಣಗಳು ವರ್ಣಿಸಿವೆ. [2]ಗೋಪೀಚಂದನವನ್ನು ಧರಿಸಿದವನು ನೋಡಿದುದೆಲ್ಲ

---

೧. ದ್ವಾರವತ್ಯಾಂ ಶುಭೇ ರಮ್ಯೇ ವಾಸುದೇವಹ್ರದೇ ತಥಾ ।
ತತ್ರೋದ್ಭವಾಂ ಮೃದಂ ಶುಭ್ರಾಮಾದಾಯ ದ್ವಿಜಸತ್ತಮಃ ॥
ಧಾರಯೇದೂರ್ಧ್ವಪುಂಡ್ರಾಣಿ ವಿಪ್ರಃ ಸರ್ವಲೋಕೇಽಪಿ ಪೂಜಿತಃ ।
ಸ ವಿಮಾನಂ ಸಮಾರುಹ್ಯ ಯಾತಿ ವಿಷ್ಣೋಃ ಪರಂ ಪದಮ್ ॥
- ಇತ್ಯಾದಿ ವಚನಾದುಕ್ತಾರ್ಥೋ ಯುಕ್ತ ಏವ ॥ —ವ್ಯಾಖ್ಯಾನ

೨. ಯಜ್ಞೋ ದಾನಂ ತಪಶ್ಚೈವ ಸ್ವಾಧ್ಯಾಯಃ ಪಿತೃತರ್ಪಣಮ್ ।
ವ್ಯರ್ಥಂ ಭವತಿ ತತ್ಸರ್ವಮೂರ್ಧ್ವಪುಂಡ್ರಂ ವಿನಾ ಕೃತಮ್ ॥
ಗೋಪೀಚಂದನಲಿಪ್ತಾಂಗೋ ಯಂ ಯಂ ಪಶ್ಯತಿ ಚಕ್ಷುಷಾ ।
ತಂ ತಂ ಶುದ್ಧಂ ವಿಜಾನೀಯಾನ್ನಾತ್ರ ಕಾರ್ಯಾ ವಿಚಾರಣಾ ॥ – ಕೃ.ಮ(೨೨೪, ೨೨೫)

ಮಂದನಾದರು ಸರಿಯೆ ಗೋಪೀಚಂದನ ಶ್ರೀಮುದ್ರೆಗಳ ನಲ-
ವಿಂದ ಧರಿಸುತ ಶ್ರೀತುಲಸಿ ಪದುಮಾಕ್ಷಿಸರಗಳನು ।
ಕಂಧರದ ಮಧ್ಯದಲಿ ಮುಕುಂದ ಶ್ರೀಭೂರಮಣ ತ್ರಿಜಗ -
ದ್ವಂದ್ಯ ಸರ್ವಸ್ವಾಮಿ ಮಮ ಕುಲದೈವವೆನೆ ಪೊರೆವ ॥
-ಶ್ರೀಜಗನ್ನಾಥದಾಸರು(ಹರಿಕಥಾಮೃತಸಾರ -೧೬/೨೦)

ಪವಿತ್ರವಾಗುವುದು, ಅದನ್ನು ಧರಿಸದವನ ಸಕಲಸತ್ಕಾರ್ಯಗಳೂ ನಿರರ್ಥಕ ಎಂದೂ ಶ್ರೀಮದಾಚಾರ್ಯರು ತಿಳಿಸಿರುವರು. ಗೋಪೀಚಂದನವು ಭವಬಂಧನಪರಿಹಾರದ ಉಪಾಯಗಳಲ್ಲೊಂದು.

೪. ದ್ವಾರಕೆಯಿಂದ ಸುಮಾರು ೨೦ ಕಿ.ಮೀ. ದೂರದಲ್ಲಿರುವ 'ಗೋಪೀತಲಾಬ್' ಎಂಬ ಸ್ಥಳದಲ್ಲಿ ಇಂದೂ ಗೋಪೀಚಂದನವು ಯಥೇಚ್ಛವಾಗಿ ದೊರೆಯುತ್ತದೆ. ಪುರಾಣೋಕ್ತವಾದ 'ವಾಸುದೇವಹ್ರದ' (ಗೋಪೀಸರೋವರ) ಎಂಬ ಗೋಪೀಚಂದನದ ಮೂಲಸ್ಥಳವು ಪ್ರಾಯಃ ಇದೇ ಆಗಿರಬೇಕು; ಇಲ್ಲಿ ಒಂದು ಗೋಪೀನಾಥ ದೇವಾಲಯವೂ ಇದೆ.

೫. ಶ್ರೀಮದಾಚಾರ್ಯರಿಗೆ ಒಲಿದು ಉಡುಪಿಗೆ ಗೋಪೀಚಂದನ ಗಡ್ಡೆಯ ಮೂಲಕ ಆಗಮಿಸಿದ ಕಡಗೋಲಕೃಷ್ಣನು ಮೂಲತಃ ದ್ವಾರಕೆಯಲ್ಲಿ ಇದ್ದ ಮೂರ್ತಿ ಎಂಬುದನ್ನು ಗಮನಿಸಬೇಕು (ದ್ವಾರಾವತೀಂ -ಶ್ಲೋ.೧/೯).

## ಸಿದ್ಧಪುರೀ (ಕ್ಷೇತ್ರ)

**ಭಾತಿ ಸಿದ್ಧಪುರೀ ಯತ್ರ ಸಿದ್ಧಾ ಮುಕ್ತಿಪುರೀ ನೃಣಾಮ್ ।**
**ಪುಣ್ಯಂ ಬಿಂದುಸರೋ ಯತ್ರ ಬಿಂದುಮಾತ್ರಂ ಸರಃಸಮಮ್ ॥ ೯೮ ॥**

ಅ: **ಸಿದ್ಧಪುರೀ** = ಸಿದ್ಧಪುರೀ ಎಂಬ ಕ್ಷೇತ್ರವು; **ಭಾತಿ** = ಶೋಭಿಸುತ್ತಿದೆ; **ಯತ್ರ** = ಅಲ್ಲಿ; **ನೃಣಾಂ** = ಮನುಷ್ಯರಿಗೆ; **ಮುಕ್ತಿಪುರೀ** = ವೈಕುಂಠಲೋಕವು; **ಸಿದ್ಧಾ** = ಖಚಿತವಾಗಿ ಲಭಿಸುತ್ತದೆ; (ಮತ್ತು) **ಯತ್ರ** = ಅಲ್ಲಿ; **ಬಿಂದುಸರಃ** = ಬಿಂದುಸರೋವರ ಎಂಬ ಸರೋವರವು; (**ಭಾತಿ**) = ಶೋಭಿಸುತ್ತಿದೆ; (ಆ ಬಿಂದು ಸರೋವರದಲ್ಲಿ ಮಾಡಿದ), **ಬಿಂದುಮಾತ್ರಂ ಪುಣ್ಯಂ** = ಒಂದು ಹನಿಯಷ್ಟು ಪುಣ್ಯವು ಸಹ; **ಸರಃ ಸಮಂ** (**ಭವತಿ**) = ಸರೋವರದಂತೆ ಅನಂತಮಡಿಯಾಗುವುದು.

**ಮನುಷ್ಯರಿಗೆ ಮುಕ್ತಿಪುರಿಯನ್ನು ದೊರಕಿಸಿ ಕೊಡುವ ಸಿದ್ಧಪುರಿಯು ಶೋಭಿಸುತ್ತಿದೆ. ಅಲ್ಲಿಯ ಬಿಂದುಸರೋವರದಲ್ಲಿ ಮಾಡುವ ಬಿಂದುವಿನಷ್ಟು ಪುಣ್ಯಕಾರ್ಯವು ಸಹ ಸರೋವರದಷ್ಟು ಅನಂತವಾಗುವುದು.**

ವಿ: ೧. 'ಮಾತೃಗಯಾ' ಎಂದು ವಿಶೇಷವಾಗಿ ಪ್ರಸಿದ್ಧವಾಗಿರುವ ಕ್ಷೇತ್ರವೇ ಈ ಸಿದ್ಧಪುರ. ಅಹ್ಮದಾಬಾದ್‌ನಿಂದ ಸುಮಾರು ೧೦೦ಕಿ.ಮೀ. ದೂರದಲ್ಲಿರುವ ಈ ಕ್ಷೇತ್ರವು ತುಂಬಾ ಪವಿತ್ರ ಕ್ಷೇತ್ರಗಳಲ್ಲೊಂದು. ಅಲ್ಲಿ ಇಂದು ಬಿಂದುಸರೋವರ, ಕಪಿಲತೀರ್ಥ ಎಂಬ ಸರೋವರಗಳು ಮತ್ತು ಅವುಗಳ ಬಳಿ ಒಂದು ಕಿ.ಮೀ. ದೂರದಲ್ಲಿ ಸರಸ್ವತೀನದಿಯೂ ಉಂಟು. ಸರಸ್ವತಿಯು ಒಂದು ಗುಪ್ತಗಾಮಿನಿಯಾದ ನದಿ. ಮಳೆಗಾಲದಲ್ಲಿ ಸ್ವಲ್ಪ ಮಟ್ಟಿಗೆ ನೀರು ಇದ್ದರೂ, ಉಳಿದಂತೆ ಇದರಲ್ಲಿ ಮೇಲೆ ನೀರು ಕಾಣುವುದು ತುಂಬಾ ದುರ್ಲಭ. ಆದರೆ ಮರಳಿನಲ್ಲಿ ಸ್ವಲ್ಪ ಅಗೆದರೂ, ಶುದ್ಧವಾದ ಜಲ ಕಾಣುತ್ತದೆ. ಸಿದ್ಧಪುರ ಪಟ್ಟಣಕ್ಕೆ ಇಂದು ಸರಬರಾಜಾಗುವ ನೀರು ಈ ನದಿಯದೇ ಎಂಬುದೂ ಗಮನಾರ್ಹ. ಇದು ಮುಂದೆ ಪ್ರಭಾಸದಲ್ಲಿ ಕಪಿಲಾನದಿಯನ್ನು ಒಳಗೊಂಡು, ಅನಂತರ ಹಿರಣ್ಯಾನದಿಯಲ್ಲಿ ಸೇರಿ ಅಲ್ಲೇ ಸಮುದ್ರವನ್ನು ಸೇರುತ್ತದೆ. ಬದರಿಕಾಶ್ರಮದಲ್ಲಿ

(ಶಮ್ಯಾಪ್ರಾಸವೆಂಬಲ್ಲಿ) ವ್ಯಾಸಗುಹೆಯ ಬಳಿ ಹರಿಯುವ ಸರಸ್ವತೀ ಎಂಬ ಮತ್ತೊಂದು ನದಿಯು ಹರಿಯುವ ಉಲ್ಲೇಖ ಮಹಾಭಾರತದಲ್ಲೂ, ಮಹಾಭಾರತ ತಾತ್ಪರ್ಯನಿರ್ಣಯದಲ್ಲೂ ಇದೆ. (೨೮/೨೪೦). ತ್ರಿವೇಣೀ ಸಂಗಮದಲ್ಲಿ ಸೇರುವ ಗುಪ್ತಗಾಮಿನಿಯಾದ ಮತ್ತೊಂದು ಸರಸ್ವತೀ ನದಿಯು ತುಂಬಾ ಪ್ರಸಿದ್ಧವಾಗಿದೆ. ಸಿದ್ಧಪುರದಲ್ಲಿ ಹರಿಯುವ ಸರಸ್ವತೀ ನದಿಯು ಇತರ ಮೂರು ಸರಸ್ವತೀ ನದಿಗಳಿಂದ ಬೇರೆಯಾಗಿದೆ.

೨. ಸಿದ್ಧಪುರವು ಪೌರಾಣಿಕವಾಗಿ ತುಂಬಾ ಪ್ರಸಿದ್ಧವಾಗಿರುವ ಮಹಾಕ್ಷೇತ್ರ; ಕರ್ದಮರ ತಪೋಭೂಮಿ, ಕಪಿಲರೂಪೀ ಪರಮಾತ್ಮನ ಅವತಾರ ಭೂಮಿ; ದೇವಹೂತಿ ದೇವಿಗೆ ಕಪಿಲಗೀತೆಯ ಉಪದೇಶಭೂಮಿ ಮೊದಲಾದ ಅಪೂರ್ವ ಮಹತ್ತ್ವ ಇದಕ್ಕೆ ಇದೆ. ಕರ್ದಮರು ತಪಸ್ಸು ಮಾಡುವ ವೇಳೆಗಾಗಲೇ ಇಲ್ಲಿ ಬಿಂದುಸರೋವರವು ಇದ್ದಿತು. ಅನಂತರ ಅವರ ಪತ್ನಿ ದೇವಹೂತಿಯು ಇಲ್ಲಿ ಸರಸ್ವತೀ ನದಿಯಾಗಿ ಹರಿದಳು ಎಂದು ಭಾಗವತ ಪುರಾಣದಲ್ಲಿದೆ[೧]. ಕಪಿಲನಾಮಕ ಪರಮಾತ್ಮನು ತನ್ನ ತಾಯಿಗೆ ತತ್ತ್ವೋಪದೇಶವನ್ನು ಮಾಡಿ ಸದ್ಗತಿನೀಡಿದ ಸ್ಥಳ ಎಂಬ ಕಾರಣದಿಂದಾಗಿ 'ಮಾತೃಗಯಾ' ಎಂದೇ ಪ್ರಸಿದ್ಧವಾಗಿದೆ. ಕರ್ದಮದೇವಹೂತಿಯರ ವಿವಾಹಸ್ಥಳವೂ ಇದೇ ಆಗಿದೆ. ಶ್ರೀಪರಶುರಾಮದೇವರ ಸ್ನಾನದಿಂದಲೂ ಇಲ್ಲಿಯ ಬಿಂದು-ಸರೋವರವು ಪವಿತ್ರವಾಗಿದೆ. ಮಾತೃಶ್ರಾದ್ಧಕ್ಕೆ ಅತ್ಯಂತ ಶ್ರೇಷ್ಠಸ್ಥಾನವೆಂಬುದು ಇದರ ಹಿರಿಮೆ.

೩. ಸಿದ್ಧಪುರೀಯಾತ್ರೆ ಮೋಕ್ಷಸಿದ್ಧಿಗೆ ಸಾಧನ; ಬಿಂದುಸರೋವರದ ಸ್ನಾನ ಅನಂತಪಟ್ಟು ಪುಣ್ಯಕ್ಕೆ ಉಪಾಯ ಎಂಬ ಈ ಕ್ಷೇತ್ರದ ಮಹತ್ತ್ವವನ್ನು ಅವುಗಳ ಹೆಸರುಗಳೇ ತುಂಬಾ ಪರಿಣಾಮಕಾರಿಯಾಗಿ ತಿಳಿಸಿಕೊಡುತ್ತವೆ ಎಂದು ಭಾವ.

೪. 'ಯತ್ರ ನೃಣಾಂ ಮುಕ್ತಿಪುರೀ [೨]ಸಿದ್ಧಾ ಭವತಿ' ಎಂಬ ವ್ಯುತ್ಪತ್ತಿಯಿಂದ ಸಿದ್ಧಪುರೀ ಎಂಬ ನಾಮದ ವೈಶಿಷ್ಟ್ಯವನ್ನೂ, ಬಿಂದುಮಾತ್ರಂ ಪುಣ್ಯಂ ಯತ್ರ ಸರಸ್ಸಮಂ ಭವತಿ ಎಂಬ ವ್ಯುತ್ಪತ್ತಿಯಿಂದ ಬಿಂದುಸರೋವರದ ಮಹತ್ತ್ವವನ್ನೂ ತಿಳಿಸಿರುವರು.

## ಪುಷ್ಕರ (ತೀರ್ಥಕ್ಷೇತ್ರ)

**ತೀರ್ಥಾನಾಮುತ್ತಮಂ ತೀರ್ಥಂ ಪುಷ್ಕರಂ ಮರ್ತ್ಯದುಷ್ಕರಮ್ ।**
**ವಿಹರನ್ನಪಿ ವಾರಾಶೌ ವರಾಹೋ ಯತ್ಸರೋऽವಿಶತ್ ॥ ೯೯ ॥**

॥ ಇತಿ ಶ್ರೀವಾದಿರಾಜ ಶ್ರೀಚರಣಕೃತ ತೀರ್ಥಪ್ರಬಂಧೇ ಪಶ್ಚಿಮಪ್ರಬಂಧಃ ॥ ೧ ॥

**ಅ:** ಮರ್ತ್ಯದುಷ್ಕರಂ = ಮನುಷ್ಯರಿಂದ ನಿರ್ಮಿಸಲು ಎಂದಿಗೂ ಅಸಾಧ್ಯವಾದ; ಪುಷ್ಕರಂ = ಪುಷ್ಕರವೆಂಬ ತೀರ್ಥವು; ತೀರ್ಥಾನಾಂ = ತೀರ್ಥಗಳಲ್ಲಿ; ಉತ್ತಮಂ =

---

೧. ತಸ್ಯಾಸ್ತದ್ಯೋಗವಿಧುತಮಾರ್ತ್ಯಂ ಮರ್ತ್ಯಮಭೂತ್ ಸರಿತ್ ।
ಸ್ರೋತಸಾಂ ಪ್ರವರಾ ಸೌಮ್ಯ ಸಿದ್ಧಿದಾ ಸಿದ್ಧಸೇವಿತಾ ॥ -ಭಾಗವತ(೩/೩೩/೩೨)

೨. ತದ್ವೀರಾಸೀತ್ ಪುಣ್ಯತಮಂ ಕ್ಷೇತ್ರಂ ತ್ರೈಲೋಕ್ಯವಿಶ್ರುತಮ್ ।
ನಾಮ್ನಾ ಸಿದ್ಧಪದಂ ಯತ್ರ ಸಾ ಸಂಸಿದ್ಧಿಮುಪೇಯುಷೀ ॥ -ಭಾಗವತ (೩/೩೩/೩೧)

ಉತ್ತಮವಾದ; **ತೀರ್ಥಂ** = ತೀರ್ಥವಾಗಿದೆ; (ಏಕೆಂದರೆ); **ವರಾಹಃ** = ವರಾಹರೂಪಿಯಾದ ಶ್ರೀಹರಿಯು; **ವಾರಾಶೌ**= ಸಕಲತೀರ್ಥಾಧಿಪತಿಯಾದ ಸಮುದ್ರದಲ್ಲಿ; **ವಿಹರನ್ ಅಪಿ** = ವಿಹರಿಸುವವನಾದರೂ ಸಹ; **ಯತ್** = ಪುಷ್ಕರವೆಂಬ ಈ; **ಸರಃ** = ತೀರ್ಥ(ಸರೋವರ) ವನ್ನು; **ಅವಿಶತ್** = ಪ್ರವೇಶ ಮಾಡಿದನು.

**ಸಮುದ್ರದಲ್ಲಿ ವಿಹರಿಸುವ ವರಾಹರೂಪಿ ಶ್ರೀಹರಿಯು ಪ್ರವೇಶಿಸಿದ ಸರೋವರ-ವಿರುವ, ಮಾನವರಿಂದ ನಿರ್ಮಿಸಲಾಗದಂತಹ ಪುಷ್ಕರವು ತೀರ್ಥಗಳಲ್ಲಿಯೇ ಅತ್ಯಂತ ಮಿಗಿಲಾದುದು.**

ವಿ: ೧. ಮಕ್ಕಳನ್ನು ಕೊಲ್ಲುತ್ತಿದ್ದ ವಜ್ರನಾಭ ಎಂಬ ರಾಕ್ಷಸನನ್ನು ಚತುರ್ಮುಖ ಬ್ರಹ್ಮದೇವರು, ದೇವತೆಗಳ ಪ್ರಾರ್ಥನೆಯಂತೆ ಸಂಹರಿಸಿದ ಸ್ಥಳ ಎಂಬುದು ಈ .... ಪೌರಾಣಿಕ [1]ಮಹತ್ತ್ವ. ತಮ್ಮ ಕೈಯಲ್ಲಿನ ಪುಷ್ಕರ (ಕಮಲ)ವನ್ನೇ ದೈತ್ಯನನ್ನು ಕೊಲ್ಲುವ ಆಯುಧವನ್ನಾಗಿ ಪ್ರಯೋಗಿಸಿದ್ದರಿಂದ ಈ ಸ್ಥಳವು 'ಪುಷ್ಕರ' ಎಂದೇ ಪ್ರಸಿದ್ಧವಾಯಿತು. ದೈತ್ಯನನ್ನು ಸಂಹರಿಸಿದ ಕಮಲವು ಭೂಮಿಯ ಮೇಲೆ ಬಿದ್ದ ಸ್ಥಳದಲ್ಲೇ 'ಪುಷ್ಕರ' ವೆಂಬ ತೀರ್ಥವು ಉದ್ಭವಿಸಿತು. ಹೀಗೆ ಜೀವೋತ್ತಮರಾದ ಬ್ರಹ್ಮದೇವರಿಂದ ನಿರ್ಮಿತವಾದ ಸ್ಥಳವಾದ್ದರಿಂದಲೇ ಇದನ್ನು 'ಮರ್ತ್ಯದುಷ್ಕರಂ' ಎಂದು ಸ್ತುತಿಸಿರುವರು. ಉಳಿದೆರೆಡು ಸರೋವರಗಳು ಸಹ ಬ್ರಹ್ಮದೇವರು ಇಲ್ಲಿ ನಡೆಸಿದ ಯಜ್ಞದ ವೇದಿಕೆಯಲ್ಲಿ ಉಂಟಾದವು ಎಂದು ಪ್ರಸಿದ್ಧಿ. ಹಿರಣ್ಯಾಕ್ಷನನ್ನು ವಧಿಸಿ ಭೂಮಿಯನ್ನು ಉದ್ಧರಿಸಿದ ಶ್ರೀವರಾಹರೂಪೀ ವಿಷ್ಣುವು ಈ ಸರೋವರದಲ್ಲಿ ಅಂತರ್ಧಾನನಾಗಿ ಪರಂಧಾಮಕ್ಕೆ ತೆರಳಿದನೆಂದು ಪುರಾಣಗಳು ನಿರೂಪಿಸಿವೆ.

೨. ಈ ಪುಷ್ಕರವು ಎಂಟು ಸ್ವಯಂವ್ಯಕ್ತ ಮಹಾಕ್ಷೇತ್ರಗಳಲ್ಲಿ ಒಂದಾಗಿದೆ. ಮಹಾ-ಭಾರತದಲ್ಲೂ ಪದ್ಮಪುರಾಣದಲ್ಲೂ ಇದರ ವರ್ಣನೆ ಬಂದಿದೆ. ಪ್ರತಿನಿತ್ಯ ಸ್ನಾನಕಾಲದಲ್ಲಿ ಸ್ಮರಿಸಬೇಕಾದ 'ತೀರ್ಥರಾಜ'ವೆಂದು ಪ್ರಸಿದ್ಧವಾದ [2]ಪಂಚತೀರ್ಥಗಳಲ್ಲಿ ಇದೂ ಸಹಾ ಒಂದು. ಕ್ರಮವಾಗಿ ಬ್ರಹ್ಮ ವಿಷ್ಣು ಮಹೇಶ್ವರರು ದೇವತೆಗಳಾಗಿರುವ ಜ್ಯೇಷ್ಠ ಪುಷ್ಕರ, ಮಧ್ಯಪುಷ್ಕರ

---

೧. ದಶಕೋಟಿಸಹಸ್ರಾಣಿ ತೀರ್ಥಾನಾಂ ವೈ ಮಹಾಮತೇ ।
ಸಾನ್ನಿಧ್ಯಂ ಪುಷ್ಕರೇ ಯೇಷಾಂ ತ್ರಿಸಂಧ್ಯಂ ಕುರುನಂದನ ॥
ಜನ್ಮಪ್ರಭೃತಿ ಯತ್ಪಾಪಂ ಸ್ತ್ರಿಯಾ ವಾ ಪುರುಷೇಣ ವಾ ।
ಪುಷ್ಕರೇ ಸ್ನಾತಮಾತ್ರಸ್ಯ ಸರ್ವಮೇವ ಪ್ರಣಶ್ಯತಿ ॥
ಯಥಾ ಸುರಾಣಾಂ ಸರ್ವೇಷಾಮಾದಿಸ್ತು ಮಧುಸೂದನಃ ।
ತಥೈವ ಪುಷ್ಕರಂ ರಾಜನ್ ತೀರ್ಥಾನಾಮಾದಿರುಚ್ಯತೇ ॥
ದುಷ್ಕರಂ ಪುಷ್ಕರೇ ಗಂತುಂ ದುಷ್ಕರಂ ಪುಷ್ಕರೇ ತಪಃ ।
ದುಷ್ಕರಂ ಪುಷ್ಕರೇ ದಾನಂ ವಸ್ತುಂ ಚೈವ ಸುದುಷ್ಕರಮ್ ।
-ಮಹಾಭಾರತ(ವನಪರ್ವ೮೨,೨೧,೩೩,೩೪,೩೯)

೨. ಕುರುಕ್ಷೇತ್ರ ಗಯಾಂ ಗಂಗಾಂ ಪ್ರಭಾಸಂ ಪುಷ್ಕರಾಣಿ ಚ ।
ಏತಾನಿ ಮನಸಾ ಧ್ಯಾತ್ವಾ ಅವಗಾಹ್ಯಂ ತತೋ ಜಲೇ ॥

ಮತ್ತು ಕನಿಷ್ಠಪುಷ್ಕರ ಎಂಬ ಮೂರು ಸರೋವರಗಳು ಇಲ್ಲಿದ್ದು, ಅವುಗಳಲ್ಲಿ ವಿಷ್ಣುದೇವತಾವಾದ ಮಧ್ಯಪುಷ್ಕರವೇ ಇಲ್ಲಿಯ ಪ್ರಧಾನತೀರ್ಥ. ಇದು ಅಜಮೀರ್ ನಗರಕ್ಕೆ ೧೧ ಕಿ. ಮೀ. ದೂರದಲ್ಲಿದೆ. ಕಾರ್ತಿಕಪೂರ್ಣಿಮೆಯಂದು ಇದರ ಸ್ನಾನ ವಿಶೇಷ ಪುಣ್ಯಕರ.[1]

೩. ಪ್ರಳಯ(ತೀರ್ಥರಾಜ) ಸಮುದ್ರದಲ್ಲಿ ವಿಹರಿಸುವ ಶ್ರೀವರಾಹನು ಈ ತೀರ್ಥವನ್ನು ಪ್ರವೇಶಿಸಿದನು ಎಂದ ಮೇಲೆ ಇದಕ್ಕೆ ಉಂಟಾಗಿರುವ ಪಾವಿತ್ರ್ಯವು ಅಪರಿಮಿತವಾದುದು. ಆದ್ದರಿಂದಲೇ ಇದು ತುಂಬಾ ಉತ್ತಮವಾದ ತೀರ್ಥ ಎಂದು ಭಾವ. ತನ್ನ ನಾಭಿಕಮಲ-ಸಂಜಾತರಾದ ಬ್ರಹ್ಮದೇವರ ಕರಕಮಲದಿಂದ ಪ್ರಯೋಗಿಸಲ್ಪಟ್ಟ ಕಮಲ (ಪುಷ್ಕರ)ದಿಂದ ಉದ್ಭವಿಸಿದ ತೀರ್ಥವಾದ್ದರಿಂದಲೇ ಶ್ರೀಹರಿಗೆ ಇದರ ಮೇಲೆ ತುಂಬಾ ಪ್ರೀತಿ ಎಂಬ ಸೂಚನೆಯೂ ಇಲ್ಲಿದೆ. (ಪುಷ್ಕರಕ್ಷೇತ್ರದಿಂದ ಪುಷ್ಕಲ ಪುಣ್ಯವು ಲಭಿಸುವುದು ಎಂದು ಭಾವ.)

೪. ಶ್ರೀಕೃಷ್ಣನು ಈ ಪುಷ್ಕರ ಕ್ಷೇತ್ರದಲ್ಲಿ ಹಂಸಡಿಬಿಕರನ್ನು ಅವರ ನೇತೃತ್ವದ ೧೭ ಅಕ್ಷೋಹಿಣೀ ಸೇನೆಯ ಸಮೇತವಾಗಿ ಸೋಲಿಸಿ, ಒಂದು ರಾತ್ರಿ ಯಾದವಸೇನಾ ಸಮೇತನಾಗಿ ಇಲ್ಲಿಯೇ ತಂಗಿದ್ದನೆಂದು ಹರಿವಂಶದಲ್ಲೂ, ಮಹಾಭಾರತತಾತ್ಪರ್ಯನಿರ್ಣಯದಲ್ಲೂ[2] ಉಲ್ಲೇಖವಿದೆ. (೧೭/೨೭೪)

★★★★★

---

೧. ಆದಕ್ಕೆ ಸ್ಮಾರಕವಾಗಿ ಇಲ್ಲಿ ಒಂದು ವರಾಹ ದೇವಸ್ಥಾನವೂ ಉಂಟು.

೨. ಸ ಪುಷ್ಕರೇಕ್ಷಣಸ್ತದಾ ಸುರೈರ್ನುತೋಽಥ ಪುಷ್ಕರೇ ।
ಉವಾಸ ತಾಂ ನಿಶಾಂ ಪ್ರಭುಃ ಸಯಾದವೋಽಮಿತಪ್ರಭಃ ॥ – ಮ. ಭಾ. ತಾ. ನಿ. (೧೭/೨೭೪)

# ಉತ್ತರ ಪ್ರಬಂಧಃ

[ಕೃಷ್ಣವೇಣೀ (ನದಿ) - ಪುಂಡರೀಕ ಕ್ಷೇತ್ರ(ಪಂಢರಪುರ) - ಶ್ರೀವಿಠಲ (ಪುಂಡರೀಕಕ್ಷೇತ್ರ) - ಗೋದಾವರೀ (ನದಿ) - ಯಮುನಾ (ನದೀ) - ತ್ರಿವೇಣೀ (ಪ್ರಯಾಗ ಕ್ಷೇತ್ರ) - ಪ್ರಯಾಗ ಮಾಧವ (ಪ್ರಯಾಗ ಕ್ಷೇತ್ರ) - ಗಂಗಾ (ನದೀ) - ಕಾಶೀ(ಕ್ಷೇತ್ರ) - ಬಿಂದು ಮಾಧವ (ಕಾಶೀಕ್ಷೇತ್ರ) - ವಿಶ್ವನಾಥ (ಕಾಶೀಕ್ಷೇತ್ರ) - ಗಯಾ (ಕ್ಷೇತ್ರ) - ಗದಾಧರ (ಗಯಾಕ್ಷೇತ್ರ) - ವಿಷ್ಣುಪಾದ (ಗಯಾ) - ಫಲ್ಗುನದೀ (ಗಯಾಕ್ಷೇತ್ರ) - ಮಧುರಾ (ಕ್ಷೇತ್ರ) - ವಿಶ್ರಾಂತಿತೀರ್ಥ (ಮಧುರಾ) - ವೃಂದಾವನಮ್ (ಕ್ಷೇತ್ರ) - ಅಯೋಧ್ಯಾ - ನೈಮಿಷಾರಣ್ಯ(ಕ್ಷೇತ್ರ) - ಹಸ್ತಿನಪುರೀ - ಕುರುಕ್ಷೇತ್ರ - ಶಂಬಲ (ಕ್ಷೇತ್ರ) - ಬದರೀ(ಕ್ಷೇತ್ರ) - ಬದರೀನಾರಾಯಣಧ್ಯಾನಮ್ - ಶ್ರೀಹಯಗ್ರೀವ ವರ್ಣನೆ (ಬದರಿಕಾಶ್ರಮ) - ಹಯಗ್ರೀವಸ್ತುತಿಃ]

## ಕೃಷ್ಣವೇಣೀ (ನದೀ)

**ನಮಾಮಿ ಸುಕೃತಶ್ರೇಣೀಂ ಕೃಷ್ಣವೇಣೀಂ ತರಂಗಿಣೀಮ್ ।**
**ಯದ್ವೀಕ್ಷಣಂ ಕೋಟಿಜನ್ಮಕೃತದುಷ್ಕರ್ಮಶಿಕ್ಷಣಮ್ ॥ ೧ ॥**

ಅ: ಸುಕೃತಶ್ರೇಣೀಂ = ಪುಣ್ಯರಾಶಿಯನ್ನು ನೀಡುವ; ಕೃಷ್ಣವೇಣೀಂ = 'ಕೃಷ್ಣವೇಣೀ' ಎಂಬ; ತರಂಗಿಣೀಂ = ನದಿಯನ್ನು; ನಮಾಮಿ = ನಮಸ್ಕರಿಸುವೆನು; ಯದ್ವೀಕ್ಷಣಂ = ಆ ನದಿಯ ದರ್ಶನವು; ಕೋಟಿಜನ್ಮಕೃತದುಷ್ಕರ್ಮಶಿಕ್ಷಣಂ = ಕೋಟಿ ಜನ್ಮಗಳಲ್ಲಿ ಮಾಡಿದ ಪಾಪಗಳನ್ನೂ ಪರಿಹರಿಸುವಂತಹುದಾಗಿದೆ.

ಪುಣ್ಯರಾಶಿಯನ್ನು ನೀಡುವ 'ಕೃಷ್ಣವೇಣೀ' ಎಂಬ ನದಿಯನ್ನು ನಮಸ್ಕರಿಸುವೆನು; ಇದರ ದರ್ಶನವು ಕೋಟಿಜನ್ಮಗಳಲ್ಲಿ ಮಾಡಿದ ಪಾಪಗಳನ್ನೂ ಪರಿಹರಿಸುವುದು.

ವಿ: ೧. ತನ್ನ ದರ್ಶನಮಾತ್ರದಿಂದಲೇ ಭಕ್ತ ಜನರಿಗೆ ಪುಣ್ಯಪ್ರಾಪಕವೂ, ಪಾಪನಾಶಕವೂ ಆಗಿರುವ ಪವಿತ್ರನದಿಯಾದ 'ಕೃಷ್ಣವೇಣಿ'ಯನ್ನು ನಮಸ್ಕರಿಸುವೆನು ಎಂದು ಭಾವ.

೨. ಕೃಷ್ಣವೇಣೀ ನದಿಯು ದಕ್ಷಿಣಭಾರತದ ಮಹಾನದಿಗಳಲ್ಲೊಂದು; ಪುಣೆನಗರದಿಂದ ಸುಮಾರು ೧೨೦ಕಿ.ಮೀ. ದೂರದಲ್ಲಿರುವ 'ಮಹಾಬಲೇಶ್ವರ' ಎಂಬಲ್ಲಿ ಹುಟ್ಟುವ ಈ ನದಿಯು ಸುಮಾರು ೧೨೫೦ ಕಿ.ಮೀ. ದೂರ ಹರಿದು ವಿಜಯವಾಡ ಬಳಿ 'ಪೂರ್ವ (ಬಂಗಾಳಕೊಲ್ಲಿ) ಸಮುದ್ರವನ್ನು ಸೇರುತ್ತದೆ. ಭೀಮಾ, ತುಂಗಭದ್ರಾ ಮೊದಲಾದವುಗಳು ಇದರ ಮುಖ್ಯ ಉಪನದಿಗಳು. ಕೃಷ್ಣಾ ಮತ್ತು ವೇಣೀ ಎಂಬ ಎರಡು ನದಿಗಳ ಒಟ್ಟು ರೂಪವಾದ್ದರಿಂದ ಇದಕ್ಕೆ ಕೃಷ್ಣವೇಣೀ ಎಂದು ಹೆಸರು (ತುಂಗಭದ್ರಾ ಇದ್ದಂತೆ). ತಾರತಮ್ಯದಲ್ಲಿ ಗಂಗಾ, ಗೋದಾವರಿಗಳ ಅನಂತರದ ಸ್ಥಾನ ಇದರದಾಗಿದೆ ಎಂಬುದಾಗಿ ಶ್ರೀರಾಘವೇಂದ್ರಸ್ವಾಮಿಗಳ '[1]ನದೀತಾರತಮ್ಯ'

---

೧. ವಿಷ್ಣುಪಾದಾಬ್ಜಸಂಭೂತಾ ಗಂಗಾ ಸರ್ವಾಧಿಕಾ ಮತಾ ।
ತತೋ ಗೋದಾವರೀ ನ್ಯೂನಾ ಕೃಷ್ಣವೇಣೀ ತತೋಽಧಮಾ ॥

ಸ್ತೋತ್ರದಲ್ಲಿ ಉಕ್ತವಾಗಿದೆ. ಈ ನದಿಯಲ್ಲಿ ಸ್ನಾನ ಮಾಡುವಾಗ 'ಜನಾರ್ದನ'ರೂಪೀ ಶ್ರೀಕೃಷ್ಣನನ್ನು ಸ್ಮರಿಸಬೇಕೆಂದು [೧]ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.

**ಗುರುಂ ಕನ್ಯಾಗತಂ ಧನ್ಯಾ ಯಾ ಪುರಸ್ಕೃತ್ಯ ಸೇವ್ಯಸೇ ।**
**ಶ್ರೀಕೃಷ್ಣವೇಣಿ ಪಾಪಾನಿ ಸಾ ತ್ವಂ ಪುಣ್ಯಯಸಿ ಧ್ರುವಮ್ ॥ ೨ ॥**

ಅ: [೨]ಶ್ರೀಕೃಷ್ಣವೇಣಿ = ಎಲೈ ಶ್ರೀಕೃಷ್ಣವೇಣೀ[೩] ನದಿಯೇ; (**ತ್ವಂ**) **ಧನ್ಯಾ** = ನೀನು ಧನ್ಯಳು; **ಯಾ** = ಯಾವ; **ತ್ವಂ** = ನೀನು; **ಕನ್ಯಾಗತಂ** = ಕನ್ಯಾರಾಶಿಯಲ್ಲಿರುವ; **ಗುರುಂ** = ಬೃಹಸ್ಪತ್ಯಾಚಾರ್ಯರನ್ನು; **ಪುರಸ್ಕೃತ್ಯ** = ಮುಂದಿರಿಸಿಕೊಂಡು; **ಸೇವ್ಯಸೇ** = (ತೀರ್ಥಾರ್ಥಿಗಳಾದ ಜನರಿಂದ) ಸೇವಿಸಲ್ಪಡುವಿ; ಮತ್ತು **ಸಾ ತ್ವಂ** = ಅಂತಹ ನೀನು; **ಪಾಪಾನಿ** = ಪಾಪಗಳನ್ನು; **ಪುಣ್ಯಯಸಿ** = ಪುಣ್ಯವನ್ನಾಗಿ ಮಾಡಿ ಬಿಡುವಿ; **ಧ್ರುವಂ** = ಇದು ನಿಶ್ಚಿತ !

ಶ್ರೀಕೃಷ್ಣವೇಣಿಯೇ ! ನೀನು ಧನ್ಯಳು; ಗುರುವು ಕನ್ಯಾಗಾಮಿಯಾದಾಗ ನಿನ್ನ ಸೇವೆ ವಿಶೇಷವಾದುದು; ನಿಶ್ಚಿತವಾಗಿಯೂ ಪಾಪಗಳನ್ನು ಪುಣ್ಯವನ್ನಾಗಿಸುವವಳು ನೀನು.

ವಿ: ೧. ಗುರುವು ಕನ್ಯಾರಾಶಿಯಲ್ಲಿರುವಾಗ ಕೃಷ್ಣವೇಣೀ ನದಿಯಲ್ಲಿ ಆ ಒಂದು ವರ್ಷಪೂರ್ತಿ ಮೂರೂವರೆಕೋಟಿತೀರ್ಥಗಳಿಂದ ಕೂಡಿದ ಗಂಗಾನದಿಯ ಸನ್ನಿಧಾನವು ಉಂಟಾಗುತ್ತದೆ ಎಂದು [೪]ಪುರಾಣಪ್ರಸಿದ್ಧಿವುಂಟು; ಆಗ ಈ ನದಿಯಲ್ಲಿ ಮಾಡುವ ಸ್ನಾನವು ಸಕಲಪಾಪಗಳನ್ನೂ ಪುಣ್ಯವನ್ನಾಗಿ ಪರಿವರ್ತಿಸಿ ಬಿಡುತ್ತದೆ ಎಂಬ ವಿಶೇಷಾಂಶ ಇಲ್ಲಿದೆ.

೨. **ಗುರುಂ ಕನ್ಯಾಗತಂ:** ಕನ್ಯಾರಾಶಿಯಲ್ಲಿ ಗುರುವು ಇರುವಾಗ ಕೃಷ್ಣವೇಣೀ ಸ್ನಾನವು ತುಂಬಾ ಪುಣ್ಯಕರವೆಂದೂ, ಆಗ ಕೃಷ್ಣೆಯಲ್ಲಿ ಸ್ನಾನ ಮಾಡುವುದಕ್ಕೆ ಮುಂಚೆ ಬೃಹಸ್ಪತ್ಯಾಚಾರ್ಯರನ್ನು ಅರ್ಘ್ಯಾದಿಗಳಿಂದ[೫] ಪೂಜಿಸಬೇಕು ಎಂದೂ ನಿಯಮವಿದೆ. ಇದನ್ನು ಸೂಚಿಸಲು 'ಗುರುವನ್ನು ಮುಂದಿಟ್ಟುಕೊಂಡು ಸೇವಿಸಲ್ಪಡುವಿ' ಎಂದು ಹೇಳಿರುವರು.

೩. **ಪಾಪಾನಿ ಪುಣ್ಯಯಸಿ:** 'ಕನ್ಯಾಗತಂ' ಎಂಬುದಕ್ಕೆ 'ಕನ್ಯಾಗಾಮಿಯಾದವನು' ಎಂದೂ 'ಗುರುಂ' ಎಂಬುದಕ್ಕೆ 'ಗುರು' ಎಂದೂ ಅರ್ಥಾಂತರಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಹೀಗೆ

---

೧. ಕೃಷ್ಣವೇಣ್ಯಾಂ ನೃಪಶ್ರೇಷ್ಠ ಕೃಷ್ಣಃ ಸಾಕ್ಷಾಜ್ಜನಾರ್ದನಃ ।
ಚತುರ್ಬಾಹುರ್ಮಹಾತೇಜಾಃ ಶಂಖಚಕ್ರಾಸಿಶಾರ್ಙ್ಗಧೃಕ್ ॥-ತೀರ್ಥಾಭಿಮಾನಿದೇವತಾಸ್ತೋತ್ರ

೨. ದರ್ಶನಮಾತ್ರೇಣ ಅನೇಕಜನ್ಮಾರ್ಜಿತಪಾಪಂ ಹರತೀತ ಭಾವಃ । – ವ್ಯಾಖ್ಯಾನ

೩. ಕೃಷ್ಣವೇಣೀ ಅರ್ಘ್ಯ ಮಂತ್ರ :
ಕೃಷ್ಣೇ ಕೃಷ್ಣಾಂಗಸಂಭೂತೇ ಜಂತೂನಾಂ ಪಾಪಹಾರಿಣಿ ।
ನಮಸ್ತೇ ಸಲಿಲಶ್ರೇಷ್ಠೇ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

೪. ಧನ್ಯಾ ಸಾರ್ಧತ್ರಿಕೋಟಿತೀರ್ಥೋಪೇತಭಾಗೀರಥೀಸನ್ನಿಧಾನಯುಕ್ತತ್ವಾತ್ ಕೃತಾರ್ಥಾ। – ವ್ಯಾಖ್ಯಾನ

೫. ಬೃಹಸ್ಪತ್ಯರ್ಘ್ಯಮಂತ್ರ :
ಬೃಹಸ್ಪತೇ ಸುರಾಧ್ಯಕ್ಷ ಸರ್ವಲೋಕನಮಸ್ಕೃತ ।
ಗೃಹಾಣಾರ್ಘ್ಯಂ ಮಯಾ ದತ್ತಂ ಕನ್ಯಾಸ್ಥೋ ಭಾರ್ಯಯಾ ಸಹ ॥

ಹೇಳಿರುವರು; ಕನ್ಯಾಗಮನವೆಂಬುದು ಯಾರಿಂದ ನಡೆದರೂ ದೋಷವೆಂದು ಸ್ಮೃತಿಗಳು ಸಾರಿವೆ, ಅದರಲ್ಲೂ 'ಗುರು'ವೆನ್ನಿಸಿಕೊಂಡವನು ಕನ್ಯಾಗಮನ ಮಾಡಿದರೆ ಅದು ಜ್ಞಾನಪೂರ್ವಕ ಮಾಡಿದ ಪಾಪವಾಗುವುದರಿಂದ ಪ್ರತ್ಯವಾಯವು ಇನ್ನೂ ಹೆಚ್ಚು. ಇಂತಹ 'ಕನ್ಯಾಗತ' 'ಗುರು'ವಿಗೆ ಮೊದಲು ಇಲ್ಲಿ ಪೂಜೆ ಸಲ್ಲಿಸುವಂತೆ ತನ್ನಲ್ಲಿ ಸ್ನಾನ ಮಾಡುವ ಜನರ ಪಾಪಗಳನ್ನು ಕೃಷ್ಣವೇಣಿಯು ಪರಿಹರಿಸುವುದರಿಂದ ಇದು ಪಾಪಗಳನ್ನೂ ಪುಣ್ಯವನ್ನಾಗಿಸುವ ಸಾಮರ್ಥ್ಯವನ್ನು ಹೊಂದಿರುವ ನದಿ ಎಂಬುದು ನಿಶ್ಚಯ ಎಂದು ಭಾವ.

೪. (ಸಿದ್ಧ)ರಸಸ್ಪರ್ಶದಿಂದ[೧] ಕಬ್ಬಿಣವು ಚಿನ್ನವಾಗುವಂತೆ, ಕೃಷ್ಣಾ ನದಿಯ ಸ್ಪರ್ಶದಿಂದ ಪಾಪವು ಪುಣ್ಯವಾಗುತ್ತದೆ ಎಂದು ಸ್ಮೃತಿಗಳು ವರ್ಣಿಸಿವೆ. ಗುರುವು ಕನ್ಯಾಗತನಾದಾಗ ಆತನಿಗೆ ಮೊದಲು ಪೂಜೆ ಸಲ್ಲಿಸಿ ಕೃಷ್ಣಾನದಿಯಲ್ಲಿ ಸ್ನಾನ [೨]ಮಾಡುವ ವಿಧಿಯಲ್ಲೇ ಅದರ ಪಾಪವನ್ನು ಪುಣ್ಯವನ್ನಾಗಿಸುವ ಸಾಮರ್ಥ್ಯವು [೩]ವ್ಯಕ್ತವಾಗುತ್ತದೆ ಎಂದು ಶ್ರೀವಾದಿರಾಜರು ಮಾಡಿರುವ ವರ್ಣನೆಯು ಅವರ ಅತ್ಯಪೂರ್ವ ಕೌಶಲಕ್ಕೆ ಹಿಡಿದ ಕನ್ನಡಿಯಾಗಿದೆ.[೪]

**ಕಿಂ ವರ್ಣಯಾಮಿ ಹೇ ಕೃಷ್ಣೇ ತ್ವಯಿ ಕೃಷ್ಣಸ್ಯ ಸನ್ನಿಧಿಮ್ ।**
**ಯತ್ ಸಮಸ್ತಪದೋಕ್ತೌ ತು ಪುಂಭಾವಮವಲಂಬಸೇ ॥ ೩ ॥**

ಅ: **ಹೇ** = ಎಲೈ; **ಕೃಷ್ಣೇ** = ಕೃಷ್ಣವೇಣೀ ನದಿಯೇ; **ತ್ವಯಿ** = ನಿನ್ನಲ್ಲಿ; **ಕೃಷ್ಣಸ್ಯ** = ಶ್ರೀಕೃಷ್ಣನ; **ಸನ್ನಿಧಿಂ** = ಸನ್ನಿಧಾನವನ್ನು; **ಕಿಂ** = ಏನೆಂದು; **ವರ್ಣಯಾಮಿ** = (ನಾನು) ವರ್ಣಿಸಲಿ !; **ಯತ್** = ಏಕೆಂದರೆ; **ಸಮಸ್ತಪದೋಕ್ತೌ ತು** = 'ಕೃಷ್ಣಯಾ ಸಹಿತಾ ವೇಣೀ', 'ಕೃಷ್ಣವೇಣೀ' ಎಂಬುದನ್ನು ಸಮಸ್ತಪದವನ್ನಾಗಿ 'ಕೃಷ್ಣವೇಣೀ' ಎಂದು ಉಚ್ಚರಿಸಿದಾಗ; **ಪುಂಭಾವಂ** = ಪುಲ್ಲಿಂಗವಾದ ಕೃಷ್ಣಪದದಿಂದಲೇ ವಾಚ್ಯತ್ವವನ್ನು; **ಅವಲಂಬಸೇ** = ಹೊಂದುವಿ.

**ಸಮಸ್ತಪದವನ್ನಾಗಿ 'ಕೃಷ್ಣವೇಣೀ' ಎಂಬುದಾಗಿ ಉಚ್ಚರಿಸಿದಾಗ ಪುಲ್ಲಿಂಗವಾದ ಕೃಷ್ಣಪದದಿಂದಲೇ ವಾಚ್ಯಳಾಗುವ ಎಲೈ ಕೃಷ್ಣವೇಣಿಯೇ ! ನಿನ್ನಲ್ಲಿ ಶ್ರೀಕೃಷ್ಣನ ಸನ್ನಿಧಾನವನ್ನು ಏನೆಂದು ವರ್ಣಿಸೋಣ?**

---

೧. ತ್ಯಕ್ತ್ವಾಽಯಸ್ತ್ವಮಯೋ ಯಾತಿ ರಸಸ್ಪರ್ಶಾತ್ ಸುವರ್ಣತಾಮ್ ।
ಏವಂ ಕೃಷ್ಣಾಜಲಸ್ಪರ್ಶಾತ್ ಪಾಪಂ ಸದ್ಯೋ ಹಿ ಪುಣ್ಯತಾಮ್ ॥
- ಇತಿ ಸ್ಮೃತ್ಯನುಸಾರಿಣೀಯಮುಕ್ತಿಃ -ವ್ಯಾಖ್ಯಾನ

೨. ಕನ್ಯಾಗತೇ ಗುರೌ ಪೂರ್ವಮರ್ಘ್ಯಾದಿನಾ ಬೃಹಸ್ಪತಿಪೂಜಾಂ ಕೃತ್ವಾ ಪಶ್ಚಾತ್ ಕೃಷ್ಣವೇಣೀ-ಸ್ನಾನವಿಧಾನಾದಿತಿ ಭಾವಃ । - ವ್ಯಾಖ್ಯಾನ

೩. 'ತ್ಯಜೇದಂತ್ಯಕುಲೋದ್ಭೂತಾಂ ವೃದ್ಧಾಂ ಸ್ತ್ರೀಂ ಕನ್ಯಕಾಂ ತಥಾ' । - ಇತಿ ವಚನಾತ್ ಕನ್ಯಾಗಮನಸ್ಯ ನಿಷಿದ್ಧತ್ವಾತ್ ಗುರೋರೇತಾದೃಶಾನಾಚಾರಸ್ಯ ಜ್ಞಾನಕೃತತ್ವಾತ್ ತಾದೃಶಪಾಪೋಪೇತಗುರೋಃ ಪುರಸ್ಕರಣಾತ್ ಪಾಪಾನಾಂ ಪುಣ್ಯತ್ವಾಪಾದಾನಸಾಮರ್ಥ್ಯಂ ನಿಶ್ಚಿತಮಿತಿ ಧ್ವನಿಲಭ್ಯೋ ಅರ್ಥಃ ॥
-ವ್ಯಾಖ್ಯಾನ

೪. ಅತ್ರ ನೇಯಮುತ್ಪ್ರೇಕ್ಷಾ । ಕೇವಲಂ ಶಬ್ದಶಕ್ತಿಮೂಲೋ ಧ್ವನಿರೇವ । -ವ್ಯಾಖ್ಯಾನ

ವಿ: ೧. ಕೃಷ್ಣಾ ಮತ್ತು ವೇಣೀ ಎಂಬ ಎರಡು ನದಿಗಳೂ ಜೊತೆಯಾಗಿ ಹುಟ್ಟಿ ಒಂದಾಗಿ ಹರಿಯುವುದರಿಂದ ಕೃಷ್ಣಾನದಿಯಿಂದ ಕೂಡಿರುವ ವೇಣೀ ನದಿ ಎಂಬ ಅರ್ಥದಲ್ಲಿ 'ಕೃಷ್ಣವೇಣೀ' ಎಂಬ ಹೆಸರು ಬಂದಿದೆ. 'ಕೃಷ್ಣಯಾ ಸಹಿತಾ ವೇಣೀ' ಎಂಬದು ಸಮಾಸವಾದಾಗ, 'ಕೃಷ್ಣಾವೇಣೀ' ಎಂದಾಗದೆ, 'ಜ್ಯಾಪೋಃ ಸಂಜ್ಞಾಛಂದಸೋರ್ಬಹುಲಂ' ಎಂಬ ಪಾಣಿನಿಸೂತ್ರ (೬/೩/೮)ದಿಂದ' ಪುಂವದ್ಭಾವ ಬಂದು 'ಕೃಷ್ಣವೇಣೀ' ಎಂದಾಗುತ್ತದೆ. ಇಲ್ಲಿಯ 'ಕೃಷ್ಣಾ' ಎಂಬುದಕ್ಕೆ 'ಕೃಷ್ಣ' ಎಂಬ ಪುಂವದ್ಭಾವ ಬರಲು(ವ್ಯಾಕರಣ ಸೂತ್ರಕ್ಕಿಂತಲೂ) ಕೃಷ್ಣಾನದಿಯಲ್ಲಿನ ವಿಶೇಷ ಕೃಷ್ಣನ ಸನ್ನಿಧಾನವೇ ಮುಖ್ಯ ಕಾರಣ.

೨. ಹೀಗೆ ಸ್ತ್ರೀಲಿಂಗದ ಪದಕ್ಕೆ ಪುಂವದ್ಭಾವ ತಂದು ಕೊಟ್ಟಿರುವ ಶ್ರೀಕೃಷ್ಣಾನದಿಯಲ್ಲಿನ ಶ್ರೀಕೃಷ್ಣ ಸನ್ನಿಧಾನವು ವರ್ಣಿಸಲಸದಳವಾದುದು ಎಂದು ಭಾವ. ಹೆಸರಿನಲ್ಲೇ ಶ್ರೀಕೃಷ್ಣನ ಸ್ಮರಣೆ ತಂದು ಕೊಡುವ ಕೃಷ್ಣಾನದಿಯನ್ನು ಶ್ರೀವಾದಿರಾಜರು ವರ್ಣಿಸಿರುವ ರೀತಿ ವ್ಯಾಕರಣದಲ್ಲೂ ಆಧ್ಯಾತ್ಮವನ್ನೇ ಕಾಣುವ ಅವರ 'ಯೋಗದೃಷ್ಟಿ'ಗೆ ನಿದರ್ಶನ.

ಶ್ರೀಕೃಷ್ಣವೇಣಿ ಕಲ್ಯಾಣಿ ಯಾಚೇ ತ್ವಾಮಹಮನ್ವಹಮ್ ।
ಶ್ರೀಕೃಷ್ಣಚರಣಾಂಭೋಜೇ ಭಕ್ತಿಂ ಭಕ್ತಭವಚ್ಛಿದಿ ॥ ೪ ॥

ಅ: (ಹೇ) ಕಲ್ಯಾಣಿ = ಎಲ್ಲೈ ಪರಮಮಂಗಳರೂಪಳಾದ; ಶ್ರೀಕೃಷ್ಣವೇಣಿ = ಶ್ರೀಕೃಷ್ಣವೇಣೀ ನದಿಯೇ; ತ್ವಾಂ = ನಿನ್ನನ್ನು; ಅಹಂ = ನಾನು; ಅನ್ವಹಂ = ನಿರಂತರವೂ; **ಭಕ್ತಭವಚ್ಛಿದಿ** = ಭಕ್ತರ ಸಂಸಾರಭಯವನ್ನು ಪರಿಹರಿಸುವ; ಶ್ರೀಕೃಷ್ಣಚರಣಾಂಭೋಜೇ = ಶ್ರೀಕೃಷ್ಣನ ಚರಣಕಮಲಗಳಲ್ಲಿ; ಭಕ್ತಿಂ = ಮಾಹಾತ್ಮ್ಯ ಜ್ಞಾನಪೂರ್ವಕ ಸುದೃಡಸ್ನೇಹ-ರೂಪವಾದ) ಭಕ್ತಿಯನ್ನು; ಯಾಚೇ = ಬೇಡಿಕೊಳ್ಳುವೆನು.

ಪರಮಮಂಗಳೆಯಾದ ಶ್ರೀಕೃಷ್ಣವೇಣಿಯೇ ! ಭಕ್ತರ ಭಯನೀಗಿಸುವ ಶ್ರೀಕೃಷ್ಣನ ಚರಣಕಮಲಗಳಲ್ಲಿ ಭಕ್ತಿಯನ್ನು ನಾನು ನಿನ್ನಲ್ಲಿ ಅನವರತ ಬೇಡಿಕೊಳ್ಳುವೆನು.

ವಿ: ೧. ಹೀಗೆ ಶ್ರೀಕೃಷ್ಣನ ವಿಶೇಷ ಸನ್ನಿಧಾನವನ್ನು ಹೊಂದಿರುವ ಕೃಷ್ಣಾನದಿಯನ್ನು ನಿರಂತರವೂ ಶ್ರೀಕೃಷ್ಣನ ಚರಣಕಮಲಗಳಲ್ಲಿ ನಿರ್ಮಲವಾದ ಭಕ್ತಿಯನ್ನು ಕೊಡು ಎಂದು ಪ್ರಾರ್ಥಿಸಿಕೊಳ್ಳಬೇಕು; ಅದರಿಂದ ಸಂಸಾರದ ಭಯವು ಪರಿಹಾರವಾಗುತ್ತದೆ ಎಂದು ಭಾವ.

೨. ಪುಣ್ಯತೀರ್ಥಗಳಲ್ಲಿಯ ಸ್ನಾನವು ಪಾಪಪರಿಹಾರದಮೂಲಕ ಭಗವದ್ಭಕ್ತಿಯನ್ನು ಹೆಚ್ಚಿಸಿಕೊಳ್ಳುವ ಅಪೂರ್ವ ಸಾಧನಗಳಲ್ಲೊಂದು ಎಂಬ ಸೂಚನೆಯೂ ಇಲ್ಲಿದೆ.

## ಪುಂಡರೀಕ ಕ್ಷೇತ್ರ(ಪಂಢರಪುರ)

ಶ್ರೀಭೀಮರಥ್ಯಮಲನೀರಸಮೀರವೇಗ -
ನಿರ್ಧೂತತೀರಗನರಾಶುಭಘರ್ಮಜಾಲಮ್ ।

ಶ್ರೀಪಾಂಡುರಂಗಲಸಿತಂ ವರಪುಂಡರೀಕ -
ಕ್ಷೇತ್ರಂ ಪವಿತ್ರಮಹಮನ್ವಹಮಾಶ್ರಿತೋಽಸ್ಮಿ॥ ೫ ॥

ಅ: ಅಹಂ = ನಾನು; ಶ್ರೀಭೀಮರಥ್ಯಮಲನೀರಸಮೀರವೇಗನಿರ್ಧೂತತೀರಗನರಾಶುಭಘರ್ಮಜಾಲಮ್ = ಶ್ರೀಭೀಮರಥಿಯ ನಿರ್ಮಲಜಲದ ಸಂಪರ್ಕದಿಂದ ಕೂಡಿದ ಗಾಳಿಯ ವೇಗದಿಂದ ತೀರದಲ್ಲಿನ ಮನುಷ್ಯನ ಪಾಪಗಳ ತಾಪವನ್ನು ಪರಿಹರಿಸುವ; ಶ್ರೀಪಾಂಡುರಂಗಲಸಿತಂ = ಶ್ರೀಪಾಂಡುರಂಗನಿಂದ ಶೋಭಿತವಾದ; ಪವಿತ್ರಂ = ಪಾವನವಾದ; ವರಪುಂಡರೀಕಕ್ಷೇತ್ರಂ = ಉತ್ತಮವಾದ ಪುಂಡರೀಕನೆಂಬ ಮುನಿಯ ಕ್ಷೇತ್ರವನ್ನು; ಅನ್ವಹಂ = ನಿರಂತರವೂ; ಆಶ್ರಿತಃ ಅಸ್ಮಿ = ಆಶ್ರಯಿಸಿದವನಾಗುವೆನು.

ಶ್ರೀಭೀಮರಥಿಯ ನಿರ್ಮಲಜಲದ ಮೇಲೆ ಬೀಸಿ ಬರುವ ಗಾಳಿಯ ವೇಗದಿಂದ ತೀರದಲ್ಲಿನ ನರರ ದುಷ್ಕರ್ಮಗಳ ಬೇಗೆಯನ್ನು ದೂರ ಮಾಡುವ, ಶ್ರೀಪಾಂಡುರಂಗನಿಂದ ಬೆಳಗುವ, ಪವಿತ್ರವಾದ ಶ್ರೇಷ್ಠ ಪುಂಡರೀಕಕ್ಷೇತ್ರವನ್ನು ನಾನು ಸದಾ ಆಶ್ರಯಿಸುವೆ.

ವಿ: ೧. ಶ್ರೀಭೀಮರಥೀನದಿ[೧] ಮತ್ತು ಶ್ರೀಪಾಂಡುರಂಗನ ಸನ್ನಿಧಾನಗಳಿಂದ ಶೋಭಿಸುವ ಪುಂಡರೀಕಕ್ಷೇತ್ರವು ಸದಾ ಸ್ಮರಣೀಯವಾದ ಒಂದು ಅಪೂರ್ವ ಪುಣ್ಯಕ್ಷೇತ್ರವಾಗಿದೆ ಎಂದು ಭಾವ.

೨. ಪಂಢರಪುರವು ಇಂದು ಮಹಾರಾಷ್ಟ್ರಕ್ಕೆ ಸೇರಿರುವ ಒಂದು ಪುಣ್ಯಕ್ಷೇತ್ರ; ಸೊಲ್ಲಾಪುರದಿಂದ ೬೦ ಕಿ.ಮೀ. ದೂರದಲ್ಲಿದೆ; ಪುಂಡರೀಕನೆಂಬ ಭಕ್ತನಿಗೆ ಒಲಿದು ನೆಲೆಸಿದ ಸ್ಥಳ ಎಂಬುದು ಇದರ ಪೌರಾಣಿಕ ಪ್ರಸಿದ್ಧಿ.

೩. ಕರ್ನಾಟಕದ ಹರಿದಾಸರೆಲ್ಲ ವಿಶೇಷವಾಗಿ ಸ್ತುತಿಸಿರುವ ಮೂರ್ತಿ ಎಂಬುದು ಇದರ ವೈಶಿಷ್ಟ್ಯ; 'ಪುರಂದರವಿಠಲ' ಮೊದಲಾಗಿ ಹೆಚ್ಚಿನ ಹರಿದಾಸರ ಅಂಕಿತಗಳಲ್ಲಿ ಕಂಡುಬರುವ 'ವಿಠಲ' ಎಂಬ ಪದವು ಈ ಮೂರ್ತಿಯನ್ನೇ ಸೂಚಿಸುವಂತಿದೆ ಎಂಬುದು ಗಮನಾರ್ಹ; ಉಡುಪಿ, ತಿರುಪತಿಗಳಂತೆ ಹರಿದಾಸರಿಗೆಲ್ಲ ಸ್ಫೂರ್ತಿಕೇಂದ್ರವೆನ್ನಿಸಿದ ಕ್ಷೇತ್ರ ಎಂಬುದು ಇದರ ಅಪೂರ್ವಮಹತ್ತ್ವ. ಮಹಾರಾಷ್ಟ್ರದ ಸಂತರು ಪಾಂಡುರಂಗನನ್ನು ಶ್ರೀಹರಿ ಎಂಬುದಾಗಿ ಸ್ತುತಿಸಿರುವುದು ಐತಿಹಾಸಿಕವಾಗಿ ಗಮನಾರ್ಹವಾಗಿದೆ.

೪. ಮಾತಾಪಿತೃಗಳ ಸೇವೆಯಲ್ಲಿ ನಿರತನಾಗಿದ್ದ ಪುಂಡರೀಕಮುನಿಯು ಶ್ರೀವಿಠಲನು ಪ್ರತ್ಯಕ್ಷವಾಗಿ ಬಂದಾಗಲೂ ತನ್ನ ತಾಯಿತಂದೆಗಳ ಸೇವೆಯನ್ನು ನಿಲ್ಲಿಸದೆ, ಶ್ರೀವಿಠಲನ ವಿಶೇಷ ಒಲುಮೆಗೆ ಪಾತ್ರನಾದ ಸಂಕೇತವಾಗಿ ಪಾಂಡುರಂಗನು ಇಲ್ಲಿಯೇ ನೆಲೆಸಿರುವನು ಎಂಬುದು ಈ

---

೧. ಭೀಮರಥೀಸ್ನಾನಮಂತ್ರಃ :
ಭೀಮಸ್ವೇದಸಮುದ್ಭೂತೇ ರಥನೇಮಿವಿನಿಃಸೃತೇ ।
ಸರ್ವಪಾಪಪ್ರಣಾಶಾರ್ಥಂ ಸ್ನಾಸ್ಯೇ ದೇವಿ ತವಾಂಭಸಿ ॥

ಕ್ಷೇತ್ರದ ಪೌರಾಣಿಕ ಹಿನ್ನೆಲೆಯಾಗಿದೆ; ''ಇಟ್ಟಿಕಲ್ಲನು ಭಕುತಿಯಿಂದಲಿ ಕೊಟ್ಟ ಭಕುತಗೆ ಮೆಚ್ಚಿ ತನ್ನನೇ ಕೊಟ್ಟ...'' ಎಂಬ ಶ್ರೀಹರಿಕಥಾಮೃತದ ಮಾತು ಇದಕ್ಕೆ ಸಂಬಂಧಿಸಿದ್ದು.

೫. ಇಲ್ಲಿ ಹರಿಯುವ ಭೀಮರಥೀ(ಭೀಮಾ) ನದಿಯು ಊರನ್ನು ಅರ್ಧಚಂದ್ರಾಕಾರವಾಗಿ ಬಳಸಿರುವುದರಿಂದ ಇಲ್ಲಿ ಅದನ್ನು 'ಚಂದ್ರಭಾಗಾ' ಎಂದೂ ಕರೆಯುವರು. ಈ ನದಿಯು ಮುಂದೆ ರಾಯಚೂರಿನಿಂದ ಸುಮಾರು ೧೫ ಕಿ.ಮೀ. ದೂರದ ಶಕ್ತಿನಗರದ ಬಳಿಯಲ್ಲಿ 'ಕೃಷ್ಣಾ' ನದಿಯನ್ನು ಸೇರುವುದು.

## ಶ್ರೀವಿಠಲ (ಪುಂಡರೀಕಕ್ಷೇತ್ರ)

**ತೀರೇ ಸತ್ಸರಿತಸ್ತಿರಸ್ಕೃತಧನಾಸಕ್ತಿರ್ವಿರಕ್ತಿಪ್ರಿಯಃ**
**ಪಾದಾಂಭೋಜಮಿದಂ ಮದಂಕಸಹಿತಃ ಸಂಚಿಂತಯಾಂತರ್ಹೃದಿ ।**
**ಪಶ್ಚಾತ್ ತೇ ಕಟಿಮಾತ್ರ ಏವ ಭವಿತಾ ಸಂಸಾರವಾರ್ಧಿರ್ನ ಚೇತ್**
**ಶಿಕ್ಷಾಮೀತಿ ಹಿ ಲಕ್ಷಯತ್ಯನುದಿನಂ ಸ್ವಾವಸ್ಥಯಾ ವಿಠ್ಠಲಃ ॥ ೬ ॥**

ಅ: ಸತ್ಸರಿತಃ = ಪುಣ್ಯನದಿಯ; ತೀರೇ = ತೀರದಲ್ಲಿ (ಇರುವವನಾಗಿ); ತಿರಸ್ಕೃತಧನಾಸಕ್ತಿಃ = ದ್ರವ್ಯದ ಮೇಲೆ ಆಸೆಯನ್ನು ತೊರೆದವನಾಗಿ; ವಿರಕ್ತಿಪ್ರಿಯಃ = ವೈರಾಗ್ಯೋಪೇತನಾಗಿ; ಮದಂಕಸಹಿತಃ = ನನ್ನ ಚಿಹ್ನೆಗಳಾದ ಚಕ್ರಶಂಖಾದಿಗಳಿಂದ ಲಾಂಛಿತನಾಗಿ; ಅಂತರ್ಹೃದಿ = ಹೃದಯದಲ್ಲಿ; ಇದಂ = ನನ್ನ; ಈ ಪಾದಾಂಭೋಜಂ = ಪಾದಕಮಲವನ್ನು; ಸಂಚಿಂತಯ = ಚೆನ್ನಾಗಿ ಚಿಂತಿಸು (ಸ್ಮರಿಸು); ಪಶ್ಚಾತ್ = ಅನಂತರ (ಹಾಗೆ ಸ್ಮರಣೆ ಮಾಡಿದರೆ); ತೇ = ನಿನಗೆ; ಸಂಸಾರವಾರ್ಧಿಃ = ಸಂಸಾರಸಾಗರವು; ಕಟಿಮಾತ್ರಃ ಏವ = ಸೊಂಟದಷ್ಟು ಮಾತ್ರವೇ; ಭವಿತಾ = ಆಗಿಬಿಡುವುದು; ನ ಚೇತ್ = ಇಲ್ಲವಾದಲ್ಲಿ; ಶಿಕ್ಷಾಮಿ = ನಿನ್ನನ್ನು ದಂಡಿಸುವೆನು; ಇತಿ = ಎಂಬ ವಿಷಯವನ್ನು; ವಿಠಲಃ = ಶ್ರೀಪಾಂಡುರಂಗ ವಿಠಲನು; ಸ್ವಾವಸ್ಥಯಾ = ತಾನು ಇರುವ ಭಂಗಿಯಿಂದಲೇ; ಅನುದಿನಂ= ಪ್ರತಿದಿನವೂ; ಲಕ್ಷಯತಿ = ತಿಳಿಸಿ ಕೊಡುತ್ತಿರುವನು; ಹಿ = ಅಲ್ಲವೇ !

ಪುಣ್ಯನದಿಯ ತೀರದಲ್ಲಿ ನೆಲೆಸು; ದ್ರವ್ಯದ ಮೇಲಿನ ಆಸೆಯನ್ನು ತೊರೆ; ವೈರಾಗ್ಯವನ್ನು ಪ್ರೀತಿಸು; ನನ್ನ ಚಿಹ್ನೆಗಳಾದ ಚಕ್ರಶಂಖಾದಿಗಳಿಂದ ಲಾಂಛಿತನಾಗು; ಹೃದಯದಲ್ಲಿ ನನ್ನ ಪಾದಕಮಲವನ್ನು ಚೆನ್ನಾಗಿ ಚಿಂತಿಸು; ಆಗ ನಿನಗೆ ಸಂಸಾರಸಾಗರವು ಸೊಂಟದಷ್ಟಾಗುವುದು ಎಂದು ಶ್ರೀಪಾಂಡುರಂಗನು ತನ್ನ ನಿಲುವಿನಿಂದಲೇ ತಿಳಿಸುತ್ತಿರುವನು; ಅಲ್ಲವೇ !

ವಿ: ೧. ಶ್ರೀಪಾಂಡುರಂಗ ವಿಠಲನು ಭೀಮರಥೀ ತೀರದಲ್ಲಿ ನೆಲೆಸುವ ಮೂಲಕ ತನ್ನ ಭಕ್ತರಿಗೆ ಪುಣ್ಯನದೀ ತೀರದಲ್ಲಿ ವಾಸಿಸಬೇಕೆಂದೂ, ವಸ್ತ್ರ ರಹಿತನಾಗಿರುವ ಮೂಲಕ ಧನದ ಮೇಲಿನ ಆಸೆಯನ್ನು ತೊರೆದು ವಿರಕ್ತರಾಗಬೇಕೆಂದೂ, ತನ್ನ ಕೈಗಳಲ್ಲಿ ಹಿಡಿದಿರುವ ಶಂಖ ಚಕ್ರಗಳ

ಮೂಲಕ ತನ್ನ ಚಿಹ್ನೆಗಳನ್ನು (ಊರ್ಧ್ವಪುಂಡ್ರಧಾರಣೆ, ತಪ್ತಮುದ್ರಾಧಾರಣೆ ಇತ್ಯಾದಿ ವೈಷ್ಣವ ಲಾಂಛನಗಳನ್ನು) ವಿಧ್ಯುಕ್ತವಾಗಿ ಧರಿಸಬೇಕು ಎಂಬುದಾಗಿಯೂ, ತನ್ನ ಪಾದದತ್ತ ಬೆರಳು ಮಾಡಿರುವ ಒಂದು ಕೈಯಿಂದ ತನ್ನ ಪಾದಕಮಲಗಳನ್ನು ಸದಾ ಸ್ಮರಿಸಬೇಕು ಎಂಬುದಾಗಿಯೂ, ಒಂದು ಕೈಯನ್ನು ಸೊಂಟದ ಮೇಲಿರಿಸಿಕೊಳ್ಳುವ ಮೂಲಕ ಪೂರ್ವೋಕ್ತರೀತಿಯಲ್ಲಿ ನಡೆದುಕೊಂಡರೆ ಸಂಸಾರಸಮುದ್ರವು ಸೊಂಟದಷ್ಟು ಮಾತ್ರವೇ ಆಗುವುದು ಎಂಬುದಾಗಿಯೂ ತನ್ನ ತೊಡೆಗಳ ಮಧ್ಯೆ ದಂಡವೊಂದನ್ನು ಇರಿಸಿಕೊಳ್ಳುವುದರ ಮೂಲಕ ಹೀಗೆ ಮಾಡದಿದ್ದಲ್ಲಿ ನಿನ್ನನ್ನು ಶಿಕ್ಷಿಸಿ ಬಿಡುವೆನು ಎಂಬುದಾಗಿಯೂ ಸೂಚಿಸುತ್ತಿರುವನು ಎಂದೂ ಭಾವ.

೨. ದೇವತಾಮೂರ್ತಿಯನ್ನು ಸಂದರ್ಶಿಸುವಾಗ ಅದರಿಂದ ಸ್ಫುರಿಸುವ ಶಾಸ್ತ್ರತತ್ತ್ವಗಳನ್ನು ತಿಳಿದುಕೊಂಡು ಅನನ್ಯ ಭಕ್ತಿಯಿಂದ ಆರಾಧಿಸಬೇಕು ಎಂದು ಭಾವ. ಶ್ರೀಭೀಮರಥೀ ತೀರದ ಶ್ರೀಹರಿಯ ಆರಾಧನೆಯಿಂದ (ಭೀಮ)ಭಯಂಕರ ಸಮುದ್ರದ ಭಯ ಪರಿಹಾರವಾಗುವುದು ಎಂದು ಭಾವ.

೩. ಶ್ರೀಪುರಂದರದಾಸರಿಗೆ ಶ್ರೀಪಾಂಡುರಂಗವಿಠಲನ ವಿಶೇಷಾನುಗ್ರಹವಾದ ಸಂಕೇತ-ವಾಗಿರುವ ಶ್ರೀಪುರಂದರದಾಸರ ಕಂಭವೆಂಬುದು ಶ್ರೀವಿಠಲದೇವಾಲಯದಲ್ಲಿದೆ; ಹರಿಕಥಾಮೃತಸಾರವನ್ನು ರಚಿಸಿದ ಶ್ರೀಜಗನ್ನಾಥದಾಸರಿಗೆ 'ಶ್ರೀಜಗನ್ನಾಥವಿಠಲ' ಎಂಬ ಅಂಕಿತದ ಶಿಲೆಯು ದೊರೆತದ್ದು ಸಹ ಶ್ರೀಪಂಢರಪುರ ಕ್ಷೇತ್ರದಲ್ಲಿ ಎಂದು ಐತಿಹ್ಯ. ಇಲ್ಲಿ ಉತ್ತರಾದಿಮಠದ ಶ್ರೀವೇದನಿಧಿತೀರ್ಥರ ಮತ್ತು ಶ್ರೀಸತ್ಯಧ್ಯಾನತೀರ್ಥರ ಮೂಲ ಬೃಂದಾವನಗಳು ಇವೆ. ಫಂಢರಪುರವು ಪುರಾತನ ಕಾಲದಿಂದಲೂ 'ವೈಷ್ಣವಕ್ಷೇತ್ರ' ವೆನ್ನಲು ವಿಪುಲ ಆಧಾರಗಳಿವೆ.

೪. ವಿಠಲಃ : [೧]ವಿಶೇಷಜ್ಞಾನವಿಲ್ಲದ ಭಕ್ತಜನರನ್ನು ಸಹ ಸ್ವೀಕರಿಸಿ ಸಲಹುವವನು ಎಂಬುದು [೨]'ವಿಠಲ' ಶಬ್ದದ ಅರ್ಥ[೩].

೫. ಶ್ರೀರಾಘವೇಂದ್ರಸ್ವಾಮಿಗಳು ಪಂಢರಾಪುರಕ್ಷೇತ್ರವನ್ನು ಸಂದರ್ಶಿಸಿದ್ದ ವಿವರ ಸುಪ್ರಸಿದ್ಧ. ಅಲ್ಲಿ ಅವರು ಒಮ್ಮೆ ಚಾತುರ್ಮಾಸ್ಯಕ್ಕೆ ಕುಳಿತಿದ್ದ ಪ್ರತೀತಿಯೂ ಉಂಟು. ಶ್ರೀಪಲಿಮಾರು ಮಠದ ಒಬ್ಬ ಯತಿಗಳ ವೃಂದಾವನಸ್ಥಳ ಎಂಬುದಾಗಿಯೂ ಹೇಳುವುದುಂಟು.

---

೧. ವಿದಾ ಜ್ಞಾನೇನ ಠಾನ್ ಶೂನ್ಯಾನ್ ಲಾತಿ ಗೃಹ್ಣಾತಿ ಯಃ ಸ್ವಯಮ್ ।
ಅಜ್ಞಾನುಗ್ರಹಕೃದ್ದೇವೋ ವಿಠಲಃ ಕಥ್ಯತೇ ಬುಧೈಃ ॥
- (ಪ್ರಕ್ರಿಯಾಕೌಮುದೀ ವ್ಯಾಖ್ಯಾನ(ಪ್ರಕಾಶ)ದಲ್ಲಿ ಉದ್ಧೃತ ಪ್ರಮಾಣವಚನ)

೨. ವಿಠಲಶಬ್ದವನ್ನು ವೈಷ್ಣವಗ್ರಂಥಗಳಲ್ಲಿ ಮೊದಲಬಾರಿಗೆ ಉಪಯೋಗಿಸಿದವರು ಶ್ರೀಮದಾ-ಚಾರ್ಯರ ಸಾಕ್ಷಾಚ್ಛಿಷ್ಯರಲ್ಲಿ ಒಬ್ಬರಾದ ಶ್ರೀಹೃಷೀಕೇಶತೀರ್ಥರು:
ಶ್ರೀವಿಠಲಂ ಶ್ರೀವಾಮನಯೋಗಿನೋऽಪಿ...(ಶ್ಲೋ.೧೬)
ಅಧೋಕ್ಷಜಯೋಗಿನಃ। ಶ್ರೀವಿಠಲಂ ..(ಶ್ಲೋ.೧೭) -ಸಂಪ್ರದಾಯ ಪದ್ಧತಿ

೩. ಶ್ರೀಕೃಷ್ಣಾ- ಭೀಮರಥಿಗಳ ವರ್ಣನೆಯು ಮಹಾಭಾರತದಲ್ಲೂ ಬಂದಿದೆ:
ವೇಣೀ ಭೀಮರಥೀ ಚೈವ ನದ್ಯೌ ಪಾಪಭಯಾಪಹೇ।
ಮೃಗದ್ವಿಜಸಮಾಕೀರ್ಣೇ ಪಾವನಾಲಯಭೂಷಿತೇ ॥ -(೨/೮೮।೩)

ಪಾಪಾವಲೀಪಾಟನಪಟ್ವಪಾಂಗಃ
ಶ್ರೀಪಾಣಿಪದ್ಮಾಂಚಿತಜಾನುಜಂಘಃ ।
ಗೋಪಾಲಬಾಲಃ ಕೃಪಯಾ ಸ್ವಯಂ ನಃ
ಶ್ರೀಪಾಂಡುರಂಗೋ ಭವತು ಪ್ರಸನ್ನಃ ॥ ೭ ॥

ಅ: ಪಾಪಾವಲೀಪಾಟನಪಟ್ವಪಾಂಗಃ = ಪಾಪಗಳ ಪರಂಪರೆಯನ್ನು ನಾಶಪಡಿಸುವಲ್ಲಿ ನಿಪುಣವಾದ ಕುಡಿನೋಟವುಳ್ಳ; ಶ್ರೀಪಾಣಿಪದ್ಮಾಂಚಿತಜಾನುಜಂಘಃ = ಮಹಾಲಕ್ಷ್ಮಿಯ ಕರಕಮಲಗಳಿಂದ ಪೂಜಿತವಾದ ಜಾನು (ಮೊಣಕಾಲು) ಮತ್ತು ಜಂಘೆ(ಮಂಡಿ)ಗಳನ್ನುಳ್ಳ; **ಗೋಪಾಲಬಾಲಃ** = ಶ್ರೀಗೋಪಾಲಬಾಲನಾದ; ಶ್ರೀಪಾಂಡುರಂಗಃ = ಶ್ರೀಪಾಂಡುರಂಗವಿಠಲನು; ಸ್ವಯಂ = ಸ್ವತಃ; ಕೃಪಯಾ = ಕೃಪೆಯಿಂದ; ನಃ = ನಮಗೆ ಪ್ರಸನ್ನಃ ಭವತು = ಪ್ರಸನ್ನನಾಗಲಿ.[1]

ಪಾಪರಾಶಿಯನ್ನು ತರಿಯುವ ಸಮರ್ಥ ಕುಡಿನೋಟ, ಶ್ರೀದೇವಿಯು ಕರಕಮಲದಿಂದ ಪೂಜಿಸುವಂತಹ ಮೊಣಕಾಲು ಮಂಡಿಗಳು, ಇಂತಹ ಗೋಪಾಲಬಾಲನಾದ ಶ್ರೀಪಾಂಡುರಂಗನು ಕೃಪೆಯಿಂದ ನಮಗೆ ಸ್ವತಃ ಒಲಿಯಲಿ.

ಪಾಪಾಪನೋದನಪಟು ಪ್ರಿಯಭೃತ್ಯಭೃಂಗೈಃ
ಪೇಪೀಯಮಾನಶುಭಸುಂದರತಾರಸಾರ್ದ್ರಮ್ ।
ತಾಪತ್ರಯೋಪಶಮನಂ ತರುಣಾರ್ಕವರ್ಣಂ
ಗೋಪಾಲಬಾಲಚರಣಾಂಬುರುಹಂ ಶ್ರಿತೋಽಸ್ಮಿ ॥ ೮ ॥

ಅ: ಪಾಪಾಪನೋದನಪಟು = ಪಾಪಗಳನ್ನು ಪರಿಹರಿಸುವಲ್ಲಿ ಸಮರ್ಥವಾದ; ಪ್ರಿಯಭೃತ್ಯಭೃಂಗೈಃ = ತನ್ನ ಪ್ರಿಯಭೃತ್ಯರುಗಳೆಂಬ ದುಂಬಿಗಳಿಂದ; ಪೇಪೀಯಮಾನಶುಭಸುಂದರತಾರಸಾರ್ದ್ರಂ = ಮತ್ತೆ ಮತ್ತೆ ಹೀರಲ್ಪಡುವ ಮಂಗಲಕರವಾದ ಸೌಂದರ್ಯವೆಂಬ ಮಕರಂದಗಳಿಂದ ತೇವಗೊಂಡಿರುವ; ತಾಪತ್ರಯೋಪಶಮನಂ = ಮೂರುವಿಧ ತಾಪಗಳನ್ನು ಹೋಗಲಾಡಿಸುವ; ತರುಣಾರ್ಕವರ್ಣಂ = ಉದಿಸುವ ಸೂರ್ಯನಂತಹ (ಅರುಣ)ಬಣ್ಣವುಳ್ಳ; **ಗೋಪಾಲಬಾಲಚರಣಾಂಬುರುಹಂ** = ಶ್ರೀಗೋಪಾಲಕೃಷ್ಣನ ಚರಣಕಮಲವನ್ನು; ಶ್ರಿತಃ ಅಸ್ಮಿ = ಆಶ್ರಯಿಸಿರುವೆನು.

ಪಾಪರಾಶಿಯನ್ನು ತರಿಯುವಲ್ಲಿ ನಿಪುಣರಾದ ತನ್ನ ಪ್ರಿಯಭಕ್ತರೆಂಬ ದುಂಬಿಗಳು ಮತ್ತೆ ಮತ್ತೆ ಸವಿಯುವ, ತಾಪತ್ರಯಗಳನ್ನು ಹೊಡೆದಟ್ಟುವ, ಉದಯಭಾನುವಿನಂತಹ ಹೊಂಬಣ್ಣದ ಶ್ರೀಗೋಪಾಲಕೃಷ್ಣನ ಚರಣಕಮಲವನ್ನು ಆಶ್ರಯಿಸುವೆನು.

---

೧. ಶ್ರೀವಿಠಲನು ಭೀಮರಥೀತೀರದಲ್ಲೇ ನೆಲೆಸಿರುವದು ಸದಾ ಪೂರ್ವಭೀಮರಾದ ಶ್ರೀಮಧ್ವರ ಶಾಸ್ತ್ರವನ್ನು ಸದಾ ಅಧ್ಯಯನ ಮಾಡುತ್ತಿರಬೇಕು ಎಂಬುದಕ್ಕೂ ಸೂಚಕ.

ವಿ: ಶ್ರೀಹರಿಯ ಪಾದವು ಸಕಲ ಪಾಪವನ್ನೂ ಪರಿಹರಿಸುತ್ತದೆ; ಭಕ್ತರು ದುಂಬಿಗಳಂತೆ ಹೀರುವ ಸೌಂದರ್ಯವೆಂಬ ಮಕರಂದದಿಂದ ಕೂಡಿದೆ; ಆಧ್ಯಾತ್ಮಿಕಾದಿ ಮೂರು ತಾಪಗಳನ್ನೂ [1]ಹೋಗಲಾಡಿಸುತ್ತದೆ; ಉದಿಸುವ ಸೂರ್ಯನಂತೆ ಹೊಂಬಣ್ಣದಿಂದ ಕೂಡಿದೆ; ಇದನ್ನು ಸದಾ ಆಶ್ರಯಿಸುವೆನು ಎಂದು ಭಾವ.

## ಗೋದಾವರೀ (ನದಿ)

**ವಿಪ್ರರ್ಷಿದೇವಕುಲಸಂಕುಲತೀರಯುಗ್ಮಾ**
**ವಿದ್ರಾವಿತಾಘತೃಣರೇಣುಕಣಾ ಸ್ವವಾತೈಃ ।**
**ಸ್ವಾದೂದಕೈಃ ಪ್ರಶಮಿತಾಖಿಲಲೋಕಶೋಕಾ**
**ಗೋದಾವರೀ ಶುಭಕರೀ ಸರಿದುದ್ಧರೇನ್ನಃ ॥ ೬ ॥**

ಅ: ವಿಪ್ರರ್ಷಿದೇವಕುಲಸಂಕುಲತೀರಯುಗ್ಮಾ = ವಿಪ್ರರು, ಋಷಿಗಳು ಮತ್ತು ದೇವತೆಗಳ ಸಮೂಹದಿಂದ ತುಂಬಿರುವ ಎರಡೂ ತೀರಗಳನ್ನುಳ್ಳ; ಸ್ವವಾತೈಃ = ತನ್ನ (ಮೇಲೆ ಬೀಸುವ)ಗಾಳಿಯಿಂದ ವಿದ್ರಾವಿತಾಘತೃಣರೇಣುಕಣಾ = ಪಾಪಗಳೆಂಬ ಹುಲ್ಲು, ಧೂಳು ಮತ್ತು ಮರಳು ಕಣಗಳನ್ನು ದೂರ ಮಾಡಿರುವ; ಸ್ವಾದೂದಕೈಃ = ತನ್ನ ಸವಿಯಾದ ಜಲದಿಂದ, ಪ್ರಶಮಿತಾಖಿಲಲೋಕಶೋಕಾ = ಸಮಸ್ತ ಲೋಕ(ಜನ)ಗಳ ನೋವನ್ನು ಪರಿಹರಿಸಿರುವ; ಶುಭಕರೀ = ಮಂಗಲಕರವಾದ; ಗೋದಾವರೀ ಸರಿತ್ = 'ಗೋದಾವರೀ' ಎಂಬ ನದಿಯು; ನಃ = ನಮ್ಮನ್ನು; ಉದ್ಧರೇತ್ = ಉದ್ಧರಿಸಲಿ.

ಉಭಯತೀರಗಳಲ್ಲಿ ವಿಪ್ರರು ಋಷಿಗಳು ಮತ್ತು ದೇವತೆಗಳ ಹಿಂಡು ನೆಲೆಸಿರುವ, ತನ್ನ ಮೇಲೆ ಬೀಸುವ ಗಾಳಿಯಿಂದ ಪಾಪಗಳೆಂಬ ಹುಲ್ಲು ಧೂಳು ಮತ್ತು ಮರಳು ಕಣಗಳನ್ನು ದೂರ ಮಾಡಿರುವ, ತನ್ನ ಸವಿಯಾದ ಜಲದಿಂದ ಸಕಲಜನರ ನೋವನ್ನು ನೀಗಿಸುವ, ಮಂಗಲಕರವಾದ 'ಗೋದಾವರೀ' ನದಿಯು ನಮ್ಮನ್ನು ಉದ್ಧರಿಸಲಿ.

ವಿ: ೧. ಗೋದಾವರೀ ನದಿಯ ತೀರದಲ್ಲಿ ಬ್ರಾಹ್ಮಣರು, ಋಷಿಗಳು ಮತ್ತು ದೇವತೆಗಳು ನೆಲೆಸಿರುವರು; ದೇವಾಲಯಗಳು ತುಂಬಿರುವವು; ಇದರ ಮೇಲೆ ಬೀಸಿ ಬರುವ ಗಾಳಿ ಪಾಪರಾಶಿಗಳನ್ನು ಹುಲ್ಲುಕಡ್ಡಿಗಳಂತೆ, ಧೂಳಿನ ಕಣಗಳಂತೆ ದೂರ ಮಾಡಬಲ್ಲ ಪಾವಿತ್ರ್ಯವನ್ನು ಹೊಂದಿದೆ. ಇದರ ನಿರ್ಮಲವಾದ ಸವಿಯಾದ ಜಲವು ಜನಗಳ ಶೋಕವನ್ನು ಪರಿಹರಿಸಬಲ್ಲ ಸಾಮರ್ಥ್ಯವನ್ನು ಹೊಂದಿದೆ; ಇಂತಹ ನದಿಯು ನಮ್ಮನ್ನು ಉದ್ಧರಿಸಲಿ ಎಂದು ಶ್ರೀವಾದಿರಾಜರು ಪ್ರಾರ್ಥಿಸಿರುವರು; ಅದರ ತೀರ, ಜಲ ಮತ್ತು ಗಾಳಿಗಳು ಹೀಗೆ ಪವಿತ್ರವಾಗಿರುವುದು ಗೋದಾವರಿನದಿಯ ಮಹತ್ತ್ವಕ್ಕೆ ದ್ಯೋತಕವಾಗಿದೆ ಎಂದು ಭಾವ.

---

೧. ನಮಾಮಿ ನಿಖಿಲಾಧೀಶಕಿರೀಟಾಘೃಷ್ಟಪೀಠವತ್ ।
ಹೃತ್ತಮಃಶಮನೇಽರ್ಕಾಭಂ ಶ್ರೀಪತೇಃ ಪಾದಪಂಕಜಮ್ ॥
- ಎಂಬ ಶ್ರೀಮದಾಚಾರ್ಯರ ಮಾತು(ದ್ವಾದಶಸ್ತೋತ್ರ) ಇಲ್ಲಿ ಗಮನಾರ್ಹ.

೨. ಗೋದಾವರಿಯು ಭರತಖಂಡದ [೧]ಸಪ್ತಮಹಾನದಿಗಳಲ್ಲಿ ಒಂದು; ಗಂಗೆಯ ಅನಂತರದ ಅತ್ಯಂತ ಪವಿತ್ರನದಿ ಎಂಬುದು ಇದರ ಹಿರಿಮೆ[೨].

೩. 'ಗೌತಮೀ' ಎಂಬುದು ಇದರ ನಾಮಾಂತರ. 'ನಾಸಿಕ್‌ರೋಡ್' ಎಂಬ ಸ್ಥಳದಿಂದ ಸುಮಾರು ೨೫ ಕಿ.ಮೀ. ದೂರದಲ್ಲಿರುವ ತ್ರ್ಯಂಬಕವೆಂಬ ಪರ್ವತವು ಇದರ ಉಗಮಸ್ಥಾನ. ಸುಮಾರು ೧೫೦೦ಕಿ.ಮೀ. ಉದ್ದದ ಈ ನದಿಯು ಆಂಧ್ರಪ್ರದೇಶದ ರಾಜಮಹೇಂದ್ರಿಯ ಬಳಿ ಪೂರ್ವಸಮುದ್ರ (ಬಂಗಾಳಕೊಲ್ಲಿ)ವನ್ನು ಸೇರುತ್ತದೆ. ಪದ್ಮಪುರಾಣ, ವರಾಹಪುರಾಣ ಮೊದಲಾದ ಪುರಾಣಗಳಲ್ಲಿ ಇದರ ಉತ್ಪತ್ತಿಯ ವಿವರ ಮತ್ತು ಮಾಹಾತ್ಮ್ಯವು ನಿರೂಪಿತವಾಗಿದೆ. ದಕ್ಷಿಣಭಾರತದ ಅತ್ಯಂತ ದೊಡ್ಡ ನದಿ ಎಂಬುದು, ಗಂಗೆಯ ಮತ್ತೊಂದು ರೂಪ ಎಂಬುದು ಇದರ ವೈಶಿಷ್ಟ್ಯ. ಪ್ರತಿನಿತ್ಯ ಸಂಕಲ್ಪದಲ್ಲಿ 'ಗೋದಾವರ್ಯಾಃ ದಕ್ಷಿಣೇತೀರೇ' ಎಂದು ನಿಯಮೇನ ಉಚ್ಚರಿಸುವುದು ಇದರ ಮಹತ್ತ್ವದ ಮತ್ತೊಂದು ಮುಖ. ಗುರುವು ಸಿಂಹರಾಶಿಯಲ್ಲಿರುವಾಗ ಆ ವರ್ಷಪೂರ್ತಿ ಪೂರ್ಣ ಗಂಗಾಸನ್ನಿಧಾನವು ಇದರಲ್ಲಿರುವುದು ಎಂದು ಪ್ರಮಾಣಗಳು ತಿಳಿಸುತ್ತವೆ. ಗೋದಾವರಿಯಲ್ಲಿ ಶಂಖಚಕ್ರ ಗದಾಪದ್ಮಧರನಾದ 'ವೀರನಾರಾಯಣ' ಎಂಬ ಭಗವದ್ರೂಪವನ್ನು ಚಿಂತಿಸಬೇಕು[೩].

೪. ಪುರಾಣಗಳಲ್ಲಿ ಬರುವ ಉತ್ಪತ್ತಿಯ ಹಿನ್ನೆಲೆಯನ್ನು ಶ್ರೀತ್ರಿವಿಕ್ರಮಪಂಡಿತಾಚಾರ್ಯರು ತತ್ತ್ವಪ್ರದೀಪದಲ್ಲಿ ಸಂಗ್ರಹಿಸಿ ಕೊಟ್ಟಿರುವರು :

ಹನ್ನೆರಡು ವರ್ಷಗಳಷ್ಟು ದೀರ್ಘಕಾಲದ ಒಂದು ಭೀಕರ ಬರಗಾಲದಲ್ಲಿ ಋಷಿಗಳೆಲ್ಲ ಉದಾರಿಯಾದ ಗೌತಮಋಷಿಗಳ ಫಲಭರಿತ ಆಶ್ರಮದಲ್ಲಿ ವಾಸಮಾಡಿದರು. ಗೌತಮರ ಹೃದಯತುಂಬಿದ ಸತ್ಕಾರದಿಂದಾಗಿ ಅವರ ಪಾಠಪ್ರವಚನಾದಿ ಜ್ಞಾನಕಾರ್ಯವು ನಿರಾತಂಕವಾಗಿ ಸಾಗಿತು. ಬರಗಾಲ ಕಳೆದು ಎಲ್ಲೆಲ್ಲೂ ಸುಭಿಕ್ಷವುಂಟಾದರೂ, ಗೌತಮರ ಆತ್ಮೀಯವಾದ ಒತ್ತಾಯದಿಂದ ಅವರಿಗೆ ತಮ್ಮ ಆಶ್ರಮಗಳಿಗೆ ಹಿಂತಿರುಗಲು ಸಾಧ್ಯವಿಲ್ಲದೇ ಹೋಯಿತು. ಅದೇ ವೇಳೆಗೆ ಶಿವನ ತಲೆಯಮೇಲೆ ಕುಳಿತು ಅಹಂಕಾರ ಪಡುತ್ತಿದ್ದ ಗಂಗೆಯನ್ನು ಕೆಳಗಿಳಿಸಲು ಪಾರ್ವತೀ ದೇವಿಯಿಂದ ಪ್ರೇರಿತನಾದ ಗಣೇಶನು ವಟುರೂಪದಲ್ಲಿ ಮುನಿಗಳ ಬಳಿಗೆ ಬಂದು, ''ಪೂಜ್ಯರೇ! ಎಷ್ಟು ಕಾಲ ತಪಸ್ಸನ್ನು ಹಾಳು ಮಾಡುವ ಇಂತಹ ಪರಾನ್ನದಿಂದ ಬದುಕುವಿರಿ, ನೀವಿನ್ನು ನಿಮ್ಮ ಆಶ್ರಮಗಳಿಗೆ ಹಿಂದಿರುಗಿರಿ. ಅದಕ್ಕೊಂದು ಉಪಾಯವನ್ನು ತಿಳಿಸುವೆನು; ಕೇಳಿರಿ ! ನಿಮ್ಮ

---

೧. ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ..... ।

೨. ೧) ಗೋದಾವರ್ಯರ್ಘ್ಯಮಂತ್ರಃ :
ವೃದ್ಧಗಂಗೇ ಮಹಾಪುಣ್ಯೇ ಗೌತಮಸ್ಯಾಘನಾಶಿನಿ ।
ಗೃಹಾಣಾರ್ಘ್ಯಂ ಮಯಾ ದತ್ತಂ ಗೋದಾವರಿ ನಮೋಽಸ್ತು ತೇ ॥

೨) ವಿಷ್ಣುಪಾದಾಬ್ಜಸಂಭೂತಾ ಗಂಗಾ ಸರ್ವಾಧಿಕಾ ಮತಾ ।
ತತೋ ಗೋದಾವರೀ ನ್ಯೂನಾ ............... ॥ - ನದೀತಾರತಮ್ಯಸ್ತೋತ್ರ

೩. ಗೋದಾವರ್ಯಾಂ ಮಹಾನದ್ಯಾಂ ವೀರನಾರಾಯಣೋ ನೃಪ ।
ಶಂಖಚಕ್ರಗದಾಪದ್ಮೈಃ ಶೋಭಿತೋ ಧ್ಯೇಯ ಏವ ಹಿ ॥ - ಬ್ರಹ್ಮಾಂಡಪುರಾಣ

ತಪೋಬಲದಿಂದ ಮಾಯಾಮಯವಾದ ಗೋವನ್ನು ನಿರ್ಮಿಸಿ ಅದನ್ನು ಗೌತಮರ ಸಸ್ಯಗಳನ್ನು ತಿನ್ನಲು ಬಿಡಿರಿ; ಅದನ್ನು ಓಡಿಸಲು ಗೌತಮರು ಮಾಡುವ ಯಾವ ಪ್ರಯತ್ನಕ್ಕೂ ಅದು ಸಾಯುವಂತೆ ಇರಬೇಕು; ಅದು ಸಾಯುತ್ತಲೇ 'ನೀವು ಈ ಗೋವನ್ನು ಪುನಃ ಬದುಕಿಸುವವರೆಗೂ ನಾವು ನಿಮ್ಮ ಅನ್ನವನ್ನು ಸ್ವೀಕರಿಸಲಾರೆವು; ನೀವು ಹರನ ಮುಡಿಯಿಂದ ದೇವಗಂಗೆಯನ್ನು ಇದರ ಮೇಲೆ ಹರಿಸುವವರೆಗೂ ಇದು ಪುನಃ ಬದುಕು ವುದಿಲ್ಲ' ಎಂದು ನುಡಿದು ಇಲ್ಲಿಂದ ಹೊರಟುಬಿಡಿರಿ !'' ಎಂದು ಹೇಳಿದನು. ಮುನಿಗಳು ವಟುರೂಪದ ಗಣೇಶನು ಹೇಳಿದಂತೆಯೇ ಮಾಡಿ ಅಲ್ಲಿಂದ ಹೊರಟು ಬಿಟ್ಟರು; ಗೌತಮರು ದೀರ್ಘಕಾಲ ತಪಸ್ಸನ್ನು ಮಾಡಿ, ರುದ್ರದೇವರನ್ನು ಮೆಚ್ಚಿಸಿ ಅವರ ಮುಡಿಯಿಂದ ಮತ್ತೊಂದು ಕವಲು ಗಂಗೆಯನ್ನು ತಂದು ಗೋವಿನ ಶರೀರದ ಮೇಲೆ ಹರಿಸಲು ಅದು ಪುನಃ ಬದುಕಿತು. ಅನಂತರ ತಮ್ಮ ಜ್ಞಾನದೃಷ್ಟಿಯಿಂದ ಋಷಿಗಳ ವಂಚನೆಯನ್ನು ಅರಿತ ಗೌತಮರು''ನನ್ನ ಆತಿಥ್ಯದಲ್ಲಿ ದೀರ್ಘಕಾಲ ಜೀವಿಸಿ, ಜ್ಞಾನಸಂಪಾದನೆ ಮಾಡಿದ ಈ ಮುನಿಗಳ, ಅಂತಹ ಜ್ಞಾನವೆಲ್ಲ ನಷ್ಟವಾಗಲಿ' ಎಂದು ಶಪಿಸಿದರು. ಆಗ ಸರ್ವತ್ರ ತತ್ತ್ವಜ್ಞಾನವು ಖಿಲವಾಗಲು, ಶ್ರೀನಾರಾಯಣನು ಬ್ರಹ್ಮರುದ್ರಾದಿಗಳ ಪ್ರಾರ್ಥನೆಯಂತೆ ಶ್ರೀವೇದವ್ಯಾಸರೂಪದಿಂದ ಪ್ರಾದುರ್ಭವಿಸಿ ಪುನಃ ಜ್ಞಾನವನ್ನು ನೆಲೆಗೊಳಿಸಿದನು.

೫. ಹೀಗೆ ಗೌತಮರು ಗೋವಿನ ಮೇಲೆ ಹರಿಸಿದ ಗಂಗಾಜಲವೇ 'ಗೋದಾವರೀ' (ಗೊದತ್ತಂ ವಾರಿ - ಗೋದಾವರೀ) ನದಿಯೆಂದು ಪ್ರಸಿದ್ಧವಾಯಿತು. ಭಗೀರಥನಿಂದ ಭೂಮಿಗೆ ಬಂದ ಗಂಗೆಯು 'ಭಾಗೀರಥೀ' ಎನ್ನಿಸಿದಂತೆ; ಗೌತಮರಿಂದ ಭೂಮಿಗೆ ಬಂದ ಈ ಗಂಗೆಯ ಕವಲು 'ಗೌತಮೀ' ಎನ್ನಿಸಿತು.

**ಅಂಹಾಂಸಿ ಹಂಸಿ ಸತತಂ ಕಿಲ ರಾಸಿ ಪುಣ್ಯಂ**
**ಸಿಂಹಸ್ಥಿತೇ ಸುರಗುರೌ ನ ತದಂಬ ಯಾಚೇ ।**
**ಗೋದೇ ಸಮಸ್ತಫಲದೇ ದಿಶ ಕೃಷ್ಣಪಾದೇ**
**ಭಕ್ತಿಂ ವಿರಕ್ತಿಮಿತರತ್ರ ಪರತ್ರ ಮುಕ್ತಿಮ್ ॥ ೧೦ ॥**

ಅ: **(ಹೇ) ಗೋದೇ** = ಎಲೈ ಗೋದಾವರಿಯೇ; **(ತ್ವಂ** = ನೀನು); **ಸತತಂ** = ಸರ್ವಕಾಲದಲ್ಲೂ; (ಜನಗಳ); **ಅಂಹಾಂಸಿ** = ದುರಿತಗಳನ್ನು; **ಹಂಸಿ** = ಪರಿಹರಿಸುವಿ; **ಕಿಲ** = ಅಲ್ಲವೇ; **ಪುಣ್ಯಂ** = ಪುಣ್ಯವನ್ನು (ಸಹ); **ರಾಸಿ(ಕಿಲ)** = ಕೊಡುವೆಯಲ್ಲವೇ?; **(ಹೇ) ಅಂಬ !** = ಅಮ್ಮ ! **ಸುರಗುರೌ** = ದೇವಗುರುಗಳಾದ ಬೃಹಸ್ಪತ್ಯಾಚಾರ್ಯರು; **ಸಿಂಹಸ್ಥಿತೇ (ಗತಿ)** = ಸಿಂಹರಾಶಿಯಲ್ಲಿರುವಾಗ (ನೀನು ಈ ಪಾಪನಾಶ ಮತ್ತು ಪುಣ್ಯ-ದಾನಗಳನ್ನು ಇನ್ನೂ ವಿಶೇಷವಾಗಿ ಮಾಡುವಿ, ಆದರೂ); **ಅಹಂ** = ನಾನು; **ತತ್** = ಅವುಗಳನ್ನು; **ನ ಯಾಚೇ** = ಬೇಡುವುದಿಲ್ಲ; **(ಕಿಂತು** = ಆದರೆ); **ಸಮಸ್ತಫಲದೇ** = ಸಕಲಫಲಗಳನ್ನು ಕೊಡುವಂತಹ ಹೇ ಗೋದಾವರೀ !; **ಕೃಷ್ಣಪಾದೇ** = ಶ್ರೀಕೃಷ್ಣನ

ಚರಣಗಳಲ್ಲಿ; ಭಕ್ತಿಂ = ಭಕ್ತಿಯನ್ನೂ; ಇತರತ್ರ = ಸಂಸಾರದಲ್ಲಿ; ವಿರಕ್ತಿಂ = ವಿರಕ್ತಿಯನ್ನೂ; ಪರತ್ರ = ಪರಲೋಕದಲ್ಲಿ; ಮುಕ್ತಿಂ ಚ = ಮುಕ್ತಿಯನ್ನೂ; ದಿಶ = ಕರುಣಿಸು.

ಅಮ್ಮ ಗೋದಾವರಿಯೇ ! ನೀನು ಜನಗಳ ದುರಿತಗಳನ್ನು ಸದಾ ಪರಿಹರಿಸುವಿ. ಪುಣ್ಯವನ್ನೂ ಸಹ ನೀಡುವಿ; ಅಲ್ಲವೇ ! ಆದರೆ ದೇವಗುರು ಬೃಹಸ್ಪತಿ ಸಿಂಹರಾಶಿಯಲ್ಲಿರುವಾಗ ನಾನು ಅದನ್ನು ಬೇಡೆನು. ಸಕಲಫಲಗಳನ್ನು ನೀಡುವ ನೀನು ಶ್ರೀಕೃಷ್ಣನ ಚರಣಗಳಲ್ಲಿ ಭಕ್ತಿಯನ್ನೂ, ಸಂಸಾರದಲ್ಲಿ ವಿರಕ್ತಿಯನ್ನೂ, ಪರಲೋಕದಲ್ಲಿ ಮುಕ್ತಿಯನ್ನೂ ಕರುಣಿಸು.

ವಿ: ೧. ಗೋದಾವರೀ ಸ್ನಾನವು ಸರ್ವದಾ ತುಂಬಾ ಶ್ರೇಷ್ಠವಾದುದು; [೧]ಗುರುವು ಸಿಂಹರಾಶಿಯಲ್ಲಿರುವಾಗ (ಆ ವರ್ಷ ಪೂರ್ತಿ) ಅದರಲ್ಲಿ ಮೂರುವರೆ ಕೋಟಿ ತೀರ್ಥಾಭಿಮಾನಿಗಳ ಸಮೇತ ಗಂಗೆಯು ಸನ್ನಿಹಿತಳಾಗಿರುವಳು ಎಂದು ಪುರಾಣಗಳು ಸಾರಿವೆ. ಪಾಪನಾಶ ಮತು ಪುಣ್ಯಪ್ರಾಪ್ತಿಗಳನ್ನು ಗೋದಾವರಿಯಲ್ಲಿ ಯಾವಾಗ ಮಿಂದರೂ ಪಡೆಯಬಹುದು. ಆದರೆ ಗುರುವು ಸಿಂಹರಾಶಿಯಲ್ಲಿರುವ ಮಹಾಪರ್ವಕಾಲದಲ್ಲೂ ಅವೇ ಫಲಗಳನ್ನು ಕೇಳಿಕೊಳ್ಳುವುದು, ಮದುವೆ ಮನೆಯಲ್ಲಿ ಗಂಜಿ [೨]ಕೇಳುವಂತೆಯೇ ಸರಿ ![೩] ಆದ್ದರಿಂದ ನಾನು ಅದನ್ನು ಕೇಳದೆ,

---

೧. ಸಿಂಹಸ್ಥಿತೇ ಗೌತಮಿ ದೇವಿ ಭದ್ರೇ ಬ್ರಹ್ಮಾಂಡಭಾಂಡೋಪಗತಾನಿ ಪುಣ್ಯೇ ।
ಭುವ್ಯಂತರಿಕ್ಷೇ ದಿವಿ ನಾಗಲೋಕೇ ಸರ್ವಾಣಿ ತೀರ್ಥಾನಿ ತವೋದರೇ ಸ್ಯುಃ ॥
ತಿಸ್ರಃ ಕೋಟ್ಯೋಽರ್ಧಕೋಟ್ಯಶ್ಚ ತೀರ್ಥಾನಿ ಭುವನತ್ರಯೇ ।
ಆಯಾಂತಿ ಗೌತಮಿ ಸ್ನಾತುಂ ಸಿಂಹಸ್ಥೇ ಚ ಬೃಹಸ್ಪತೌ ।
ಷಷ್ಟಿವರ್ಷಸಹಸ್ರಾಣಿ ಭಾಗೀರಥ್ಯವಗಾಹನಮ್ ।
ಸಕೃದ್ ಗೋದಾವರೀಸ್ನಾನಂ ಸಿಂಹಸ್ಥೇ ಚ ಬೃಹಸ್ಪತೌ ॥
ಕಥಂಚಿದಪಿ ಸಿಂಹಸ್ಥೇ ಗುರೌ ಸ್ನಾನಂ ಸಮಾಚರೇತ್ ।
ಗೌತಮ್ಯಾಂ ಜನ್ಮನಃ ಪುಂಸಾಂ ಯತ್ಫಲಂ ಜೀವಿತಸ್ಯ ತು ॥
– ಭಲಾರಿ ನರಸಿಂಹಾಚಾರ್ಯರ 'ಸ್ಮೃತ್ಯರ್ಥಸಾಗರ'ದಲ್ಲಿ ಉದಾಹೃತಪ್ರಮಾಣಗಳು.

೨. ನ ಹಿ ವಿವಾಹಗೃಹೇಽಪಿ ಯವಾಗುಂ ಪ್ರೇಕ್ಷಾವಾನ್ ಕೋಽಪಿ ಪ್ರಾರ್ಥಯತೇ ಇತಿ ಭಾವಃ । -ವ್ಯಾ

೩. ಗೋದಾವರೀನದಿಯನ್ನು ಸ್ತುತಿಸುವ ಶ್ರೀವಾದಿರಾಜರ ಕನ್ನಡ ಕೀರ್ತನೆಯೊಂದು ಈ ಸಂಸ್ಕೃತ ಶ್ಲೋಕಗಳ ಸಾರಸಂಗ್ರಹರೂಪವಾಗಿದೆ :

ಪದ ಉದಯರಾಗ ಝಂಪೆತಾಳ

ಗೋದೇ ಸಮಸ್ತಫಲದೇ ।
ಸಾಧಿಸಿ ಸ್ನಾನವ ಮಾಡೆ ಮುಕುತಿಯ ನೀವೆ ॥ ಪ ॥
ಆದಿಯಲಿ ತ್ರಿಯಂಬಕನ ಜಡೆಯಲುದ್ಭವಿಸಿದಿ ।
ಮೋದದಿ ಪಶ್ಚಿಮಕೆ ನಡೆದು ಬಂದೀ ॥
ಮೇದಿನೀಗಿಳಿದು ಪರವತದಲಿ ತೀವ್ರದಿಂದ ।
ಆದರದಿಂದಬ್ಧಿಯನು ಕೂಡಿದಿ ॥ ೧ ॥
ಬ್ರಹ್ಮಾದ್ರಿಶಿಖರದಿಂದುದ್ಭವಿಸಿ ನೀನು ।
ಬ್ರಹ್ಮಋಷಿಯಾದ ಗೌತಮಮುನಿಗೆ ॥
ಬ್ರಾಹ್ಮರಿಂದಲಿ ಬಂದ ಗೋಹತ್ಯ ಪರಿಹರಿಸಿ ।

ಶ್ರೀಕೃಷ್ಣಪಾದದಲ್ಲಿ ಭಕ್ತಿ, ಸಂಸಾರದಲ್ಲಿ ವಿರಕ್ತಿ ಅನಂತರ ಮುಕ್ತಿ ಎಂಬ ಮಹಾಫಲಗಳನ್ನೇ ಕೇಳಿಕೊಳ್ಳುವೆನು. ಸಮಯ ನೋಡಿ ಉತ್ತಮ ಫಲಗಳನ್ನು ಬೇಡುವಂತೆ ನಿನ್ನಲ್ಲಿ ಗಂಗಾ ಸನ್ನಿಧಾನವಿರುವ ಈ ಪರ್ವಕಾಲದಲ್ಲಿ ಅತ್ಯುತ್ತಮ ಫಲಗಳಾದ ಭಕ್ತಿ, ವಿರಕ್ತಿ, ಮುಕ್ತಿಗಳನ್ನು ಬೇಡುವೆನು[೧] ಎಂದು ಭಾವ[೨].

೨. 'ಷಣ್ಮಾಸಫಲದಾ ಗೋದಾ' ಗೋದೆಯ ಸ್ನಾನವು ಆರುತಿಂಗಳ ಯಾಗದ ಫಲವನ್ನು ಕೊಡುವುದು ಎಂಬುದಾಗಿ ಶ್ರೀಮದಾಚಾರ್ಯರು ಕೃಷ್ಣಾಮೃತಮಹಾರ್ಣವದಲ್ಲಿ ತಿಳಿಸಿರುವರು.

(ಬ್ರಹ್ಮಾಂಡದಲ್ಲಿನ ಸಕಲತೀರ್ಥಗಳೂ, ಗುರುವು ಸಿಂಹರಾಶಿಯಲ್ಲಿರುವಾಗ, ಗೋದಾವರಿಯಲ್ಲಿ ನೆಲೆಸುತ್ತವೆ. ಅರವತ್ತು ಸಾವಿರವರ್ಷಗಳಷ್ಟು ಕಾಲ ಗಂಗಾಸ್ನಾನ ಮಾಡಿದ ಫಲವು ಆಗ ಗೋದಾವರಿಯಲ್ಲಿ ಒಮ್ಮೆ ಸ್ನಾನ ಮಾಡಿದರೆ ಲಭಿಸುತ್ತದೆ. ಆದ್ದರಿಂದ ಹೇಗಾದರೂ ಆಗ ಗೋದಾವರೀ ಸ್ನಾನವನ್ನು ಮಾಡಲೇಬೇಕು; ಅದು ನಮ್ಮ ಬದುಕಿಗೇ ಸಾರ್ಥಕ್ಯ ತಂದುಕೊಡುತ್ತದೆ.)

---

ಅಮ್ಮಮ್ಮ ಸಪ್ತಮುಖದಿಂದ ಸಾಗರ ನೆರದಿ ॥ ೨ ॥
ಔದುಂಬರ ವೃಕ್ಷಮೂಲದಿಂದುದ್ಭವಿಸಿ ।
ಉದಧಿಯನು ಕೂಡಬೇಕೆಂದು ಬರಲು ।
ಒದಗಿ ಗೌತಮಋಷಿಯು ಕುಶದಿಂದ ತಿರುಗಿಸಲು ।
ಸದಮಳಕುಶಾವರ್ತಳೆಂದೆನಿಸಿಕೊಂಡೆ ॥ ೩ ॥

ಸಿಂಹರಾಶಿಗೆ ಸುರಗುರುವು ಬರಲು ಕೇಳಿ
ಅಂಹರಾಶಿಗಳ ಸಂಹಾರಕ್ಕಾಗಿ ।
ಬಹ್ವಾಯಾಸದಿಂದ ಬಂದು ನಿನ್ನನು ಕೂಡೆ
ಅಂಹಗಳ ಪರಿಹರಿಸಿ ಭಕುತಿ ಮುಕುತಿಯ ಕೊಡುವೆ ॥ ೪ ॥
ವಿನಯದಲಿ ಸ್ನಾನ ಪಾನವ ಮಾಡಿದವರಿಗೆ
ವನಜಾಕ್ಷ ಶ್ರೀಹಯವದನ ಹರಿಯಾ
ಮಿನಗುತಿಹ ಮೋಕ್ಷಸಂಪದವಿಗೆ ಸಾಧನವಾದ
ಘನ ಜ್ಞಾನಭಕುತಿಯನು ಕೊಟ್ಟು ರಕ್ಷಿಸುವೆ ॥ ೫ ॥

-ಶ್ರೀವಾದಿರಾಜರು ಗೋದಾವರಿ(೫೭), ತ್ರಿವೇಣಿ(೧೪೬), ಶ್ರೀಮುಷ್ಣವರಾಹ(೧೯೦), ಹರಿಹರ(೨೨೪), ಚೆನ್ನಕೇಶವ(೨೫೦), ಬಿಂದುಮಾಧವ(೨೬೮), ಶ್ರೀರಂಗ(೩೧೨, ೩೩೩) ಶ್ರೀರಂಗಪಟ್ಟಣ(೩೧೧)ಗಳನ್ನು ಕುರಿತು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿರುವರು. ಉಡುಪಿ ಶ್ರೀಕೃಷ್ಣ ಮತ್ತು ತಿರುಪತಿಯ ಶ್ರೀನಿವಾಸನನ್ನು ಕುರಿತ ಅವರ ಅನೇಕ ರಚನೆಗಳು ಇಂದು ಉಪಲಬ್ಧವಿವೆ. 'ಗೋದೇ ಸಮಸ್ತ ಫಲದೇ' ಎಂಬ ಅವರ ಗೋದಾವರೀಸ್ತೋತ್ರರೂಪ ಈ ಕನ್ನಡಕೃತಿಯು ತೀರ್ಥಪ್ರಬಂಧದಲ್ಲಿನ ಗೋದಾವರೀಸ್ತುತಿಯ ಕನ್ನಡ ಅವತರಣಿಕೆಯಂತಿದೆ.

೧. ಏತತ್ಫಲಿಲಸ್ಯ ಇತರಾಸಾಧ್ಯಮಹತ್ತ್ವೇನ ತವ ಕಾಲವಿಶೇಷೇ ಮಹತ್ತ್ವನಿಮಿತ್ತಮಹಾಪ್ರಸನ್ನತಾದಶಾಯಾಮೇವ ಪ್ರಾರ್ಥನೀಯತ್ವಾದಿತಿ ಭಾವಃ । -ವ್ಯಾಖ್ಯಾನ

೨. ಬೃಹಸ್ಪತೇ ಸುರಾಧ್ಯಕ್ಷ ಸರ್ವದೇವನಮಸ್ಕೃತ ।
ಗೃಹಾಣಾರ್ಘ್ಯಂ ಮಯಾ ದತ್ತಂ ಸಿಂಹಸ್ಥೋ ಭಾರ್ಯಯಾ ಸಹ ॥

**ಆದೌ ಧವಲಗಂಗಾಖ್ಯಾ ಗಂಗಾದ್ವಾರಾಭಿಧಾऽಂತರೇ ।**
**ಪಶ್ಚಾತ್ ಕುಶಾವರ್ತಪದಾ ಗೋದಾ ಮೋದಾಯ ಸಾ ಸದಾ ॥೧೧॥**

ಅ: (ಯಾ = ಯಾವುದು) ಆದೌ = ಮೊದಲಿಗೆ; ಧವಲಗಂಗಾಖ್ಯಾ = ಧವಲಗಂಗೆ ಎನ್ನಿಸಿರುವುದೋ; ಅಂತರೇ = ಮಧ್ಯದಲ್ಲಿ; ಗಂಗಾದ್ವಾರಾಭಿಧಾ = 'ಗಂಗಾದ್ವಾರ' ಎನ್ನಿಸಿರುವುದೋ; ಮತ್ತು, ಪಶ್ಚಾತ್ = ಅನಂತರ; ಕುಶಾವರ್ತಪದಾ = 'ಕುಶಾವರ್ತ' ವೆನ್ನಿಸಿರುವುದೋ; ಸಾ = ಅಂತಹ; ಗೋದಾ = ಗೋದಾವರೀನದಿಯು (ನಮಗೆ) ಸದಾ = ಸರ್ವದಾ; ಮೋದಾಯ (ಸ್ಯಾತ್) = ಸುಖಕ್ಕೆ ಕಾರಣವಾಗಲಿ.

ಮೊದಲಿಗೆ 'ಧವಲಗಂಗೆ' ಎಂಬ ಹೆಸರು ಪಡೆದ, ಮಧ್ಯದಲ್ಲಿ 'ಗಂಗಾದ್ವಾರ' ಎನ್ನಿಸಿದ, ಬಳಿಕ 'ಕುಶಾವರ್ತ'ವೆನ್ನಿಸಿರುವ, ಗೋದಾವರಿಯು ನಮಗೆ ಸದಾ ಸುಖಕ್ಕೆ ಕಾರಣಳಾಗಲಿ.

ವಿ: ೧. ತ್ರ್ಯಂಬಕಪರ್ವತದ ಶಿಖರದಲ್ಲಿ ಮೊದಲಿಗೆ ಉಂಟಾದ ಸರೋವರ ರೂಪದಲ್ಲಿ ಪ್ರಕಟವಾದ ಸನ್ನಿಧಾನಕ್ಕೆ 'ಧವಲಗಂಗಾ'[೧] ಎಂದೂ, ಧವಲಗಂಗಾ ಮತ್ತು ಕುಶಾವರ್ತಗಳ ಮಧ್ಯೆ ಇರುವ ಆ ಪರ್ವತದ ಬುಡದಲ್ಲಿ ಇರುವ ವರಾಹ ತೀರ್ಥ ಮತ್ತು ನರಸಿಂಹತೀರ್ಥಗಳೆಂಬ ಎರಡು ಕುಂಡಗಳ ರೂಪದಲ್ಲಿರುವ ಸನ್ನಿಧಾನಕ್ಕೆ 'ಗಂಗಾದ್ವಾರ'[೨] ಎಂದೂ, ಗೌತಮರು ದರ್ಭೆಗಳಿಂದ ಗೋವಿನ ಮೇಲೆ ಹರಿಸಿದ ಭಾಗಕ್ಕೆ 'ಕುಶಾವರ್ತ'[೩] ಎಂದೂ ಹೆಸರು.

೨. ಮೋದಾಯ[೪] ಸಾ ಸದಾ : ಇದಕ್ಕೆ ಇಲ್ಲಿ 'ಮೋದಾಯ' ಎಂಬುದಕ್ಕೆ (ನಾಮೈಕದೇಶೇ-ನಾಮಗ್ರಹಣನ್ಯಾಯದಿಂದ) 'ಮೋದತೀರ್ಥಾಧ್ಯಯನಾಯ' ಎಂದು ಅರ್ಥಮಾಡಿಕೊಂಡರೆ, ಗೋದಾವರಿಯು[೫] ನಮಗೆ ಮೋದತೀರ್ಥರಾದ ಶ್ರೀಮಧ್ವಾಚಾರ್ಯರ ಶಾಸ್ತ್ರದ ಅಧ್ಯಯನಕ್ಕೆ ಅವಕಾಶ ಕಲ್ಪಿಸಲಿ ಎಂದೂ ಪ್ರಾರ್ಥಿಸಿದಂತಾಗುತ್ತದೆ. ಹೀಗೆ ತೀರ್ಥಸ್ನಾನದಿಂದ ಗುರೂಪದೇಶದ್ವಾರಾ ತತ್ತ್ವಜ್ಞಾನವು ಲಭಿಸುತ್ತದೆ ಎಂಬುದು ಪ್ರಮಾಣಪ್ರಮಿತವೂ ಆಗಿದೆ.

---

೧. ಪ್ರಥಮಂ ತ್ರ್ಯಂಬಕಪರ್ವತಶಿಖರೋಪರಿ ವೃತ್ತಸೂಕ್ಷ್ಮಸರೋವರಾಕಾರೇಣ ಧವಲಗಂಗಾಖ್ಯಾ।
-ವ್ಯಾಖ್ಯಾನ

೨. ಧವಲಗಂಗಾಕುಶಾವರ್ತಯೋರ್ಮಧ್ಯೇ ತದ್ಗಿರಿಶಿಖರಮೂಲೇ ವರಾಹನೃಸಿಂಹತೀರ್ಥಾಖ್ಯ-ಕುಂಡದ್ವಯಾಕಾರೇಣ ಗಂಗಾದ್ವಾರಾಭಿಧಾ । -ವ್ಯಾಖ್ಯಾನ

೩. ಗೌತಮಮುನಿನಾ ಕುಶೇನ ವರ್ತಿತತ್ವಾತ್ ಕುಶಾವರ್ತನಾಮವತೀ । -ವ್ಯಾಖ್ಯಾನ

೪. ಸ್ವದೃಷ್ಟಾನುಸಾರೇಣ ಗೋದಾವರೀವರ್ಣನಮಿದಂ । -ವ್ಯಾಖ್ಯಾನ

೫. ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ॥ -ಭಾಗವತ (೧೦,೮೪/೧೧)
– ಗುರೂಪದೇಶಂ ಪ್ರಾಪಯಿತ್ವಾ. -ಭಾಗವತತಾತ್ಪರ್ಯ

## ಯಮುನಾ (ನದೀ)

ಕಾಲಿಂದಿ[1] ತ್ವಮಘಾನ್ವಿತಾನಪಿ ಸತಃ ಕೃತ್ವಾ ಪವಿತ್ರಾತ್ಮನೋ
ಗಂತುಂ ನೈವ ಕದಾಽಪಿ ಮುಂಚಸಿ ತವ ಭ್ರಾತುರ್ನಿಕೇತಂ ಪ್ರತಿ ।
ಕಿಂತು ಕ್ಷೀರಪಯೋಧಿವಾಸನಿರತಾನ್ ಪ್ರೀತ್ಯಾ ಕರೋಷ್ಯಾಶ್ರಿತಾನ್
ಸ್ನಿಗ್ಧೇ ಭರ್ತರಿ ಕಾಮಿನೀಜನರುಚಿಃ ತತ್ಪಕ್ಷ ಏವ ಹ್ಯಲಮ್ ॥ ೧೨ ॥

ಅ: (ಹೇ) ಕಾಲಿಂದಿ ! = ಎಲೈ ಯಮುನೆಯೇ !; ತ್ವಂ = ನೀನು; ಆಶ್ರಿತಾನ್ = ನಿನ್ನನ್ನು ಆಶ್ರಯಿಸಿದ; ಸತಃ = ಸಜ್ಜನರನ್ನು; ಅಘಾನ್ವಿತಾನ್ ಅಪಿ = ಅವರು ಪಾಪಯುಕ್ತರಾಗಿದ್ದರೂ; ಪವಿತ್ರಾತ್ಮನಃ = ಪಾವನಮನಸ್ಕರನ್ನಾಗಿ (ಶುದ್ಧಾಂತಃಕರಣರನ್ನಾಗಿ); ಕೃತ್ವಾ = ಮಾಡಿ; ತವ = ನಿನ್ನ; ಭ್ರಾತುಃ = ಸೋದರನಾದ ಯಮನ; ನಿಕೇತಂ = ಮನೆಯನ್ನು; ಪ್ರತಿ = ಕುರಿತು; ಗಂತುಂ = ಹೋಗುವುದಕ್ಕೆ; ಕದಾಽಪಿ = ಎಂದೂ; ನ ಮುಂಚಸಿ ಏವ = ಬಿಡುವುದೇ ಇಲ್ಲ; ಕಿಂತು = ಆದರೆ; ಪ್ರೀತ್ಯಾ = ಪ್ರೀತಿಯಿಂದ; ಆ ಆಶ್ರಿತ ಸಜ್ಜನರನ್ನು); ಕ್ಷೀರಪಯೋಧಿವಾಸನಿರತಾನ್ = ಕ್ಷೀರಸಮುದ್ರದಲ್ಲಿರುವ ಶ್ವೇತದ್ವೀಪದಲ್ಲಿ ನೆಲಸಿರುವವರನ್ನಾಗಿ; ಕರೋಷಿ = ಮಾಡಿ ಬಿಡುವಿ; (ಏಕೆಂದರೆ) ಭರ್ತರಿ = ಪತಿಯು; ಸ್ನಿಗ್ಧೇ = (ಸತಿ) ಅನುರಾಗಯುಕ್ತನಾಗಿದ್ದಾಗ; ಕಾಮಿನೀಜನರುಚಿಃ = ಸ್ತ್ರೀಜನರ ಆಸಕ್ತಿಯು; ಅಲಂ = ಪೂರ್ಣವಾಗಿ; ತತ್ಪಕ್ಷೇ ಏವ = ಅವನ ಕಡೆಗೇ ಇರುವುದು; ಹಿ = ಪ್ರಸಿದ್ಧವಾಗಿದೆ. (ಅರ್ಥಾಂತರನ್ಯಾಸಾಲಂಕಾರ)

> ಯಮುನೆಯೇ ! ನೀನು ನಿನ್ನನ್ನು ಆಶ್ರಯಿಸಿದ ಸಜ್ಜನರನ್ನು ಅವರು ಪಾಪಿಗಳಾಗಿದ್ದರೂ ಪ್ರೀತಿಯಿಂದ ಶುದ್ಧಾಂತಃಕರಣರನ್ನಾಗಿಸುವಿ; ನಿನ್ನ ಸೋದರನಾದ ಯಮನ ಮನೆಗೆ ಅವರನ್ನು ತೆರಳಲು ಬಿಡದೆ, ಶ್ವೇತದ್ವೀಪದಲ್ಲಿ ನೆಲೆಸುವಂತೆ ಮಾಡುವಿ; ಪತಿಯ ಪ್ರೀತಿ ಪಡೆದ ಸತೀಜನರ ಒಲವು ಸದಾ ಅವನತ್ತಲೇ ಇರುವುದಲ್ಲವೇ !

ವಿ: ೧. ಯಮುನಾನದಿಯು ಭರತಖಂಡದ [2]ಸಪ್ತಮಹಾನದಿಗಳಲ್ಲಿ ಒಂದು. ಹಿಮಾಲಯ ಪರ್ವತದ 'ಕಳಿಂದ' ಪರ್ವತ ಎಂಬ ಭಾಗದಲ್ಲಿ ಹುಟ್ಟುವುದರಿಂದ ಇದಕ್ಕೆ 'ಕಾಳಿಂದೀ' ಎಂದೂ ಹೆಸರು (ಇದರ ಜಲವು ಕಪ್ಪಾಗಿರುವುದರಿಂದ ಇದನ್ನು 'ಕೃಷ್ಣಾ' ಎಂದೂ ಕರೆಯುವರು); ಇದರ ಉಗಮಸ್ಥಾನವು 'ಯಮುನೋತ್ರಿ' ಎಂದು ಪ್ರಸಿದ್ಧವಾಗಿದ್ದು, ಅದು ಸಮುದ್ರಮಟ್ಟದಿಂದ ಹತ್ತುಸಾವಿರ ಅಡಿಗಳಷ್ಟು ಎತ್ತರದಲ್ಲಿದೆ. ಡೆಹರಾಡೂನ್‌ನಿಂದ ಸುಮಾರು ನೂರುಕಿ.ಮೀ. ದೂರದಲ್ಲಿರುವ ಈ ಸ್ಥಳ ತುಂಬಾ ದುರ್ಗಮವಾದುದು. ಇಲ್ಲೂ ಬದರೀಕ್ಷೇತ್ರದಲ್ಲಿರುವಂತೆ

---

೧. ಈ ಶ್ಲೋಕವು ಶ್ರೀವಾದಿರಾಜರ ರುಕ್ಮಿಣೀಶವಿಜಯದಲ್ಲೂ ಕಂಡುಬರುವುದು (೭/೩೫) ರುಕ್ಮಿಣೀಶವಿಜಯಕ್ಕೂ ವ್ಯಾಖ್ಯಾನ ಬರೆದಿರುವ ನಾರಾಯಣಾಚಾರ್ಯರು ಅಲ್ಲೂ ಈ ಪದ್ಯವನ್ನು ವಿವರಿಸಿರುವರು.

೨. ಗಂಗೇ ಚ ಯಮುನೇ ಚೈವ...

ತಪ್ತಕುಂಡಗಳೂ ಇವೆ ಎಂದು ಹೇಳುವರು. ಯಮುನಾ ನದಿಯು ಪ್ರಯಾಗದಲ್ಲಿ ಗಂಗಾನದಿಯನ್ನು ಸೇರುವುದು. ಸರಸ್ವತಿಯಂತೆ ಗಂಗೆಯ ಉಪನದಿಯಾಗಿದ್ದೂ ಸಪ್ತಮಹಾನದಿಗಳಲ್ಲಿ ಒಂದು ಎನ್ನಿಸಿರುವುದು ಇದರ ಹಿರಿಮೆ. [೧]ತಾರತಮ್ಯದಲ್ಲಿ ತುಂಗಭದ್ರೆಯ ಅನಂತರದ ಸ್ಥಾನದಲ್ಲಿರುವ ಇದರಲ್ಲಿ ಯಮಪುತ್ರ 'ಕೃಷ್ಣ'(ನಾಲ್ಕು ಕೈಗಳಲ್ಲಿ ಕ್ರಮವಾಗಿ ದಂಡ, ಶಂಖ, ಚಕ್ರ ಮತ್ತು ಶಾರ್ಙ್ಗಗಳನ್ನು ಧರಿಸಿರುವ)ನನ್ನು ಧ್ಯಾನಿಸಬೇಕು[೨]. ಯಮುನೆಯು ಸೂರ್ಯನಿಗೆ ಸಂಜ್ಞಾದೇವಿಯಲ್ಲಿ ಯಮನೊಂದಿಗೆ ಅವಳಿಯಾಗಿ ಜನಿಸಿದವಳು ಎಂದು ಹರಿವಂಶದಲ್ಲಿ ಉಲ್ಲೇಖವಿದೆ(೧/೮/೨೦).

೨. ಯಮನ ಸೋದರಿಯಾದ ಯಮುನೆಯು ಆಶ್ರಿತರಾದ ಸಜ್ಜನರನ್ನು, ಅವರು ಪಾಪಯುಕ್ತರಾಗಿದ್ದರೂ, ಪವಿತ್ರರನ್ನಾಗಿಸಿ ಅವರಿಗೆ ಯಮಲೋಕವನ್ನು ತಪ್ಪಿಸುವ ಪುಣ್ಯನದಿಗಳಲ್ಲೊಂದು; ಪಾಪಗಳನ್ನು ಪರಿಹರಿಸುವುದರೊಂದಿಗೆ ತನ್ನ ಭಕ್ತರನ್ನು ಕೊನೆಗೆ ವೈಕುಂಠದಲ್ಲಿ ನೆಲೆಸುವಂತೆ ಮಾಡುವುದು ಇದರ ಮತ್ತೊಂದು ಹಿರಿಮೆ; ಅಣ್ಣನಾದ ಯಮನ ಮನೆಯನ್ನು ಬಿಟ್ಟು ಪತಿಯಾದ ಶ್ರೀಹರಿಯ ಮನೆಗೆ ತನ್ನ ಭಕ್ತರನ್ನು ಕರೆದೊಯ್ಯುವ ಈ ನದಿಯು ಉತ್ತಮ ಸ್ತ್ರೀಯರಿಗೆ ತವರುಮನೆಗಿಂತಲೂ ಪ್ರೀತಿಸುವ ಗಂಡನೇ ಹೆಚ್ಚು ಪ್ರಿಯ ಎನ್ನುವುದಕ್ಕೂ ದ್ಯೋತಕವಾಗಿದೆ ಎಂದು ಭಾವ.[೩]

೩. ಯಮುನೆಯಲ್ಲಿ ಮಿಂದವರಿಗೆ ಯಮಲೋಕದ [೪]ಭಯವಿಲ್ಲ; ಈ 'ಕೃಷ್ಣೆ'ಯ ಸ್ನಾನವು ಕೃಷ್ಣಲೋಕದ ಪ್ರಾಪ್ತಿಗೆ ಸಾಧನವೂ ಆಗಿದೆ; ಹೀಗೆ ಅನಿಷ್ಟನಿವೃತ್ತಿ ಮತ್ತು ಇಷ್ಟಪ್ರಾಪ್ತಿ ಎರಡಕ್ಕೂ ಯಮುನಾ ನದಿಯು ಯಥೋಚಿತವಾಗಿ ಸಾಧನವಾಗಿದೆ ಎಂದರ್ಥ.[೫]

## ತ್ರಿವೇಣೀ (ಪ್ರಯಾಗ ಕ್ಷೇತ್ರ)

**ತ್ರಿವೇಣೀಯಮಘಶ್ರೇಣೀಕೃಪಾಣೀ ಮುಕ್ತಿಕಾರಿಣೀ ।**
**ಮಮಾನೀಹಿತಮಾದಹ್ಯಾದ್ಧಿಮಾನೀಮಂಶುಮಾನಿವ ॥ ೧೩ ॥**

ಅ: **ಅಘಶ್ರೇಣೀಕೃಪಾಣೀ** = ಪಾಪರಾಶಿಗೆ ಕತ್ತರಿಯಂತಿರುವ; **ಮುಕ್ತಿಕಾರಿಣೀ** = ಮುಕ್ತಿಪ್ರದಳಾದ; **ಇಯಂ** = ಈ; **ತ್ರಿವೇಣೀ** = ತ್ರಿವೇಣಿಯು; **ಮಮ** = ನನ್ನ; **ಅನೀಹಿತಂ** = ಅನಿಷ್ಟವನ್ನು; **ಹಿಮಾನೀಂ** = ಹಿಮದ ರಾಶಿಯನ್ನು; **ಅಂಶುಮಾನ್ ಇವ** = ಸೂರ್ಯನು ಹೇಗೋ (ಹಾಗೆ) **ಆದಹ್ಯಾತ್** = ಸುಟ್ಟುಹಾಕಲಿ.

---

೧. ತುಂಗಭದ್ರಾಸಮಾ ತಸ್ಯಾಃ ಕಾಲಿಂದ್ಯೂನಾ ತತೋಽಧಮಾ ॥ – ನದೀತಾರತಮ್ಯಸ್ತೋತ್ರ

೨. ಕಾಲಿಂದ್ಯಾಂ ಯಮಪುತ್ರಶ್ಚ ಕೃಷ್ಣನಾಮಾ ಹರಿರ್ನೃಪ ।
ಚತುರ್ಬಾಹುಃ ಸದಾ ಧ್ಯೇಯೋ ದಂಡಶಂಖಾರಿಶಾರ್ಙ್ಗಧೃಕ್ ॥ -ಬ್ರಹ್ಮಾಂಡಪುರಾಣ

೩. ಹಿ ಪ್ರಸಿದ್ಧಂ । ನ ತು ಪಿತೃಪಕ್ಷೇ ಇತ್ಯರ್ಥಃ । -ವ್ಯಾಖ್ಯಾನ

೪. ಯಮುನಾಸೇವಿನಾಂ ಯಮಲೋಕಗಮನಂ ನಾಸ್ತೀತ್ಯರ್ಥಃ । -ವ್ಯಾಖ್ಯಾನ

೫. ಸಾಮಾನ್ಯೇನ ವಿಶೇಷಸಮರ್ಥನರೂಪೋ ಅರ್ಥಾಂತರನ್ಯಾಸಃ । -ವ್ಯಾಖ್ಯಾನ
ಶ್ಲಿಷ್ಟಗರ್ಭೋ ಅರ್ಥಾಂತರವಿನ್ಯಾಸಃ । -ರುಕ್ಮಿಣೀಶವಿಜಯವ್ಯಾಖ್ಯಾನ

ತ್ರಿವೇಣಿಯು ಪಾಪರಾಶಿಯನ್ನು ತರಿಯುವ ಖಡ್ಗ; ಮುಕ್ತಿಗೂ ಕಾರಣ; ಇವಳು ಸೂರ್ಯನು ಹಿಮದ ರಾಶಿಯನ್ನು ಹೇಗೋ ಹಾಗೆ ನನ್ನ ಅನಿಷ್ಟವನ್ನು ಸುಡಲಿ.

ವಿ: ೧. ಪ್ರಯಾಗ : ಶ್ರೀವಾದಿರಾಜರು ಪ್ರಯಾಗಕ್ಷೇತ್ರದಲ್ಲಿ ಸಂಧ್ಯಾಮಠವೆಂಬಲ್ಲಿ ಜಪನಿರತರಾಗಿ ಕುಳಿತಿದ್ದಾಗ ಶ್ರೀವೇದವ್ಯಾಸರು ಸಾಕ್ಷಾತ್ ದರ್ಶನವಿತ್ತು 'ಮಹಾಭಾರತ ಲಕ್ಷಾಲಂಕಾರ'ವನ್ನು ಬರೆಯಲು ಆದೇಶವಿತ್ತುದಾಗಿ ಅವರೇ ಲಕ್ಷಾಲಂಕಾರದ ಉಪಸಂಹಾರ ಶ್ಲೋಕಗಳಲ್ಲಿ ತಿಳಿಸಿರುವರು :

ವ್ಯಾಸಸ್ಯ ಕೃಪಯಾ ಲಕ್ಷಾಲಂಕಾರಾಖ್ಯಃ ಕೃತೋ ಮಯಾ ।
ಗ್ರಂಥೋಽಯಂ ಯಃ ಪ್ರಭುಃ ಕೀಟಮಕರೋತ್ ಪೃಥಿವೀಪತಿಮ್ ॥
ಭಾರತಸ್ಯ ಸುಧಾಂಬೋಧೇರ್ಭಾರತೀಶಾದಯಃ ಸುರಾಃ ।
ಯಥಾವನ್ಮಥನೇ ಶಕ್ತಾಃ ಕೃತಶಿಕ್ಷಾ ಹರೇರ್ಮುಖಾತ್ ॥
ಅಹಂ ತು ಮಾನುಷಃ ಕುರ್ಯಾಂ ಮಹಾಕಾರ್ಯೇ ಕಥಂ ಮತಿಮ್ ।
ಅತ್ರಾಸ್ತಿ ಕಾರಣಂ ಕಿಂಚಿದ್ಗುಹ್ಯಂ ಯಚ್ಛ್ರೂಯತಾಂ ಬುಧೈಃ ॥
ಪ್ರಯಾಗೇ ಬ್ರಹ್ಮಣಃ ಸಂಧ್ಯಾಮಠೇ ಜಪಪರಾಯಣಃ ।
ಅಹಮಾಸಂ ತದಾ ಲಕ್ಷಾಲಂಕಾರಂ ಕುರ್ವಿತಿ ಪ್ರಭುಃ ॥
ಭಾರತಸ್ಯ ಶ್ಲೋಕಲಕ್ಷಸ್ಯಾರ್ಥವಿಸ್ತರಣಾತ್ಮಕಮ್ ।
ಕಾರಯಾಮಾಸ ಯೋಗೀಂದ್ರೋ ಲಕ್ಷಾಲಂಕಾರಮೀದೃಶಮ್ ॥
ವ್ಯಾಸ ಏವ ಯತಃ ಕರ್ತಾ ದಾಸಸ್ಯ ಹೃದಿ ಮೇ ಸ್ಥಿತಃ ।
ಅತೋ ನ ವಿಸ್ಮಯಃ ಕಾರ್ಯಃ ಕಿಮಕಾರ್ಯಂ ಮಹಾಪ್ರಭೋಃ ॥
ಸದ್ವಾಕ್ಯರತ್ನಮಾಲೇಯಂ ತದ್ವ್ಯಾಸಸ್ಯ ಗಲೇಽರ್ಪಿತಾ ।
ಸದಾ ಸ್ಯಾತ್ತಾತ್ತ್ವಂಗಕಾಂತ್ಯೇಮಾಂ ವ್ಯಾಸದೇವಾಯ ಧೀಮತೇ ॥
ಅಸುದೇವಾಯ ದೇವೇಭ್ಯೋ ಗುರುಭ್ಯಶ್ಚ ನಮೋ ನಮಃ ॥
ಶ್ರೀದೇವ್ಯೈ ಭಾರತೀದೇವ್ಯೈ ಗೌರೀದೇವ್ಯೈ ನಮೋ ನಮಃ ।
ನಮಃ ಶಚ್ಯೈ ಚ ರತ್ಯೈ ಚ ಮಾತೃಭ್ಯಶ್ಚ ನಮೋ ನಮಃ ॥

ಈ ವಿಷಯವು ಶ್ರೀವಾದಿರಾಜಗುರುವರಚರಿತಾಮೃತ(೩/೧೮-೨೨)ದಲ್ಲೂ, ಶ್ರೀವಾದಿ-ರಾಜ ಗುಣರತ್ನಮಾಲಾದಲ್ಲೂ(೪/೪೪-೨೦, ೬/೪೫,೪೬, ೬೦-೬೪) ಬಂದಿದೆ.

೨. 'ತೀರ್ಥರಾಜ'ವೆಂದು ಪ್ರಸಿದ್ಧವಾಗಿರುವುದು ಪ್ರಯಾಗದ ವೈಶಿಷ್ಟ್ಯ. 'ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಅವಂತಿಕಾ, ಜಗನ್ನಾಥಪುರೀ ಮತ್ತು ದ್ವಾರಕೆಗಳೆಂಬ ಸಪ್ತಮೋಕ್ಷದಾಯಕ ಕ್ಷೇತ್ರಗಳಿಗೆ ರಾಜಸದೃಶವಾದ ಕ್ಷೇತ್ರವಾದ್ದರಿಂದ '[1]ತೀರ್ಥರಾಜ' ಎಂದು

---

೧. ಬ್ರಾಹ್ಮೀನವಪುತ್ರೀ ತ್ರಿಪಥಾಸ್ತ್ರಿವೇಣೀ ಸಮಾಗಮೇ ತುಕ್ಷತಯೋಗಮಾತ್ರಾನ್ ।
ಯತ್ರಾಪ್ಲುತಾನ್ ಬ್ರಹ್ಮಪದಂ ನಯಂತಿ ಸ ತೀರ್ಥರಾಜೋ ಜಯತಿ ಪ್ರಯಾಗಃ ॥
ಶ್ಯಾಮೋ ವಟೋಽಶ್ಯಾಮಗುಣಂ ವೃಣೋತಿ ಸ್ವಚ್ಛಾಯಯಾ ಶ್ಯಾಮಲ ಜನಾನಾಂ ।
— ಪ್ರಯಾಗಮಾಹಾತ್ಮ್ಯ (ಪದ್ಮಪುರಾಣ - ಉತ್ತರಖಂಡ)

ಇದು ಪ್ರಸಿದ್ಧವಾಗಿದೆ. ಋಗ್ವೇದದಲ್ಲೂ, ಮಹಾಭಾರತದಲ್ಲೂ ಪದ್ಮ ಮೊದಲಾದ ಪುರಾಣಗಳಲ್ಲೂ ಇದರ ವರ್ಣನೆ ಬಂದಿದೆ. ಗಂಗಾ, ಯಮುನಾ ಮತ್ತು ಸರಸ್ವತೀ ಎಂಬ ಮೂರು ನದಿಗಳ ಸಂಗಮವೆಂಬ ಕಾರಣದಿಂದಲೂ 'ತ್ರಿವೇಣೀ'[೧] ಎಂಬ ಹೆಸರು ಇದಕ್ಕೆ ಸಾರ್ಥಕವಾಗಿದೆ. ಎರಡು ನದಿಗಳ ಸಂಗಮವನ್ನು ಪ್ರಯಾಗವೆಂದು ಕರೆಯುವರು. ದೇವಪ್ರಯಾಗ, ರುದ್ರಪ್ರಯಾಗ ಇತ್ಯಾದಿ ಬದರಿಕಾಶ್ರಮದ ಮಾರ್ಗದಲ್ಲಿನ ಪ್ರಯಾಗಗಳನ್ನು ಕಂಡವರಿಗೆ ಇದು ತಿಳಿಯುವ ವಿಷಯ. ಇದು ಗಂಗಾ, ಯಮುನಾ ಮತ್ತು ಸರಸ್ವತೀ ಎಂಬ ಸಪ್ತಮಹಾನದಿಗಳಲ್ಲಿ ಮೂರರ ಸಂಗಮವಾಗಿರುವುದರಿಂದ 'ಪ್ರಯಾಗ' ಎಂಬ ಅಸಾಧಾರಣವಾದ ಹೆಸರು [೨]ಬಂದಿದೆ. ಇಲ್ಲಿ ಗಂಗಾ ಮತ್ತು ಯಮುನಾ ನದಿಗಳ ಸಂಗಮವು ಗಂಗೆಯ ಬಿಳಿದಾದ ಜಲದಿಂದಲೂ, ಯಮುನೆಯ ಕಪ್ಪಾದ ಜಲದಿಂದಲೂ ತುಂಬಾ ಸ್ಪಷ್ಟವಾಗಿ ಗೋಚರಿಸುತ್ತದೆ. ಸರಸ್ವತಿಯು ಗುಪ್ತಗಾಮಿನಿಯಾಗಿ ಇಲ್ಲಿ ಬೆರೆತಿರುವಳು. ಚತುರ್ಮುಖ ಬ್ರಹ್ಮದೇವರು ಈ ಸ್ಥಳದಲ್ಲಿ ಪ್ರಕೃಷ್ಟವಾದ ಯಾಗವೊಂದನ್ನು ಮಾಡಿದ್ದರಿಂದ 'ಯಾಗ'ವೆಂಬ ಪ್ರಸಿದ್ಧಾರ್ಥದಲ್ಲೂ, ಇದಕ್ಕೆ ಪ್ರಯಾಗವೆಂಬ ಹೆಸರು ಬಂದಿದೆ ಎಂಬುದಾಗಿ ಮಹಾಭಾರತದಲ್ಲಿದೆ:[೩]

೩. ಸ್ನಾನ ಮತ್ತು ಪಿತೃಕಾರ್ಯಗಳು ಮಾತ್ರವಲ್ಲದೆ ವೇಣೀದಾನವೂ ಈ ಕ್ಷೇತ್ರದಲ್ಲಿ ಪ್ರಧಾನಕರ್ತವ್ಯವಾಗಿದೆ. ಸುಮಂಗಲಿಯರು ಸಹ ವೇಣೀದಾನ ಮಾಡಬೇಕಾದ ವಿಧಿ ಇಲ್ಲಿಯ ಅಸಾಧಾರಣವಾದ ವೈಶಿಷ್ಟ್ಯ. ಇದರಲ್ಲಿ ಮಾಡುವ ಸ್ನಾನವು ಹತ್ತು ಅಶ್ವಮೇಧಯಾಗಗಳನ್ನು ಮಾಡಿದ ಪುಣ್ಯಕ್ಕೆ ಸಮಾನ.

೪. ಶ್ರೀರಾಮದೇವರು ಸೀತಾಲಕ್ಷ್ಮಣಸಮೇತರಾಗಿ ವನವಾಸದ ಕಾಲದಲ್ಲಿ ತ್ರಿವೇಣೀ ತೀರದ ಭರದ್ವಾಜಾಶ್ರಮಕ್ಕೆ ಆಗಮಿಸಿ ಅನುಗ್ರಹಿಸಿದ ವಿವರ ವಾಲ್ಮೀಕಿರಾಮಾಯಣ ದಲ್ಲಿದೆ. ಭರದ್ವಾಜರನ್ನು ಅನುಗ್ರಹಿಸಿದ ಅನಂತರ ಅವರು ಯಮುನಾ ನದಿಯನ್ನು ದಾಟಿ

---

ಸಿತಾಸಿತೇ ಸರಿತೇ ಯತ್ರ ಸಂಗತೇ ತತ್ರಾಪ್ಲುತಾಸೋ ದಿವಮುತ್ಪತಂತಿ ।
ಯೇ ವೈ ತನ್ವಂ ವಿಸೃಜಂತಿ ಧೀರಾಸ್ತೇ ಜನಾಸೋ ಅಮೃತತ್ವಂ ಭಜತೇ ॥ —ಋಗ್ವೇದ
ಸಿತಾಸಿತೇ ಯತ್ರ ತರಂಗಚಾಮರೇ ನದ್ಯೌ ವಿಭಾತೇ ಮುನಿಭಾನುಕನ್ಯಕೇ।
ನೀಲಾತಪತ್ರಂ ವಟ ಏವ ಸಾಕ್ಷಾತ್ ಸ ತೀರ್ಥರಾಜೋ ಜಯತಿ ಪ್ರಯಾಗಃ ॥
ಗಂಗಾಯಮುನಯೋರ್ಮಧ್ಯೇ ಸ್ನಾತಿ ಯಃ ಸಂಗಮೇ ನರಃ ।
ದಶಾಶ್ವಮೇಧಾನಾಪ್ನೋತಿ ಕುಲಂ ಚೈವ ಸಮುದ್ಧರೇತ್॥
ಪವಿತ್ರಂ ಋಷಿಭಿರ್ಜುಷ್ಟಂ ಪುಣ್ಯಂ ಪಾವನಮುತ್ತಮಮ್ ।
ಗಂಗಾಯಮುನಯೋರ್ವೀರ ಸಂಗಮಂ ಲೋಕವಿಶ್ರುತಮ್॥

೧. ಸರಸ್ವತೀಯಮುನಾಸಮೇತಾ ಯಾ ಗಂಗಾ ಸಾ ತ್ರಿವೇಣೀತ್ಯುಚ್ಯತೇ। — ವ್ಯಾಖ್ಯಾನ
೨. 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಇತಿ ನ್ಯಾಯಃ ।
೩. ಯತ್ರಾಯಜತ ಭೂತಾತ್ಮಾ ಪೂರ್ವಮೇವ ಪಿತಾಮಹಃ ।
ಪ್ರಯಾಗಮಿತಿ ವಿಖ್ಯಾತಂ ತಸ್ಮಾದ್ ಭರತಸತ್ತಮ ॥ – ಮಹಾಭಾರತ(೩/೮೭,೧೯)

ಚಿತ್ರಕೂಟದತ್ತ ತೆರಳಿದರೆಂದೂ ರಾಮಾಯಣದಲ್ಲಿ ಬಂದಿದೆ. 'ಚಿತ್ರಕೂಟ'ವು ಇಲ್ಲಿಂದ ಸುಮಾರು ೧೦೦ಕಿ.ಮೀ. ದೂರದಲ್ಲಿದೆ. ಗಂಗಾ, ಯಮುನಾ ನದಿಗಳ ತೀರವನ್ನು ಕ್ರಮವಾಗಿ ಆಹವನೀಯ ಮತ್ತು ದಕ್ಷಿಣಾಗ್ನಿಗಳೆಂದೂ, ಅವುಗಳ ಮಧ್ಯಪ್ರದೇಶವನ್ನು ಗಾರ್ಹಪತ್ಯಾಗ್ನಿಯೆಂದೂ, ಅವುಗಳ ಬಳಿ ಒಂದೊಂದು ರಾತ್ರಿ ವಾಸಿಸುವುದು ಆಯಾ ಅಗ್ನಿಗಳ ಪರಮ ಪ್ರೀತಿಗೆ ಸಾಧನವೆಂದೂ ಸಹ ಪುರಾಣದಲ್ಲಿದೆ.

೫. ಪ್ರತಿನಿತ್ಯವೂ ಸ್ನಾನಕಾಲದಲ್ಲಿ ಅತ್ಯವಶ್ಯ ಸ್ಮರಣೀಯವಾದ ಈ ಕ್ಷೇತ್ರದಲ್ಲಿ ಗುರುವು ವೃಷಭರಾಶಿಯಲ್ಲೂ, ಸೂರ್ಯನು ಮಕರರಾಶಿಯಲ್ಲೂ ಇರುವಾಗ ಪ್ರತಿ ಹನ್ನೆರಡು ವರ್ಷಕ್ಕೊಮ್ಮೆ 'ಕುಂಭಮೇಳ' ಎಂಬ ಉತ್ಸವವು ನಡೆಯುತ್ತದೆ. ಆಗ ಅಲ್ಲಿ ಇಂದಿಗೂ ಲಕ್ಷಾಂತರ ಜನರು ಸ್ನಾನಕ್ಕಾಗಿ ಸೇರುವರು.

೬. ಪ್ರಯಾಗದಲ್ಲಿ 'ಅಕ್ಷಯವಟ'ವೊಂದಿದ್ದು ಅದರ ದರ್ಶನವೇ ಸಕಲ ಪಾಪನಾಶಕವೆಂದು ಪ್ರಸಿದ್ಧಿಯಿದೆ. ಇದರ ಬಳಿ ವೇಣೀಮಾಧವ (ಪ್ರಯಾಗಮಾಧವ) ಮೂರ್ತಿಯಿದೆ. ಪ್ರಯಾಗ-ಮರಣವು ಜ್ಞಾನದ್ವಾರಾ ಮುಕ್ತಿಗೆ ಸಾಧನ ಎಂದು ಋಗ್ವೇದದಲ್ಲೂ ಕೂರ್ಮಪುರಾಣದಲ್ಲೂ ಬಂದಿದೆ :

ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ ।
ಅಥವಾ ಸ್ನಾನಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧೌ ।

– ಗೀತಾಭಾಷ್ಯದಲ್ಲಿ ಉದ್ಧೃತ(೩/೨೦)ವಾಗಿರುವ ಕೂರ್ಮಪುರಾಣವಚನ

೭. ಸೂರ್ಯನ ತಾಪಕ್ಕೆ ಮಂಜಿನ ರಾಶಿಯು ಕರಗಿ ನೀರಾಗಿ ಹರಿದು ಹೋಗುವಂತೆ ತ್ರಿವೇಣೀ ಸ್ನಾನದಿಂದ ಸಕಲ ಪಾಪಗಳೂ ಪರಿಹಾರವಾಗುವವು ಎಂದು ಭಾವ.

೮. ತ್ರಿವೇಣೀಸಂಗಮದ ಸ್ನಾನವು ಜ್ಞಾನ,ಭಕ್ತಿ ವಿರಕ್ತಿಗಳೆಂಬ ಸಾಧನತ್ರಯ ಸಂಗಮಕ್ಕೆ ಸಾಧನವಾಗಿ ಕೊನೆಗೆ ಮುಕ್ತಿಗೆ ಕಾರಣವಾಗುವುದು ಎಂದರ್ಥ.

೯. ತ್ರಿವೇಣೀ : ಸರಸ್ವತೀ ಮತ್ತು ಯಮುನೆಯರಿಂದ ಕೂಡಿದ ಗಂಗೆಗೆ 'ತ್ರಿವೇಣೀ' ಎಂದು ಹೆಸರು. ಸಂಗಮದ ಅನಂತರ ಅದಕ್ಕೆ 'ಗಂಗಾ' ಎಂಬ ಹೆಸರು ಮಾತ್ರವೇ ಇರುವುದು ಇದಕ್ಕೆ ಪೋಷಕವಾಗಿದೆ.

೧೦. 'ಅಪುತ್ರೇಣೀಕೃಪಾಣೀ' ಎಂಬ ಮಾತಿನಲ್ಲಿ ಸುಮಂಗಲಿಯರಿಗೂ ಕತ್ತರಿ ಪ್ರಯೋಗ-ದಿಂದ 'ವೇಣೀ' ದಾನವನ್ನು ಮಾಡುವ ಇಲ್ಲಿಯ ವಿಧಿಗೆ ಸೂಚನೆಯೂ ಇದೆ.

## ಪ್ರಯಾಗ ಮಾಧವ (ಪ್ರಯಾಗ ಕ್ಷೇತ್ರ)

**ಪ್ರಯಾಗಮಾಧವೋ ಭೂಯಾದ್ದಯಾವಾರಿನಿಧಿರ್ಹೃದಿ ।**
**ಪ್ರಕೃಷ್ಟಯಾಗಸದೃಶೀ ಸಕೃದ್ಯಸ್ಯ ಹಿ ಸಂಸ್ಮೃತಿಃ ॥ ೧೪ ॥**

ಅ: ಯಸ್ಯ = ಯಾರ; ಸಕೃತ್ = ಒಂದು ಬಾರಿಯ; ಸಂಸ್ಮೃತಿಃ = ಸ್ಮರಣೆಯು; ಪ್ರಕೃಷ್ಟಯಾಗಸದೃಶೀ ಹಿ = ನಿಶ್ಚಿತವಾಗಿ ಉತ್ತಮವಾದ ಯಾಗ(ಅಶ್ವಮೇಧ)ಕ್ಕೆ ಸಮಾನ -

ವಾಗಿರುವುದೋ; (ಅಂತಹ); ದಯಾವಾರಿನಿಧಿಃ = ಕೃಪಾಸಾಗರನಾದ; ಪ್ರಯಾಗ-ಮಾಧವಃ = (ವೇಣೀಮಾಧವನೆಂಬ ಹೆಸರಿನಿಂದ) ಪ್ರಯಾಗದಲ್ಲಿ ನೆಲೆಸಿರುವ ಶ್ರೀಹರಿಯು; ಹೃದಿ = ಮನಸ್ಸಿನಲ್ಲಿ; ಭೂಯಾತ್ = ಇರಲಿ.

ಕೃಪಾಸಾಗರನಾದ ಪ್ರಯಾಗಮಾಧವನು ನನ್ನ ಹೃದಯದಲ್ಲಿ ನೆಲೆಸಲಿ; ಅವನ ಒಂದುಬಾರಿಯ ಸ್ಮರಣೆಯೂ ಸಹ ಶ್ರೇಷ್ಠಯಾಗಕ್ಕೆ ಸಮವಲ್ಲವೇ !

ವಿ: ೧. "ಪ್ರಕೃಷ್ಟಯಾಗಕ್ಕೆ[1] ಸಮನಾದ ಪುಣ್ಯವನ್ನು ತನ್ನನ್ನು ಒಮ್ಮೆ ಸ್ಮರಿಸಿದವರಿಗೂ ಕೊಡುವ ಕಾರಣದಿಂದಾಗಿ ಇಲ್ಲಿರುವ ವೇಣೀಮಾಧವನು[2] 'ಪ್ರಯಾಗಮಾಧವ'[3] ಎನ್ನಿಸಿರುವನು[4]. ಇಂತಹ ಪ್ರಯಾಗಮಾಧವನಿರುವ ಕ್ಷೇತ್ರವಾದ್ದರಿಂದಲೇ 'ಪ್ರಯಾಗ' ವೆಂಬ ಹೆಸರು ಇದಕ್ಕೆ ಉಚಿತವಾಗಿದೆ.

೨. ಮಾಧವನಿಂದ ಪ್ರಯಾಗಕ್ಕೆ ಮಹತ್ತ್ವವೇ ಹೊರತು ಪ್ರಯಾಗದಿಂದ ಮಾಧವನಿಗಲ್ಲ ಎಂದು ಭಾವ.

೩. ಇಲ್ಲಿ 'ಪ್ರಕೃಷ್ಟಯಾಗ' ವೆಂಬ ಪದದಿಂದ ಚತುರ್ಮುಖ ಬ್ರಹ್ಮದೇವರು ಯಾಗ ಮಾಡಿದ್ದಕ್ಕೇ ಈ ಸ್ಥಳಕ್ಕೆ 'ಪ್ರಯಾಗ' ವೆಂದು ಹೆಸರಾಯಿತು ಎಂಬ ಮಹಾಭಾರತದ ಉಲ್ಲೇಖಕ್ಕೆ ಸೂಚನೆಯೂ ಇದೆ. ಪ್ರಯಾಗಯಾತ್ರೆಯೂ ಒಂದು ಪ್ರಕೃಷ್ಟಯಾಗವೇ ಸರಿ ಎಂಬ ಭಾವವೂ ಇಲ್ಲಿದೆ.

## ಗಂಗಾ (ನದೀ)

**ತ್ವಂ ದೀನೇಷು ದಯಾವತೀತಿ ವಿದಿತಂ ಯದ್ಬ್ರಹ್ಮಹಸ್ತಾತ್ರಯಂ**
**ಪ್ರಾಪ್ತಾಽಥಾಚ್ಯುತಪಾದಸಂಗಮಹಿತಾ ಪಶ್ಚಾಚ್ಚ ನಾಕಂ ಗತಾ ।**
**ಸೌವರ್ಣಾಚಲಶೃಂಗಮೇತ್ಯ ಮುದಿತಾ ಶಂಭೋಃ ಶಿರಃಸಂಗತಾಽ -**
**ಪ್ಯಾಸ್ಮಾಕಕ್ಷಿತಿಮಂಡಲೇ ತ್ರಿಪಥಗೇ ತುಷ್ಟಾಽಸ್ಯಭೀಷ್ಟಪ್ರದಾ ॥ ೧೫ ॥**

ಅ: (ಹೇ) ತ್ರಿಪಥಗೇ = (ಸ್ವರ್ಗ, ಮರ್ತ್ಯ ಮತ್ತು ಪಾತಾಳಗಳಲ್ಲಿ ಪ್ರವಹಿಸುವ) ಗಂಗಾನದಿಯೇ !; ತ್ವಂ = ನೀನು; ದೀನೇಷು = ಆರ್ತರಲ್ಲಿ; ದಯಾವತೀ ಇತಿ = ಕೃಪೆಯುಳ್ಳವಳು ಎಂಬುದು; ವಿದಿತಂ = ತಿಳಿಯಿತು; ಯತ್ = ಏಕೆಂದರೆ; (ಪೂರ್ವಂ =

---

೧. ಪ್ರಕೃಷ್ಟಸ್ಯ ಯಾಗಸ್ಯ ಅಶ್ವಮೇಧಯಾಗಸ್ಯ ಸದೃಶೀ ಸಮಾನಾ । -ವ್ಯಾಖ್ಯಾನ

೨. ವೇಣೀಮಾಧವಃ ಪ್ರಯಾಗೇ । – (ಶ್ಲೋ. ೨/೨೧)ರ ವ್ಯಾಖ್ಯಾನ

೩. ಪ್ರಕೃಷ್ಟಸ್ಯಯಾಗಸದೃಶಸ್ಮೃತಿವಿಷಯತ್ವಾತ್ ಪ್ರಯಾಗಮಾಧವ ಇತಿ ಭಾವಃ । – ವ್ಯಾ

೪. ಏಕೋಽಪಿ ಕೃಷ್ಣಸ್ಯ ಸಕೃತ್ ಪ್ರಣಾಮೋ ದಶಾಶ್ವಮೇಧಾವಭೃಥೇನ ತುಲ್ಯಃ ।
ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣಪ್ರಣಾಮೀ ನ ಪುನರ್ಭವಾಯ ॥

-ಎಂಬ ಕೃಷ್ಣಾಮೃತಮಹಾರ್ಣವದಲ್ಲಿ ಉದ್ಧೃತಭೀಷ್ಮಸ್ತವರಾಜದ ಮಾತನ್ನು ಸ್ಮರಿಸಬಹುದು.

ಮೊದಲು); ಬ್ರಹ್ಮಹಸ್ತಾಶ್ರಯಂ = ಚತುರ್ಮುಖ ಬ್ರಹ್ಮದೇವರ ಹಸ್ತದ ಆಶ್ರಯವನ್ನು; ಪ್ರಾಪ್ತಾ = ಹೊಂದಿದವಳಾಗಿಯೂ; ಅಥ = ಅನಂತರ; ಅಚ್ಯುತಪಾದಸಂಗಮಹಿತಾ = ಶ್ರೀಹರಿಯ ಪಾದಸಂಗದಿಂದಾಗಿ ಪೂಜಿತಳಾಗಿಯೂ; ಪಶ್ಚಾತ್ ಚ = ಆ ಬಳಿಕ; ನಾಕಂ = ಸ್ವರ್ಗವನ್ನು; ಗತಾ = ತಲುಪಿದವಳಾಗಿಯೂ; (ಪಶ್ಚಾತ್ = ಅನಂತರ); ಸೌವರ್ಣಾಚಲ-ಶೃಂಗಂ = ಸುವರ್ಣಮಯವಾದ ಮೇರು ಪರ್ವತದ ಶಿಖರವನ್ನು; ಏತ್ಯ = ತಲುಪಿ; ಮುದಿತಾ = ಆನಂದಪಟ್ಟವಳಾಗಿಯೂ; (ಅನಂತರ) ಶಂಭೋಃ = ರುದ್ರದೇವರ; ಶಿರಃ ಸಂಗತಾ ಅಪಿ = ತಲೆಯ ಮೇಲೆ ನೆಲೆಸಿದವಳಾದರೂ (ಸಹ); ಅಸ್ಮಾಕಕ್ಷಿತಿಮಂಡಲೇ = ನಮ್ಮದಾಗಿರುವ ಈ ಭಾರತ ಭೂಮಿಯಲ್ಲಿ; ತುಷ್ಟಾ = ಸಂತುಷ್ಟಳಾಗಿದ್ದು; ಅಭೀಷ್ಟಪ್ರದಾ = ಇಷ್ಟಪ್ರದಳಾಗಿ; ಅಸಿ = ಇರುವಿ.

ಗಂಗೆಯೇ ! ನೀನು ಸ್ವರ್ಗ ಮರ್ತ್ಯ ಮತ್ತು ಪಾತಾಳಗಳೆಂಬ ಮೂರು ಲೋಕಗಳಲ್ಲಿ ಹರಿಯುವವಳು; ನೊಂದವರ ಮೇಲೆ ಕೃಪೆತೋರುವವಳು ಎಂಬುದು ತಿಳಿಯಿತು. ಏಕೆಂದರೆ ಮೊದಲು ನೀನು ಚತುರ್ಮುಖ ಬ್ರಹ್ಮನ ಹಸ್ತದ ಆಸರೆಯನ್ನು ಪಡೆದೆ, ಬಳಿಕ ಶ್ರೀಹರಿಯ ಪಾದಸಂಗದ ಭಾಗ್ಯಪಡೆದೆ; ಅನಂತರ ಸ್ವರ್ಗವನ್ನು ತಲುಪಿದೆ. ಅಲ್ಲಿಂದ ಮೇರುಪರ್ವತದ ಶಿಖರಕ್ಕೆ ಧುಮುಕಿದೆ; ಬಳಿಕ ಶಿವನ ತಲೆಯ ಮೇಲೆ ನೆಲೆಸಿ ನಲಿದೆ; ಇದೀಗ ನಮ್ಮ ಭಾರತಭೂಮಿಯಲ್ಲಿ ಸಂತೋಷದಿಂದ ಇಷ್ಟಪ್ರದ-ಳಾಗಿರುವಿ; ಅಲ್ಲವೇ !

ವಿ: ೧. ಗಂಗಾನದಿಯು ಜಗತ್ತಿನ ಅತ್ಯಂತ ಪವಿತ್ರವಾದ ನದಿ[೧]; ಮೂಲತಃ ಹರಿಪಾದೋ-ದ್ಭವೆಯಾದ ಗಂಗೆಯು ಭಗೀರಥನ ಪ್ರಾರ್ಥನೆಯಂತೆ, ಭೂಮಿಗೆ ಧುಮುಕಿ, ಅಲ್ಲಿಂದ ಪಾತಾಳಕ್ಕೂ ಹರಿದ ಅಪೂರ್ವನದಿ; ಹೀಗೆ ಮೂರುಲೋಕಗಳಲ್ಲೂ ಹರಿಯುವ ನದಿ ಎಂಬ ಕಾರಣದಿಂದಾಗಿ ಇದಕ್ಕೆ 'ತ್ರಿಪಥಗಾ' ಎಂದೂ ಹೆಸರು. ಹಿಮಾಲಯಪರ್ವತದ 'ಗಂಗೋತ್ರಿ' ಎಂಬಲ್ಲಿಂದ ಉದ್ಭವಿಸಿದ ಈ ನದಿಯು ಸುಮಾರು ೨೪೦೦ ಕಿ.ಮೀ.ಗಳಷ್ಟು ಹರಿದು ಪೂರ್ವಸಮುದ್ರ(ಬಂಗಾಳಕೊಲ್ಲಿ)ವನ್ನು ಸೇರುತ್ತದೆ. 'ಗಂಗೋತ್ರಿ'ಗಿಂತ ಮುಂಚೆ ೩೦ಕಿ.ಮೀ. ದೂರದಲ್ಲಿರುವ 'ಗೋಮುಖ' ಎಂಬುದು ಗಂಗಾನದಿಯ ಉಗಮಸ್ಥಾನ; ಭಾಗೀರಥೀ, ಜಾಹ್ನವೀ, ವಿಷ್ಣುಪದೀ ಮೊದಲಾದ ನಾಮಾಂತರಗಳಿಂದಲೂ ಪ್ರಸಿದ್ಧವಾಗಿರುವ ಈ ನದಿಯ ಸ್ಮರಣೆಯು ಸ್ನಾನಕಾಲದಲ್ಲಿ ಪ್ರತಿನಿತ್ಯವೂ ವಿಹಿತವಾಗಿದೆ.[೨] ಇದರ ಸ್ಮರಣೆಯೇ ಸರ್ವಪಾಪನಾಶಕವಾದುದು; ಇದರಲ್ಲಿ ಸ್ನಾನಮಾಡುವಾಗ ಶಂಖಚಕ್ರಗದಾಧರನಾದ ಶ್ರೀಹರಿಯ ಮಾಧವರೂಪವನ್ನು ಸ್ಮರಣೆ ಮಾಡಬೇಕು.[೩]

---

೧. ವಿಷ್ಣುಪಾದಾಬ್ಜಸಂಭೂತಾ ಗಂಗಾ ಸರ್ವಾಧಿಕಾ ಮತಾ । - ನದೀತಾರತಮ್ಯಸ್ತೋತ್ರ

೨. ಗಂಗಾ ಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯಃ ವಿಷ್ಣುಲೋಕಂ ಸ ಗಚ್ಛತಿ ॥ -ಪದ್ಮಪುರಾಣ

೩. ಗಂಗಾಯಾಂ ಮಾಧವೋ ದೇವಃ ಶಂಖಚಕ್ರಗದಾಧರಃ ।

೨. ಗಂಗಾನದಿಯ ವರ್ಣನೆಯು ಪ್ರಾಯಃ ಸಕಲಪುರಾಣಗಳಲ್ಲೂ ಬಂದಿದೆ.[೧] ಭಾಗವತ-ಪುರಾಣದ ಪಂಚಮಸ್ಕಂದದಲ್ಲಿನ 'ಭಾಗೀರಥೀಗದ್ಯ'ವು ತುಂಬಾ ಪ್ರಚಾರದಲ್ಲಿದೆ. 'ನ ಗಂಗಾಸದೃಶಂ ತೀರ್ಥಂ', 'ನಾಸ್ಯ ತೀರ್ಥಸಲಿಲಸ್ಯ ಸಮಂ ವಾಃ'(ಸುಮಧ್ವವಿಜಯ ೬/೪೭) ಮೊದಲಾಗಿ [೨]ಶ್ರೀಮದಾಚಾರ್ಯರು ಇದನ್ನು ಕೊಂಡಾಡಿರುವರು[೩]. ಗಂಗಾಸಹಸ್ರನಾಮ-ಸ್ತೋತ್ರವೂ ಸಹ ಪುರಾಣಗಳಲ್ಲಿ ಬಂದಿದೆ. ಶ್ರೀವಾದಿರಾಜರ ಇಲ್ಲಿಯ ಗಂಗಾಸ್ತೋತ್ರಪರವಾದ ಎಂಟು ಶ್ಲೋಕಗಳಲ್ಲಿ ಇದರ ಹಿರಿಮೆಯ ಅನೇಕ ಮುಖಗಳು ಗೋಚರವಾಗುತ್ತವೆ.

೩. ಶ್ರೀಸತ್ಯಧರ್ಮತೀರ್ಥರ(೧೭೪೯-೧೮೩೩) 'ಗಂಗಾಲಹರಿ'ಯು ವೈಷ್ಣವ ಸಾಹಿತ್ಯ-ದಲ್ಲೆಲ್ಲ ಅತ್ಯಂತ ವಿಸ್ತಾರವಾಗಿ ಗಂಗೆಯನ್ನು ವರ್ಣಿಸುವ ಕೃತಿ. ಶ್ರೀಶೇಷಚಂದ್ರಿಕಾಚಾರ್ಯರು ರಚಿಸಿರುವ ಗಂಗಾಸ್ತೋತ್ರವೂ ಪ್ರಸಿದ್ಧವಿದೆ(ನನ್ನ ಸಂಗ್ರಹದಲ್ಲಿದೆ); ಶ್ರೀಪುರಂದರದಾಸರು ಮೊದಲಾದ ಹರಿದಾಸರೂ ಗಂಗೆಯನ್ನು ವ್ಯಾಪಕವಾಗಿ ಸ್ತುತಿಸಿರುವರು.

೪. ಬಲಿಚಕ್ರವರ್ತಿಯನ್ನು ನಿಗ್ರಹಿಸಲು ತ್ರಿವಿಕ್ರಮರೂಪದಿಂದ ಶ್ರೀಹರಿಯು ಊರ್ಧ್ವ-ಭಾಗವನ್ನು ಅಳೆಯಲು ಎತ್ತಿದ ಪಾದವು, ಸತ್ಯಲೋಕವನ್ನೂ ವ್ಯಾಪಿಸಿದಾಗ, ಬ್ರಹ್ಮಾಂಡದೊಳಗೆ ನುಗ್ಗಿ ಬಂದ ಜಲವನ್ನು ಬ್ರಹ್ಮದೇವರು ತಮ್ಮ ಕಮಂಡಲುವಿನಲ್ಲಿ ತುಂಬಿಕೊಂಡು ಶ್ರೀಹರಿಯ ಪಾದವನ್ನು ತೊಳೆದರು. ಆ ಶ್ರೀಹರಿಯ ಪಾದೋದಕವೇ 'ಗಂಗಾನದೀ' ಎಂಬುದು ಶಾಸ್ತ್ರಗಳಲ್ಲಿ ನಿರೂಪಿತವಾಗಿದೆ; ಸ್ವರ್ಗದ ಮೂಲಕ ಹರಿದು ಬಂದು ಅನಂತರ ಮೇರುಪರ್ವತದ ಮೇಲೆ ಧುಮುಕಿದ ಅದನ್ನು ಶ್ರೀರುದ್ರದೇವರು ತಮ್ಮ ಶಿರಸ್ಸಿನಲ್ಲಿ ಧರಿಸಿ 'ಗಂಗಾಧರ' ಎನ್ನಿಸಿದರು; ಅನಂತರ ಭಗೀರಥನಿಗಾಗಿ ಭೂಮಿಗಿಳಿದು ಭಾಗೀರಥಿ ಎನ್ನಿಸಿದ್ದು ಗಂಗಾನದಿಯ ವೈಶಿಷ್ಟ್ಯ.

೫. ಬ್ರಹ್ಮದೇವರ ಹಸ್ತದ ಮೂಲಕ ವಿಷ್ಣುಪಾದವನ್ನು ತಲುಪಿ ಅಲ್ಲಿಂದ ಸ್ವರ್ಗದ ಮೂಲಕ ಮೇರುಪರ್ವತದ ಶಿಖರವನ್ನೂ, ಅಲ್ಲಿಂದ ರುದ್ರದೇವರ ಮುಡಿಯನ್ನೂ ತಲುಪಿ, ಭಗೀರಥನ ಪ್ರಾರ್ಥನೆಯಂತೆ ಭೂಮಿಗಿಳಿದ ಗಂಗಾನದಿಯು ತುಂಬಾ ಕೃಪಾಶೀಲಳೇ ಸರಿ. ಇಲ್ಲವಾಗಿದ್ದಲ್ಲಿ ಅಂತಹ ಉತ್ತಮ ಸ್ಥಳದಲ್ಲಿದ್ದೂ ನಾವು ನೆಲೆಸಿರುವ ಈ ಭೂಮಂಡಲಕ್ಕೆ ಹೇಗೆ ತಾನೇ ಬರುತ್ತಿದ್ದಳು? ವಿಷ್ಣುಪಾದ, ಬ್ರಹ್ಮಹಸ್ತ , ಶ್ರೀರುದ್ರದೇವರ ಶಿರಸ್ಸು ಮೊದಲಾದ ಉತ್ತಮ ಸ್ಥಳಗಳಲ್ಲಿರುವ ಗಂಗಾನದಿಯು ಭೂಮಿಗೆ ಬರುವಲ್ಲಿ ಅವರಿಗೆ ನಮ್ಮ ಮೇಲಿರುವ 'ದಯೆ' ಒಂದೇ ಕಾರಣವಾಗಿದೆ ಎಂದು ಭಾವ[೪].

---

ಲಸತ್ಪದ್ಮಧರೋ ಧ್ಯೇಯಸ್ತತ್ರ ಸ್ನಾನಂ ನರೇಶ್ವರ ॥ - ನದ್ಯಭಿಮಾನಿದೇವತಾಸ್ತೋತ್ರ(ಬ್ರಹ್ಮಾಂಡಪುರಾಣ)

೧. ವಿಷ್ಣುಪಾದಾಬ್ಜಸಂಭೂತೇ ಗಂಗೇ ತ್ರಿಪಥಗಾಮಿನಿ ।
ಗೃಹಾಣಾರ್ಘ್ಯಂ ಮಯಾ ದತ್ತಂ ಜಲೇ ಸನ್ನಿಹಿತಾ ಭವ ॥ - ಗಂಗಾರ್ಘ್ಯ ಮಂತ್ರಃ

೨. ನ ಗಂಗಾಸದೃಶಂ ತೀರ್ಥಂ ನ ದೇವಃ ಕೇಶವಾತ್ ಪರಃ । -ಮಹಾಭಾರತ(೩/೮೫/೯೬)

೩. 'ವತ್ಸರಸ್ಯ ತು ಜಾಹ್ನವೀ' ಎಂಬುದಾಗಿ ಶ್ರೀಕೃಷ್ಣಾಮೃತಮಹಾರ್ಣವದಲ್ಲಿ ಗಂಗಾಸ್ನಾನವು ಒಂದು ವರ್ಷ ಯಾಗ ಮಾಡಿದ ಫಲವನ್ನು ಕೊಡುತ್ತದೆ ಎಂದು ಅವರು ತಿಳಿಸಿರುವರು.

೪. ಉತ್ತಮಸ್ಥಳಾದನ್ಯತ್ರ ಗಮನೇ ದಯೈವ ನಿಮಿತ್ತಮಿತಿ ಭಾವಃ -ವ್ಯಾಖ್ಯಾನ

ಆದೌ [1]ಪಾದತಲೋರ್ಧ್ವಭಾಗಮಹಸಾ ಯಾ ರಕ್ತನೀಲಾ[2] ಹರೇಃ
[3]ಸ್ವರ್ಗಸ್ತ್ರೀಕುಚಕುಂಕುಮಾಂಕನಯನೋಪಾಂತಶ್ರಿಯಾಽಭ್ಯಂತರೇ ।
ಅಂತೇ [4]ಶಂಭುಕಪರ್ದಪನ್ನಗಗಲಶ್ರೇಣೀಜ್ವಲಜ್ಜ್ಯೋತಿಷಾ
ಜನ್ಮಾರಭ್ಯ [5]ಸರಸ್ವತೀನತನಯಾಸಂಗೇವ ಗಂಗಾಽಸ್ತಿ ಸಾ ॥ ೧೬ ॥

ಅ: ಆದೌ = ಶ್ರೀವಿಷ್ಣುಪಾದದಿಂದ ಉದ್ಭವಿಸುವ ಕಾಲದಲ್ಲಿ; ಹರೇಃ = ಆ ಶ್ರೀಹರಿಯ; ಪಾದತಲೋರ್ಧ್ವಭಾಗಮಹಸಾ = ಪಾದದ ತಳಭಾಗ ಮತ್ತು ಮೇಲಿನ ಭಾಗಗಳ ಕಾಂತಿಯಿಂದಾಗಿ; ರಕ್ತನೀಲಾ = ಕೆಂಪು ಮತ್ತು ನೀಲವರ್ಣಗಳಿಂದ ಕೂಡಿದವಳಾಗಿಯೂ; ಅಭ್ಯಂತರೇ = ಮಧ್ಯದಲ್ಲಿ; ಸ್ವರ್ಗಸ್ತ್ರೀಕುಚಕುಂಕುಮಾಂಕನಯನೋಪಾಂತಶ್ರಿಯಾ = ಸ್ನಾನಕ್ಕಾಗಿ ಆಗಮಿಸಿದ ದೇವಸ್ತ್ರೀಯರುಗಳ ಸ್ತನ ಪ್ರದೇಶದಲ್ಲಿನ ಕುಂಕುಮ ಮತ್ತು ಅವರ ಕುಡಿನೋಟಗಳ ಕಾಂತಿಯಿಂದ ರಕ್ತನೀಲಳಾಗಿಯೂ, ಅಂತೇ = ಕೊನೆಯಲ್ಲಿ; ಶಂಭುಕಪರ್ದ-ಪನ್ನಗಗಲಶ್ರೇಣೀಜ್ವಲಜ್ಜ್ಯೋತಿಷಾ = ರುದ್ರದೇವರ ಜಟಾಜೂಟ ಮತ್ತು ಅಲ್ಲಿಯ ಸರ್ಪಗಳ ಕತ್ತಿನ ಸಾಲುಗಳ ಕಾಂತಿಯಿಂದಾಗಿ ರಕ್ತನೀಲಳಾಗಿಯೂ ಕಾಣುವ; ಯಾ ಸಾ ಗಂಗಾ = ಆ ಗಂಗೆಯು; ಜನ್ಮಾರಭ್ಯ = (ಪ್ರಯಾಗದಲ್ಲಿ ಮಾತ್ರವಲ್ಲದೆ) ಹುಟ್ಟಿನಿಂದಲೂ; ಸರಸ್ವತೀನತನಯಾಸಂಗಾ ಇವ = ಸರಸ್ವತೀ ಯಮುನೆಯರೊಂದಿಗೆ ಕೂಡಿಕೊಂಡವಳಾಗಿ ಇರುವಳೋ ಎಂಬಂತೆ; ಅಸ್ತಿ = ಇರುವಳು (ಉತ್ಪ್ರೇಕ್ಷಾಲಂಕಾರ)

ಉದ್ಭವಿಸುವ ಕಾಲದಲ್ಲಿ ಆ ಶ್ರೀಹರಿಯ ಪಾದದ ತಳಭಾಗ ಮೇಲ್ಭಾಗಗಳ ಕಾಂತಿಯಿಂದಾಗಿ, ಮಧ್ಯದಲ್ಲಿ ಸ್ನಾನಕ್ಕೆ ಆಗಮಿಸಿದ ದೇವಸ್ತ್ರೀಯರುಗಳ ಸ್ತನ ಪ್ರದೇಶದಲ್ಲಿನ ಕುಂಕುಮ ಹಾಗೂ ಅವರ ಕುಡಿನೋಟಗಳ ಕಾಂತಿಯಿಂದಾಗಿ, ಕೊನೆಯಲ್ಲಿ ರುದ್ರದೇವರ ಜಟಾಜೂಟ ಮತ್ತು ಅಲ್ಲಿಯ ಸರ್ಪಗಳ ಕತ್ತಿನ ಸಾಲುಗಳ ಕಾಂತಿಯಿಂದಾಗಿ ಕೆಂಪುನೀಲಬಣ್ಣದವಳಾದ ಈ ಗಂಗೆಯು ಹುಟ್ಟಿ-ನಿಂದಲೂ ಸರಸ್ವತೀಯಮುನೆಯರೊಂದಿಗೆ ಕೂಡಿಕೊಂಡವಳಂತೆ ತೋರುವಳು.

ವಿ: ೧. ಪ್ರಯಾಗದಲ್ಲಿ ಧವಲವರ್ಣದ ಗಂಗೆಯು ಸರಸ್ವತೀ ಮತ್ತು ಯಮುನಾ ನದಿ-ಗಳೊಂದಿಗೆ ಕೂಡುವಳು; ಸರಸ್ವತೀನದಿಯು ಕೆಂಪು, ಯಮುನಾ ನದಿಯು ಕಪ್ಪು ಬಣ್ಣಗಳ ಕಾಂತಿಯಿಂದ ಇರುವುದರಿಂದ ಆಗ ಗಂಗೆಗೆ ಕೆಂಪು ಮತ್ತು ಕಪ್ಪು ಬಣ್ಣಗಳ ಕಾಂತಿ

---

ಬ್ರಹ್ಮಾಂಡಂ ಭಿತ್ವಾ ಗತಾಯಾಃ ಬ್ರಹ್ಮಣಾ ಕಮಂಡಲೌ ಧೃತತ್ವಾದಿತಿ ಭಾವಃ ॥ -ವ್ಯಾಖ್ಯಾನ

೧. ಪಾದತಲಂ ಚ ತದೂರ್ಧ್ವಭಾಗಶ್ಚೇತಿ ದ್ವಂದ್ವಸಮಾಸಃ । -ವ್ಯಾಖ್ಯಾನ

೨. ರಕ್ತಾ ಚ ಸಾ ನೀಲಾ ಚೇತಿ ಸಮಾನಾಧಿಕರಣಸಮಾಸಃ ॥ -ವ್ಯಾಖ್ಯಾನ

೩. ಕುಚಕುಂಕುಮಾಂಕಶ್ರಿಯಾ ರಕ್ತಾ । ಕುಂಕುಮಸ್ಯ ಅರುಣತ್ವಾತ್ । ಕಟಾಕ್ಷಕಾಂತ್ಯಾ ನೀಲಾ । ಕಟಾಕ್ಷಸ್ಯ ನೀಲತ್ವಾತ್ । -ವ್ಯಾಖ್ಯಾನ

೪. ಶಂಭುಕಪರ್ದಜ್ಯೋತಿಷಾ ರಕ್ತಾ । ಶಂಭುಕಪರ್ದಸ್ಯ ಅರುಣತ್ವಾತ್ । ಪನ್ನಗಗಲಶ್ರೇಣೀಜ್ಯೋತಿಷಾ ನೀಲಾ । ಪನ್ನಗಗಲಶ್ರೇಣೀನಾಂ ನೀಲತ್ವಾತ್ । -ವ್ಯಾಖ್ಯಾನ

೫. ಸರಸ್ವತೀಜಲಸ್ಯ ಅರುಣತ್ವಾತ್ ಯಮುನಾಜಲಸ್ಯ ನೀಲತ್ವಾಚ್ಚೇತಿ ಭಾವಃ । -ವ್ಯಾಖ್ಯಾನ

ಉಂಟಾಗುವುದು; ಆದರೆ ಗಂಗಾನದಿಗೆ ಇಂತಹ ರಕ್ತನೀಲಕಾಂತಿಯು ಹುಟ್ಟುವಾಗ ವಿಷ್ಣುಪಾದದ ಕೆಳಭಾಗ(ಕೆಂಪು) ಮೇಲ್ಭಾಗ(ಕಪ್ಪು)ಗಳ ಸಂಪರ್ಕದಿಂದಾಗಿಯೂ ಸ್ವರ್ಗದಲ್ಲಿ ಹರಿಯುವಾಗ ದೇವಸ್ತ್ರೀಯರ ಸ್ತನಪ್ರದೇಶದ ಕುಂಕುಮ(ಕೆಂಪು) ಮತ್ತು ಕುಡಿನೋಟ (ಕಪ್ಪು)ಗಳಿಂದಾಗಿಯೂ, ರುದ್ರದೇವರ ತಲೆಯ ಮೇಲಿರುವಾಗ ಅವರ ಜಟಾಜೂಟ (ಕೆಂಪು) ಮತ್ತು ಅಲ್ಲಿನ ಸರ್ಪಗಳ ಕಂಠಪಂಕ್ತಿ(ಕಪ್ಪು)ಗಳ ಕಾಂತಿಯಿಂದಾಗಿಯೂ ಉಂಟಾಗಿರುತ್ತದೆ. ಹೀಗೆ ಸರಸ್ವತೀ - ಯಮುನೆಯರ ಸಂಕೇತವಾದ ರಕ್ತನೀಲವರ್ಣಗಳ ಕಾಂತಿಯು ಗಂಗಾನದಿಗೆ ಹುಟ್ಟಿನಿಂದಲೂ ಇರುವುದರಿಂದ ಇದಕ್ಕೆ ಸರಸ್ವತೀ ಯಮುನೆಯರ ಸಂಗಮವು ಜನ್ಮಾರಭ್ಯ ಇದ್ದಂತಿದೆ ಎಂದು ಶ್ರೀವಾದಿರಾಜರು ಉತ್ಪ್ರೇಕ್ಷಿಸಿರುವರು.

೨. ಗಂಗೆಯು ವಿಷ್ಣುಪಾದದಿಂದ ಜನಿಸಿದವಳು, ದೇವಲೋಕದಲ್ಲಿ ಹರಿಯುವವಳು ಮತ್ತು ರುದ್ರದೇವರ ಶಿರಸ್ಸಿನಲ್ಲಿರುವವಳು ಎಂಬುದನ್ನು ಪ್ರಕಾರಾಂತರದಿಂದ ವರ್ಣಿಸುತ್ತ, ಅದು ಯಥೋಚಿತವಾಗಿ ಪ್ರಯಾಗದಷ್ಟೇ ಪವಿತ್ರವಾಗಿ ಇತರ ಸ್ಥಳಗಳಲ್ಲೂ ಇರುವುದು ಎಂಬುದನ್ನು ಸಹ ಸೂಚಿಸಿರುವರು.

**ಅಜ್ಞಾನಾದ್ಯದಿ ಸಜ್ಜನೇಷು ರಚಿತದ್ರೋಹಾನ್ಮಯಿ ಸ್ವರ್ಧುನಿ**
**ಸ್ವಸ್ಫೂರ್ತ್ಯಾ ಸುಜನೇಷು ದೂಷಣಗಣಾರೋಪಾದವಜ್ಞಾ ತವ ।**
**ತರ್ಹಿ ತ್ವಾಂ ಸಗರಾತ್ಮಜಾಸ್ಥಿನಿಕರಾ ಜಾನಂತಿ ಕಿಂ ತೈಃ ಪ್ರಭೋಃ**
**ದ್ರೋಹಃ ಕಿಂ ನ ಕೃತಃ ಕಿಮಂಬ ನ ಹರಾವರೋಪಿತಾ ಚೋರತಾ ॥೧೭॥**

**ಅ:** (ಹೇ) **ಸ್ವರ್ಧುನಿ !** = ಎಲೈ ದೇವನದಿಯೇ !; **ತವ** = ನಿನಗೆ; **ಮಯಿ** = ನನ್ನಲ್ಲಿ; **ಅವಜ್ಞಾ** = ಉಪೇಕ್ಷೆಯು; **ಅಜ್ಞಾನಾತ್ ಯದಿ** = 'ನಾನು ಅಜ್ಞಾನಿ' ಎಂಬ ಕಾರಣ-ದಿಂದಲೋ?; (ಅಥವಾ); **ಸಜ್ಜನೇಷು** = ಸಜ್ಜನರಲ್ಲಿ; **ರಚಿತದ್ರೋಹಾತ್** = ಮಾಡಿರುವ ದ್ರೋಹದಿಂದಲೋ?; (ಅಥವಾ) **ಸುಜನೇಷು** = ವೈಷ್ಣವಜನರಲ್ಲಿ; **ಸ್ವಸ್ಫೂರ್ತ್ಯಾ** = ನನ್ನ ಕಲ್ಪನಾಮಾತ್ರದಿಂದ; **ದೂಷಣಗಣಾರೋಪಾತ್** = ಇಲ್ಲದಿರುವ ದೋಷಗಳನ್ನು ಹೇಳಿದುದರಿಂದಲೋ,(ಈ ಮೂರರಲ್ಲಿ ನೀನು ತೋರುವ ಅವಜ್ಞೆಗೆ ಕಾರಣವಾವುದು?) ಮೊದಲನೆಯದು ಕಾರಣವಾಗಲಾರದು; ಏಕೆಂದರೆ **ತರ್ಹಿ** = ಹಾಗಿದ್ದಲ್ಲಿ; **ಸಗರಾ-ತ್ಮಜಾಸ್ಥಿನಿಕರಾಃ** = ಸಗರರಾಜನ(ಅರವತ್ತು ಸಾವಿರ) ಪುತ್ರರ ಅಸ್ಥಿಗಳ ರಾಶಿಗಳು; **ತ್ವಾಂ** = ನಿನ್ನನ್ನು; **ಜಾನಂತಿ ಕಿಂ?** = ತಿಳಿದಿದ್ದವೇನು? (ಎರಡನೆಯದು) ಕಾರಣವಲ್ಲ; (ಏಕೆಂದರೆ) ; **ತೈಃ** = ಆ ಸಗರ ಪುತ್ರರಿಂದ; **ಪ್ರಭೋಃ** = ಸ್ವಾಮಿಯಾದ ಕಪಿಲರೂಪದ ಶ್ರೀಹರಿಯ; **ದ್ರೋಹಃ** = ದ್ರೋಹ(ಅಪಚಾರ)ವು; **ನ ಕೃತಃ ಕಿಂ** = ಮಾಡಲ್ಪಡಲಿಲ್ಲ-ವೇನು ? ; (ಮೂರನೆಯದು ಸಹ ಕಾರಣವಾಗಲಾರದು; ಏಕೆಂದರೆ) (ಹೇ)**ಅಂಬ !** = ಅಮ್ಮ; **ಹರೌ** = ಕಪಿಲರೂಪಿ ಶ್ರೀಹರಿಯಲ್ಲಿ; **ಚೋರತಾ** = ಕಳ್ಳತನವು; **ನ ಆರೋಪಿತಾ ಕಿಂ** = ಆರೋಪಿಸಲ್ಪಡಲಿಲ್ಲವೇನು?

ದೇವನದಿಯೇ ! ನಿನಗೆ ನನ್ನಲ್ಲಿ ಉಪೇಕ್ಷೆ ಏತಕ್ಕೆ? 'ನಾನು ಅಜ್ಞಾನಿ' ಎಂದೋ? ಸಜ್ಜನರಿಗೆ ದ್ರೋಹವೆಸಗಿದವನೆಂದೋ? ಅಥವಾ ವೈಷ್ಣವರಲ್ಲಿ ಇಲ್ಲದ ದೋಷಗಳನ್ನು ಕಲ್ಪಿಸಿ ಹೇಳಿದವನೆಂದೋ? ಹಾಗಿದ್ದಲ್ಲಿ ಸಗರಪುತ್ರರ ಅಸ್ಥಿಗಳರಾಶಿ ನಿನ್ನನ್ನು ಅರಿತಿದ್ದವೇನು? ಆ ಸಗರಪುತ್ರರು ಪ್ರಭುವಾದ ಕಪಿಲರೂಪದ ಶ್ರೀಹರಿಗೆ ದ್ರೋಹವೆಸಗಿರಲಿಲ್ಲವೇನು? ಅವರು ಕಪಿಲರೂಪಿ ಶ್ರೀಹರಿಯಲ್ಲಿ ಕಳ್ಳತನದ ಆರೋಪವನ್ನು ಹೊರಿಸಿರಲಿಲ್ಲವೇನು?

ವಿ: ೧. ಕಪಿಲರೂಪಿಯಾದ ಶ್ರೀಹರಿಗೆ ದ್ರೋಹಮಾಡಿ ಭಸ್ಮವಾದ ಸಗರಪುತ್ರರನ್ನು ಗಂಗೆಯು ಭಗೀರಥನ ಪ್ರಾರ್ಥನೆಯಂತೆ ಅವರ ಮೇಲೆ ಹರಿಯುವ ಮೂಲಕ ಉದ್ಧರಿಸಿದ ಕಥೆಯು ಭಾಗವತಾದಿಗಳಲ್ಲಿ ಪ್ರಸಿದ್ಧವಾಗಿದೆ[1]. ಈ ಕಥೆಯ ಹಿನ್ನೆಲೆಯಲ್ಲಿ ನಮ್ಮನ್ನು ಉದ್ಧರಿಸಲು ಗಂಗೆಯನ್ನು ನಾವು ಹೇಗೆ ಪ್ರಾರ್ಥಿಸಿಕೊಳ್ಳಬೇಕು ಎಂಬುದನ್ನು ಶ್ರೀವಾದಿರಾಜರು ತುಂಬಾ ಚಮತ್ಕಾರವಾಗಿ ತಿಳಿಸಿರುವರು.

೨. ಸಗರಪುತ್ರರ ಅಸ್ಥಿಗಳು ಜಡವಾದ್ದರಿಂದ ಅವಕ್ಕೆ ನಿನ್ನ ಮಹಿಮೆಯೇನೂ ಗೊತ್ತಿರಲಿಲ್ಲ; ನನಗೂ ನಿನ್ನ ಮಹಿಮೆ ತಿಳಿದಿಲ್ಲ; ಆ ಸಗರಪುತ್ರರು ಈ ಕಪಿಲರೂಪೀ ಶ್ರೀಹರಿಗೆ ದ್ರೋಹವೆಸಗಿದರು; ನಾವೂ ಶ್ರೀಹರಿಗೆ ದ್ರೋಹಮಾಡಿರುವೆವು; ಅವರು ಶ್ರೀಹರಿಗೆ ಕಳ್ಳತನದ ದೋಷವನ್ನು ಆರೋಪಿಸಿದರು; ನಾವೂ ಹಾಗೆ ಶ್ರೀಹರಿಯಲ್ಲಿ, ಸ್ವೋತ್ತಮರಲ್ಲಿ ದೋಷ-ಗಳನ್ನು ಆರೋಪಿಸುವೆವು; ಹೀಗಿದ್ದೂ, ನೀನು ಅವರನ್ನೆಲ್ಲ ಉದ್ಧರಿಸಿದ ಮೇಲೆ ನಮ್ಮನ್ನು ಮಾತ್ರ ಏತಕ್ಕೆ ಉದ್ಧರಿಸದೆ ಸುಮ್ಮನಿರುವೆ? ಪಾಪಿಗಳಾದ ಸಗರಪುತ್ರರನ್ನು ಉದ್ಧರಿಸಿದ ನೀನು ಪಾಪಿಗಳಾದ ನಮ್ಮನ್ನೂ ಉದ್ಧರಿಸು[2] ಎಂದು ಭಾವ[3].

**ಆರಭ್ಯಾಬ್ಜಜಲೋಕಮಾಕ್ಷಿತಿತಲಾದಾಯಾತಯಾ ಕಿಂ ತ್ವಯಾ**
**ಮಚ್ಚಿತ್ತಂ ಬಹುದೂರಮಿತ್ಯಮಲಯಾ ತ್ಯಕ್ತಂ ಭಿಯಾ ಜಾಹ್ನವಿ[4] ।**

---

೧. ಇಯಂ ಕಥಾ ತು ಶ್ರೀಮದ್ಭಾಗವತಾದೌ★ ಪ್ರಸಿದ್ಧೈವೇತಿ ಭಾವಃ। -ವ್ಯಾಖ್ಯಾನ

★ಪ್ರಾಗುದೀಚ್ಯಾಂ ದಿಶಿ ಹಯಂ ದದೃಶುಃ ಕಪಿಲಾಂತಿಕೇ ।
ಏಷ ವಾಜಿಹರಶ್ಚೋರಃ ಆಸ್ತೇ ಮೀಲಿತಲೋಚನಃ ॥
ಹನ್ಯತಾಂ ಹನ್ಯತಾಂ ಪಾಪಃ ಇತಿ ಷಷ್ಟಿಸಹಸ್ರಿಣಃ ।
ಉದಾಯುಧಾ ಅಭಿಯಯುರುನ್ಮಿಮೇಷ ತದಾ ಮುನಿಃ ॥
ಸ್ವಶರೀರಾಗ್ನಿನಾ ತಾವನ್ಮಹೇಂದ್ರಹೃತಚೇತಸಃ ।
ಮಹದ್ವ್ಯತಿಕ್ರಮಹತಾ ಭಸ್ಮಸಾದಭವನ್ ಕ್ಷಣಾತ್ ॥
ಅಶ್ವೋಽಯಂ ನೀಯತಾಂ ವತ್ಸ ಪಿತಾಮಹ ಪಶುಸ್ತವ ।
ಇಮೇ ಚ ಪಿತರೋ ದಗ್ಧಾ ಗಂಗಾಂಭೋಽರ್ಹಂತಿ ನೇತರತ್॥ಭಾಗವತ(೯/೮/೧೦,೧೨,೨೯)

೨. ತಥಾಽಪಿ ತೇಷು ಯಥಾ ಕರುಣಾ ಕೃತಾ ತಥಾ ಮಯಿ ಕೃಪಾಂ ಕೃತ್ವಾ ಮನ್ನಿಷ್ಠಾಜ್ಞಾನಾದಿ ದೋಷ-ನಿಕರಃ ಪರಿಹರ್ತವ್ಯ ಇತಿ ತಾತ್ಪರ್ಯಾರ್ಥಃ। -ವ್ಯಾಖ್ಯಾನ

೩. ಶ್ರೀಹರಿಗುರುದ್ರೋಹಿಗಳಿಗೆ ಗಂಗಾಸ್ನಾನದ ಯೋಗ ಸುಲಭವಾಗಿ ಲಭಿಸಲಾರದು ಎಂದು ಭಾವ.

೪. ಜಾಹ್ನವೀ ಜಹ್ನೋರಪತ್ಯಂ ಸ್ತ್ರೀ - ಜಾಹ್ನವೀ -ವ್ಯಾಖ್ಯಾನ

**ಅಕ್ಷಯ್ಯಾಚಲತುಂಗಶೃಂಗನಿಕರಾನ್ನಿರ್ಭಿದ್ಯ ಯಾಂತೀ ಮಮ**
**ಸ್ವಲ್ಪಂ ಕಿಂ ಬಹು ಮನ್ಯಸೇಽಶುಭಕುಲಂ ಗಂಗೇಽಂತರಂಗೇ ಚಲಮ್ ॥೧೮॥**

ಅ: (ಹೇ) **ಜಾಹ್ನವಿ !** = ಎಲೈ ಜಾಹ್ನವಿಯೇ !; **ಅಬ್ಜಜಲೋಕಂ** = ಬ್ರಹ್ಮ(ಸತ್ಯ) ಲೋಕವನ್ನು; **ಆರಭ್ಯ** = ಆರಂಭಿಸಿ; **ಆಕ್ಷಿತಿಲತಾತ್** = ಭೂಲೋಕದವರೆಗೂ; **ಆಯಾತಯಾ** = ಆಗಮಿಸಿರುವ; **ಅಮಲಯಾ** = ನಿರ್ಮಲಳಾದ; **ತ್ವಯಾ** = ನಿನ್ನಿಂದ; **ಮಚ್ಚಿತ್ತಂ** = ನನ್ನ ಮನಸ್ಸು; **ಬಹುದೂರಂ ಇತಿ** = ಬಹಳದೂರವೆಂಬ; **ಭಿಯಾ** = ಭಯದಿಂದ; **ತ್ಯಕ್ತಂ ಕಿಂ** = ಬಿಡಲ್ಪಟ್ಟಿತೇನು?; (ಹೇ) **ಗಂಗೇ** = ಎಲೈ ಗಂಗೆಯೇ; **ಅಕ್ಷಯ್ಯಾಚಲತುಂಗಶೃಂಗನಿಕರಾತ್** = ಭೇದಿಸಲಾಗದ ಪರ್ವತಗಳ ಉನ್ನತವಾದ ಶಿಖರಗಳ ಸಮೂಹಗಳಿಂದ; **ನಿರ್ಭಿದ್ಯ** = ಸೀಳಿ; **ಯಾಂತೀ** = ಧಾವಿಸುವ (ನೀನು); **ಮಮ** = ನನ್ನ; **ಅಂತರಂಗೇ** = ಮನಸ್ಸಿನಲ್ಲಿರುವ; **ಚಲಂ** = (ನಿನ್ನ ನಾಮಸ್ಮರಣೆಯಿಂದಲೇ) ನಡುಗುತ್ತಿರುವ; **ಸ್ವಲ್ಪಂ** = ತುಂಬಾ ಅಲ್ಪವಾಗಿರುವ; **ಅಶುಭಕುಲಂ** = ಪಾಪಸಮೂಹವನ್ನು; **ಬಹುಮನ್ಯಸೇ ಕಿಂ?** = ಹೆಚ್ಚೆಂದು ಭಾವಿಸಿರುವೆಯೇನು?(ಪರ್ಯಾಯೋಕ್ತ ಅಲಂಕಾರ)

ಜಾಹ್ನವಿಯೇ ! ಬ್ರಹ್ಮಲೋಕವನ್ನು ಆರಂಭಿಸಿ ಭೂಲೋಕದವರೆಗೂ ಆಗಮಿಸಿರುವ ನಿರ್ಮಲಳಾದ ನೀನು ಬಹುದೂರವೆಂದು ನನ್ನ ಮನಸ್ಸನ್ನು ತೊರೆದಿರುವೆಯಾ? ಎಲೈ ಗಂಗೆಯೇ ! ಅಭೇದ್ಯಪರ್ವತಗಳ ತುಂಗಶಿಖರಗಳ ಸಾಲುಗಳಿಂದ ಧಾವಿಸಿದ ನೀನು ನನ್ನ ಮನಸ್ಸಿನಲ್ಲಿಯ ನಡುಕ ಹುಟ್ಟಿಸುವ ಅಲ್ಪಪಾಪವನ್ನೇ ಹೆಚ್ಚೆಂದು ಭಾವಿಸಿರುವೆಯಾ?

ವಿ: ೧. ಬ್ರಹ್ಮಲೋಕದಿಂದ ಭೂಲೋಕವು [1]ಇಪ್ಪತ್ತೈದುಕೋಟಿ ಯೋಜನಗಳಷ್ಟು ದೂರ; ನನ್ನ ಮನಸ್ಸು ಮಾತ್ರ ತುಂಬಾ ಹತ್ತಿರ; ಅಷ್ಟು ದೂರ ಬಂದಿರುವ ನಿನಗೆ ನನ್ನ ಮನಸ್ಸು ದೂರವಾಯಿತೇ? ಉನ್ನತವಾದ 'ಅಚಲ'(ಪರ್ವತ) ಶಿಖರಗಳನ್ನೇ ಭೇದಿಸಿ ಹರಿಯುವ ನಿನಗೆ ನಿನ್ನ ನಾಮಸ್ಮರಣೆಯಿಂದಲೇ 'ಚಲ' (ಕಂಪಿಸುವ)ವಾಗಿರುವ ಪಾಪರಾಶಿಗಳನ್ನು ಪರಿಹರಿಸುವುದು ದೊಡ್ಡ ಕೆಲಸವೇ? ಎಂದು ಭಾವ.

೨. [2]ನೀನು ನನ್ನ ಮನಸ್ಸಿನಲ್ಲಿ ನೆಲೆಸಿ 'ಧ್ಯಾನ ವಿಷಯಳಾಗು'; ನನ್ನ ಪಾಪಗಳನ್ನು ಪರಿಹರಿಸು ಎಂದು ಭಾವ. ಇಲ್ಲಿ ಮುಖ್ಯ ವಿಷಯವನ್ನು ಪರ್ಯಾಯವಾಗಿ ಸೂಚಿಸಿರುವುದರಿಂದ 'ಪರ್ಯಾಯೋಕ್ತ'ವೆಂಬ ಅಲಂಕಾರವಿದೆ[3].

---

೧. ಪಂಚವಿಂಶತಿಕೋಟಿಯೋಜನದೂರಗಮನಸಮರ್ಥಯಾ ತ್ವಯಾ ನಿಕಟಸ್ಥಮಚ್ಚಿತ್ತಂ ಕಿಮರ್ಥಂ ತ್ಯಜ್ಯತೇ ಇತ್ಯರ್ಥಃ। ಮದ್ಧ್ಯಾನಪಥೇ ಸದಾ ಭವೇತಿ ತಾತ್ಪರ್ಯಾರ್ಥಃ। – ವ್ಯಾ
ಪಂಚಾಶತ್ಕೋಟಿವಿಸ್ತಾರೋ ಯೋಜನಾನಾಂ ಸಮಸ್ತಶಃ।
ಯಾವಂತ ಏತೇ ಮಿಲಿತಾಸ್ತತ್ಪ್ರಮಾಣ ಉದೀರಿತಃ॥ – ಮ.ಭಾ.ತಾ.ನಿ.(೨೧/೫೮)

೨. ಅಕ್ಷಯ್ಯಾಚಲಭೇದನಸಮರ್ಥಯಾ ತ್ವಯಾ ಮಮಾಂತಃಕರಣಸ್ಥಚಲಪಾಪನಿರ್ಭೇದನಂ ನ ಬಹುಮಂತವ್ಯಮಿತಿ ಭಾವಃ। ತತ್ಪಾಪಂ ಪರಿಹರೇತಿ ತಾತ್ಪರ್ಯಂ। – ವ್ಯಾ

೩. ಪರ್ಯಾಯೋಕ್ತಮಲಂಕಾರಃ। 'ಪರ್ಯಾಯೋಕ್ತಂ ತು ಗಮ್ಯಸ್ಯ ವಚೋ ಭಂಗ್ಯಂತರೇಣ ಯತ್'। -ವ್ಯಾ

**ಅಸ್ಥಿಸ್ಪರ್ಶನಮಾತ್ರತಃ ಕಿಮು ತವ ಶ್ರೇಯಃಪ್ರದತ್ವಂ ಗತಂ**
**ವಿಸ್ತೀರ್ಣಾ ನ ಕಿಮಚ್ಯುತಸ್ಯ ನಗರೀ ಮನ್ಮಾತ್ರದೇಶೋಜ್ಝಿತಾ ।**
**ತದ್ವರ್ತ್ಮಾಪಿ ಸಕಂಟಕಂ ಕಿಮು ಸತಾಂ ಸಂತಾನಜೋಽಹಂ ನ ಕಿಂ**
**ಕಸ್ಮಾದಂಬ ನ ಮೇ ಪ್ರದಾಸ್ಯಸಿ ಪದಂ ಗಂಗೇಽಖಿಲಾರ್ಥಪ್ರದಮ್ ॥ ೧೯ ॥**

ಅ: (ಹೇ) ಗಂಗೇ = ಎಲೈ ಗಂಗೆಯೇ !; ಅಸ್ಥಿಸ್ಪರ್ಶನಮಾತ್ರತಃ = ಸಗರಪುತ್ರರ ಅಸ್ತಿಗಳನ್ನು ಸ್ಪರ್ಶಿಸುವ ಮಾತ್ರಕ್ಕೇ; ತವ = ನಿನ್ನ; ಶ್ರೇಯಃಪ್ರದತ್ವಂ = ಶ್ರೇಯಸ್ಸನ್ನು ಕೊಡುವ ಶಕ್ತಿಯು; ಗತಂ ಕಿಮು = ಮುಗಿದು ಹೋಗಿಬಿಟ್ಟಿತೇನು !; ಅಚ್ಯುತಸ್ಯ = ಶ್ರೀಹರಿಯ; ನಗರೀ= ಪಟ್ಟಣವಾದ ವೈಕುಂಠವು; ವಿಸ್ತೀರ್ಣಾ ನ ಕಿಂ = ವಿಸ್ತಾರವಾಗಿಲ್ಲವೇನು? (ಅಥವಾ); ಮನ್ಮಾತ್ರದೇಶೋಜ್ಝಿತಾ ಕಿಂ = ನನಗೆ ಮಾತ್ರ ಸ್ಥಳವಿಲ್ಲವಾಗಿದೆಯೇ? (ಅಥವಾ); ತದ್ವರ್ತ್ಮ ಅಪಿ = ಆ ವೈಕುಂಠದ ಹಾದಿಯು; ಸಕಂಟಕಂ ಕಿಮು = ಕಂಟಕದಿಂದ ಕೂಡಿರುವುದೇನು?; ಅಹಂ = ನಾನು; ಸತಾಂ = ವೈಷ್ಣವರ; ಸಂತಾನಜಃ ನ ಕಿಂ? = ವಂಶದಲ್ಲಿ ಹುಟ್ಟಿಬಂದವನಲ್ಲವೇನು?;(ಹೇ) ಅಂಬ = ಅಮ್ಮ !; ಕಸ್ಮಾತ್ = ಯಾವ ಕಾರಣದಿಂದ; ಮೇ = ನನಗೆ; ಅಖಿಲಾರ್ಥಪ್ರದಂ = ಸಮಸ್ತಪುರುಷಾರ್ಥಗಳನ್ನು ನೀಡುವಂತಹ; ಪದಂ = ವೈಕುಂಠವನ್ನು; ನ ಪ್ರದಾಸ್ಯಸಿ? = ನೀನು ಕೊಡುತ್ತಿಲ್ಲ ?

ಎಲೈ ಗಂಗೆಯೇ ! ಸಗರಪುತ್ರರ ಅಸ್ಥಿಗಳನ್ನು ಸ್ಪರ್ಶಿಸುವ ಮಾತ್ರಕ್ಕೇ ನಿನ್ನ ಒಳಿತು ನೀಡುವ ಶಕ್ತಿ ತೀರಿತೆ? ಶ್ರೀಹರಿಯ ಪಟ್ಟಣವು ನನಗೆ ಮಾತ್ರ ಸ್ಥಳವಿಲ್ಲದಷ್ಟು ತುಂಬಿಹೋಗಿದೆಯೇ? ಅಥವಾ ಆ ವೈಕುಂಠದ ಹಾದಿಯಲ್ಲಿ ಕಂಟಕಗಳೇನಾದರು ಇರುವವೇ? ನಾನು ವೈಷ್ಣವರ ವಂಶದಲ್ಲಿ ಹುಟ್ಟಿಬಂದವನಲ್ಲವೆ? ಅಮ್ಮ ! ಅದೇತಕ್ಕೆ ನೀನು ನನಗೆ ಸಮಸ್ತಪುರುಷಾರ್ಥಗಳನ್ನು ನೀಡುವ ವೈಕುಂಠಲೋಕವನ್ನು ನೀಡುತ್ತಿಲ್ಲ?

ವಿ: ೧. ಸಗರಪುತ್ರರಿಗೆ ಕರುಣಿಸುವುದರೊಂದಿಗೆ ನಿನ್ನ ಶ್ರೇಯಃಪ್ರದಾನ ಸಾಮರ್ಥ್ಯವು ಮುಗಿದು ಹೋಯಿತೇ? ತುಂಬಾ ವಿಶಾಲವಾಗಿರುವ ವೈಕುಂಠಲೋಕದಲ್ಲಿ ನನಗೆ ಮಾತ್ರ ಸ್ಥಳವಿಲ್ಲವಾಗಿದೆಯೇ? ವೈಕುಂಠದ ಹಾದಿಯಲ್ಲಿ ನಿನಗೂ ನಿವಾರಿಸಲಾಗದ ಅಡಚಣೆ- ಗಳೇನಾದರೂ ಇವೆಯೇ? ಅಥವಾ ನಾನು ಮುಕ್ತನಾಗುವ ಅರ್ಹತೆಯುಳ್ಳ ವೈಷ್ಣವರ ವಂಶದಲ್ಲಿ ಹುಟ್ಟಿಬಂದಿಲ್ಲವೇ?.

೨. ನಿನಗೆ ಶ್ರೇಯಃಪ್ರದತ್ವ ಸಾಮರ್ಥ್ಯವು ಸಗರಪುತ್ರರ ಉದ್ಧಾರದಿಂದ ಲೋಕಕ್ಕೆ ತಿಳಿಯಿತೇ ಹೊರತು ನಿನಗೆ ಆ ಸಾಮರ್ಥ್ಯವು ಮುಗಿದಿಲ್ಲ; ಅಪರಿಮಿತ ವಿಸ್ತಾರದ [1]ವೈಕುಂಠದಲ್ಲಿ ನನಗೆ ಮಾತ್ರ ಸ್ಥಳವಿಲ್ಲವೆಂಬುದೂ ಸರಿಯಲ್ಲ; ಮೋಕ್ಷದ ಹಾದಿಯಲ್ಲಿ ಯೋಗ್ಯರಿಗೆ

---

೧. ತದನಾದಿಕಾಲಮಿತಮುಕ್ತಿರತೇರಗಣಯ್ಯಶಂಭುಮುಖಸಂಘತತೇಃ ।
ನಗರ್ಯೈರ್ಮಹಾಪುರಮಸಂಹತಿಮಲ್ಲಸತಿ ಪ್ರಭೋರಯಮಹೋ ಮಹಿಮಾ ॥
- ಸುಮಧ್ವವಿಜಯ (೧೧/೧೪)

ನಿವಾರಿಸಲಸಾಧ್ಯವಾದ ವಿಘ್ನಗಳು ಎಂದೂ ಇಲ್ಲವೇ ಇಲ್ಲ[1]. ನಾನಂತೂ ಪರಮ ವೈಷ್ಣವರ ಕುಲದಲ್ಲೇ ಜನಿಸಿದವನಾಗಿರುವೆನು; ಎಂದ ಮೇಲೆ ನೀನು ನನ್ನನ್ನು ಏಕೆ ಉದ್ಧರಿಸುತ್ತಿಲ್ಲ? ನನ್ನನ್ನು ಉದ್ಧರಿಸಲು ಈ ನಾಲ್ಕರಲ್ಲಿ ಒಂದು ಕಾರಣವೂ ಇಲ್ಲವಾದ್ದರಿಂದ ನನ್ನನ್ನು ತಪ್ಪದೇ ಉದ್ಧರಿಸು ಎಂದು ಭಾವ[2].

**ಹೇ ಗಂಗೇ ತವ ಕೋಮಲಾಂಘ್ರಿನಲಿನಂ ರಂಭೋರು ನೀವೀಲಸತ್ -**
**ಕಾಂಚೀದಾಮ ತನೂದರಂ ಘನಕುಚವ್ಯಾಕೀರ್ಣಹಾರಂ ವಪುಃ।**
**ಸನ್ಮುದ್ರಾಂಗದಕಂಕಣಾವೃತಕರಂ ಸ್ಮೇರಂ ಸ್ಫುರತ್ಕುಂಡಲಂ**
**ಸಾರಂಗಾಕ್ಷಿ ಜಲಾನ್ಯದಿಂದುರುಚಿ ಯೇ ಜಾನಂತಿ ತೇಽನ್ಯೇ ಜಲಾತ್ ॥ ೨೦ ॥**

ಅ: (ಹೇ) ಗಂಗೇ = ಎಲೈ ಗಂಗೆಯೇ; ಕೋಮಲಾಂಘ್ರಿನಲಿನಂ = ಮೃದುವಾದ ಚರಣಕಮಲಗಳುಳ್ಳ; ರಂಭೋರು = ಬಾಳೆಯ ಗಿಡದಂತಹ ತೊಡೆಗಳನ್ನುಳ್ಳ; ನೀವೀಲಸತ್ಕಾಂಚೀದಾಮ = (ಸೀರೆಯ)ನೆರಿಗೆಗಳ ಮೇಲೆ ಕಂಗೊಳಿಸುವ ಒಡ್ಯಾಣವುಳ್ಳ; ತನೂದರಂ = ತೆಳುವಾದ ಉದರವುಳ್ಳ; ಘನಕುಚವ್ಯಾಕೀರ್ಣಹಾರಂ = ನಿಬಿಡವಾದ ಸ್ತನಗಳ ಮೇಲೆ ಹರಡಿರುವ ಹಾರಗಳುಳ್ಳ; ಸನ್ಮುದ್ರಾಂಗದಕಂಕಣಾವೃತಕರಂ = ಉತ್ತಮವಾದ ಉಂಗುರ, ವಂಕಿ ಮತ್ತು ಕಂಕಣಗಳಿಂದ ಯುಕ್ತವಾದ ಕೈಗಳುಳ್ಳ; ಸ್ಮೇರಂ = ಕಿರುನಗೆಯನ್ನು ಸೂಸುತ್ತಿರುವ; ಸ್ಫುರತ್ಕುಂಡಲಂ = ಹೊಳೆಯುವ ಓಲೆಗಳುಳ್ಳ; ಸಾರಂಗಾಕ್ಷಿ = ಜಿಂಕೆಯ ಕಣ್ಣುಗಳ; ಇಂದುರುಚಿ = ಚಂದ್ರನಂತಹ ಕಾಂತಿಯ; ತವ = ನಿನ್ನ; ವಪುಃ = ಶರೀರವನ್ನು; ಜಲಾ(ಡಾ)ನ್ಯತ್ = ಜಡವಾದ ಜಲಕ್ಕಿಂತ ಭಿನ್ನವೆಂದು; ಯೇ = ಯಾವ (ಜನಾಃ = ಜನರು) ಜಾನಂತಿ = ಅರಿಯುವವರೋ; ತೇ = ಅವರು; ಜಲಾ(ಡಾ)ತ್ = ಮೂರ್ಖರಿಂದ; ಅನ್ಯೇ = ಬೇರೆಯಾಗಿರುವರು (ಮೂರ್ಖರಲ್ಲ ಪ್ರಾಜ್ಞರು ಎಂದರ್ಥ)

ಎಲೈ ಗಂಗೆಯೇ ! ಮೃದುವಾದ ಚರಣಕಮಲಗಳು, ಬಾಳೆಕಂಬದಂತಹ ತೊಡೆಗಳು, ಸೀರೆಯ ನೆರಿಗೆಗಳ ಮೇಲೆ ಕಂಗೊಳಿಸುವ ಒಡ್ಯಾಣ, ತೆಳುವಾದ ಉದರ, ನಿಬಿಡ ಸ್ತನಗಳ ಮೇಲೆ ಹರಡಿರುವ ಹಾರಗಳು, ಉತ್ತಮವಾದ ಉಂಗುರ, ವಂಕಿ ಕಂಕಣಗಳಿಂದ ಕೂಡಿದ ಕೈಗಳು, ಕಿರುನಗೆಸೂಸುವ ಮುಖ, ಹೊಳೆಯುವ ಓಲೆಗಳು, ಜಿಂಕೆಯ ಕಣ್ಣುಗಳು, ಇಂತಹ ನಿನ್ನ ಶರೀರವನ್ನು ಜಡವಾದ ಜಲಕ್ಕಿಂತ ಭಿನ್ನವೆಂದು ಅರಿಯುವ ಜನರು ಸರ್ವಥಾ ಜ್ಞಾನಿಗಳೇ ಸರಿ.

ವಿ: ೧. ಜಲವು ಜಡವಾದುದು; ಗಂಗಾಜಲಕ್ಕೆ ಅಭಿಮಾನಿದೇವತೆಯಾಗಿ ಗಂಗಾದೇವಿ ಇರುವಳು; ಆಕೆಯ ರೂಪವು ಕೋಮಲಪಾದಕಮಲಗಳನ್ನೂ, ಬಾಳೆಗಿಡದಂತಹ

---

೧. ಏಷ ನಿಷ್ಕಂಟಕಃ ಪಂಥಾ ಯತ್ರ ಸಂಪೂಜ್ಯತೇ ಹರಿಃ।
ಕುಪಥಂ ತಂ ವಿಜಾನೀಯಾತ್ ಗೋವಿಂದರಹಿತಾಗಮಮ್ ॥ -ಮಹಾಭಾರತ

೨. ಅತ್ರ ಸರ್ವತ್ರ ಕಿಂ ಶಬ್ದಃ ಆಕ್ಷೇಪೇ? ಇಷ್ಟಾಪ್ರದಾನಕಾರಣಮೇತಚ್ಚತುಷ್ಟಯಮಪಿನಾಸ್ತೀತ್ಯರ್ಥಃ।
-ವ್ಯಾಖ್ಯಾನ

ತೊಡೆಗಳನ್ನೂ, ಸೊಂಟದಲ್ಲಿ ಶೋಭಿಸುವ ಒಡ್ಯಾಣವನ್ನೂ, ತೆಳುವಾದ ಉದರವನ್ನೂ, ಪುಷ್ಟವಾದ ಸ್ತನಗಳ ಮೇಲೆ ಹರಡಿರುವ ಹಾರಗಳನ್ನೂ, ಉತ್ತಮವಾದ ಉಂಗುರ, ವಂಕಿ ಮತ್ತು ಬಳೆಗಳನ್ನೂ, ಕಿರುನಗೆಯನ್ನೂ, ಚಂದ್ರಕಾಂತಿಯನ್ನೂ ಹೊಂದಿ ಮನೋಹರವಾಗಿದೆ; ಹೀಗೆ ಜಡದಿಂದ ಬೇರೆಯಾಗಿದ್ದು, ಅದಕ್ಕೆ ಅಭಿಮಾನಿ ದೇವತೆಯಾಗಿ ಗಂಗೆಯು ಇರುವಳು ಎಂದು ತಿಳಿದವರು ಪ್ರಾಜ್ಞರು; ಈ ತತ್ತ್ವವನ್ನು ತಿಳಿಯದವರು ಮಾತ್ರ ನಿಶ್ಚಯವಾಗಿಯೂ ಮೂರ್ಖರೇ ಸರಿ ಎಂದು ಭಾವ[೧].

೨. ಬ್ರಹ್ಮಸೂತ್ರಗಳ ಅಭಿಮಾನಿವ್ಯಪದೇಶಾಧಿಕರಣ(೨/೧/೩)ದಲ್ಲಿ ಜಡವಾದ ಜಲ, ಮಣ್ಣು ಮೊದಲಾದವುಗಳಿಗೆ ಅಭಿಮಾನಿದೇವತೆಗಳಿದ್ದು, ಅವರು ಜಲಾದಿಗಳಿಂದ ಭಿನ್ನರಾಗಿದ್ದು ಅವುಗಳ ಮೇಲೆ ಹತೋಟಿ ಹೊಂದಿರುವರು ಎಂಬುದು ನಿರೂಪಿತವಾಗಿದೆ.

೩. ಉಪಲಕ್ಷಣಯಾ ಗೋದಾವರ್ಯಾದಿ ಇತರ ನದಿಗಳಿಗೂ ಸಹ ಅವುಗಳಿಂದ ಭಿನ್ನರಾದ ತತ್ತನ್ನಿಯಾಮಕರಾದ ದೇವತೆಗಳು ಇರುವರು ಎಂದೂ, ಅವರದ್ದೂ ಸಹ ಇದೇ ರೀತಿಯಲ್ಲಿ ಯಥಾಯೋಗ್ಯ ಮನೋಹರವಾದ ರೂಪವೆಂದೂ ತಿಳಿಯಬೇಕು. ಇದು ಗಂಗಾಪೂಜೆಗೆ ಉತ್ತಮವಾದ ಧ್ಯಾನಶ್ಲೋಕವೂ ಆಗಿದ್ದು; ಮಧ್ವಸಿದ್ಧಾಂತದ 'ಪಂಚಭೇದ'ಗಳಲ್ಲೊಂದಾದ ಜೀವಜಡಭೇದಕ್ಕೂ ಗಮಕವಾಗಿದೆ.

**ಶ್ರೀನಾರಾಯಣರಾಮಗೋಪತಿಹೃಷೀಕೇಶಾದಿರೂಪೋಽಕ್ಷಮ-**
**ಸ್ತ್ವಾಂ ಹಾತುಂ ಹರಿಸೂಕರಾಕೃತಿರಥ ಶ್ರೀದೇವಹೂತ್ಯಾತ್ಮಜಃ ।**
**ವೇಣೀಮಾಧವಬಿಂದುಮಾಧವತನುಸ್ತೀರೇ ವ್ಯಧತ್ತ ಸ್ಥಿತಿಂ**
**ಗಂಗೇ ಕಿಂ ಬಹುನಾಽಧುನಾಽಪಿ ವಸತಿ ತ್ವದ್ಭರ್ತೃಗೇಹೇಽಪ್ಯಸೌ ॥ ೨೧ ॥**

ಅ: (ಹೇ)ಗಂಗೇ = ಎಲೈ ಗಂಗೆಯೇ !; ಅಸೌ = ನಿನ್ನ ತಂದೆಯಾದ ಶ್ರೀನಾರಾಯಣನು; ತ್ವಾಂ = ನಿನ್ನನ್ನು; ಹಾತುಂ = ಬಿಟ್ಟಿರಲು; ಅಕ್ಷಮಃ (ಇವ) = ಅಸಮರ್ಥನೋ ಎಂಬಂತೆ; ಶ್ರೀನಾರಾಯಣರಾಮಗೋಪತಿಹೃಷೀಕೇಶಾದಿರೂಪಃ = ಶ್ರೀನಾರಾಯಣ, ರಾಮ, ಗೋಪಾಲಕೃಷ್ಣ, ಹೃಷೀಕೇಶ (ಅನಂತಶಯನ) ಮೊದಲಾದ ರೂಪಗಳನ್ನು ಹೊಂದಿದವನೂ; ಹರಿಸೂಕರಾಕೃತಿಃ = ಹರಿ, ವರಾಹಗಳೆಂಬ ರೂಪಗಳುಳ್ಳವನೂ; ಶ್ರೀದೇವಹೂತ್ಯಾತ್ಮಜಃ = ಶ್ರೀಕಪಿಲರೂಪನೂ; ಅಥ = ಬಳಿಕ; ವೇಣೀಮಾಧವಬಿಂದುಮಾಧವತನುಃ = ವೇಣೀಮಾಧವ ಮತ್ತು ಬಿಂದುಮಾಧವರೂಪನೂ,(ಆಗಿ); ತೀರೇ= ನಿನ್ನ ತೀರದಲ್ಲಿ; ಸ್ಥಿತಿಂ ವ್ಯಧತ್ತ = ನೆಲೆಸಿಬಿಟ್ಟಿರುವನು; ಕಿಂ ಬಹುನಾ? = ಹೆಚ್ಚೇನು?; ಅಧುನಾ ಅಪಿ = ಈಗಲೂ; ತ್ವದ್ಭರ್ತೃಗೇಹೇ = ನಿನ್ನ ಪತಿಯಾದ ಸಮುದ್ರದಲ್ಲೂ; ವಸತಿ = ವಾಸಿಸುತ್ತಿರುವನು.

ಗಂಗೆಯೇ ! ನಿನ್ನ ತಂದೆ ಶ್ರೀನಾರಾಯಣನು ನಿನ್ನನ್ನು ಬಿಟ್ಟಿರಲಾರದವನಂತೆ ಶ್ರೀನಾರಾಯಣ ರಾಮ ಗೋಪಾಲಕೃಷ್ಣ ಹೃಷೀಕೇಶ ಮೊದಲಾದ ರೂಪಗಳು,

---

೧. ನ ಹ್ಯಮ್ಮಯಾನಿ ತೀರ್ಥಾನಿ । – ಭಾಗವತ (೧೦/೮೪/೧೧)

ಹರಿ ವರಾಹಗಳೆಂಬ ರೂಪಗಳು, ಶ್ರೀಕಪಿಲರೂಪ, ವೇಣೀಮಾಧವ ಹಾಗೂ ಬಿಂದುಮಾಧವರೂಪ ಇವುಗಳಿಂದ ನಿನ್ನಲ್ಲಿ ನೆಲೆಸಿರುವನು. ಹೆಚ್ಚೇಕೆ? ಈಗಲೂ ನಿನ್ನ ಪತಿಯಾದ ಸಮುದ್ರರಾಜನಲ್ಲೂ ನೆಲೆಸಿರುವನು.

ವಿ: ೧. ಗಂಡನ ಮನೆಗೆ ಹೊರಟುನಿಂತ ಮಗಳನ್ನು ಬಿಟ್ಟಿರಲಾಗದ ತಂದೆಯು ಅವಳನ್ನು ಸ್ವಲ್ಪದೂರ ಹಿಂಬಾಲಿಸಿ ಕಳಿಹಿಸಿಕೊಡುವುದು ಲೋಕದಲ್ಲಿ ಕಂಡಿದೆ. ಆದರೆ ಗಂಗಾಜನಕನಾದ ಶ್ರೀಹರಿಯು ತನ್ನ ಮಗಳಾದ ಗಂಗೆಯು ಅಕೆಯ ಪತಿಯಾದ ಸಮುದ್ರನ ಬಳಿಗೆ ತೆರಳುವಾಗ ಅವಳನ್ನು ಬಿಟ್ಟಿರಲಾಗದವನೋ ಎಂಬಂತೆ, ಅವಳು ಹೋದಲ್ಲೆಲ್ಲಾ ತಾನೂ ಹೊರಟು ಕೊನೆಗೆ ಅವಳ ಪತಿಗೃಹವಾದ ಸಮುದ್ರದಲ್ಲೂ ನೆಲೆಸಿ ಬಿಟ್ಟಿರುವನು ಎಂದು ಉತ್ಪ್ರೇಕ್ಷಿಸಿರುವರು. ಮಹಾವಿಷ್ಣುವಿಗೆ ಗಂಗೆಯ ಮೇಲಿರುವ ವಿಶೇಷ ಪ್ರೀತಿಯೂ, ಅವನು ಸಮುದ್ರಾಂ-ತರ್ಯಾಮಿಯಾಗಿರುವನು ಎಂಬ ಶಾಸ್ತ್ರತತ್ತ್ವವೂ, ತುಂಬಾ ಅಪೂರ್ವರೀತಿಯಲ್ಲಿ ಇಲ್ಲಿ ನಿರೂಪಿತವಾಗಿದೆ. ಗಂಗೆಯಲ್ಲಿ ಸರ್ವತ್ರ ವಿಷ್ಣುವಿನ ವಿಶೇಷ ಸನ್ನಿಧಾನವುಂಟು ಎಂಬುದು ಮುಖ್ಯತಾತ್ಪರ್ಯ.

೨. ಶ್ರೀಹರಿಯು[೧] ಬದರಿಕಾಶ್ರಮದಲ್ಲಿ ಶ್ರೀನಾರಾಯಣ, ಪ್ರಯಾಗದಲ್ಲಿ ಶ್ರೀರಾಮ, ಅಲಕನಂದಾ - ಭಾಗೀರಥೀ ಸಂಗಮದಲ್ಲಿ ಗೋಪಾಲಕೃಷ್ಣ ತಪೋವನದಲ್ಲಿ ಹೃಷೀಕೇಶ[೨] (ಜಹ್ನುಕ್ಷೇತ್ರದಲ್ಲಿ ಅನಂತಶಯನ), ಹಸ್ತಿನಾಪುರದಲ್ಲಿ ಗೋವಿಂದ, ವ್ಯಾಸಾಶ್ರಮದಲ್ಲಿ ಶ್ರೀವೇದವ್ಯಾಸ, ಹರಿದ್ವಾರದಲ್ಲಿ 'ಹರಿ', ಸೂಕರಕ್ಷೇತ್ರದಲ್ಲಿ ಶ್ವೇತವರಾಹ, ಪ್ರಯಾಗದಲ್ಲಿ

---

೧. ಶ್ರೀನಾರಾಯಣನ ವಿಭಿನ್ನ ಸ್ಥಳಗಳಲ್ಲಿನ ವಿವಿಧರೂಪಗಳ ಈವಿವರಗಳನ್ನು ವ್ಯಾಖ್ಯಾನಕಾರರಾದ ಶ್ರೀನಾರಾಯಣಾಚಾರ್ಯರು ಒದಗಿಸಿರುವರು.

೨. ಹೃಷೀಕೇಶ ಕ್ಷೇತ್ರದಲ್ಲಿ ಹೃಷೀಕೇಶರೂಪದ ಶ್ರೀಹರಿಯಮೂರ್ತಿಯೂ ಸಹ ಇದೆ. ಈ ಮೂರ್ತಿಯಿಂದಾಗಿಯೇ ಅದಕ್ಕೆ 'ಹೃಷೀಕೇಶ' ಎಂಬ ಹೆಸರು. ಅದನ್ನು ಇಂದಿನವರು 'ಭರತಮಂದಿರ' ಎಂಬುದಾಗಿ ವ್ಯವಹರಿಸುವುದುಂಟು. ಆದರಿಂದಾಗಿ ಕೆಲವರು ಶ್ರೀರಾಮನ ತಮ್ಮನಾದ ಭರತನ ಮಂದಿರ ಎಂದು ತಪ್ಪಾಗಿ ತಿಳಿದಿರುವುದೂ ಉಂಟು. ವಾಸ್ತವವಾಗಿ ಇಲ್ಲಿರುವ ವಿಷ್ಣುವಿಗ್ರಹವಾದ ಹೃಷೀಕೇಶಮೂರ್ತಿಗೆ ಭರತ ಎನ್ನುವರು ಎಂಬುದು ದೇವಸ್ಥಾನದ ಹೊರವಲಯದಲ್ಲಿ ಬರೆಯಲ್ಪಟ್ಟಿರುವ ಪದ್ಮಪುರಾಣದ ಶ್ಲೋಕಗಳಿಂದ ತಿಳಿದುಬರುವುದು. ಈ ಹೃಷೀಕೇಶರೂಪವು ಕೇಶವಾದಿ ಚತುರ್ವಿಂಶತಿ ರೂಪಗಳಲ್ಲಿ ಒಂದಾದ ರೂಪವೇ ಆಗಿದೆ. ಶ್ರೀಮನ್ಮಧ್ವಾಚಾರ್ಯರು ಈ ಕ್ಷೇತ್ರವನ್ನು ಸಂದರ್ಶಿಸಿದ ವಿವರ ಶ್ರೀಸುಮಧ್ವವಿಜಯದಲ್ಲಿ ದಾಖಲಾಗಿದೆ. ಅಲ್ಲೂ ಹಾಗೂ ಅದರ ಭಾವಪ್ರಕಾಶಿಕೆಯಲ್ಲೂ ನಿರೂಪಿತವಾಗಿರುವ ವಿವರಗಳಿಂದ ತಿಳಿಯುವಂತೆ ಅಲ್ಲಿ ಶ್ರೀಮನ್ಮಧ್ವಾಚಾರ್ಯರು ಆಗಮಿಸಿದ್ದಾಗ ಶ್ರೀರುದ್ರದೇವರು ಒಬ್ಬ ಬ್ರಾಹ್ಮಣನ ರೂಪದಲ್ಲಿ ಶ್ರೀಮದಾಚಾರ್ಯರ ಮುಂದೆ ಕಾಣಿಸಿಕೊಂಡು ಗುರುಗಳಾದ ತಾವು ತಮ್ಮ ಭಿಕ್ಷೆಯನ್ನು ಸ್ವೀಕರಿಸಬೇಕು ಎಂದು ವಿಜ್ಞಾಪಿಸಿಕೊಂಡು ಶ್ರೀಮದಾಚಾರ್ಯರ ಸಮ್ಮತಿಪಡೆದು ಅದೃಶ್ಯರಾದರು. ಅದರ ಸಮೀಪದಲ್ಲಿದ್ದ ಶಿವನ ದೇವಸ್ಥಾನದ ಅರ್ಚಕರಿಗೆ ಸ್ವಪ್ನದಲ್ಲಿ ಸೂಚನೆ ನೀಡಿ ಶ್ರೀಮದಾಚಾರ್ಯರಿಗೆ ಭಿಕ್ಷೆ ಸಮರ್ಪಿಸಲು ಆದೇಶಿಸಿದರು. ಅದರಂತೆಯೇ ನಡೆದು ಶ್ರೀಮದಾಚಾರ್ಯರು ಭಿಕ್ಷೆ ಸ್ವೀಕರಿಸುವ ಮೂಲಕ ರುದ್ರದೇವರನ್ನು ಅನುಗ್ರಹಿಸಿದರು ಎಂಬ ವಿಶೇಷಾಂಶ ತಿಳಿಯುವುದು.

ವೇಣೀಮಾಧವ, ಕಾಶಿಯಲ್ಲಿ ಬಿಂದುಮಾಧವ, ಗಂಗಾಸಾಗರಸಂಗಮದಲ್ಲಿ ಉದಾರಮಾಧವ, ಹೀಗೆ ಗಂಗಾತೀರದ ವಿಭಿನ್ನ ಸ್ಥಳಗಳಲ್ಲಿ ತನ್ನ ಅನೇಕ ರೂಪಗಳಿಂದ ನೆಲೆಸಿರುವನು ಎಂಬುದು ಪ್ರಸಿದ್ಧವಾದ ವಿಚಾರ. ಈ ರೀತಿ ಗಂಗಾತೀರದುದ್ದಕ್ಕೂ ಶ್ರೀಹರಿಯು ನೆಲೆಸಿರುವುದು ಪತಿಗೃಹಕ್ಕೆ ತೆರಳುವ ತನ್ನ ಮಗಳಾದ ಗಂಗೆಯನ್ನು ಬಿಟ್ಟಿರಲಾಗದ ಆತನ ಕಾತರವೋ ಎಂಬಂತಿದೆ[೨] ಎಂದು ಶ್ರೀವಾದಿರಾಜರು ತುಂಬಾ ಹೃದಯಂಗಮವಾಗಿ ಉತ್ಪ್ರೇಕ್ಷಿಸಿರುವರು.

೩. ಗಂಗಾತೀರದ[೨] ಪ್ರತಿಯೊಂದು ಸ್ಥಳದಲ್ಲೂ ಒಂದಲ್ಲ ಒಂದು ರೂಪದಿಂದ ಶ್ರೀಹರಿಯು ನೆಲೆಸಿರುವುದು, ಒಂದು ಕಡೆ ಗಂಗಾನದಿಯ ಮೇಲಿನ ಆತನ ವಿಶೇಷ ಪ್ರೀತಿಗೂ, ಇನ್ನೊಂದು ಕಡೆ ಗಂಗಾನದಿಯು ಸರ್ವತ್ರ ಹೊಂದಿರುವ ಅವನ ವಿಶೇಷ ಸನ್ನಿಧಾನಕ್ಕೂ ದ್ಯೋತಕವಾಗಿದೆ.

೪. ಸಮುದ್ರದಲ್ಲಿ ಮಹಾವಿಷ್ಣುವು ಸದಾ [೩]ನೆಲೆಸಿರುವನು ಎಂಬುದು ವೇದಾದಿಶಾಸ್ತ್ರ- ಪ್ರಸಿದ್ಧವಾಗಿರುವ [೪]ಪ್ರಮೇಯ; ಶ್ರೀವಾದಿರಾಜರು ಇದನ್ನು ಸಹ ಶ್ರೀಹರಿಯು ಅದು ತನ್ನ ಮಗಳಾದ ಗಂಗೆಯ ಪತಿಗೃಹ ಎಂಬ ವಿಶೇಷಪ್ರೀತಿಯಿಂದಲೇ ಇರಬೇಕು ಎಂಬಂತ ಉತ್ಪ್ರೇಕ್ಷಿಸಿರುವರು.

೫. ಹೀಗೆ ತನ್ನ ಮಗಳಾದ ಗಂಗೆಯು ಇರುವಲ್ಲೆಲ್ಲ ಸನ್ನಿಹಿತನಾಗಿರುವ ಮಹಾವಿಷ್ಣುವಿನಂತಹ ತಂದೆಯು ಲೋಕದಲ್ಲಿ ಮತ್ತೊಬ್ಬನಿಲ್ಲ ಎಂಬುದನ್ನು ಗಮನಿಸಬೇಕು; ಶಾಸ್ತ್ರಗಂಗೆಯಲ್ಲಿ ಸರ್ವತ್ರ ಭಗವಂತನು ತುಂಬಿರುವನು ಎಂಬ ಸೂಚನೆಯೂ[೫] ಇಲ್ಲಿದೆ.

**ಗಂಗೇ ತ್ವಂ ಶುಭಸಂಚಯಸ್ಯ ಜಯದಾ[೬] ದೋಷಾತ್ಮನಾಂ ನ[೭] ತ್ವಿತಿ**
**ಜ್ಞಾತಂ ಯತ್ [೮]ಕ್ರತುಕೋಟ್ಯಲಭ್ಯಸುಕೃತಸ್ಯಾಭ್ಯುನ್ನತಿಂ ಯಚ್ಛಸಿ ।**

---

೧. ಸಮುದ್ರಾಖ್ಯಪತಿಗೃಹಂ ಯಾಂತೀಂ ತ್ವಾಂ ಪ್ರೇಮ್ಣಾ ತ್ಯಕ್ತುಮಸಮರ್ಥ ಇವ । - ವ್ಯಾ
೨. ಅನೇನ ಬದರಿಕಾಶ್ರಮಮಾರಭ್ಯ ಸಮುದ್ರಪರ್ಯಂತಂ ಗಂಗಾತೀರೇ ವಿಷ್ಣುಮೂರ್ತಯಃ ತಿಷ್ಠಂತೀತ್ಯುಕ್ತಂ ಭವತಿ । -ವ್ಯಾಖ್ಯಾನ
೩. ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।
ತಾ ಯದಸ್ಯಾಯನಂ ಪೂರ್ವಂ ತೇನ ನಾರಾಯಣಃ ಸ್ಮೃತಃ ॥ – ಮನುಸ್ಮೃತಿ (೧/೧೦)
೪. ಮಮ ಯೋನಿರಪ್ಸ್ವಂತಃ ಸಮುದ್ರೇ – ಅಂಭ್ರಣೀಸೂಕ್ತ
ಯಮಂತಃ ಸಮುದ್ರೇ ಕವಯೋ ವಯಂತಿ - -ಋಗ್ವೇದ
ಸಮುದ್ರೇ ಅಂತಃ ಕವಯೋ ವಿಚಕ್ಷತೇ । (ಋಗ್ವೇದ) -ಇತ್ಯಾದಿ
೫. ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥ -ಹರಿವಂಶ
೬. ಅನೇನ ಶುಭಸಂಚಯಸ್ಯ ಜಯದೇತ್ಯುಪಪಾದಿತಂ । ಶುಭಪದವಾಚ್ಯತ್ವಾತ್ ಸಜ್ಜನಾನಾಂ ಸುಕೃತಸ್ಯ ಚ । – ವ್ಯಾಖ್ಯಾನ
೭. ಅನೇನ ಪಾಪಾತ್ಮನಾಂ ನೇತ್ಯುಪಪಾದಿತಂ । ದುರ್ಜನಾನಾಂ ಪಾಪಸ್ಯ ಚ ದೋಷಸ್ವರೂಪತ್ವೇನ ದೋಷಾತ್ಮಪದವಾಚ್ಯತ್ವಾತ್ । ದರ್ಶನಸ್ನಾನಾದಿನಾ ಕ್ರತುಕೋಟಿಜನಿತಪುಣ್ಯದಾತ್ರೀ ಬ್ರಹ್ಮಹತ್ಯಾದಿ ಸಮಸ್ತಪಾಪಕ್ಷಯಕರೀತಿ ಭಾವಃ ॥ –ವ್ಯಾಖ್ಯಾನ
೮. ಕೃತಕೋಟಿಲಭ್ಯಸುಕೃತಸ್ಯಾಭ್ಯುನ್ನತಿಂ । –ಪಾಠಾಂತರ

**ದುಷ್ಕರ್ಮಾಣ್ಯಮಿತಾನಿ ದೂರಯಸಿ ಚ ತ್ವದ್ಗೇಯತೋಯೇಕ್ಷಯಾ**
**ಪಾನೇನಾಪ್ಯವಗಾಹನೇನ ಮನಸಾ ಧ್ಯಾನೇನ ಗಾನೇನ ವಾ ॥ ೨೨ ॥**

ಅ: (ಹೇ) ಗಂಗೇ = ಎಲೈ ಗಂಗೆಯೇ !; **ತ್ವಂ** = ನೀನು; **ಶುಭಸಂಚಯಸ್ಯ** = ಸುಜೀವಿಗಳ ಸಮುದಾಯಕ್ಕೆ; **ಜಯದಾ** = ಜಯಪ್ರದಳು; **ತು** = ಆದರೆ; **ನ ಪಾಪಾತ್ಮನಾನಂ**= ಪಾಪಿಗಳಿಗಲ್ಲ; **ಇತಿ** = ಎಂಬ ತತ್ತ್ವವು; **ಜ್ಞಾತಂ** = ತಿಳಿಯಿತು; **ಯತ್** = ಹೇಗೆಂದರೆ; (**ತ್ವಂ**= ನೀನು); **ತ್ವದ್ಗೇಯತೋಯೇಕ್ಷಯಾ** = ಸ್ತುತ್ಯರ್ಹವಾದ ನಿನ್ನ ಜಲದ ದರ್ಶನದಿಂದಲೂ; **ಅವಗಾಹನೇನ** = ಮೀಯುವುದರಿಂದಲೂ; **ಪಾನೇನ ವಾ** = ಅಥವಾ ಪಾನಮಾಡುವುದರಿಂದಲೂ ; **ಮನಸಾ** = ಮನಸ್ಸಿನಲ್ಲಿ; **ಧ್ಯಾನೇನ** = ಧ್ಯಾನಿಸುವುದರಿಂದಲೂ; **ಗಾನೇನ ಅಪಿ** = ಸ್ತುತಿಯಿಂದಲೂ ಸಹ; **ಕ್ರತುಕೋಟ್ಯಲಭ್ಯಸುಕೃತಸ್ಯ** = ಕೋಟಿಯಾಗಗಳಿಂದಲೂ ಲಭಿಸದ ಪುಣ್ಯದ; **ಅಭ್ಯುನ್ನತಿಂ** = ಅಭಿವೃದ್ಧಿಯನ್ನು; **ಯಚ್ಛಸಿ** = ಕೊಡುವಿ; **ಚ** = ಹಾಗೂ; **ಅಮಿತಾನಿ** = ಅಪರಿಮಿತವಾದ; **ದುಷ್ಕರ್ಮಾಣಿ** = ಪಾಪಗಳನ್ನು; **ದೂರಯಸಿ** = ದೂರಮಾಡುವಿ.

ಗಂಗೆಯೇ ! ನೀನು, ಸ್ತುತ್ಯವಾದ ನಿನ್ನ ಜಲದ ದರ್ಶನದಿಂದ, ಅಸಂಖ್ಯ ದುಷ್ಕರ್ಮಗಳನ್ನು ದೂರಮಾಡುವಿ; ಮನಸ್ಸಿನಲ್ಲಿ ಧ್ಯಾನಿಸುವುದರಿಂದ, ಸ್ತುತಿಸುವುದರಿಂದ, ಕೋಟಿಯಾಗಗಳಿಂದಲೂ ಲಭಿಸದ ಪುಣ್ಯವನ್ನು ನೀಡುವಿ. ಇದರಿಂದ ನೀನು ಸುಜೀವಿವೃಂದಕ್ಕೆ ಜಯಪ್ರದಳು, ಪಾಪಿಗಳಿಗಲ್ಲ ಎಂಬ ತತ್ತ್ವವು ತಿಳಿಯಿತು.

ವಿ: ೧. ಗಂಗೆಯು ತನ್ನ ಜಲದ ದರ್ಶನ, ಪಾನ, ಧ್ಯಾನ, ಸ್ತವನಗಳಿಂದ ಸುಜನರಿಗೆ ಕೋಟಿಯಾಗಗಳಿಂದ ಲಭಿಸುವಷ್ಟು ಪುಣ್ಯವನ್ನು ಉಂಟುಮಾಡುವಳು; ಮತ್ತು ಅಪಾರ-ಪಾಪರಾಶಿಯನ್ನು ದೂರಮಾಡುವಳು; ಇದು ಆಕೆಯು ಸುಜೀವಿಗಳ ಗುಂಪಿಗೆ ಜಯಪ್ರದಳು, ಪಾಪಿಗಳಿಗಲ್ಲ ಎಂಬ ತತ್ತ್ವಕ್ಕೆ ದ್ಯೋತಕವಾಗಿದೆ ಎಂದು ಭಾವ[1].

೨. ಗಂಗೆಯು ಕಲಿಯುಗದಲ್ಲಿ ವಿಶೇಷವಾಗಿ ಪವಿತ್ರವಾದ ನದಿ, ಮನುಷ್ಯನ ಅಸ್ಥಿಗೆ ಎಲ್ಲಿಯವರೆಗೂ ಗಂಗಾಜಲದ ಸಂಪರ್ಕವು ಇರುವುದೋ ಅಲ್ಲಿಯವರೆಗೂ ಆ ಮನುಷ್ಯ ಸ್ವರ್ಗಲೋಕದಲ್ಲಿ ಮಾನ್ಯನಾಗುವನು ಎಂದು ಮಹಾಭಾರತದಲ್ಲಿ ಗಂಗೆಯ ಮಾಹಾತ್ಮ್ಯ ವರ್ಣಿತವಾಗಿದೆ[2].

---

ಕ್ರತುಕೋಟಿಭಿಃ ಪ್ರಾಪ್ಯಪುಣ್ಯಸ್ಯ। ಎಂದೂ, ದರ್ಶನಸ್ನಾನಾದಿನಾ ಕ್ರತುಕೋಟಿಜನಿತಪುಣ್ಯದಾತ್ರೀ। ಎಂದೂ ವ್ಯಾಖ್ಯಾನಕಾರರು ಬರೆದಿರುವುದರಿಂದ, 'ಕ್ರತುಕೋಟಿಲಭ್ಯ..' ಎಂಬ ಪಾಠವೇ ವ್ಯಾಖ್ಯಾನ ಸಂಮತವಾದ ಪಾಠ.

೧. ಗಂಗಾ ಗಂಗೇತಿ ಯೋ ಬ್ರೂಯಾದ್ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯಃ ವಿಷ್ಣುಲೋಕಂ ಸ ಗಚ್ಛತಿ ॥ – ಪದ್ಮಪುರಾಣ

೨. ಸರ್ವಂ ಕೃತಯುಗೇ ಪುಣ್ಯಂ ತ್ರೇತಾಯಾಂ ಪುಷ್ಕರಂ ಸ್ಮೃತಮ್ ।
ದ್ವಾಪರೇಽಪಿ ಕುರುಕ್ಷೇತ್ರಂ ಗಂಗಾ ಕಲಿಯುಗೇ ಸ್ಮೃತಾ ॥

## ಕಾಶೀ(ಕ್ಷೇತ್ರ)

ರೂಪ್ಯಾಚಲೇ ಕೃತಪದೋಽಪಿ ಗಿರೀಂದ್ರಪುತ್ರೀ -
ಪ್ರೇಮಪ್ರವಾಹಭರಮಾನಿತಮಾನಸೋಽಪಿ।
ಕಾಶೀಮಸೀವರಣಯೋಃ ಪುರಮಂತರಾಲೇ
ಪ್ರೇತಾವೃತಾಮಪಿ ಸತೀಪತಿರಧ್ಯತಿಷ್ಠತ್ ॥ ೨೩ ॥

ಅ: ರೂಪ್ಯಾಚಲೇ = ರಜತಾದ್ರಿ(ಕೈಲಾಸ)ಯಲ್ಲಿ; ಕೃತಪದಃ ಅಪಿ = ನೆಲೆಸಿದವನಾದರೂ ಸಹ; ಗಿರೀಂದ್ರಪುತ್ರೀಪ್ರೇಮಪ್ರವಾಹಭರಮಾನಿತಮಾನಸಃ ಅಪಿ = ಗಿರಿರಾಜನೆನ್ನಿಸಿದ ಹಿಮಾಲಯನ ಮಗಳಾದ ಪಾರ್ವತಿಯಿಂದ ಪ್ರೇಮಾತಿಶಯದಿಂದ ಸತ್ಕೃತ ಮನಸ್ಸುಳ್ಳವನಾದರೂ; ಸತೀಪತಿಃ = ದಾಕ್ಷಾಯಣೀ ಪತಿಯಾದ ಶಿವನು; ಅಸೀ-ವರಣಯೋಃ = ಅಸೀ ಮತ್ತು ವರಣಾ ಎಂಬ ಎರಡು ನದಿಗಳ; ಅಂತರಾಲೇ = ಮಧ್ಯದಲ್ಲಿರುವ; ಕಾಶೀಂ = ಕಾಶೀ ಎಂಬ; ಪುರಂ = ಪಟ್ಟಣವನ್ನು; ಪ್ರೇತಾವೃತಾಂ ಅಪಿ = ಅದು ಪ್ರೇತಗಳಿಂದ ತುಂಬಿದ ಸ್ಥಳವಾದರೂ; ಅಲ್ಲಿ ಅಧ್ಯತಿಷ್ಠತ್ = ವಾಸಿಸುತ್ತಿರುವನು.

ಶಿವನು ರಜತಾದ್ರಿಯಲ್ಲಿ ನೆಲೆಸಿದವನು; ಪಾರ್ವತಿಯು ಪ್ರೇಮಾತಿಶಯದಿಂದ ಪೂಜಿಸುವ ಮನಸ್ಸಿನವನು; ದಾಕ್ಷಾಯಣಿಯೆನ್ನಿಸಿದ ಸತಿದೇವಿಯ ಪತಿಯಾದವನು; ಆದರೂ 'ಅಸೀ ಮತ್ತು ವರಣಾ' ಎಂಬ ಎರಡು ನದಿಗಳ ನಡುವಿನ 'ಕಾಶೀ' ಎಂಬ ಪಟ್ಟಣವು ಅದು ಪ್ರೇತಗಳಿಂದ ತುಂಬಿದ ಸ್ಥಳವಾದರೂ ಅಲ್ಲಿ ನೆಲೆಸಿ-ಬಿಟ್ಟಿರುವನು.

ವಿ : ೧. 'ಅಯೋಧ್ಯಾ, ಮಥುರಾ, ಮಾಯಾ, ಕಾಶೀ...' ಎಂಬುದಾಗಿ ವರ್ಣಿತವಾಗಿರುವ ಮೋಕ್ಷದಾಯಕ ಸಪ್ತಮಹಾಕ್ಷೇತ್ರಗಳಲ್ಲಿ ಒಂದು ಎಂಬುದು ಈ'ಕಾಶೀ' ಕ್ಷೇತ್ರದ ಹಿರಿಮೆ. [೧]ವೇದಗಳಲ್ಲೂ[೨] ಉಲ್ಲೇಖಿಸಲ್ಪಟ್ಟಿರುವ[೩] ಜಗತ್ತಿನ[೪] ಅತ್ಯಂತ ಪ್ರಾಚೀನನಗರಗಳಲ್ಲೊಂದು

---

ಯಾವದಸ್ಥಿ ಮನುಷ್ಯಸ್ಯ ಗಂಗಾಯಾಃ ಸ್ಪೃಶತೇ ಜಲಮ್।
ತಾವತ್ ಸ ಪುರುಷೋ ರಾಜನ್ ಸ್ವರ್ಗಲೋಕೇ ಮಹೀಯತೇ ॥
- ಮಹಾಭಾರತ (ವನಪರ್ವ ೮೫/೯೦,೯೪)

೧. 'ಅಪ ಇವ ಕಾಶಿನಾ ಸಂಗೃಭೀತಾಃ ಮಘವನ್ ಕಾಶಿರಿತ್ತೇ' -ಋಗ್ವೇದ

೨. ಯಜ್ಞಃ ಕಾಶಿನಾಂ ಭರತಃ ಸಾತ್ವತಾಮಿವ -ಶತಪಥಬ್ರಾಹ್ಮಣ

೩. ಭೂಮಿಷ್ಠಾಽಪಿ ನ ಯತ್ರ ಭೂಸ್ತ್ರಿದಿವತೋಽಪ್ಯುಚ್ಚೈರಧಃಸ್ಥಾಽಪಿ ಯಾ
ಯಾ ಬದ್ಧಾ ಭುವಿ ಮುಕ್ತಿದಾ ಸ್ಯುರಮೃತಾ ಯಸ್ಯಾಂ ಮೃತಾ ಜಂತವಃ।
ಯಾ ನಿತ್ಯಂ ತ್ರಿಜಗತ್ಪವಿತ್ರತಟಿನೀತೀರೇ ಸುರೈಃ ಸೇವ್ಯತೇ
ಸಾ ಕಾಶೀ ತ್ರಿಪುರಾರಿರಾಜನಗರೀ ಪಾಯಾದಪಾಯಾಜ್ಜಗತ್ ॥ - ಸ್ಕಂದಪುರಾಣ (ಕಾಶೀಖಂಡ)

೪. ವಾರಾಣಸೀ ತು ಭುವನತ್ರಯಸಾರಭೂತಾ ರಮ್ಯಾ ನೃಣಾಂ ಸುಗತಿದಾ ಕಿಲ ಸಾರಭೂತಾ।
ಅತ್ರಾಗತಾ ವಿವಿಧದುಷ್ಕೃತಕಾರಿಣೋಽಪಿ ಪಾಪಕ್ಷಯೇ ವಿರಜಸಃ ಸಮನಃಪ್ರಕಾಶಾಃ ॥ -ನಾರದೀಯಪುರಾಣ

ಎಂಬುದು ಇದರ ಮತ್ತೊಂದು ವೈಶಿಷ್ಟ್ಯ. ಯುಗಯುಗಗಳು ಕಳೆದರೂ ಇಂದೂ ನಗರವೆನ್ನಿಸಿ ಮಾನ್ಯವಾಗಿರುವ ಅತ್ಯಂತ ಪ್ರಾಚೀನ ಪಟ್ಟಣ ಎಂಬುದು ಇದರ ಅಸಾಧಾರಣವಾದ ಮಹತ್ತ್ವ. 'ವಿಶ್ವನಾಥ'ನೆಂಬ ಶಿವನಿಂದಾಗಿ 'ಶೈವಕ್ಷೇತ್ರ'ವೆಂದು ಸಾಮಾನ್ಯರು ತಿಳಿದಿದ್ದರೂ, 'ಬಿಂದು-ಮಾಧವ' ಮತ್ತು 'ವಿಷ್ಣುಪದೀ ಗಂಗೆ'ಯಿಂದಾಗಿ ಇದು ಮೂಲತಃ ವೈಷ್ಣವಕ್ಷೇತ್ರವೇ ಸರಿ. ರುದ್ರದೇವರೂ ಪರಮವೈಷ್ಣವರು ಎಂಬುದನ್ನು ಗಮನಿಸಬೇಕು(ವೈಷ್ಣವಾನಾಂ ಯಥಾ ಶಂಭುಃ । – ಭಾಗವತ ೧೨/೧೩/೧೬); ರುದ್ರದೇವರ ಕೈಗೆ ಅಂಟಿಕೊಂಡಿದ್ದ ಬ್ರಹ್ಮದೇವರ ಐದನೆಯ ತಲೆಯಿಂದ ಅವರಿಗೆ ಬಿಡುಗಡೆ ದೊರೆತ ಕ್ಷೇತ್ರವೆಂಬುದಾಗಿ[೧] ಇದನ್ನು ಪುರಾಣಗಳು ಕೊಂಡಾಡಿವೆ. ರಾಮಾಯಣ ಮಹಾಭಾರತಗಳ ಕಾಲದಲ್ಲೂ ಒಂದು ಪ್ರಮುಖ ರಾಜ್ಯವೆನ್ನಿಸಿದ್ದು ಇದರ ಐತಿಹಾಸಿಕ ಮಹತ್ತ್ವಕ್ಕೆ ದ್ಯೋತಕ. ವರಣಾ ಮತ್ತು ಅಸೀ ಎಂಬ ಎರಡು ನದಿಗಳ ಮಧ್ಯೆ ಇರುವ ಪಟ್ಟಣ ಎಂಬುದಕ್ಕಾಗಿಯೇ 'ವಾರಣಾಸೀ' ಎಂದು ಇದು ಪ್ರಸಿದ್ಧವಾಗಿದೆ. ಅವಿಮುಕ್ತ ಆನಂದಕಾನನ, ಮುಕ್ತಿಪುರೀ ಮೊದಲಾದ ನಾಮಾಂತರಗಳೂ ಇದಕ್ಕೆ ಉಂಟು.

೨. ಅಂತ್ಯಕಾಲದಲ್ಲಿ ಕಾಶೀವಾಸವು ತುಂಬಾ ಪುಣ್ಯಕರವೆಂದೂ, ಕಾಶಿಯಲ್ಲಿ ಸಾಯುವುದು ಮುಕ್ತಿಗೆ [೨]ಸಾಧನವೆಂದೂ, 'ನಾನು ಕಾಶಿಗೆ ಹೋಗುವೆ, ಅಲ್ಲೇ ನೆಲಸುವೆ' ಎಂದು ಸತತ ನುಡಿಯುವವನಿಗೂ ಕಾಶೀವಾಸಫಲವು ಲಭಿಸುವುದೆಂದೂ ಪುರಾಣಗಳು ಸಾರಿವೆ.[೩] ಇಲ್ಲಿ ಗಂಗೆಯು ಉತ್ತರವಾಹಿನಿಯಾಗಿರುವುದು ಇದರ ಮತ್ತೊಂದು ವೈಶಿಷ್ಟ್ಯ.

೩. ವಿದ್ವತ್ತಿಗೆ ಮುಂಚಿನಿಂದಲೂ ಹೆಸರಾದ ಈ ಕ್ಷೇತ್ರವು ಇಂದಿಗೂ ಆ ಪ್ರಶಸ್ತಿಯನ್ನು ಉಳಿಸಿಕೊಂಡಿದೆ ಎಂಬುದು ಗಮನಾರ್ಹ. ಇಂತಹ ಅಪೂರ್ವ ವಿದ್ವತ್ಕೇಂದ್ರವನ್ನು ಶ್ರೀಮದಾಚಾರ್ಯರು ತಮ್ಮ ದ್ವಿತೀಯಬದರೀಯಾತ್ರಾ ಸಂದರ್ಭದಲ್ಲಿ ಸಂದರ್ಶಿಸಿ ಪಾವನವನ್ನಾಗಿಸಿದ ವಿವರ ಸುಮಧ್ವವಿಜಯದಲ್ಲಿ ಬಂದಿದೆ(೧೦/೪೦). ಅಲ್ಲಿ 'ಅಮರಾವತಿ' (ಇಂದ್ರಪುರೀ) ಎಂಬ ಅದ್ವೈತಿಪಂಡಿತನನ್ನು ಅವರು ಪರಾಭವಗೊಳಿಸಿದ ವಿವರವೂ ಅಲ್ಲಿದೆ(೧೧/೪೨), ಸಾಕ್ಷಾತ್ ಭಾರತೀದೇವಿಯು ಇಲ್ಲಿಯ ಒಬ್ಬ ಕಾಶೀರಾಜನಿಗೆ ಮಗಳಾಗಿ 'ಕಾಳೀ' ಎಂಬ ಹೆಸರಿನಿಂದ ಅವತರಿಸಿದ್ದಳು, ಅವರ ಸ್ವಯಂವರ ನಡೆದು ಅವರು 'ಭೀಮಪತ್ನಿ' ಎನ್ನಿಸಿದ್ದೂ ಸಹ ಇಲ್ಲಿಯೇ; 'ಎಂದೂ ಗಂಗಾಸ್ನಾನ ಮಾಡಲಾರೆ' ಎಂದು ಸಂಕಲ್ಪಿಸಿದ್ದ ಜರಾಸಂಧನನ್ನು ಶ್ರೀಭೀಮಸೇನ ಎತ್ತಿ ಗಂಗಾನದಿಯಲ್ಲಿ ಎಸೆದಿದ್ದು ಸಹ ಇಲ್ಲಿಯೇ.

೪. ಈಶ್ವರನ ಮುಖ್ಯ ನೆಲೆಯಾದ ಕೈಲಾಸವು 'ರಜತಾದ್ರಿ' ಎನ್ನಿಸಿದ ಉತ್ತಮ ಕ್ಷೇತ್ರ. ಅಲ್ಲಿ ಅವರಿಗೆ ಪಾರ್ವತೀದೇವಿಯ ತುಂಬ ಪ್ರೇಮದ ಆತಿಥ್ಯ ಉಂಟು. ಕಾಶಿಯು ಅಸೀ ಮತ್ತು ವರಣಾ ಎಂಬ ಎರಡು ನದಿಗಳ ಮಧ್ಯ ಇರುವ ಪಟ್ಟಣ, ಪ್ರೇತಕಾರ್ಯಗಳಿಗೆ ಪ್ರಸಿದ್ಧವಾದ್ದರಿಂದ

---

೧. ಈಶ್ವರನಿಗೆ ಬ್ರಹ್ಮಕಪಾಲದಿಂದ ಬಿಡುಗಡೆ ದೊರೆತ ಸ್ಥಳವು 'ಕಪಾಲಮೋಚನತೀರ್ಥ'ವೆಂಬುದಾಗಿ ಪ್ರಸಿದ್ಧವಾಗಿದೆ..

೨. ಕಾಶ್ಯಾಂ ತು ಮರಣಾನ್ಮುಕ್ತಿಃ ।

೩. 'ಅಹಂ ಕಾಶೀಂ ಗಮಿಷ್ಯಾಮಿ ತತ್ರೈವ ನಿವಸಾಮ್ಯಹಮ್ ।
ಇತಿ ಬ್ರುವಾಣಃ ಸತತಂ ಕಾಶೀವಾಸಫಲಂ ಲಭೇತ್ ॥ -ಸ್ಕಂದಪುರಾಣ

ಪ್ರೇತಗಳಿಂದ ತುಂಬಿ ಮಹಾಸ್ಮಶಾನವೆನ್ನಿಸಿರುವ ಪಟ್ಟಣ, ಹೀಗೆ ಜುಗುಪ್ಸಿತವಾಗಿದ್ದರೂ, ಕಾಶಿಯಲ್ಲಿ ಕೈಲಾಸಪತಿಯಾದ ಶಿವನು ಬಂದು ನೆಲೆಸಿರುವುದು, ಅದು ಬಹುತರ ಪುಣ್ಯಪ್ರದವಾಗಿರುವ ಕ್ಷೇತ್ರವೆಂಬುದಕ್ಕೆ ದ್ಯೋತಕವಾಗಿದೆ(ದ್ವಾರಾವತೀಂ ಸಕಲಭಾಗ್ಯವತೀಮುಪೇಕ್ಷ್ಯ - ೧/೬ ಎಂಬ ಶ್ಲೋಕದ ಛಾಯೆಯೂ ಹೀಗೆಯೇ ಇದೆ) ಎಂದು ಭಾವ.

## ಬಿಂದು ಮಾಧವ (ಕಾಶೀಕ್ಷೇತ್ರ)

**ಸ ಬಿಂದುಮಾಧವಃ ಪಾಯಾದ್ವಿಭೋರ್ಯಸ್ಯ ನಿರೀಕ್ಷಣಾತ್ ।**
**ಅಪಾರೋऽಪಿ ಹಿ ಸಂಸಾರಸಿಂಧುರ್ಬಿಂದುತ್ವಮಶ್ನುತೇ ॥ ೨೪ ॥**

ಅ: ವಿಭೋಃ = ಸಮರ್ಥನಾದ; ಯಸ್ಯ = ಯಾರ; ನಿರೀಕ್ಷಣಾತ್ = (ನೋಟ)ದಿಂದ; ಸಂಸಾರಸಿಂಧುಃ = ಸಂಸಾರಸಮುದ್ರವು; ಅಪಾರಃ ಅಪಿ = ಪಾರವಿಲ್ಲದಾದ್ದರೂ; ಬಿಂದುತ್ವಂ = ಬಿಂದು ಮಾತ್ರ ಪರಿಮಾಣವನ್ನು; ಅಶ್ನುತೇ ಹಿ = ನಿಶ್ಚಿತವಾಗಿ ಹೊಂದುವುದೋ; ಸಃ = ಆ; ಬಿಂದುಮಾಧವಃ = ಬಿಂದುಮಾಧವನೆಂಬ ಶ್ರೀಹರಿಯು; ಪಾಯಾತ್ = (ನಮ್ಮನ್ನು) ಪಾಲಿಸಲಿ.

ಯಾರ ಸಮರ್ಥನೋಟದಿಂದ ಅಪಾರವಾದ ಸಂಸಾರಸಮುದ್ರವು ಒಂದು ಹನಿಯಷ್ಟಾಗುವುದೋ, ಅಂತಹ ಬಿಂದುಮಾಧವನಾದ ಶ್ರೀಹರಿಯು ನಮ್ಮನ್ನು ಪಾಲಿಸಲಿ.

ವಿ: ೧. ಕಾಶಿಯ ಪ್ರಧಾನ ದೇವತೆ ಬಿಂದುಮಾಧವನೆಂಬ ಶ್ರೀಹರಿ. 'ಬಿಂದು' ಎಂಬ ಮುನಿಯನ್ನು [೧]ಅನುಗ್ರಹಿಸಿದ ಕಾರಣಕ್ಕಾಗಿ'ಬಿಂದುಮಾಧವ'ನೆಂಬ ಹೆಸರಿನಿಂದ ಇಲ್ಲಿಯ ಶ್ರೀಹರಿಮೂರ್ತಿಯು ಪ್ರಸಿದ್ಧವಾಗಿದೆ. ಸಂಸಾರಸಿಂಧುವನ್ನು ತನ್ನ ದರ್ಶನಮಾತ್ರದಿಂದಲೇ ಬಿಂದುವಿನಷ್ಟು ಚಿಕ್ಕದಾಗಿಸಿ ಭಕ್ತರನ್ನು ಪಾಲಿಸುವನು ಎಂಬ ಕಾರಣಕ್ಕಾಗಿಯೂ ಆ ಹೆಸರು ಉಚಿತವಾಗಿದೆ ಎಂದು ಶ್ರೀವಾದಿರಾಜರು ಉತ್ಪ್ರೇಕ್ಷಿಸಿರುವರು. ಸಂಸಾರದಿಂದ ಅನಾಯಾಸವಾಗಿ ಪಾರುಮಾಡುವ ಬಿಂದುಮಾಧವನು ನಮ್ಮನ್ನು ಪಾಲಿಸಲಿ ಎಂದು ಭಾವ.

೨. ಬಿಂದುಮಾಧವ ಮೂರ್ತಿಯ ದರ್ಶನವು ಭವತಾರಕ; ಅವನ ಕೃಪಾದೃಷ್ಟಿಗೆ ಪಾತ್ರರಾದವರಿಗೆ ಸಂಸಾರದ ಭಯ ಎಂದೂ ಇರುವುದೇ ಇಲ್ಲ[೨] ಎಂದೂ ಭಾವ.

೩. ಈ ಮೊದಲು ಸಿದ್ಧಪುರಿಯಲ್ಲಿಯ 'ಬಿಂದುಸರೋವರ'ವನ್ನು 'ಪುಣ್ಯಂ ಬಿಂದು ಸರೋ ಯತ್ರ ಬಿಂದು ಮಾತ್ರಂ ಸರಃಸಮಂ' (೧/೯೮) ಎಂದು ವರ್ಣಿಸಿರುವುದನ್ನು ಇಲ್ಲಿಗೂ[೩] ಅನ್ವಯ ಮಾಡಿಕೊಂಡರೆ 'ಬಿಂದುವಿನಷ್ಟು ಪುಣ್ಯವನ್ನು ಅನಂತಮಡಿ ಮಾಡುವ ದೇವನಾದ್ದರಿಂದಲೇ

---

೧. ಬಿಂದ್ವಾಖ್ಯಮುನೇಃ ಪ್ರಸನ್ನತ್ವಾತ್ ಬಿಂದುಮಾಧವಸಂಜ್ಞಿತಸ್ಯ ಪ್ರಕಾರಾಂತರೇಣ ವರ್ಣನಾತ್। ಉತ್ಪ್ರೇಕ್ಷಾಲಂಕಾರಃ। -ವ್ಯಾಖ್ಯಾನ

೨. ನಿಖಿಲಾಘೌಘವಿನಾಶನಪರಸೌಖ್ಯಪ್ರದದೃಷ್ಟೇ। -ದ್ವಾದಶಸ್ತೋತ್ರ

೩. ಅಕ್ಷಯಂ ಕರ್ಮ ಯಸ್ಮಿನ್ ಪರೇ ಸ್ವರ್ಪಿತಮ್ ॥ – ದ್ವಾದಶಸ್ತೋತ್ರ

ಇವನಿಗೆ[1] ಬಿಂದುಮಾಧವ' ಎಂಬ ಹೆಸರು ಉಚಿತವಾಗಿದೆ ಎಂದೂ ಅರ್ಥಮಾಡಿಕೊಳ್ಳಬಹುದು. ಅದರಂತೆ ಇಲ್ಲಿಯ ವರ್ಣನೆಯನ್ನು ಅಲ್ಲಿಗೆ ಅನ್ವಯಿಸಿಕೊಂಡರೆ 'ಬಿಂದುಸರೋವರದಲ್ಲಿ ಮಿಂದವರಿಗೆ ಸಂಸಾರಸಿಂಧುವೂ ಬಿಂದುಮಾತ್ರವಾಗುವುದು' ಎಂಬ ಅರ್ಥವನ್ನು ಪಡೆಯಬಹುದು.

## ವಿಶ್ವನಾಥ (ಕಾಶೀಕ್ಷೇತ್ರ)

**ದೋಷಂ ಮೇ ಹರ ಹೇ ಹರೇತಿ ಪತಿತಂ ಪಾದೇ ನಖಚ್ಛದ್ಮನಾ**
**ನಿರ್ದೋಷಂ ಮೃಗಬಿಂಬಮೇಣಹರಣಾತ್ ಕೃತ್ವೇವ ಮೂರ್ಧ್ನಿ ನ್ಯಧಾತ್ ।**
**ಗಂಗಾತೀರನಿವಾಸತಃ ಶುಚಿತಮಂ ಕುರ್ವನ್ನಿವಾಹೀಶ್ವರಾ-**
**ಸಂಗಾತ್ ತತ್ ಪ್ರಥಯನ್ನಿವ ಪ್ರತಿದಿನಂ ಪಾಯಾತ್ ಸ ಮೃತ್ಯುಂಜಯಃ ೨೫**

ಅ: (ಯಃ = ಯಾರು) ಹೇ ಹರ ! = ಎಲೈ ರುದ್ರದೇವರೇ !; ಮೇ = ನನ್ನ; **ದೋಷಂ** = ದೋಷ(ಕಳಂಕ)ವನ್ನು; ಹರ = ಪರಿಹರಿಸು; ಇತಿ = ಎಂಬುದಾಗಿ ನಖಚ್ಛದ್ಮನನಾ= ಉಗುರಿನ ರೂಪದಲ್ಲಿ; ಪಾದೇ = ತನ್ನ ಪಾದದ ಮೇಲೆ; ಪತಿತಂ = ಬಿದ್ದ; ಮೃಗಬಿಂಬಂ - 'ಏಣಾಂಕ'ನಾದ ಚಂದ್ರನನ್ನು; ಏಣಹರಾಣತ್ = ಜಿಂಕೆಯನ್ನು (ತನ್ನ ಕೈಯಲ್ಲಿ ಹಿಡಿದುಕೊಳ್ಳುವ ಮೂಲಕ) ಬಿಡಿಸಿ; ನಿರ್ದೋಷಂ = ಕಳಂಕರಹಿತನನ್ನಾಗಿ; ಕೃತ್ವಾ ಇವ = ಮಾಡಿಯೋ ಎಂಬಂತೆ; ಗಂಗಾತೀರನಿವಾಸತಃ = (ತನ್ನ ಶಿರಸ್ಸಿನಲ್ಲಿರುವ) ಗಂಗೆಯ ಬಳಿಯಲ್ಲಿ ಇರಿಸುವ ಮೂಲಕ; ಶುಚಿತಮಂ = ಅತ್ಯಂತ ಶುದ್ಧನನ್ನಾಗಿ; ಕುರ್ವನ್ ಇವ = ಮಾಡುತ್ತಿರುವನೋ ಎಂಬಂತೆ; ಅಹೀಶ್ವರಾಸಂಗಾತ್ = ಶ್ರೇಷ್ಠ ಸರ್ಪಗಳ ಸ್ಪರ್ಶದ ಮೂಲಕ; ತತ್ = ಅದನ್ನು; ಪ್ರಥಯನ್ ಇವ = ಸಾರುತ್ತಿರುವನೋ ಎಂಬಂತೆ; **ಮೂರ್ಧ್ನಿ** = ತನ್ನ ತಲೆಯ ಮೇಲೆ; ನ್ಯಧಾತ್ = ಇರಿಸಿಕೊಂಡನೋ; ಸಃ = ಅಂತಹ; ಮೃತ್ಯುಂಜಯಃ = ಶಿವನು; ಪ್ರತಿದಿನಂ = ಪ್ರತಿದಿನವೂ; ಪಾಯಾತ್ = (ನಮ್ಮನ್ನೂ) ಪಾಲಿಸಲಿ(ಮಾಲೋತ್ಪ್ರೇಕ್ಷಾಲಂಕಾರ).

> ''ಹೇ ಹರನೇ ! ನನ್ನ ಕಳಂಕವನ್ನು ಪರಿಹರಿಸು'' ಎಂಬುದಾಗಿ ಉಗುರಿನ ರೂಪದಲ್ಲಿ ತನ್ನ ಪಾದಕ್ಕೆರಗಿದ 'ಏಣಾಂಕ'ನಾದ ಚಂದ್ರನನ್ನು, ಜಿಂಕೆಯನ್ನು ತನ್ನ ಕೈಗೆತ್ತಿಕೊಳ್ಳುವ ಮೂಲಕ ಕಳಂಕರಹಿತನನ್ನಾಗಿಸಿದ, ತನ್ನ ಶಿರಸ್ಸಿನಲ್ಲಿಯ ಗಂಗೆಯ ಬಳಿ ಇರಿಸುವ ಮೂಲಕ ಪರಿಶುದ್ಧನನ್ನಾಗಿಸಿದ, ಶ್ರೇಷ್ಠಸರ್ಪಗಳ ಸ್ಪರ್ಶದ ಮೂಲಕ ಅದನ್ನು ಸಾರಿದ, ಬಳಿಕ ಅವನನ್ನು ತನ್ನ ತಲೆಯ ಮೇಲೆ ಇರಿಸಿಕೊಂಡ ಆ ಶಿವನು ಪ್ರತಿದಿನವೂ ನಮ್ಮನ್ನೂ ಪಾಲಿಸಲಿ.

---

೧. 'ಬ್ರಹ್ಮಾಂಡದಲ್ಲಿ ಎಲ್ಲಿಗೆ ಹೋದರೂ ಬಿಡದಿದ್ದ ತಮ್ಮ ಕೈಗೆ ಅಂಟಿದ್ದ ಬ್ರಹ್ಮದೇವರ ಐದನೆಯ ತಲೆಯು ಕಾಶೀಕ್ಷೇತ್ರಕ್ಕೆ ಬರುತ್ತಲೇ ಬಿಟ್ಟುಹೋದಾಗ ಆನಂದದಿಂದ ಶಿವನ ಕಣ್ಣುಗಳಿಂದ ಉದುರಿದ ಆನಂದಾಶ್ರುಗಳೇ 'ಬಿಂದುಸರೋವರ'ವಾಯಿತೆಂದು, ಅದರ ತೀರದಲ್ಲಿರುವ ಮಾಧವನಿಗೆ 'ಬಿಂದುಮಾಧವ'ನೆಂದು ಹೆಸರಾಯಿತು ಎಂದೂ ಪ್ರಸಿದ್ಧಿಯುಂಟು.

ವಿ: ೧. ಬಿಂದುಮಾಧವನ ಅನಂತರ ಕಾಶಿಯ ಪ್ರಮುಖ ದೇವತೆಯಾದ ವಿಶ್ವನಾಥನನ್ನು ಇಲ್ಲಿ ಎರಡು ಶ್ಲೋಕಗಳಲ್ಲಿ ಸ್ತುತಿಸಿರುವರು.

೨. ಶ್ರೀರುದ್ರದೇವರು 'ಚಂದ್ರಶೇಖರ', ನಾಗಭೂಷಣ','ಏಣಪಾಣಿ' (ಜಿಂಕೆಯನ್ನು ಕೈಯಲ್ಲಿ ಹಿಡಿದಿರುವನು) 'ಗಂಗಾಧರ ಮೊದಲಾಗಿ ಪ್ರಸಿದ್ಧರಾಗಿರುವರು. ಅವರ ಹೆಸರುಗಳ ಸಾರ್ಥಕ್ಯವನ್ನು ಮತ್ತೊಂದು ರೀತಿಯಲ್ಲಿ ನಿರೂಪಿಸುವ ಅಪೂರ್ವ ಶ್ಲೋಕವಿದು.

೩. ಶ್ರೀರುದ್ರದೇವರ ಪಾದದ ಉಗುರುಗಳು ಚಂದ್ರನಂತೆ ಶೋಭಾಯಮಾನವಾಗಿದ್ದು ಅವು ಅವರ ಕಾಲ ಮೇಲೆ ಬಿದ್ದ ಚಂದ್ರನೋ ಎಂಬಂತೆ ಕಾಣುತ್ತವೆ. ಅವನಲ್ಲಿನ ಕಪ್ಪು ಕಲೆಯು ಜಿಂಕೆಯಂತಿರುವುದರಿಂದ, ಕಳಂಕವನ್ನು ಪರಿಹರಿಸಿರಿ ಎಂಬ ಪ್ರಾರ್ಥನೆಯನ್ನು ಚಂದ್ರನು ಮಾಡುತ್ತಿರುವನೋ ಎಂಬಂತೆ ಇದೆ. ರುದ್ರದೇವರ ಕೈಯಲ್ಲಿರುವ 'ಏಣ' (ಜಿಂಕೆಯು) ಅವರ ಚಂದ್ರನಿಂದ ಬೇರ್ಪಡಿಸಿದ ಜಿಂಕೆಯೋ ಎಂಬಂತಿದೆ; ಹೀಗೆ ಕಳಂಕರಹಿತನಾದ ಚಂದ್ರನು ಅವರ ತಲೆಯಲ್ಲಿರುವುದು, ಅಲ್ಲಿರುವ ಗಂಗೆಯ ಸನ್ನಿಧಾನದಿಂದ ಅವನನ್ನು ಇನ್ನೂ ಶುದ್ಧ ಮಾಡಲೆಂದೋ ಎಂಬಂತಿದೆ, ಜಟೆಯಲ್ಲಿ ಸರ್ಪಗಳನ್ನು ಧರಿಸಿರುವುದು ಚಂದ್ರನು ಶುದ್ಧನಾಗಿರುವುದನ್ನು ಸರ್ಪಗಳನ್ನು ಮುಟ್ಟಿ ಲೋಕಕ್ಕೆ ಸಾರುತ್ತಿರುವನೋ ಎಂಬಂತಿದೆ; ಹೀಗೆ ಶರಣು ಹೊಕ್ಕ ಭಕ್ತರನ್ನು ಕೈಬಿಡದೆ ಪಾಲಿಸುವ ರುದ್ರದೇವರು ನಮ್ಮನ್ನು ಪಾಲಿಸಲಿ ಎಂದು ಭಾವ.

೪. ರುದ್ರದೇವರಿಗೆ ವಂದಿಸುವಾಗ 'ಚಂದ್ರಶೇಖರ', ಗಂಗಾಧರ' ಇತ್ಯಾದಿಯಾಗಿ ಚಿಂತಿಸಬೇಕಾದ ಕ್ರಮವೂ, ಅವರು ಭಕ್ತವತ್ಸಲರೆಂಬ ತತ್ತ್ವವೂ ಈ ಶ್ಲೋಕದಲ್ಲಿ ಅತ್ಯಂತ ಅಪೂರ್ವವಾಗಿ ವರ್ಣಿತವಾಗಿದೆ.

**ಮೌಲೌ ಯಚ್ಚರಣಾಂಬು ಫಾಲಫಲಕೇ ಯಸ್ಯಾಂಘ್ರಿರೇಣುಃ ಕಥಾ**
**ಕರ್ಣೇ ವಾಚಿ ಯದೀಯನಾಮ ಹೃದಿ ಯದ್ರೂಪಂ ಯದಾಸ್ವಾದಿತಮ್ ।**
**ಕುಕ್ಷೌ ಯತ್ತಪಸೇಽಪಟಂ ಕಟಿತಟಂ ವ್ಯಾಘ್ರಾಜಿನೇ ಸಂಸ್ಥಿತಿಃ**
**ಪಾದೌ ಯತ್ಪುರಚಾರಿಣೌ ಸ ಹಿ ಸದಾ ತತ್ಕಿಂಕರಃ ಶಂಕರಃ ॥ ೨೬ ॥**

ಅ: ಯಸ್ಯ = ಯಾರ; ಮೌಲೌ = ಶಿರಸ್ಸಿನಲ್ಲಿ; ಯಚ್ಚರಣಾಂಬು = ಯಾವ ಶ್ರೀಹರಿಯ ಪಾದೋದಕ (ಗಂಗೆ)ವೂ; ಫಾಲಫಲಕೇ = ಲಲಾಟಫಲಕದಲ್ಲಿ(ಹಣೆಯ ಮೇಲೆ); ಅಂಘ್ರಿರೇಣುಃ = (ಹರಿ)ಪಾದಧೂಳಿಯೂ; ಕರ್ಣೇ = ಕಿವಿಯಲ್ಲಿ; ಕಥಾ = (ಹರಿ) ಕಥೆಯೂ; ವಾಚಿ = ಮಾತಿನಲ್ಲಿ; ಯದೀಯನಾಮ = ಆ ವಿಷ್ಣುವಿನ ನಾಮವೂ; ಹೃದಿ = ಹೃದಯದಲ್ಲಿ; ಯದ್ರೂಪಂ = ಯಾವ ಶ್ರೀಹರಿಯ ರೂಪವೂ; ಕುಕ್ಷೌ = ಜಠರದಲ್ಲಿ; ಯದಾಸ್ವಾದಿತಂ = ಯಾವ ಶ್ರೀಹರಿಯ ನೈವೇದ್ಯಶೇಷವೂ ಇರುವುದೋ; ಮತ್ತು ಕಟಿತಟಂ= (ಯಾರ) ಕಟಿಪ್ರದೇಶವು; ಯತ್ತಪಸೇ = ಯಾವ ವಿಷ್ಣುವನ್ನು ಕುರಿತ ತಪಸ್ಸಿಗೋಸ್ಕರ; ಅಪಟಂ = ವಸ್ತ್ರಹೀನ (ದಿಗಂಬರ)ವಾಗಿದೆಯೋ; ವ್ಯಾಘ್ರಾಜಿನೇ = ಯಾರಿಗೆ ಅಂತಹ

ತಪಸ್ಸಿಗಾಗಿ ಹುಲಿಯ ಚರ್ಮದ ಮೇಲೆ; ಸಂಸ್ಥಿತಿಃ = ಆಸನವು ಇರುವುದೋ; ಪಾದೌ = (ಯಾರ)ಪಾದಗಳು; ಯತ್ಪುರಚಾರಿಣೌ = ವಿಷ್ಣುಕ್ಷೇತ್ರವನ್ನು ಕುರಿತು ಸಂಚರಿಸುತ್ತಿವೆಯೋ; ಸಃ = ಆ; ಶಂಕರಃ = ಶಿವನು; ಸದಾ = ಯಾವಾಗಲೂ; ತತ್ಕಿಂಕರಃ = ಆ ವಿಷ್ಣುವಿನ ಕಿಂಕರನೇ; ಹಿ = ಅಲ್ಲವೇ !

ಮುಡಿಯಲ್ಲಿ ಶ್ರೀಹರಿಯ ಪಾದೋದಕವಾದ ಗಂಗೆ, ಹಣೆಯಲ್ಲಿ ಶ್ರೀಹರಿಯ ಪಾದಧೂಳಿ, ಕಿವಿಯಲ್ಲಿ ಶ್ರೀಹರಿಯ ಪುಣ್ಯಕಥೆ, ಬಾಯಲ್ಲಿ ವಿಷ್ಣುವಿನ ನಾಮೋಚ್ಚಾರಣೆ, ಹೃದಯದಲ್ಲಿ ಶ್ರೀಹರಿಯ ರೂಪ, ಉದರದಲ್ಲಿ ಶ್ರೀಹರಿಯ ನೈವೇದ್ಯಶೇಷ, ಸೊಂಟದಲ್ಲಿ ವಿಷ್ಣುವನ್ನು ಕುರಿತು ತಪಸ್ಸಿಗಾಗಿ ದಿಗಂಬರತ್ವ, ಆಸನವಾಗಿ ಹುಲಿಯ ಚರ್ಮ, ಪಾದಗಳಿಂದ ವಿಷ್ಣುಕ್ಷೇತ್ರದ ಸಂಚಾರ; ಹೀಗಿರುವ ಶಿವನು ಸದಾ ಆ ವಿಷ್ಣುವಿನ ಕಿಂಕರನೇ ಅಲ್ಲವೇ !

ವಿ: ೧. 'ವೈಷ್ಣವಾನಾಂ ಯಥಾ ಶಂಭುಃ'(ಭಾಗವತ೧೨/೧೩/೧೬) 'ಶ್ರೀರುದ್ರದೇವರು ಪರಮ ವೈಷ್ಣವರು' (ವಿಷ್ಣುಕಿಂಕರರು) ಎಂಬ ಪ್ರಮಾಣಪ್ರಮಿತವಾದ ವಿಚಾರವನ್ನು ಅವರನ್ನು ನೋಡಿದ ಯಾರೂ ಮನಗಾಣಬಹುದು[೧] ಎಂಬುದನ್ನು ಶ್ರೀವಾದಿರಾಜರು ಇಲ್ಲಿ ತುಂಬಾ ಸರಸವಾಗಿ ಪ್ರತಿಪಾದಿಸಿರುವರು.

೨. ಹರಿಪಾದೋದಕಧಾರಣ, ಹರಿಪಾದರಜೋಧಾರಣ, ಹರಿಕಥಾಶ್ರವಣ, ಕೀರ್ತನ ಮತ್ತು ಧ್ಯಾನಗಳು, ಹರಿನೈವೇದ್ಯಭೋಜನ, ಹರಿವಿಷಯಕ ತಪಸ್ಸು ಮತ್ತು ಹರಿಕ್ಷೇತ್ರ ಗಮನಗಳನ್ನು ವೈಷ್ಣವರ ಮುಖ್ಯ ಲಕ್ಷಣ ಎಂಬುದಾಗಿ ಶ್ರೀಮದಾಚಾರ್ಯರು ತಮ್ಮ ಕೃಷ್ಣಾಮೃತಮಹಾರ್ಣವ ಗ್ರಂಥದಲ್ಲಿ ತಿಳಿಸಿರುವರು.[೨]

೩. ಶ್ರೀರುದ್ರದೇವರು ಸದಾ 'ಗಂಗಾಧರ'ರು(ತಲೆಯ ಮೇಲೆ ಸದಾ ವಿಷ್ಣು-ಪಾದೋದಕವನ್ನು ಧರಿಸಿರುವರು) ಹಣೆಯಲ್ಲಿ ಹರಿಪಾದಧೂಳಿಯನ್ನೂ ಧರಿಸಿರುವರು; ಕಿವಿಯಿಂದ ಹರಿಕಥೆಯನ್ನು ಕೇಳುತ್ತಿರುವರು; ಬಾಯಲ್ಲಿ ಹರಿನಾಮ ನುಡಿಯುತ್ತಿರುವರು; ಹೃದಯದಲ್ಲಿ ಹರಿಯನ್ನು ಧ್ಯಾನಿಸುತ್ತಿರುವರು; ಶ್ರೀಹರಿಯ ನೈವೇದ್ಯಶೇಷವನ್ನು ಭುಂಜಿಸುವರು; ಶ್ರೀಹರಿ ಪ್ರೀತಿಗಾಗಿ ವ್ಯಾಘ್ರಾಜಿನದ ಮೇಲೆ ಕುಳಿತು ದಿಗಂಬರರಾಗಿ ತಪಸ್ಸನ್ನಾಚರಿಸುವರು; ಹರಿಕ್ಷೇತ್ರಗಳನ್ನು ಕುರಿತು ಸಂಚರಿಸುವರು.

ಪಾಯಂ ಪಾಯಂ ಶ್ರುತಿಚುಲಕಿತಂ ರಾಮನಾಮಾಮೃತಂ ಯಃ
ಧ್ಯಾಯಂ ಧ್ಯಾಯಂ ಮನಸಿ ಸತತಂ ಬ್ರಹ್ಮ ತತ್ತಾರಕಾಖ್ಯಮ್ ।
ಜಲ್ಪಂ ಜಲ್ಪಂ ಪ್ರಕೃತಿವಿಕೃತೌ ಪ್ರಾಣಿನಾಂ ಕರ್ಣಮೂಲೇ
ವೀಥ್ಯಾಂ ವೀಥ್ಯಾಮಟತಿ ಜಟಿಲಃ ಕೋऽಪಿ ಕಾಶೀನಿವಾಸೀ ॥

---

೧. ಶಿವಸ್ಯ ವಿಷ್ಣುಭಕ್ತತ್ವಂ ಶಿರಆದಿಪಾದಪರ್ಯಂತಾವಯವವ್ಯಾಪಾರದರ್ಶನೇ ಸತಿ ಸರ್ವೇಷಾಂ ಪ್ರಸಿದ್ಧಮಿತಿ ದ್ಯೋತನಾಯ 'ಹಿ' ಶಬ್ದಃ ॥ -ವ್ಯಾಖ್ಯಾನ

೨. ಹೃದಿ ರೂಪಂ ಮುಖೇ ನಾಮ ನೈವೇದ್ಯಮುದರೇ ಹರೇಃ ।
ಪಾದೋದಕಂ ಚ ನಿರ್ಮಾಲ್ಯಂ ಮಸ್ತಕೇ ಯಸ್ಯ ಸೋऽಚ್ಯುತಃ ॥ – ಕೃ.ಮ.(ಶ್ಲೋ.೪೩)

- ಎಂಬುದಾಗಿ ಶ್ರೀವಾದಿರಾಜರು ತಮ್ಮ 'ಹರಿಭಕ್ತಿಲತಾ' ಗ್ರಂಥದಲ್ಲಿ ಉದಾಹರಿಸಿರುವ ಪುರಾಣ ಶ್ಲೋಕವು (೩೫೭), (ಸ್ಕಂದಪುರಾಣ ಕಾಶೀಖಂಡ) ಪ್ರಕೃತ ಶ್ಲೋಕಕ್ಕೆ ಸರ್ವವಿಧದಿಂದಲೂ ಆಧಾರಭೂತವಾಗಿದೆ. ಇದರೊಂದಿಗೆ ಭಾಗವತಾದಿಪುರಾಣಗಳಲ್ಲಿ ಬರುವ ಅನೇಕ ವಾಕ್ಯಗಳನ್ನು ವ್ಯಾಖ್ಯಾನಕಾರರು ಉದಾಹರಿಸಿರುವರು; ಶ್ರೀವಾದಿರಾಜರ ಸರಸಭಾರತೀ-ವಿಲಾಸ(೯)ದಲ್ಲಿ ಈ ಬಗ್ಗೆ ಇನ್ನೂ ಅನೇಕ ವಿವರಗಳಿವೆ.

ಯಚ್ಛೌಚನಿಃಸೃತಸರಿತ್ಪ್ರವರೋದಕೇನ ತೀರ್ಥೇನ
ಮೂರ್ಧ್ನ್ಯಧಿಧೃತೇನ ಶಿವಃ ಶಿವೋಽಭೂತ್ ॥ – ಭಾಗವತ(೩/೩೭/೨೯)

''ಯಜ್ಞವಾಟಗತಂ ಸರ್ವಮುಚ್ಛಿಷ್ಟಮೃಷಯಃ ಕ್ವಚಿತ್ ।
ಚಕ್ರುರ್ಹಿ ಭಾಗಂ ರುದ್ರಾಯ ಸ ದೇವಃ ಸರ್ವಮರ್ಹತಿ ॥'' – ಭಾಗವತ

''ಯಮುದ್ದಿಶ್ಯ ಸದಾ ನಾಥಂ ಮಹೇಶೋಽಪಿ ದಿಗಂಬರಃ ।
ಜಟೀ ಭಸ್ಮಾವಲಿಪ್ತಾಂಗಸ್ತಪಸ್ವೀ ವೀಕ್ಷ್ಯತೇ ಜನೈಃ ॥'' – ಹರಿಭಕ್ತಿಲತಾ(೩೬೫)

ಭವಶ್ಚ ಭೂತಭವ್ಯೇಶೋ ಯಕ್ಷಭೂತಗಣೈರ್ವೃತಃ ।
ದ್ವಾರಕಾಮುಪಸಂಜಗ್ಮುಃ ಸರ್ವೇ ಕೃಷ್ಣದಿದೃಕ್ಷವಃ ॥ – ಭಾಗವತ(೧೧/೬/೧-೪)

ರಾಮ ರಾಮ ರಾಮೇತಿ ರಮೇ ರಾಮೇ ಮನೋರಮೇ ।
ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ । – ಪದ್ಮಪುರಾಣ

'ಪುಂಸಃ ಕೃಪಯತೋ ಭದ್ರೇ ಸರ್ವಾತ್ಮಾ ಪ್ರೀಯತೇ ಹರಿಃ ॥ – ಭಾಗವತ(೮/೭/೪೦)

(ಶ್ರೀರುದ್ರದೇವರ ವೈಷ್ಣವತ್ವಕ್ಕೆ ಅವರು ಶುಕಾಚಾರ್ಯರೂಪದಿಂದ ಪರೀಕ್ಷಿದ್ರಾಜನಿಗೆ ಭಾಗವತ ಪುರಾಣವನ್ನು ಉಪದೇಶಿಸಿದ್ದು ಮೊದಲಾಗಿ ಅನೇಕ ಗಮಕಗಳಿವೆ. ಪದ್ಮಪುರಾಣದ ಉತ್ತರಖಂಡ ಹಾಗೂ ಮಹಾಭಾರತದ ಅನುಶಾಸನಪರ್ವದಲ್ಲಿ ಬರುವ ಉಮಾಮಹೇಶ್ವರ-ಸಂವಾದ ರೂಪದ ಸಮಗ್ರಭಾಗಗಳು ಅವರ ಪರಮವೈಷ್ಣವತ್ವವನ್ನು ವಿಶೇಷವಾಗಿ ಸಮರ್ಥಿಸುತ್ತವೆ.)

೪. ಹೀಗೆ ಶ್ರೀಮದಾಚಾರ್ಯರು ತಿಳಿಸಿರುವ ಸಕಲವೈಷ್ಣವರ ಲಕ್ಷಣಗಳನ್ನು ಹೊಂದಿರುವುದರಿಂದ ಅವರು 'ವಿಷ್ಣುಕಿಂಕರ'ರೆಂಬುದು ನಿಃಸಂಶಯ ಎಂದು ಭಾವ.

## ಗಯಾ (ಕ್ಷೇತ್ರ)

**ಗಯಾಭಿಧಮಿದಂ ಕ್ಷೇತ್ರಂ ಶ್ರಯೇ ಶ್ರೇಯಸ್ಕರಂ ನೃಣಾಮ್ ।**
**ನ ಯತ್ರ ಸಹತೇ ಜಾತು ಕ್ರಿಯಾ [೧]ಜನ್ಮಾಂತರಕ್ರಿಯಾಮ್ ॥ ೨೭ ॥**

---

೧. ಸಕೃತ್ ಪಿಂಡಪ್ರದಾನೇನೈವ ವೈಕುಂಠಪ್ರಾಪ್ತ್ಯಾ ಪುನರ್ಜನ್ಮಾಭಾವಾತ್ ಜನ್ಮಾಂತರ ಕ್ರಿಯಾಮಾಣ-ಕ್ರಿಯಾಂ ನ ಸಹತೇ ಇತ್ಯರ್ಥಃ । – ವ್ಯಾಖ್ಯಾನ

ಅ: ನೃಣಾಂ = ಮನುಷ್ಯರಿಗೆ; ಶ್ರೇಯಸ್ಕರಂ = ಪುಣ್ಯಕರವಾದ; ಇದಂ = ಗಯಾ-ಭಿಧಂ = 'ಗಯಾ' ಎಂಬ ಹೆಸರಿನ; ಕ್ಷೇತ್ರಂ = ಕ್ಷೇತ್ರವನ್ನು; ಶ್ರಯೇ = ಆಶ್ರಯಿಸುವೆನು; ಯತ್ರ = ಇಲ್ಲಿ; ಜಾತು = ಎಂದಾದರೂ ಒಮ್ಮೆ; ಕ್ರಿಯಾ = (ಮಾಡಲ್ಪಡುವ) (ಪಿಂಡದಾನಾದಿರೂಪ) (ಪಿತೃ)ಕಾರ್ಯವೂ; ಜನ್ಮಾಂತರಕ್ರಿಯಾಂ = ಜನ್ಮಾಂತರದಲ್ಲಿ ಮಾಡಬೇಕಾದ ಪಿತೃಕಾರ್ಯವನ್ನು; ನ ಸಹತೇ = ಸಹಿಸುವುದಿಲ್ಲ.

**ಒಮ್ಮೆ ಪಿತೃಕಾರ್ಯ ಮಾಡಿದರೂ ಜನ್ಮಾಂತರದಲ್ಲಿ ಅದನ್ನು ಸಹಿಸದ, ಮನುಷ್ಯರಿಗೆ ಪುಣ್ಯಕರವಾದ 'ಗಯಾ' ಎಂಬ ಹೆಸರಿನ ಕ್ಷೇತ್ರವನ್ನು ಆಶ್ರಯಿಸುವೆನು.**

ವಿ: ೧. ಗಯಾ ಕ್ಷೇತ್ರದಲ್ಲಿ ಪಿಂಡದಾನಾದಿರೂಪ ಪಿತೃಕಾರ್ಯವನ್ನು ಒಂದು ಸಲ ಮಾಡಿದರೂ ಸಹ, ಪಿತೃಗಳಿಗೆ ವೈಕುಂಠಲೋಕವು ಲಭಿಸುವುದು, ಆದ್ದರಿಂದಲೇ ಇದು ತುಂಬಾ ಅತಿಶಯವಾದ ಪುಣ್ಯಕರವಾದ ಕ್ಷೇತ್ರ ಎಂದು ಭಾವ.

೨. 'ಗಯಾ' ಕ್ಷೇತ್ರವು ಭರತಖಂಡದ ಅತ್ಯಂತ ಪ್ರಸಿದ್ಧಕ್ಷೇತ್ರಗಳಲ್ಲೊಂದು. ಪಿತೃಕಾರ್ಯಕ್ಕೆ ವಿಹಿತವಾದ 'ತ್ರಿಸ್ಥಲಿ'(ಕಾಶಿ, ಗಯಾ ಮತ್ತು ಪ್ರಯಾಗ)ಗಳಲ್ಲಿ ಇದೂ ಒಂದು. [೧]ಪುತ್ರನ ಲಕ್ಷಣತ್ರಯಗಳಲ್ಲಿ ಗಯಾಕ್ಷೇತ್ರದಲ್ಲಿ ಪಿಂಡಪ್ರದಾನ ಮಾಡುವುದೂ ಒಂದು ಎಂದು ಶಾಸ್ತ್ರಗಳು ಸಾರಿವೆ. ಒಬ್ಬನಾದರೂ 'ಗಯಾ' ಯಾತ್ರೆಯನ್ನು ಮಾಡಿ ಅಲ್ಲಿ ಪಿತೃಗಳಿಗೋಸ್ಕರ ಪಿಂಡಸಮರ್ಪಣೆ ಮಾಡಲಿ ಎಂಬ ಕಾರಣಕ್ಕಾಗಿ ಬಹುಸಂಖ್ಯಾಕಪುತ್ರರನ್ನು ಪಡೆಯುವಷ್ಟರ ಮಟ್ಟಿಗೆ ಮನುಷ್ಯನ ಜೀವನದಲ್ಲಿ ಈ 'ಕ್ಷೇತ್ರ'ಕ್ಕೆ ಮಹತ್ತ್ವವಿದೆ.[೨]

೩. ಫಲ್ಗುನದೀತೀರದಲ್ಲಿರುವ ಈ ಕ್ಷೇತ್ರದಲ್ಲಿ ಒಂದು (ಅಕ್ಷಯ) ವಟವೃಕ್ಷವೂ, 'ಧರ್ಮವತೀ'ಎಂಬ ಶಿಲೆಯ ಮೇಲೆ ವಿಷ್ಣುಪಾದವೂ ಇವೆ. ಈ ಮೂರೂ ಸ್ಥಳಗಳಲ್ಲಿ ಪಿತೃಕಾರ್ಯವು ವಿಹಿತವಾಗಿವೆ (ಫಲ್ಗುನಿಶ್ರಾದ್ಧ, ವಿಷ್ಣುಪಾದಶ್ರಾದ್ಧ ಮತ್ತು ಅಕ್ಷಯ ವಟಶ್ರಾದ್ಧ[೩]). ಫಲ್ಗುನದಿಯ ಮತ್ತೊಂದು ತೀರದಲ್ಲಿ ರಾಮಗಯೆ ಎಂದು ಪ್ರಸಿದ್ಧವಾದ ಕ್ಷೇತ್ರವಿದೆ. ಶ್ರೀರಾಮನು ಲೋಕಶಿಕ್ಷಣಕ್ಕಾಗಿ ದಶರಥನಿಗೋಸ್ಕರ ಶ್ರಾದ್ಧ ಮಾಡಿದ ಸ್ಥಳ ಎಂಬುದು ಅದರ ಪೌರಾಣಿಕ ಹಿನ್ನೆಲೆ.

---

೧. ಜೀವತೋ ವಾಕ್ಯಕರಣಾತ್ ಪ್ರತ್ಯಬ್ದಂ ಭೂರಿಭೋಜನಾತ್ ।
ಗಯಾಯಾಂ ಪಿಂಡದಾನಾಚ್ಚ ತ್ರಿಭಿಃ ಪುತ್ರಸ್ಯ ಪುತ್ರತಾ ॥ –ಸ್ಮೃತಿ

೨. ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।
ಯಜೇತ ವಾಽಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥ – ಮಹಾಭಾರತ

೩. ಗಯಾಯಾಂ ಧರ್ಮಪೃಷ್ಠೇಷು ಸದಸಿ ಬ್ರಹ್ಮಣಸ್ಪತೇಃ ।
ಗಯಾಶೀರ್ಷೇ ವಟೇ ಚೈವ ಪಿತೄಣಾಂ ದತ್ತಮಕ್ಷಯಮ್ ॥ – ವಾಯುಪುರಾಣ

ತತೋ ಗಯಾಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।
ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥
ತತ್ರಾಕ್ಷಯವಟೋ ನಾಮ ತ್ರಿಷು ಲೋಕೇಷು ವಿಶ್ರುತಃ ।
ತತ್ರ ದತ್ತಂ ಪಿತೃಭ್ಯಸ್ತು ಭವತ್ಯಕ್ಷಯಮುಚ್ಯತೇ ॥ – ಮಹಾಭಾರತ

೪. ಭಗವಂತನು 'ಬುದ್ಧ' ರೂಪದಿಂದ ಅವತರಿಸಿದ ಸ್ಥಳ ಎಂಬುದಾಗಿಯೂ ಇದನ್ನು ಪುರಾಣಗಳು ವರ್ಣಿಸಿವೆ. ಶ್ರೀಮದಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯದಲ್ಲೂ ಈ ಉಲ್ಲೇಖ [೧]ಬಂದಿದೆ. ಗಯೆಯಲ್ಲಿ 'ತೀರ್ಥ'ವಿಲ್ಲದ ಸ್ಥಳವೇ ಇಲ್ಲ ಎಂದೂ ವಾಯುಪುರಾಣವು [೨]ವರ್ಣಿಸಿದೆ. ಇದರ ವರ್ಣನೆಯು ಮಹಾಭಾರತದಲ್ಲೂ ಬಂದಿದೆ.

೫. ಮಹಾಭಾರತಾದಿ ಆಕರಗ್ರಂಥಗಳಲ್ಲೆಲ್ಲ ಉಲ್ಲೇಖಿತವಾಗಿರುವ ಈ ಕ್ಷೇತ್ರದ ವಿಶೇಷ ಮಾಹಾತ್ಮ್ಯವು 'ವಾಯುಪುರಾಣ' ದಲ್ಲಿ ಬಂದಿದೆ. ಧರ್ಮನ ಮಗಳಾದ ಧರ್ಮವತಿಯು ಕಾರಣಾಂತರದಿಂದ ತನ್ನ ಪತಿಯಾದ ಮರೀಚಿ ಮುನಿಗಳ ಶಾಪಕ್ಕೆ ಗುರಿಯಾಗಿ ಶಿಲಾರೂಪದಲ್ಲಿ ಸಾವಿರವರ್ಷಗಳ ಕಾಲ ತಪಸ್ಸು ಮಾಡಿ, ಪ್ರತ್ಯಕ್ಷರಾದ ನಾರಾಯಣಾದಿ ದೇವತೆಗಳ ಸಕಲದೇವತಾ ಸನ್ನಿಧಾನವು, ತನ್ನಲ್ಲಿರುವಂತೆ ವರವನ್ನು ಪಡೆದುಕೊಂಡಳು. ಗಯಾಸುರನೆಂಬ ಅಸುರನು ಅಪೂರ್ವ ತಪಸ್ಸನ್ನು ಮಾಡಿ ನಾರಾಯಣನಿಂದ ತನ್ನ ದೇಹವು ಸಕಲತೀರ್ಥಗಳಿಗಿಂತಲೂ ಹೆಚ್ಚು ಪವಿತ್ರವಾಗಲಿ ಎಂದು ವರವನ್ನು ಪಡೆದುಕೊಂಡು ಅನಂತರವೂ ತಪಸ್ಸನ್ನು ನಿಲ್ಲಿಸದೆ ಹೋದಾಗ, ದೇವತೆಗಳ ಪ್ರಾರ್ಥನೆಯಂತೆ ಬ್ರಹ್ಮದೇವರು ಅವನ ಬಳಿಗೆ ಬಂದು ಅವನ ದೇಹವನ್ನೇ ಯಜ್ಞಭೂಮಿಯನ್ನಾಗಿ ಮಾಡಿಕೊಂಡು ಯಜ್ಞವೊಂದನ್ನು ಮಾಡಿದರಂತೆ; ಯಜ್ಞ ಮುಗಿದ ಮೇಲೆ ಅವನು ಪುನಃ ಮೇಲೇಳಲು ತೊಡಗಿದಾಗ, ಅವನ ದೇಹದ ಮೇಲೆ ಆ 'ಧರ್ಮವತೀ' ಶಿಲೆಯನ್ನು ಇರಿಸಿದರಂತೆ; ಆಗಲೂ ಅವನು ಏಳತೊಡಗಿದಾಗ ಶ್ರೀವಿಷ್ಣುವು ಆ ಶಿಲೆಯ ಮೇಲೆ ಊರಿದ ಪಾದವೇ 'ವಿಷ್ಣುಪಾದ'ವೆನ್ನಿಸಿತು. ಶ್ರೀಹರಿಯು ಗದಾಧರ' ನೆಂಬ ರೂಪದಿಂದಲೂ ಅಲ್ಲಿ ನೆಲೆಸಿದನು. ಈ ಕ್ಷೇತ್ರದಲ್ಲಿ ಮಾಡುವ ಪಿಂಡಸಮರ್ಪಣೆಯು ಪಿತೃಗಳ ಸಕಲಪಾಪಗಳನ್ನೂ ಪರಿಹರಿಸಿ ಸದ್ಗತಿಗೆ ಕಾರಣವಾಗುವುದು.

## ಗದಾಧರ (ಗಯಾಕ್ಷೇತ್ರ)

**ಗದಾಧರ ಸದಾऽಧರಸ್ಫುರಿತಚಾರುಹಾಸೋಲ್ಲಸತ್ -**
**ಸುಧಾಧರ ಮುದಾಧರಾಮರಕೃತಸ್ತುತೇ ಸುಂದರ ।**
**ಪದಾ ಧರ ಮದಾಧರಸ್ಖಲಿತಮೀಶ ಮಾಂ ಸದ್ವರ -**
**ಪ್ರದಾಧರಚಿದಾದರಪ್ರಮುದಿತಾಂತರ ಶ್ರೀಧರ ॥ ೨೮ ॥**

ಅ: ಸದಾ = ಸದಾಕಾಲವೂ; ಅಧರಸ್ಫುರಿತಚಾರುಹಾಸೋಲ್ಲಸತ್ಸುಧಾಧರ = ಕೆಳತುಟಿಯಲ್ಲಿ ಪ್ರಕಟವಾದ ಮನೋಹರವಾದ ಮಂದಹಾಸವೆಂಬ ಕಂಗೊಳಿಸುವ ಅಮೃತವನ್ನು ಧರಿಸಿರುವ; [೩]ಮುದಾಧರ = ಆನಂದವನ್ನು ಪೂರ್ಣವಾಗಿ ಹೊಂದಿರುವ;

---

೧. ಕ್ಷೇತ್ರೇ ಗಯಾಖ್ಯೇಽಸ್ಯ ಶಿಶುಂ ಪ್ರಜಾತಂ ಸಂಪ್ರಾಪ್ಯ ದೂರೇಽತ್ರ ಬಭೂವ ವಿಷ್ಣುಃ ॥ – (೩೨/೧೪೩)

೨. ಗಯಾಯಾಂ ನ ಹಿ ತತ್ ಸ್ಥಾನಂ ಯತ್ರ ತೀರ್ಥಂ ನ ವಿದ್ಯತೇ ॥ – ವಾಯುಪುರಾಣ

೩. ಮುದಾ = ಪ್ರೀತಿಯಿಂದ, ಧರಾಮರಕೃತಸ್ತುತೇ = ಭೂಸುರರಿಂದ ಸ್ತುತಿಮಾಡಲ್ಪಡುವ ಎಂದೂ ಅರ್ಥಮಾಡಬಹುದು; ಅಥವಾ ಮುದಾ ಪ್ರೀತ್ಯಾ । ಧರಾಮರಕೃತಸ್ತುತೇಧರಾಮರಾಃ ಭೂ-

ಅಮರಕೃತಸ್ತುತೇ = ದೇವತೆಗಳಿಂದ ಸ್ತೋತ್ರ ಮಾಡಲ್ಪಡುತ್ತಿರುವ; ಸುಂದರ = ಮನೋಹರನಾದ; ಸದ್ವರಪ್ರದ = ಸಜ್ಜನರಿಗೆ ಇಷ್ಟಪ್ರದನಾದ; ಅಥರಚಿದಾದರ-ಪ್ರಮುದಿತಾಂತರ = 'ನಾನು ದಾಸನು' ಎಂಬುದಾಗಿ ತಿಳಿದ ಜ್ಞಾನಿಗಳ ಭಕ್ತಿಗೆ ಸಂತೋಷಪಡುವ ಮನಸ್ಸುಳ್ಳ; ಶ್ರೀಧರ = ಲಕ್ಷ್ಮೀಧರನಾದ; ಈಶ = ಸ್ವಾಮಿಯಾದ; ಹೇ ಗದಾಧರ = ಎಲೈ ಗದಾಧರನೇ; ಮದಾಧರಸ್ಖಲಿತಂ = ಅಹಂಕಾರದಿಂದಾಗಿ ಕೆಳಗೆ ಬಿದ್ದಿರುವ; ಮಾಂ = ನನ್ನನ್ನು; ಪದಾ = ಪಾದದಿಂದ; ಧರ = ಧರಿಸು.

ಸದಾ ಕೆಳತುಟಿಯಲ್ಲಿ ತೋರುವ ರಮ್ಯವಾದ ಮಂದಹಾಸವೆಂಬ ಅಮೃತ, ಸದಾ ಆನಂದಪೂರ್ಣತ್ವ, ಸುತ್ತ ನೆರೆದ ದೇವತೆಗಳು ಮಾಡುವ ಸ್ತೋತ್ರಗಳು, ಸಜ್ಜನರಿಗೆ ವರನೀಡುವ ಕಾಯಕ, 'ನಾನು ದಾಸ' ಎಂದು ಅರಿತ ಜ್ಞಾನಿಗಳ ಬಗ್ಗೆ ಸಂತೋಷ ಹೊಂದುವ ಮನಸ್ಸು, ಶ್ರೀದೇವಿ ಭೂದೇವಿಯರಿಗೆ ಪತಿ; ಇಂತಹ ಗದಾಧರನಾದ ಶ್ರೀಹರಿಯೇ ! ಅಹಂಕಾರದಿಂದ ನೆಲಕಚ್ಚಿರುವ ನನ್ನನ್ನು ಪಾದದಿಂದ ಧರಿಸು.

ವಿ: ಗಯೆಯಲ್ಲಿರುವ ಭಗವದ್ರೂಪಕ್ಕೆ '[1]ಗದಾಧರ' ಎಂದು ಹೆಸರು. ಅನುಪ್ರಾಸ ಮತ್ತು ಅಂತ್ಯಪ್ರಾಸಗಳಿಂದ ತುಂಬಿರುವ ಈ ಅಪೂರ್ವಶ್ಲೋಕದಲ್ಲಿ ಶ್ರೀವಾದಿರಾಜರು ಗದಾಧರನನ್ನು 'ನಿನ್ನ ಚರಣಧ್ಯಾನವನ್ನಿತ್ತು ಪಾಲಿಸು'[2] ಎಂಬುದಾಗಿ ಪ್ರಾರ್ಥಿಸಿಕೊಂಡಿರುವರು.

## ವಿಷ್ಣುಪಾದ (ಗಯಾ ಕ್ಷೇತ್ರ)

**ಯದ್ಯಾತ್ರಾ ಪಿತೃಮಂಡಲಸ್ಯ ತನುತೇ ವೈಕುಂಠಯಾತ್ರಾಂ ಪರಾಂ**
**ಯತ್ರ ಕ್ಷಿಪ್ತತಿಲಾ ಮಹಾಂತಿ ತಿಲಶಃ ಕುರ್ವಂತಿ ಪಾಪಾನ್ಯಹೋ ।**
**ಪಿಂಡೋ ಯತ್ರ ಸಮರ್ಪಿತೋ ಯಮಭಟಾನ್ ಪಿಂಡೀಕರೋತ್ಯಕ್ಷತಾ**
**ಮರ್ತ್ಯಂ ಸ್ವಾಕ್ಷತಮೀಡ್ಯತಾಂ ಸ್ತುತಿತತಿಸ್ತಂ ವಿಷ್ಣುಪಾದಂ ಭಜೇ ॥ ೨೯ ॥**

ಅ: ಯದ್ಯಾತ್ರಾ = ಯಾವುದರ ಯಾತ್ರೆಯು; ಪಿತೃಮಂಡಲಸ್ಯ = (ಯಾತ್ರೆ ಮಾಡುವವನ) ಪಿತೃಸಮುದಾಯಕ್ಕೆ; ಪರಾಂ = ಉತ್ತಮವಾದ; ವೈಕುಂಠಯಾತ್ರಾಂ = ವೈಕುಂಠ(ಲೋಕ)ಯಾತ್ರೆಯನ್ನು; ತನುತೇ = ಉಂಟುಮಾಡುವುದೋ; ಯತ್ರ = ಎಲ್ಲಿ; ಕ್ಷಿಪ್ತತಿಲಾಃ = ಹಾಕಲ್ಪಡುವ ಎಳ್ಳುಗಳು; ಮಹಾಂತಿ = ಮಹತ್ತರವಾದ; ಪಾಪಾನಿ = ಪಾಪಗಳನ್ನು; ತಿಲಶಃ ಕುರ್ವಂತಿ = ಎಳ್ಳಿನಂತೆ ಪುಡಿಪುಡಿಯಾಗಿ ಮಾಡುವವೋ; ಯತ್ರ = ಎಲ್ಲಿ; ಸಮರ್ಪಿತಃ = ಸಮರ್ಪಿತವಾದ; ಪಿಂಡಃ = ಪಿಂಡವು; ಯಮಭಟಾನ್ = ಯಮದೂತರನ್ನು; ಪಿಂಡೀಕರೋತಿ = ಮುದ್ದೆಮಾಡಿ ಹಾಕುವುದೋ; ಅಕ್ಷತಾಃ =

---

ಸುರಾಃ ಬ್ರಾಹ್ಮಣಾ ಇತ್ಯರ್ಥಃ। ತೈಃ ಕೃತಾ ಸ್ತುತಿರ್ಯಸ್ಯ ಸ ತಥೋಕ್ತಃ ತಸ್ಯ ಸಂಬುದ್ಧಿಃ। -ವ್ಯಾ

೧. ಗದಾಭಿಮಾನಿಯು ಶ್ರೀವಾಯುದೇವರು, 'ಗದಾ ತು ವಾಯುರ್ಬಲಸಂವಿದಾತ್ಮಾ'-(ಮ.ಭಾ.ತಾ.ನಿ. -೩/೭೪) ಆದ್ದರಿಂದ ಗದಾಧರ ಎಂಬುದಕ್ಕೆ 'ವಾಯುಧರ' ಶ್ರೀವಾಯುದೇವರಿಗೆ ಸ್ವಾಮಿ (ಪ್ರಾಣಸ್ಯ ಪ್ರಾಣಃ) ಎಂದೂ ಅರ್ಥಮಾಡಬಹುದು:

೨. ತವ ಚರಣಧ್ಯಾನಂ ದತ್ವಾ ಇತ್ಯರ್ಥಃ। – ವ್ಯಾಖ್ಯಾನ

ಅಕ್ಷತೆಗಳು; ಮರ್ತ್ಯಂ = ಮನುಷ್ಯನನ್ನು; ಅಕ್ಷತಂ = ಅಮೃತನನ್ನಾಗಿ; ಕುರ್ವಂತಿ = ಮಾಡುವವೋ (ಮತ್ತು); ಯತ್ರ = ಎಲ್ಲಿಯ; ಸ್ತುತಿತತಿಃ = 'ವಿಷ್ಣುಪಾದ' ವಿಷಯಕವಾದ ಸ್ತುತಿಗಳ ಸಮುದಾಯವು; ಈಡ್ಯತಾಂ = ಸ್ತುತಿಪಾಠಕನಿಗೆ ಪೂಜ್ಯತ್ವವನ್ನು ಉಂಟುಮಾಡುವುದು; ಸ್ಮ = ಪ್ರಸಿದ್ಧ; ಅಹೋ[೧] = ಆಶ್ಚರ್ಯ; ತಂ ವಿಷ್ಣುಪಾದಂ = ಅಂತಹ ವಿಷ್ಣುಪಾದವನ್ನು; ಭಜೇ = ಸೇವಿಸುವೆನು (ವಿನಿಮಯಾಲಂಕಾರ)

ಎಲ್ಲಿಗೆ ತೆರಳಿದರೆ ಪಿತೃವೃಂದಕ್ಕೆ ವೈಕುಂಠಲೋಕಯಾತ್ರೆ ಲಭಿಸುವುದೋ, ಎಲ್ಲಿ ಹಾಕುವ ಎಳ್ಳುಗಳು ಮಹಾಪಾತಕಗಳನ್ನು ಎಳ್ಳಿನಂತೆ ಪುಡಿಗೈಯ್ಯುವವೋ, ಎಲ್ಲಿ ಸಮರ್ಪಿಸುವ ಪಿಂಡವು ಯಮದೂತರನ್ನು ಮುದ್ದೆಮಾಡುವುದೋ, ಎಲ್ಲಿ ಹಾಕುವ ಅಕ್ಷತೆಗಳು ಮನುಷ್ಯನನ್ನು ಅಮೃತನನ್ನಾಗಿಸುವವೋ ಹಾಗೂ ಎಲ್ಲಿಯ 'ವಿಷ್ಣುಪಾದ' ದ ಸ್ತುತಿಗಳು ಸ್ತುತಿಪಾಠಕನಿಗೆ ಪೂಜ್ಯತ್ವ ನೀಡುವವೋ; ಅಂತಹ ವಿಷ್ಣುಪಾದವನ್ನು ಸೇವಿಸುವೆನು.

ವಿ: ೧. 'ವಿಷ್ಣುಪಾದ'ವು ಗಯೆಯಲ್ಲಿನ ತುಂಬಾ ಪ್ರಮುಖವಾದ ವೈಶಿಷ್ಟ್ಯ; ಬೇರೆ ಯಾವುದೇ ಒಬ್ಬ ದೇವತೆಯ ಪಾದವೊಂದಕ್ಕೆ ಹೀಗೆ ದೇವಸ್ಥಾನಕಟ್ಟಿ ಪೂಜಿಸುವ ಹಿರಿಮೆ ಕಂಡಿಲ್ಲ; ವಿಷ್ಣುಸರ್ವೋತ್ತಮತ್ವಕ್ಕೆ ಆತನ ಪಾದವು ಹೀಗೆ ಸರ್ವಶ್ರೇಷ್ಠವಾಗಿ ಪೂಜಿಸಲ್ಪಡುವುದು ಸಹ ಒಂದು ಗಮಕವಾಗಿದೆ. ವಿಷ್ಣುಪಾದವಿರುವ ಧರ್ಮಶಿಲೆಯ ಮೇಲೆಯೇ ನಿರ್ಮಾಣವಾಗಿರುವ ಮಂದಿರಕ್ಕೆ 'ವಿಷ್ಣುಪಾದ ದೇವಸ್ಥಾನ' ವೆಂದು ಹೆಸರು.

೨. ಪ್ರತಿಯೊಬ್ಬ ವೈಷ್ಣವನ ಪೂಜಾಮೂರ್ತಿಗಳಲ್ಲಿ ಈ ವಿಷ್ಣುಪಾದವೂ ಒಂದಾಗಿದೆ ಎಂಬುದೂ ಗಮನಾರ್ಹ. ಇಂತಹ ವಿಷ್ಣುಪಾದದ ಹಿರಿಮೆಯನ್ನು ಅಲ್ಲಿ ಮಾಡುವ ಶ್ರಾದ್ಧಕಾರ್ಯದ ಫಲದಿಂದಲೇ ಅತ್ಯಂತ ಕೌಶಲಪೂರ್ಣವಾಗಿ ಈ ಶ್ಲೋಕದಲ್ಲಿ ಶ್ರೀವಾದಿರಾಜರು ವರ್ಣಿಸಿರುವರು.

೩. ವಿಷ್ಣುಪಾದದ ಯಾತ್ರೆ ಎಂದರೆ ಯಾತ್ರೆ ಮಾಡುವವರ ಪಿತೃಗಳ ಪಾಲಿಗೆ ವೈಕುಂಠಯಾತ್ರೆಯೇ ಸರಿ[೨]; ಅಲ್ಲಿ ಸಮರ್ಪಿಸಲ್ಪಡುವ ಎಳ್ಳುಕಾಳುಗಳು, ಭಕ್ತರ ಮಹತ್ತರವಾದ ಪಾಪಗಳನ್ನುಸಹ 'ತಿಲಶಃ'[೩] ಖಂಡಿಸಿಬಿಡುತ್ತವೆ. ಅಲ್ಲಿಸಮರ್ಪಿಸುವ ಪಿಂಡವು ಯಮದೂತರನ್ನು ಹತ್ತಿರ ಬರದಂತೆ ಮಾಡುತ್ತದೆ[೪]; ಅಲ್ಲಿ ಸಮರ್ಪಿಸುವ ಅಕ್ಷತೆಕಾಳುಗಳಂತೂ ಮನುಷ್ಯನನ್ನು [೫]ಅಮೃತನನ್ನಾಗಿಸುತ್ತವೆ; ಅಲ್ಲಿ ಮಾಡುವ ಸ್ತೋತ್ರವು ಮನುಷ್ಯನಿಗೆ ಪೂಜ್ಯತೆಯನ್ನುಂಟು-ಮಾಡುತ್ತವೆ. ಇಂತಹ ವಿಷ್ಣುಪಾದವನ್ನು[೬] ಆಶ್ರಯಿಸುವೆನು.

---

೧. ಅಹೋ-ಅಲ್ಪಸ್ಯಾಪಿ ಕರ್ಮಣಃ ಮಹಾಪಾಪಪರಿಹಾರಸಾಮರ್ಥ್ಯಮಾಶ್ಚರ್ಯಮಿತಿ ಭಾವಃ। ವ್ಯಾ

೨. ವಿಷ್ಣುಪಾದಯಾತ್ರಯಾ ಪಿತೄಣಾಂ ವೈಕುಂಠಪ್ರಾಪ್ತಿರ್ಭವತೀತಿ ಭಾವಃ। -ವ್ಯಾ

೩. ವಿಷ್ಣುಪಾದೇ ತಿಲಾರೋಪಣೇನ ಮಹಾಪಾಪಪರಿಹಾರೋ ಭವತೀತಿ ಭಾವಃ। -ವ್ಯಾ

೪. ವಿಷ್ಣುಪಾದೇ ಪಿಂಡಪ್ರದಾನೇನ ಯಮದೂತಾಃ ಭೀತಾ ಭವಂತೀತಿ ಭಾವಃ॥ -ವ್ಯಾ

೫. ವಿಷ್ಣುಪಾದೇ ಅಕ್ಷತಾಸಮರ್ಪಣೇನ ಮುಕ್ತಾ ಭವಂತೀತ್ಯರ್ಥಃ। ವ್ಯಾ

೬. ಯಾತ್ರಾದೇಃ ಫಲತಯಾಽಪಿ ಯಾತ್ರಾದೇರೇವ ವರ್ಣನಾತ್ ವಿನಿಮಯೋಽಲಂಕಾರಃ। -ವ್ಯಾ

೫. ಶಾಸ್ತ್ರೋಕ್ತ ಕ್ರಮದಲ್ಲಿ ಮಾಡಲ್ಪಟ್ಟಾಗ ವೈಷ್ಣವರ ಪಾಲಿಗೆ ಗಯಾ ಯಾತ್ರೆಯೇ ಒಂದು ವಿಶಿಷ್ಟ'ಯಾಗ'ವಾಗುತ್ತದೆ (ಗಯಾ-ಯಾಗ).

೬. ಈ ಶ್ಲೋಕವನ್ನು ಶ್ರಾದ್ಧಾದಿ ಪುಣ್ಯಕಾರ್ಯಗಳಲ್ಲಿ ಪಠಿಸುವುದು ವಿಶೇಷ [1]ಪುಣ್ಯಕರ.

## ಫಲ್ಗುನದೀ (ಗಯಾಕ್ಷೇತ್ರ)

**ಅಪಿ ಜನ್ಮಶತೋದ್ಭೂತಂ ಕೃಪಯಾ ಯಾ ಹರಂತ್ಯಘಮ್ ।**
**ಮನುತೇ ಫಲ್ಗು ಸಾ ಫಲ್ಗುನದೀ ಸದ್ಗುಣದಾऽಸ್ತು ಮೇ ॥ ೩೦ ॥**

ಅ: **ಯಾ** = ಯಾವುದು; **ಜನ್ಮಶತೋದ್ಭೂತಂ** = ನೂರಾರು ಜನ್ಮಗಳಲ್ಲಿ ಸಂಪಾದಿತವಾದ; **ಅಘಮ್ ಅಪಿ** = ಪಾಪವನ್ನೂ; **ಕೃಪಯಾ** = ಕೃಪೆಯಿಂದ; **ಹರಂತೀ (ಅಪಿ)**= ಪರಿಹರಿಸುತ್ತಿದ್ದರೂ ಸಹ; **ಫಲ್ಗು** = ಅದನ್ನು ಅತ್ಯಲ್ಪ (ಕಾರ್ಯ)ವೆಂದು; **ಮನುತೇ** = ಭಾವಿಸುವುದೋ; **ಸಾ ಫಲ್ಗುನದೀ** = ಅಂತಹ ಫಲ್ಗುನದಿಯು; **ಮೇ** = ನನಗೆ; **ಸದ್ಗುಣದಾ** = ನಿರಹಂಕಾರಾದಿ ಸದ್ಗುಣಗಳನ್ನು ಕೊಡುವಂತಹುದಾಗಿ; **ಅಸ್ತು** = ಆಗಲಿ.

**ನೂರಾರು ಜನ್ಮಗಳಲ್ಲಿ ಒದಗಿದ ಪಾಪವನ್ನು ಕರುಣೆಯಿಂದ ಪರಿಹರಿಸಿಯೂ ಅದನ್ನು ಅತ್ಯಲ್ಪವೆಂದು ಭಾವಿಸುವ 'ಫಲ್ಗುನದಿ'ಯು ನನಗೆ ಸದ್ಗುಣಗಳನ್ನು ಕರುಣಿಸಲಿ.**

ವಿ: ೧. 'ಫಲ್ಗು ನದಿ'ಯು ವಿಷ್ಣುಪಾದ ದೇವಾಲಯದ ಸಮೀಪವೇ ಹರಿಯುವ ಒಂದು ಚಿಕ್ಕನದಿ; 'ಅಶ್ವಮೇಧಯಾಗಫಲವನ್ನು, ಮಹತ್ತರವಾದ ಸಿದ್ಧಿಯನ್ನು ಕೊಡುವ ನದಿ' ಎಂದು ಮಹಾಭಾರತದಲ್ಲಿ ಇದರ ವರ್ಣನೆ ಬಂದಿದೆ. ನದಿಯ ಪಾತ್ರ ವಿಶಾಲವಾಗಿದ್ದರೂ ಸರಸ್ವತೀನದಿಯಂತೆ ಸಾಮಾನ್ಯವಾಗಿ ಮೇಲೆ ನೀರೇ ಇಲ್ಲದ ಅಂತರ್ಗಾಮಿನಿಯಾದ ನದಿ; ಇದು ಗಯಾದ ಬಳಿ ಇರುವ ಕೋಲಾಹಲವೆಂಬ ಪರ್ವತದಲ್ಲಿ ಹುಟ್ಟುತ್ತದೆ. ಮರಳಿನ ಪ್ರವಾಹವಾದ ಇದರಲ್ಲಿ ಸ್ವಲ್ಪ ಅಗಿದರೆ ನೀರು ಸಿಕ್ಕುತ್ತದೆ. ಅದರಲ್ಲೇ ಭಕ್ತಾದಿಗಳು ಸ್ನಾನ ಮಾಡುವರು; ನೀರಿನ ಪ್ರಮಾಣದ ಅಲ್ಪತೆಯಿಂದಾಗಿಯೂ ಇದಕ್ಕೆ 'ಫಲ್ಗು' ಎಂಬ ಹೆಸರು ಯೋಗ್ಯವಾಗಿದೆ. ಶ್ರೀವಾದಿರಾಜರು ಆಧ್ಯಾತ್ಮಿಕವಾಗಿ ಅದರ ಹೆಸರಿನ ಸಾರ್ಥಕ್ಯವನ್ನು ಇಲ್ಲಿ ವರ್ಣಿಸಿರುವರು.

೨. ಫಲ್ಗುನದಿಯು ನೂರಾರು ಜನ್ಮಗಳಲ್ಲಿ ಸಂಚಿತವಾದ ಪಾಪಗಳನ್ನೂ ಸಹ ಪರಿಹರಿಸುವಂತಹ ಪುಣ್ಯನದಿ; ಅಷ್ಟು ಅಪಾರ ಉಪಕಾರಮಾಡಿದರೂ ಬಹುದೂರದಿಂದ ಬಂದ

---

೧. ಇದರೊಂದಿಗೆ ಶ್ರೀತ್ರಿವಿಕ್ರಮಪಂಡಿತರ ವಿಷ್ಣುಸ್ತುತಿಯಲ್ಲಿನ ವಿಷ್ಣುಪಾದಸ್ತುತಿಯನ್ನೂ ವಿಶೇಷವಾಗಿ ಪಠಿಸಬೇಕು:

ನಿತ್ಯೋಪಾಸ್ತ್ಯಾದರಾಭ್ಯಾಗತಗಿರಿಶಮುಖೋದಾರದೈತ್ಯಾರಿವಾರ-
ಪ್ರಾರಬ್ಧೋರುಪ್ರಣಾಮಾವಸರವಿತರಣೇ ಪ್ರೀತಿಹೇತೋಶ್ಚಚಾಲ ।
ಯಾವತ್ ತಾವತ್ ಸ್ವಧರ್ಮಾಚರಣರತರಮಾರಮ್ಯಪಾದಾಗ್ರಲೀಲಾ-
ಸಿಂಜನ್ಮಂಜೀರಮಂಜುಧ್ವನಿಪರಿಚರಿತಃ ಪಾತು ಮಾಂ ವಿಷ್ಣುಪಾದಃ ॥ –(ಶ್ಲೋ. ೧೩)

ಭಕ್ತರಿಗೆ ತಾನು ಮಾಡಿದ ಉಪಕಾರ ತುಂಬಾ [1] ಅಲ್ಪ (ಫಲ್ಗು)ವೆಂದು ಭಾವಿಸುವುದು ಈ ನದಿಯ [2] ದೊಡ್ಡತನ; ಆದಕ್ಕೆಂದೇ 'ಫಲ್ಗು' ಎಂಬ ಹೆಸರು ಇದಕ್ಕೆ ಸಾರ್ಥಕವಾಗಿದೆ; (ಹೀಗೆ ಹೆಸರಿನಲ್ಲಿ '[3] ಫಲ್ಗು'ವಾದರೂ ಯೋಗ್ಯತೆಯಲ್ಲಿ 'ಅ-ಫಲ್ಗು'ವಾಗಿರುವುದು ಈ ನದಿಯ ಹಿರಿಮೆ ಎಂದು ಭಾವ), ತನ್ನ ಯೋಗ್ಯತೆ ಮತ್ತು ತಾನು ಮಾಡುವ ಉಪಕಾರಗಳಿಗೆ ಸ್ವಲ್ಪವೂ ಅಹಂಕಾರ ಪಡದ ಈ ನದಿಯು ನಮಗೂ ನಿರಹಂಕಾರತ್ವಾದಿ ಸದ್ಗುಣಗಳನ್ನು ಕರುಣಿಸಲಿ ಎಂದು ಭಾವ.[4]

## ಮಧುರಾ (ಕ್ಷೇತ್ರ)

**ಸೇನಾ ಯತ್ರ ವಿರಕ್ತ ವೈಷ್ಣವಜನಾ ನಾಮಾಯುಧಂ ಶ್ರೀಪತೇಃ**
**ಕಾಮಾದ್ಯೈಃ ಸಹಿತಃ ಕಲಿಃ ಕಿಲ ರಿಪುರ್ಯತ್ರಾನ್ವಹಂ ಹನ್ಯತೇ ।**
**ಪ್ರಾಕಾರಾದಿ ಚ ಯತ್ರ ತೀರ್ಥನಿಚಯಃ ಕರ್ಮಾಪಿ ವರ್ಮಾಮಲಂ**
**ದದ್ಯಾತ್ ಸಾ [5] ಮಧುರಾ ಪುರೀ ಶುಭಕರೀ ಶ್ರೇಯಾಂಸಿ ಭೂಯಾಂಸಿ ನಃ ೩೧**

ಅ: ಯತ್ರ = ಎಲ್ಲಿ (ಜಿಗೀಷೋಃ = ಜಯವನ್ನು ಅಪೇಕ್ಷಿಸುವವನಿಗೆ); ಸೇನಾ = ಸೇನೆಯಾಗಿ; ವಿರಕ್ತವೈಷ್ಣವಜನಾಃ = ವಿರಕ್ತರಾದ ವೈಷ್ಣವ ಜನರೂ; ಆಯುಧಂ = ಆಯುಧವಾಗಿ; ಶ್ರೀಪತೇಃ = ಲಕ್ಷ್ಮೀಪತಿಯಾದ ಶ್ರೀಹರಿಯ; ನಾಮ = ನಾಮವೂ; ಚ = ಮತ್ತು; ಯತ್ರ = ಎಲ್ಲಿ; ಪ್ರಾಕಾರಾದಿ = ಕೋಟೆಯ ಗೋಡೆ ಮೊಲಾದವುಗಳಾಗಿ; ತೀರ್ಥನಿಚಯಃ = ತೀರ್ಥಸಮೂಹವೂ; ಚ = ಮತ್ತು; ಯತ್ರ = ಎಲ್ಲಿ; ವರ್ಮ = ಕವಚವಾಗಿ; ಅಮಲಂ = ನಿರ್ಮಲವಾದ; ಕರ್ಮ ಅಪಿ = ಪೂಜಾದಿಕರ್ಮಗಳೂ; (ಇವೆಯೋ); ಮತ್ತು; ಯತ್ರ = ಎಲ್ಲಿ; ಕಾಮಾದ್ಯೈಃ = ಕಾಮ, ಕ್ರೋಧ, ಲೋಭ,ಮೋಹ,

---

೧. ಅಸಾರಂ ಫಲ್ಗು ಶೂನ್ಯಂ ಚ ವಸೇಕಂ ತುಚ್ಛರಿಕ್ತಕಂ' । – ಅಮರಕೋಶ

೨. ಬಹುಜನಾರ್ಜಿತಪಾಪಪರಿಹಾರರೂಪಂ ಮಹೋಪಕಾರಮಪಿ ಗಾಂಭೀರ್ಯಾಖ್ಯಗುಣವತ್ವಾತ್ ,ಯತಃ ಫಲ್ಗು ಮನುತೇ'ಅಲ್ಪಮೇವ ಫಲಂ ಬಹುದೂರಾದಾಗತಾನಾಂ ತೇಷಾಂ ಮಯಾ ದತ್ತಮಿತಿ ಮನುತೇ' । 'ತ್ಯಾಗೇ ಶ್ಲಾಘಾವಿಪರ್ಯಯಃ' ಇತಿ ಮಹತಾಂ ಗುಣಃ । – ವ್ಯಾಖ್ಯಾನ

೩. ತತಃ ಫಲ್ಗುಂ ವ್ರಜೇದ್ರಾಜನ್ ತೀರ್ಥಸೇವೀ ನರಾಧಿಪ ।
ಅಶ್ವಮೇಧಮವಾಪ್ನೋತಿ ಸಿದ್ಧಿಂ ಚ ಮಹತೀಂ ವ್ರಜೇತ್ ॥ – ವನಪರ್ವ

೪. ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ । – ಗೀತಾ(೨/೭೧)

೫. ಈ ಮಧುರಾಕ್ಷೇತ್ರವನ್ನು ಶ್ರೀವಾದಿರಾಜರು ರುಗ್ಮಿಣೀಶವಿಜಯದಲ್ಲೂ ವರ್ಣಿಸಿದ್ದು, ಶ್ಲೋಕಗಳು (೧೨/೧೧,೧೨) ಕೆಳಗಿನಂತಿವೆ :

ಮಥುರಾ ಮಥುರಾ ಯೇನ ಸಮಭೂತ್ ಸಮಭೂಜ್ಝಿತಾ ।
ಸ್ಮರತ ಸ್ಮರತಾತಂ ತಂ ಮಹತಾಮಹತಾರ್ಥದಮ್ ॥
ಕೃಷ್ಣೋದಾರವಿದಾರಖಂಡಿತಮಲಂ ಯಸ್ಯಾಂ ಜಲಂ ಮಂಗಲಂ
ತತ್ಪಾದಾಂಬುಜಲಕ್ಷ್ಮ್ಯಲಕ್ಷ್ಯವಿಭವಾ ಧನ್ಯಸ್ಥಲೀ ಯತ್ಸ್ಥಲೀ ।
ಯದ್ಗೇಹಾನಿ ಕೃತಸ್ಪೃಹಾಣಿ ರಮಯಾ ನಿತ್ಯಂ ಸ್ವಭರ್ತುಃ ಸ್ಥಿತೇಃ
ದದ್ಯಾತ್ ಸಾ ಮಥುರಾಪುರೀ ಶುಭಕರೀ ಶ್ರೇಯಾಂಸಿ ಭೂಯಾಂಸಿ ನಃ ॥

ಮದ, ಮಾತ್ಸರ್ಯಗಳೆಂಬ ತನ್ನ ಭೃತ್ಯರಿಂದ; ಸಹಿತಃ = ಕೂಡಿಕೊಂಡಿರುವ; ರಿಪುಃ = ಶತ್ರುವಾಗಿ; ಕಲಿಃ =ಕಲಿಯು; ಅನ್ವಹಂ = ನಿರಂತರವೂ; ಹನ್ಯತೇ ಕಿಲ = ಕೊಲ್ಲಲ್ಪಡುವನೋ; ಸಾ = ಅಂತಹ; ಶುಭಕರೀ = ಮಂಗಲಕರವಾದ; ಮಧುರಾ ಪುರೀ = ಮಧುರಾಪಟ್ಟಣವು; ನಃ = ನಮಗೆ; ಭೂಯಾಂಸಿ = ಬಹಳವಾದ; ಶ್ರೇಯಾಂಸಿ = ಪುಣ್ಯಗಳನ್ನು; ದದ್ಯಾತ್ = ನೀಡಲಿ.

**ವಿರಕ್ತರಾದ ವೈಷ್ಣವಜನರೇ ಸೇನೆ, ಶ್ರೀಪತಿಯಾದ ಹರಿಯ ನಾಮವೇ ಆಯುಧ, ಕಾಮಾದಿಗಳಿಂದ ಕೂಡಿದ ಕಲಿಯೇ ವೈರಿ, ಅನವರತ ಅವನ ಸಂಹಾರವೇ ಕಾರ್ಯ, ತೀರ್ಥ ಸಮುದಾಯವೇ ಅದಕ್ಕೆ ಪ್ರಾಕಾರಾದಿಗಳು, ಸತ್ಕರ್ಮಗಳೇ ಕವಚ; ಇಂತಹ ಪುಣ್ಯಕರವಾದ ಮಧುರಾಪಟ್ಟಣವು ನಮಗೆ ಅಪಾರ ಶ್ರೇಯಸ್ಸನ್ನೀಯಲಿ.**

ವಿ: ೧. [೧]ಮಧುರಾಪಟ್ಟಣದಲ್ಲಿ [೨]ವಿರಕ್ತವೈಷ್ಣವ ಜನರೇ ಸೇನೆಯು, ಶ್ರೀಹರಿನಾಮವೇ ಆಯುಧವು, ತೀರ್ಥಸಮೂಹವೇ [೩]ಪ್ರಾಕಾರವು; ಶ್ರೀಹರಿಪೂಜಾರೂಪ ಸತ್ಕರ್ಮವೇ ಕವಚವೂ[೪] ಆಗಿವೆ; ಕಾಮಾದಿ ಅರಿಷಡ್ವರ್ಗ ಸಮೇತನಾದ ಕಲಿಯೇ ವಧ್ಯನಾಗಿರುವ

---

೧. 'ಮಧುರಾ'ಕ್ಷೇತ್ರವು ಮೋಕ್ಷದಾಯಕವೆಂದು ಪ್ರಸಿದ್ಧವಾದ ಸಪ್ತಮಹಾಕ್ಷೇತ್ರಗಳಲ್ಲಿ ಒಂದು (ಅಯೋಧ್ಯಾ ಮಧುರಾ ಮಾಯಾ..); ಶ್ರೀಕೃಷ್ಣನ ಅವತಾರಭೂಮಿ* ಎಂಬುದು ಇದರ ಅಸಾಧಾರಣ ಮಹತ್ತ್ವ. ಇಲ್ಲಿ ನೆಲೆಸಿದ್ದ ಮಧುಪುತ್ರನಾದ ಲವಣಾಸುರನನ್ನು ಶ್ರೀರಾಮದೇವರು ಅನುಗ್ರಹಿಸಿದ ಅಮೋಘ ಬಾಣದಿಂದ ಸಂಹರಿಸಿ ಶತ್ರುಘ್ನನು ನಿರ್ಮಿಸಿದ ಪಟ್ಟಣವೇ ಈ 'ಮಧುರಾ' ಎಂಬುದಾಗಿ ಪೌರಾಣಿಕ ಪ್ರಸಿದ್ಧಿ.

**ಶತ್ರುಘ್ನತೋ ಲವಣಮುಲ್ಬಣಬಾಣದಗ್ಧಂಕೃತ್ವಾ ಚಕಾರ ಮಧುರಾಂ ಪುರಮುಗ್ರವೀರ್ಯಃ।**
**ಸ ಶತ್ರುಸೂದನೋಽವಧೀನ್ಮಧೋಃ ಸುತಂ ರಸಾಹ್ವಯಮ್ ।**
**ಶರೇಣ ಯೇನ ಚಾಕರೋತ್ ಪುರೀಂ ಚ ಮಾಥುರಾಭಿಧಮ್ ॥** ತಾ. ನಿ.(೯/೧೭/೮೧)

ಇಲ್ಲಿಯ ಮಧುವನದಲ್ಲಿಯೇ ಧ್ರುವನು ಆರು ತಿಂಗಳುಗಳ ಕಾಲ ಕಠೋರ ತಪಸ್ಸಿನಿಂದ ಶ್ರೀಹರಿಯನ್ನು ಸಾಕ್ಷಾತ್ಕರಿಸಿಕೊಂಡದ್ದು; ಅಂಬರೀಷರಾಜನು ದುರ್ವಾಸರ ಕೋಪಕ್ಕೆ ಬಲಿಯಾಗದೆ ವಿಷ್ಣುಚಕ್ರದಿಂದ ಸುರಕ್ಷಿತವಾಗಿ ಉಳಿದಿದ್ದು , ಮೊದಲಾದ ಅನೇಕ ಮಹತ್ತರ ಘಟನೆಗಳು ನಡೆದದ್ದು ಇಲ್ಲಿಯೇ. ಇಲ್ಲಿ ಶ್ರೀಹರಿಯ **ನಿತ್ಯ ಸಾನ್ನಿಧ್ಯವಿರುವುದರಿಂದಾಗಿಯೂ ಇದರ ಸ್ಪರ್ಶಮಾತ್ರದಿಂದಲೇ ಮುಕ್ತಿಯು ಲಭಿಸುವುದಾಗಿಯೂ ಪುರಾಣಗಳು ವರ್ಣಿಸಿವೆ. ಇಲ್ಲಿಗೆ ೨೨ ಕಿ.ಮೀ. ದೂರದಲ್ಲಿ ಶ್ರೀಕೃಷ್ಣನು ಒಂದೇ ಕೈಯಿಂದ ಎತ್ತಿದ ಗೋವರ್ಧನ ಪರ್ವತವಿದೆ.

೨. ಕಾಮಾದಿಜಯಸ್ಯ ವಿರಕ್ತಿಸಾಧ್ಯತ್ವಾದಿ ಭಾವಃ। —ವ್ಯಾ

೩. ಯಥಾ ಪ್ರಾಕಾರಾದಿಃ ಶತ್ರುಪ್ರವೇಶಂ ಪ್ರತಿಬಧ್ನಾತಿ ತಥಾ ಸೇವಿತತೀರ್ಥನಿಚಯಃ ಕಲ್ಯಾದಿ ಪ್ರವೇಶಂ ಪ್ರತಿಬಧ್ನಾತೀತಿ ಭಾವಃ। — ವ್ಯಾ

೪. ಯಥಾ ವರ್ಮ ಶತ್ರುಪ್ರಯುಕ್ತಂ ಶತ್ರುಘಾತಂ ಪ್ರತಿಬಧ್ನಾತಿ ತಥಾ ವಿಷ್ಣುಪೂಜಾದಿಸತ್ಕರ್ಮ ಕಲಿಕಾರ್ಯಂ ಪ್ರತಿಬಧ್ನಾತೀತಿ ಭಾವಃ। — ವ್ಯಾ

---

* ಇಂದಿಗೂ 'ಶ್ರೀಕೃಷ್ಣ ಜನ್ಮಸ್ಥಲ' ಎಂದು ಪ್ರಸಿದ್ಧವಾದ ಸ್ಥಳವು ಇಲ್ಲಿದೆ.

** ಪುಣ್ಯಂ ಮಧುವನಂ ಯತ್ರ ಸಾಂನಿಧ್ಯಂ ನಿತ್ಯದಾ ಹರೇಃ।-ಭಾಗವತ(೪/೮/೪೨)

ಶತ್ರುವಾಗಿರುವನು[1]; ಎಂದರೆ ವೈಷ್ಣವಜನರಿಂದ ತುಂಬಿದ ಮಧುರೆಯಲ್ಲಿನ ತೀರ್ಥಕ್ಷೇತ್ರಗಳಲ್ಲಿ ವಿರಕ್ತನಾಗಿ ಮಿಂದು, ಶ್ರೀಹರಿನಾಮಸ್ಮರಣಪೂರ್ವಕ ವಿಹಿತಕರ್ಮಾನುಷ್ಠಾನವನ್ನು ಶ್ರೀಕೃಷ್ಣಾರ್ಪಣಬುದ್ಧಿಯಿಂದ ಆಚರಿಸುತ್ತಿದ್ದರೆ, ಕಾಮಕ್ರೋಧಾದಿ ಸಮೇತನಾದ ಕಲಿಯ ಬಾಧೆಯು ಪರಿಹಾರವಾಗುತ್ತದೆ ಎಂದು ಭಾವ.

೨. ಕಲಿನಿಗ್ರಹ ಮಾಡಬಯಸುವ ಸುಜನರಿಗೆ ವೈಷ್ಣವಜನರೇ ಸೇನೆ; ಶ್ರೀಹರಿನಾಮವೇ ಆಯುಧ; ತೀರ್ಥಸಮೂಹವೇ ಭದ್ರವಾದ ಕೋಟೆ; 'ಕರ್ಮ'ಯೋಗವೇ ಕವಚ ಎಂಬ ಸಾಧನಸಾಮಗ್ರಿಯು ಸಹ ಎಂದು ಇಲ್ಲಿ ಸೂಚಿತವಾಗಿದೆ.

## ವಿಶ್ರಾಂತಿತೀರ್ಥ(ಮಧುರಾ)

ಸಂಸಾರಸಂಸರಣಖೇದವಿಭೇದಕಾರಿ
ಕಂಸಾರಿಸಂಶ್ರಿತತಟೀಗತಚಾರುವಾರಿ ।
ವಿಶ್ರಾಂತಿತೀರ್ಥಮಮಲಂ ಹರಿಲೋಕವಾಸ-
ವಿಶ್ರಾಂತಿದಂ ದಿಶತು ನಃ ಸಕಲೇಪ್ಸಿತಾನಿ ॥ ೩೨ ॥

ಅ: **ಸಂಸಾರಸಂಸರಣಖೇದವಿಭೇದಕಾರಿ** = ಸಂಸಾರದಲ್ಲಿ ಜನನಮರಣರೂಪ ಸಂಚಾರದಿಂದ ಹುಟ್ಟುವ ಖೇದವನ್ನು ಹೋಗಲಾಡಿಸುವ; **ಕಂಸಾರಿಸಂಶ್ರಿತತಟೀಗತ-ಚಾರುವಾರಿ** = ಕಂಸಾರಿಯಾದ ಶ್ರೀಕೃಷ್ಣನಿಂದ ಆಶ್ರಿತವಾದ ತೀರದಲ್ಲಿನ ಮನೋಹರವಾದ ನೀರನ್ನುಳ್ಳ; **ಹರಿಲೋಕವಾಸವಿಶ್ರಾಂತಿದಂ** = ಶ್ರೀಹರಿಲೋಕವಾದ ವೈಕುಂಠದಲ್ಲಿ ವಾಸಕ್ಕೆ ಕಾರಣವಾಗುವ ಮೂಲಕ ವಿಶ್ರಾಂತಿ (ದುಃಖಾಭಾವ)ಯನ್ನು ಕೊಡುವಂತಹ; **ಅಮಲಂ** = ನಿರ್ಮಲವಾದ; **ವಿಶ್ರಾಂತಿತೀರ್ಥಂ** = ವಿಶ್ರಾಂತಿತೀರ್ಥವು; **ನಃ** = ನಮಗೆ; **ಸಕಲೇಪ್ಸಿತಾನಿ** = ಸಕಲ ಮನೋಭೀಷ್ಟಗಳನ್ನು; **ದಿಶತು** = ಕೊಡಲಿ.

ಸಂಸಾರದಲ್ಲಿ ಸುತ್ತುವ ಖೇದವನ್ನು ನೀಗಿಸುವ, ಕಂಸನನ್ನು ಕೊಂದ ಶ್ರೀಕೃಷ್ಣ ನೆಲೆಸಿದ ತೀರದ ಜಲದಿಂದ ಕೂಡಿದ, ಹರಿಲೋಕವಾದ ವೈಕುಂಠದ ವಾಸಕ್ಕೆ ಕಾರಣವಾಗುವ ಮೂಲಕ ದುಃಖವನ್ನು ಶಾಶ್ವತವಾಗಿ ಪರಿಹರಿಸುವ ವಿಶ್ರಾಂತಿ-ತೀರ್ಥವು ನಮ್ಮ ಸಕಲ ಅಭಿಲಾಷೆಗಳನ್ನು ಈಡೇರಿಸಲಿ.

ವಿ: ವಿಶ್ರಾಂತಿತೀರ್ಥವು ಇಂದು 'ವಿಶ್ರಾಮ್‌ಘಾಟ್' ಎಂದು ಪ್ರಸಿದ್ಧವಾಗಿರುವ ಮಧುರೆಯ (೨೪ ಸ್ನಾನಘಟ್ಟಗಳಲ್ಲಿ) ಪ್ರಮುಖಸ್ನಾನ ಘಟ್ಟವಾಗಿದೆ. ಶ್ರೀಕೃಷ್ಣನು ಕಂಸನನ್ನು ಸಂಹರಿಸಿದ ಅನಂತರ ಒಂದುಕ್ಷಣ ಇಲ್ಲಿ ತಂಗಿದ್ದನೆಂಬ ಹಿನ್ನಲೆಯಲ್ಲಿ ಇದಕ್ಕೆ 'ವಿಶ್ರಾಂತಿತೀರ್ಥ' ವೆಂಬ ಹೆಸರು ಬಂದಿದೆ. ಶ್ರೀವಾದಿರಾಜರು ಇದನ್ನು ತಮ್ಮ ರುಕ್ಮಿಣೀಶವಿಜಯದಲ್ಲೂ ವರ್ಣಿಸಿರುವರು:

---

೧. ಕಾಮಕ್ರೋಧಲೋಭಮೋಹಮದಮಾತ್ಸರ್ಯೈಃ ಷಡ್ಭಿಃ ಕಲಿಭೃತ್ಯೈಃ । — ವ್ಯಾ

ಯಮಿವೃಂದಮನಶ್ಚಂದ್ರಃ ಶ್ರಮಂ ಪರಿಹರನ್ನಿವ ।
ಯಮುನಾಕೂಲಮಗಮದ್ವಿಮಲೀಕರ್ತುಮಂಜಸಾ ॥ (೧೧/೬೪)

(ಶ್ರೀಕೃಷ್ಣನು ಇಲ್ಲಿ ಕ್ಷಣಕಾಲ ತಂಗಿದ್ದು, ತನ್ನ ಶ್ರಮವನ್ನು ಪರಿಹರಿಸಿಕೊಳ್ಳಲೆಂದಲ್ಲ; (ನಿಃಸ್ಸೀಮ ಬಲಪೌರುಷನಾದ ಅವನಿಗೆ ಶ್ರಮವೆಲ್ಲಿಯದು?); ಯಮುನೆಯ ಜಲಕ್ಕೆ ವಿಶೇಷ ಪಾವಿತ್ರ್ಯವನ್ನು ಉಂಟುಮಾಡಲೆಂದು ಮಾತ್ರ ಎಂದು ಭಾವ.

ವಿಶ್ರಾಂತಿತೀರ್ಥವು ತನ್ನಲ್ಲಿ ಮೀಯುವ ಜನರ ಸಂಸಾರಕ್ಕೆ ವಿಶ್ರಾಂತಿಯನ್ನುಂಟು ಮಾಡುವ ಅಪೂರ್ವತೀರ್ಥವಾಗಿದೆ ಎಂದು ಭಾವ.

[1]ಮಖಕೋಟಿಸಹಸ್ರಾಣಾಂ ಮುಖಂ ಮ್ಲಾನಯತೋ ಮುಹುಃ ।
ಅಘಶ್ರಾಂತಿಕರಸ್ಯಾಸ್ಯ ಕಥಂ ವಿಶ್ರಾಂತಿತೀರ್ಥತಾ ॥ ೩೩ ॥

ಅ: ಮಖಕೋಟಿಸಹಸ್ರಾಣಾಂ = ಸಾವಿರಕೋಟಿ(ಅಶ್ವಮೇಧ) ಯಾಗಗಳ; ಮುಖಂ = ಮುಖವನ್ನು; ಮುಹುಃ = ಮತ್ತೆ ಮತ್ತೆ; ಮ್ಲಾನಯತಃ =(ಈ ವಿಶ್ರಾಂತಿತೀರ್ಥದ ಸಾಮರ್ಥ್ಯವು ನಮಗೆ ಇಲ್ಲವಲ್ಲ ಎಂಬ ನಾಚಿಕೆಯಿಂದಾಗಿ) ಮುಖದಲ್ಲಿ ಗ್ಲಾನಿಯನ್ನುಂಟು-ಮಾಡುವಂತಹ; ಅಘಶ್ರಾಂತಿಕರಸ್ಯ = ಪಾಪಗಳಿಗೆ ಆಯಾಸವನ್ನುಂಟುಮಾಡುವಂತಹ; ಅಸ್ಯ = ಈ ತೀರ್ಥಕ್ಕೆ; ವಿಶ್ರಾಂತಿತೀರ್ಥತಾ = ವಿಶ್ರಾಂತಿತೀರ್ಥವೆಂಬ (ಹೆಸರು); ಕಥಂ (ಘಟತೇ)? = ಹೇಗೆ ತಾನೇ ಕೂಡೀತು? (ಆಕ್ಷೇಪಾಲಂಕಾರಃ)

ಸಾವಿರಕೋಟಿ ಅಶ್ವಮೇಧಯಾಗಗಳ ಮುಖವನ್ನು ನಾಚಿಸುವ, ಪಾಪಗಳಿಗೆ ಖೇದ ನೀಡುವ, ಇದಕ್ಕೆ ವಿಶ್ರಾಂತಿತೀರ್ಥ ಎಂಬ ಹೆಸರು ಹೇಗಾಯಿತೋ !

ವಿ: ಸಾವಿರಕೋಟಿ (ಅಶ್ವಮೇಧಾದಿ) ಯಾಗಗಳಿಗಿಂತಲೂ ಮಿಗಿಲಾಗಿ ಪಾಪಪರಿಹಾರಕ-ವಾಗಿರುವ ಈ ವಿಶ್ರಾಂತಿತೀರ್ಥವು, ಪಾಪಗಳಿಗೆ ಮಾತ್ರ 'ಶ್ರಾಂತಿ(ಕರ)ತೀರ್ಥ'ವೇ ಆಗಿದೆ ಎಂದೂ ಭಾವ.

## ವೃಂದಾವನ (ಕ್ಷೇತ್ರ)

ಯತ್ಕುಂಜಾ ಮುರವೈರಿಸಂಗತವಧೂವಿಕ್ರೀಡನೈರ್ವಾಸಿತಾ
ಯತ್ಸಂಜಾತಸುರದ್ರುಮೌಘಮಹಸಾ ವಿದ್ಯೋತಿತಾಶಾಮುಖಮ್ ।
ಯತ್ಪಾಥಃ ಸುರಸಿಂಧುಸಿಂಧುಮಹಿತಂ ಯತ್ರಾಖಿಲೈರ್ಲಕ್ಷಿತಂ
ಶ್ರುತ್ಯಂತಾಂತರಿತಂ ಮಹಃ ಪರಮಹೋ [2]ವೃಂದಾವನಂ ಪಾವನಮ್ ॥೩೪॥

---

೧. ವಿಶ್ರಾಂತಿತೀರ್ಥಸ್ಯ ಯಾದೃಶಂ ಸಾಮರ್ಥ್ಯಂ ತಾದೃಶಂ ನಾಸ್ಮಾಕಮಸ್ತೀತಿ ಲಜ್ಜಯಾ ಮುಖಗ್ಲಾನಿ-ಮುತ್ಪಾದಯತಃ । -ವ್ಯಾ

೨. ಮಥುರೆಯಿಂದ ಉತ್ತರಕ್ಕೆ ಸುಮಾರು ೧೦ ಕಿ.ಮೀ. ದೂರದಲ್ಲಿ ಈ ವೃಂದಾವನ ಕ್ಷೇತ್ರವಿದೆ. ಕೇದಾರ ಎಂಬ ರಾಜನ ಮಗಳಾದ ವೃಂದಾ ಎಂಬುವಳು ಶ್ರೀಕೃಷ್ಣನನ್ನು ಕುರಿತು ತಪಸ್ಸು ಮಾಡಿದ

ಅ: [1]ಯತ್ಕುಂಜಾಃ = ಯಾವ ವೃಂದಾವನದ ಪೊದೆ (ಲತಾಗೃಹ)ಗಳು; ಮುರವೈರಿ-ಸಂಗತವಧೂವಿಕ್ರೀಡನೈಃ = ಶ್ರೀಕೃಷ್ಣನ ಸಂಗಮವನ್ನು ಹೊಂದಿದ ಗೋಪವಧುಗಳ ವಿಹಾರದಿಂದ; ವಾಸಿತಾಃ = ಸುವಾಸಿತ (ಪರಿಮಳಭರಿತ)ವಾಗಿರುವವೋ; ಯತ್ಸಂಜಾತ-ಸುರದ್ರುಮೌಘಮಹಸಾ = ಯಾವುದು ತನ್ನಲ್ಲಿ ಬೆಳೆದ (ಮಂದಾರ, ಪಾರಿಜಾತ ಮೊದಲಾದ) ದೇವವೃಕ್ಷಗಳ ಸಮೂಹಗಳ ರತ್ನಮಯವಾದ ಫಲಪುಷ್ಪಗಳ ಕಾಂತಿಯಿಂದ; ವಿದ್ಯೋತಿತಾಶಾಮುಖಂ = ವಿಶೇಷಿತವಾಗಿ ಪ್ರಕಾಶಿತವಾದ ದಿಙ್ಮುಖಗಳನ್ನು ಹೊಂದಿದೆಯೋ; ಯತ್ಪಾಥಃ = ಯಾವ ವೃಂದಾವನದಲ್ಲಿನ (ಯಮುನಾ) ಜಲವು; ಸುರಸಿಂಧುಸಿಂಧು-ಮಹಿತಂ = ದೇವಗಂಗೆ ಮತ್ತು ಸಮುದ್ರಗಳಿಗಿಂತಲೂ ಹೆಚ್ಚು ಪವಿತ್ರವಾಗಿದೆಯೋ; ಯತ್ರ = ಯಾವ ವೃಂದಾವನದಲ್ಲಿ; ಶ್ರುತ್ಯಂತಾಂತರಿತಂ = ವೇದಾಂತ (ಬ್ರಹ್ಮಸೂತ್ರ ಮತ್ತು ಉಪನಿಷತ್ತು)ಗಳಿಗೂ, ಅವುಗಳಿಂದ ಉಪಲಕ್ಷಿತವಾದ ಸಕಲಶಾಸ್ತ್ರಗಳಿಗೂ ಸಾಕಲ್ಯೇನ ಅಗಮ್ಯವಾದಂತಹ; ಪರಂ = ಉತ್ಕೃಷ್ಟವಾದ; ಮಹಃ = (ಶ್ರೀಕೃಷ್ಣನೆಂಬ) ತೇಜಸ್ಸು; ಅಖಿಲೈಃ =(ಸ್ತ್ರೀಬಾಲಪಶುಪಕ್ಷಿ ಮೊದಲಾದ) ಸಕಲರಿಂದಲೂ; ಲಕ್ಷಿತಂ = ಕಾಣಲ್ಪಟ್ಟಿತೋ; (ಅಂತಹ) ವೃಂದಾವನಂ = ವೃಂದಾವನ (ಕ್ಷೇತ್ರ)ವು; ಪಾವನಂ = ಪವಿತ್ರವಾದುದು; ಅಹೋ = ಅದ್ಭುತ !

ಇಲ್ಲಿಯ ಪೊದೆಗಳು ಶ್ರೀಕೃಷ್ಣನೊಂದಿಗೆ ವಿಹರಿಸಿದ ಗೋಪಸ್ತ್ರೀಯರ ವಿಲಾಸದಿಂದ ಸುರಭಿತ; ಇಲ್ಲಿ ಬೆಳೆದ ದೇವತರುಗಳ ಫಲಪುಷ್ಪಗಳ ಕಾಂತಿಯಿಂದ ದಿಙ್ಮುಖಗಳು ಪ್ರಕಾಶಿತ; ಇಲ್ಲಿಯ ಜಲ ಗಂಗೆ ಹಾಗೂ ಸಾಗರಗಳಿಗಿಂತ ಮಿಗಿಲು; ಇಲ್ಲಿ ವೇದವೇದಾಂತಗಳಿಗೆ ಸಿಗದ ಶ್ರೀಕೃಷ್ಣನೆಂಬ ಜ್ಯೋತಿ ಸ್ತ್ರೀಬಾಲ ಪಶುಪಕ್ಷಿಗಳಿಗೂ ಗೋಚರ; ಆದರಿಂದಾಗಿ ಈ ವೃಂದಾವನವು ಅತ್ಯಂತ ಪಾವನ.

ವಿ: ೧. ವೃಂದಾವನದಲ್ಲಿನ ಲತಾಗೃಹಗಳು ಶ್ರೀಕೃಷ್ಣಗೋಪಿಯರ ಸಂಗಮ ಸ್ಥಳಗಳಾಗಿ ಪರಿಮಳೀಕೃತವಾಗಿದೆ; ಅಲ್ಲಿಯ ದಿಕ್ಕುಗಳು ಅಲ್ಲಿ ಬೆಳೆದಿರುವ ಮಂದಾರ ಪಾರಿಜಾತಾದಿ ದೇವವೃಕ್ಷಗಳ ರತ್ನಮಯವಾದ ಫಲಪುಷ್ಪಗಳ ಕಾಂತಿಯಿಂದಾಗಿ ಪ್ರಕಾಶಿತವಾಗಿವೆ; ಅಲ್ಲಿಯ ಯಮುನೆಯ ಕಪ್ಪುಜಲವೂ ಸಹ ಶ್ರೀಕೃಷ್ಣಸಂಗದಿಂದಾಗಿ ದೇವಗಂಗೆ ಮತ್ತು ಸಮುದ್ರಗಳನ್ನು ಮೀರಿಸಿದೆ; ವೇದವೇದಾಂತಗಳಿಗೂ ನಿಲುಕದ ಪರಬ್ರಹ್ಮವಸ್ತುವಾದ ಶ್ರೀಕೃಷ್ಣನು ಅಲ್ಲಿಯ ಸ್ತ್ರೀಪುರುಷಾದಿಸಾಮಾನ್ಯ ಅಧಿಕಾರಿಗಳಿಗೂ ಸಾಕ್ಷಾತ್ ಕಣ್ಣಿಗೆ ಬಿದ್ದಿದ್ದಾನೆ; ಎಂದ ಮೇಲೆ ಆ ವೃಂದಾವನವು ಎಂತಹ ಪವಿತ್ರವಾದ ಕ್ಷೇತ್ರ ! ವೃಂದಾವನದ ನೆಲ, ಜಲ, ಮುಗಿಲು ಮೊದಲಾದ ಎಲ್ಲವೂ ಶ್ರೀಕೃಷ್ಣನ ಸಂಪರ್ಕದಿಂದ ಪವಿತ್ರವಾಗಿ ಅದನ್ನು ಸಂದರ್ಶಿಸುವವರಿಗೆ ಶ್ರೀಕೃಷ್ಣನ ಪುಣ್ಯ ಸ್ಮರಣೆಯನ್ನು ತಂದು ಕೊಡುತ್ತದೆ ಎಂದು ಭಾವ.

---

ಸ್ಥಳವಾದ್ದರಿಂದಲೇ ಇದಕ್ಕೆ ವೃಂದಾವನ ಎಂಬ ಹೆಸರು ಬಂದಿತೆಂದು ಪೌರಾಣಿಕ ಹಿನ್ನೆಲೆವುಂಟು (ಬ್ರಹ್ಮವೈವರ್ತಪುರಾಣ(೨/೮/೯೬). ಗೋಕುಲದಿಂದ ಇಲ್ಲಿಗೆ ಆಗಮಿಸಿದ ಶ್ರೀಕೃಷ್ಣನು ಕಂಸವಧೆಗಾಗಿ ಮಧುರೆಗೆ ತೆರಳುವವರೆಗೂ ಇಲ್ಲಿಯೇ ತನ್ನ ಲೋಕೋತ್ತರ ಬಾಲಲೀಲೆಗಳಿಂದ ಸಜ್ಜನರನ್ನು ಸಂತೋಷಪಡಿಸಿದನು ಎಂದು ಭಾಗವತಾದಿಪುರಾಣಗಳಲ್ಲಿ ಉಕ್ತವಾಗಿದೆ.

೧. ಈ ಶ್ಲೋಕದ ಪೂರ್ವಾರ್ಧವು ಶ್ರೀವಾದಿರಾಜರ ರುಗ್ಮಿಣೀಶವಿಜಯದಲ್ಲೂ ಬಂದಿದೆ. (೯/೬೨)

೨. ಒಂದು ಸ್ಥಳದ ಪಾವಿತ್ರ್ಯಕ್ಕೆ ಅಲ್ಲಿರುವ ಭಗವತ್ಸನ್ನಿಧಾನವೇ ಪರಮಮುಖ್ಯ ಕಾರಣ ಎಂಬ ಸೂಚನೆಯೂ ಇಲ್ಲಿದೆ.

## ಅಯೋಧ್ಯಾ

**ಅಯೋಧ್ಯಾ ನಾಮ ನಗರೀ ಭಾತಿ ಸಾಧ್ವೀ ವಧೂರಿವ।**
**ವನಂಗತಸ್ಯಾಪಿ ತಸ್ಯ ಪಾದುಕೇ ಯಾಽಕರೋತ್ ಪತಿಮ್ ॥ ೩೫ ॥**

ಅ: ಅಯೋಧ್ಯಾನಾಮ ='ಅಯೋಧ್ಯೆ' ಎಂಬ; ನಗರೀ = ಪಟ್ಟಣವು; ಸಾಧ್ವೀ = ಪತಿವ್ರತೆಯಾದ; ವಧೂಃ ಇವ = ಸ್ತ್ರೀಯಂತೆ; ಭಾತಿ = ಕಂಗೊಳಿಸುತ್ತಿದೆ; ಯಾ = ಆ ನಗರಿಯು; ವನಂಗತಸ್ಯಾಪಿ = ಶ್ರೀರಾಮನು ಕಾಡಿಗೆ ಹೋದಾಗಲೂ; ತಸ್ಯ = ಅವನ; ಪಾದುಕೇ = (ಎರಡು) ಪಾದುಕೆಗಳನ್ನು; ಪತಿಂ = ತನ್ನ(ಅಧಿ)ಪತಿಯನ್ನಾಗಿ; ಅಕರೋತ್ = ಮಾಡಿಕೊಂಡಿತು; ಬೇರೊಬ್ಬನನ್ನು (ಅಧಿ)ಪತಿಯನ್ನಾಗಿ ಹೊಂದಲಿಲ್ಲ. (ಉಪಮಾ-ಲಂಕಾರ)

ಸ್ವಾಮಿಯಾದ ಶ್ರೀರಾಮನು ಕಾಡಿಗೆ ತೆರಳಿದಾಗ ಸಹ ಅವನ ಎರಡು ಪಾದುಕೆಗಳನ್ನೇ ತನ್ನ ಪತಿಯನ್ನಾಗಿ ಮಾಡಿಕೊಂಡ 'ಅಯೋಧ್ಯೆ' ಎಂಬ ಈ ನಗರ ಪತಿವ್ರತಾ ಸ್ತ್ರೀಯಂತೆ ಕಂಗೊಳಿಸುತ್ತಿದೆ.

ವಿ: ೧. ತನ್ನ ಗಂಡನು ದೇಶಾಂತರ ಹೊರಟಾಗ ಅವನು ಮರಳಿ ಬರುವವರೆಗೂ ಆತನ ವಸ್ತ್ರ, ಆಭರಣ, ಪಾದುಕೆ ಮೊದಲಾದ ವಸ್ತುಗಳಲ್ಲಿ ಅವನನ್ನು ಧ್ಯಾನಿಸುತ್ತ ದಿನ ಕಳೆಯುವುದು ಪತಿವ್ರತಾಸ್ತ್ರೀಯರ [೧]ಪದ್ಧತಿ; ಅದರಂತೆ, ಅಯೋಧ್ಯೆಯು ಶ್ರೀರಾಮನು ವನವಾಸಕ್ಕೆ ತೆರಳಿ-ದಾಗಲೂ, ಬೇರೆಯವರ ಆಳ್ವಿಕೆಯಲ್ಲಿರದೆ, ಶ್ರೀರಾಮನ ಪಾದುಕೆಗಳನ್ನೇ (ಅಧಿ)ಪತಿಯನ್ನಾಗಿ ಹೊಂದಿದ್ದರಿಂದ, ಅದು ಪತಿವ್ರತಾಸ್ತ್ರೀಯಂತೆ ಶೋಭಿಸುತ್ತಿದೆ ಎಂದು ಭಾವ.

೨. ಶ್ರೀರಾಮದೇವರ ವನವಾಸ ಕಾಲದಲ್ಲಿ ಭರತನು ಶ್ರೀರಾಮನ ಪಾದುಕೆಗಳನ್ನೇ ಸಿಂಹಾಸನದ ಮೇಲಿರಿಸಿ ತಾನು ಶ್ರೀರಾಮನ ಪ್ರತಿನಿಧಿಯೆಂದು ಭಾವಿಸಿ 'ನಂದಿಗ್ರಾಮ'ದಲ್ಲಿದ್ದು ಅಯೋಧ್ಯೆಯನ್ನು ಪಾಲಿಸಿದ ರಾಮಾಯಣದಕಥೆಯ ಹಿನ್ನೆಲೆಯನ್ನು ಶ್ರೀವಾದಿರಾಜರು ಹೀಗೆ ಸುಂದರವಾದ ಉಪಮಾಲಂಕಾರದಿಂದ ವರ್ಣಿಸಿರುವರು.

೩. ಭರತಖಂಡದ ಮೋಕ್ಷದಾಯಕ ಸಪ್ತಮಹಾಕ್ಷೇತ್ರಗಳಲ್ಲಿ ಪ್ರಥಮತಃ ಪರಿಗಣಿತ-ವಾಗಿರುವ ಈ ಅಯೋಧ್ಯೆಯು ಸರಯೂತೀರದ ಪುಣ್ಯಕ್ಷೇತ್ರ. ಉತ್ತರಪ್ರದೇಶರಾಜ್ಯದ ಒಂದು ಜಿಲ್ಲಾಕೇಂದ್ರ. ಸೂರ್ಯವಂಶದ ರಾಜರುಗಳ ರಾಜಧಾನಿಯೂ ಕೋಸಲದೇಶಕ್ಕೆ ಮುಖ್ಯಪಟ್ಟಣವೂ ಆಗಿದ್ದುದು ಇದರ ಹಿರಿಮೆ.

---

೧. ಪತಿವ್ರತಾ ನಾರೀ ಭರ್ತರಿ ಪ್ರೋಷಿತೇ ಸತಿ ತದೀಯಂ ವಸ್ತ್ರಾಭರಣಾದಿವಸ್ತು ತದ್ವತ್ ಸಮೀಕ್ಷ್ಯ ಯಥಾ ತಿಷ್ಠತಿ ತದ್ವದಿಯಮಪಿ ನಗರೀ ತಿಷ್ಠತೀತಿ ಭಾವಃ। — ವ್ಯಾ

೪. ಮಧುರೆಯು ಶ್ರೀಕೃಷ್ಣಾವತಾರದ ಪುಣ್ಯಕ್ಷೇತ್ರವಾದರೆ, ಅಯೋಧ್ಯೆಯು ಶ್ರೀರಾಮಾವತಾರದ ಪುಣ್ಯಕ್ಷೇತ್ರ. ಶ್ರೀರಾಮಾವತಾರದ ಸ್ಥಳವು ಇಂದೂ ಶ್ರೀರಾಮಜನ್ಮಭೂಮಿ ಎಂದು ಪ್ರಸಿದ್ಧವಾಗಿದೆ.

## ನೈಮಿಷಾರಣ್ಯ(ಕ್ಷೇತ್ರ)[1]

**ಮುನೀಂದ್ರಮಾನಸಾವಾಲರೂಢಕೃಷ್ಣಕಥಾಲತಾ ।**
**ವಿಭಾತಿ ನೈಮಿಷಾರಣ್ಯಮಹೀ ಸರ್ವಮಹೀಯಸೀ ॥ ೩೬ ॥**

ಅ: ಮುನೀಂದ್ರಮಾನಸಾವಾಲರೂಢಕೃಷ್ಣಕಥಾಲತಾ = (ಶೌನಕಾದಿ) ಮುನಿಶ್ರೇಷ್ಠರ ಮನಸ್ಸೆಂಬ ಪಾತಿಯಲ್ಲಿ ಬೆಳೆದ ಶ್ರೀಕೃಷ್ಣಕಥೆ ಎಂಬ ಲತೆಯನ್ನುಳ್ಳ; ಸರ್ವಮಹೀಯಸೀ = ಸಕಲಕ್ಷೇತ್ರಗಳಿಗಿಂತಲೂ ಮಿಗಿಲಾದ; ನೈಮಿಷಾರಣ್ಯಮಹೀ =ನೈಮಿಷಾರಣ್ಯ ಭೂಮಿಯು; ವಿಭಾತಿ = ಬಹಳವಾಗಿ ಶೋಭಿಸುತ್ತಿದೆ.

> ಮುನಿಶ್ರೇಷ್ಠರ ಮನಸ್ಸೆಂಬ ಪಾತಿಯಲ್ಲಿ ಬೆಳೆದ ಶ್ರೀಕೃಷ್ಣಕಥೆ ಎಂಬ ಲತೆಯುಳ್ಳ ನೈಮಿಷಾರಣ್ಯವು ಸಕಲಕ್ಷೇತ್ರಗಳಿಗಿಂತಲೂ ಮಿಗಿಲಾದ ಪುಣ್ಯಕ್ಷೇತ್ರವಾಗಿ ಶೋಭಿಸುತ್ತಿದೆ.

ವಿ: ೧. ಸೂತಪುರಾಣಿಕರು ಭಾಗವತಾದಿಪುರಾಣಗಳನ್ನು ಮಹಾಭಾರತವನ್ನು ೮೦ ಸಾವಿರ ಶೌನಕಾದಿ ಮುನಿಶ್ರೇಷ್ಠರಿಗೆ ಪ್ರವಚನ ಮಾಡಿದ ಪುಣ್ಯಕ್ಷೇತ್ರವೇ 'ನೈಮಿಷಾರಣ್ಯ'; ಸೂತಪುರಾಣಿಕರು ಶೌನಕಾದಿಗಳ ಮನಸ್ಸಿನಲ್ಲಿ ಬಿತ್ತಿದ ಕೃಷ್ಣಕಥೆಯು ಲತೆಯಾಗಿ ಪಸರಿಸಿದ ಪುಣ್ಯಭೂಮಿ; ಆದ್ದರಿಂದಲೇ ಇದು ತುಂಬಾ ಪವಿತ್ರವಾದ ಕ್ಷೇತ್ರ ಎಂದು ಭಾವ;

೨. ಈ ಕ್ಷೇತ್ರವನ್ನು ಸಂದರ್ಶನಾದಿಗಳಿಂದ ಸೇವಿಸುವವರ ಮನಸ್ಸಿನಲ್ಲಿ ಕೃಷ್ಣಕಥೆಯು ಅಂಕುರಿಸಿ ಮೋಕ್ಷದ ಹಾದಿ ಗೋಚರಿಸುವುದು ಎಂಬ ಸೂಚನೆಯೂ ಇಲ್ಲಿದೆ.

೩. ನೈಮಿಷಾರಣ್ಯವು ಉತ್ತರಪ್ರದೇಶದ ಲಕ್ನೋ ನಗರದಿಂದ ಸುಮಾರು ೧೦೦ ಕಿ.ಮೀ. ದೂರದಲ್ಲಿದೆ; ಗೋಮತೀನದಿಯ ತೀರದ ಈ ಕ್ಷೇತ್ರಕ್ಕೆ ನಿಮಿಷ ಎಂಬ ಮುನಿಯ ತಪೋಭೂಮಿಯಾದ್ದರಿಂದಲೂ, ನಿಮಿಷವೆಂಬ ವೃಕ್ಷಗಳ ಮುಖ್ಯ ನೆಲೆಯಾದ್ದರಿಂದಲೂ ನೈಮಿಷಾರಣ್ಯವೆಂಬ ಹೆಸರು ಎಂದೂ ಶ್ರೀವಿಜಯಧ್ವಜತೀರ್ಥರು ತಮ್ಮ ಭಾಗವತ ವ್ಯಾಖ್ಯಾನದಲ್ಲಿ[2] ಬರೆದಿರುವರು.

---

೧. ನಿಮಿಷಾಃ ಋಷಿನಿಷೇವ್ಯಫಲಾಃ ವೃಕ್ಷವಿಶೇಷಾಃ ತೇಽಸ್ಮಿನ್ ಸಂತೀತಿ ನೈಮಿಷಮ್ । ಚಿತ್ರಕೃನ್ನಿಮಿಷೋನೇಮಿಶ್ಚಂಚುಲೋಽಥಾಯುಗಚ್ಛದಃ । ಇತ್ಯಭಿಧಾನಾತ್ । - ವಿಜಯಧ್ವಜೀಯ ಟೀಕಾ
ನಿಮಿಷಾ ನಾಮ ಋಷಿಭೋಜ್ಯಫಲೋಪೇತಾ ವೃಕ್ಷವಿಶೇಷಾಃ ತೇಷಾಂ ಸಮೂಹೋ ನೈಮಿಷಂ ವನಂ । – ಯಾದವೇಂದ್ರತೀರ್ಥರು (ಭಾಗವತಟಿಪ್ಪಣಿ)

೨. ನಿಮಿಷನಾಮ್ನಾ ಋಷಿಣಾ ಯತ್ರ ತಪಶ್ಚೀರ್ಣಂ ತತ್ಸಂಬಂಧಾದ್ವಾ ನೈಮಿಷಮ್ ।- ವಿಜಯಧ್ವಜೀಯಟೀಕಾ

೪. ಶ್ರೀಹರಿಯು ನಿಮಿಷಮಾತ್ರದಲ್ಲಿ ದಾನವರನ್ನು ಸಂಹರಿಸಿದ ಸ್ಥಳವೆಂದು ವರಾಹಪುರಾಣವೂ, ಚಕ್ರದ ನೇಮಿಯು ಬಿದ್ದುಹೋದ ಸ್ಥಳವೆಂದು ವಾಯು ಮತ್ತು ಕೂರ್ಮಪುರಾಣಗಳೂ ಇದನ್ನು ವರ್ಣಿಸಿವೆ[೧]. ಜ್ಞಾನಸತ್ರವನ್ನು ನಡೆಸಲುಬೇಕಾದ ಪುಣ್ಯಸ್ಥಳವನ್ನು ಗುರುತಿಸಲು ಅಪೇಕ್ಷಿಸಿದ ಶೌನಕಾದಿಗಳಿಗೆ ಬ್ರಹ್ಮದೇವರಿತ್ತ ಒಂದು ಚಕ್ರದ ನೇಮಿಯು ಕಳಚಿ ಭೂಮಿಯೊಳಗೆ ಮರೆಯಾದ ಸ್ಥಳವಾದ್ದರಿಂದ ಇದಕ್ಕೆ ನೈಮಿಷಾರಣ್ಯವೆಂದು ಹೆಸರು ಎಂದೂ ಕೆಲವರು[೨] ಹೇಳುವರು.

೫. ಹಾಗೆ ಚಕ್ರವು ಮರೆಯಾದ ಸ್ಥಳದಲ್ಲೇ ಇಂದು 'ಚಕ್ರತೀರ್ಥ' ವೆಂಬ ವಿಶಾಲವಾದ ಸರೋವರವು ಇದೆ.

೬. ಬಲರಾಮದೇವರು ತಮಗೆ ಅಪಚಾರವೆಸಗಿದ ಸೂತಪುರಾಣಿಕರನ್ನು ಸಂಹರಿಸಿ, ಅವರ ಮಗ ಉಗ್ರಶ್ರವಸ್ ಎಂಬುವರಿಗೆ ಪ್ರವಚನ ಸಾಮರ್ಥ್ಯವನ್ನು ಅನುಗ್ರಹಿಸಿದ ಸ್ಥಳವು ಇದೇ ಎಂದು ಭಾಗವತ ಪುರಾಣದಲ್ಲಿದೆ.(೧೦/೭೮/೨೮,೩೪).

೭. ಇಲ್ಲಿ ಇಂದಿಗೂ ಋಷಿಮುನಿಗಳ ಪಾಠಪ್ರವಚನಗಳು ಗುಪ್ತವಾಗಿ ನಡೆಯುತ್ತಿವೆ ಎಂದು ಹೇಳುವರು (ವಾಯುಪುರಾಣ – ಮಾಘಮಾಹಾತ್ಮ); ನೈಮಿಷೇಽನಿಮಿಷಕ್ಷೇತ್ರೇ –ಭಾಗವತ –೧/೧/೪)[೩].

೮. ನೈಮಿಷಾರಣ್ಯವನ್ನು ಹುಡುಕಿ ಹೊರಟಾಗಲೇ ಅರ್ಧಪಾಪಗಳು ದೂರಾಗುವುವು. ಭೂಮಂಡಲದಲ್ಲಿನ ಸಕಲತೀರ್ಥಗಳೂ ಇಲ್ಲಿ ನೆಲೆಸಿವೆ. ಇಲ್ಲಿ ಮಿಂದವನ ಏಳುಕುಲಗಳೂ ಉದ್ಧಾರವಾಗುವವು; ಇಲ್ಲಿ ಉಪವಾಸದಿಂದ ಮರಣ ಹೊಂದಿದವನಿಗೆ ಸಕಲ ಉತ್ತಮಲೋಕಗಳೂ ದೊರೆಯುವುವು ಎಂಬುದಾಗಿ ಮಹಾಭಾರತವು ಈ ಕ್ಷೇತ್ರವನ್ನು ವರ್ಣಿಸಿರುವುದು.[೪]

---

೧. ನೈಮಿಷೇ ನಿಮಿಷಮಾತ್ರೇಣ ಯತ್ರ ದಾನವಬಲಂ ನಿಹತಂ ತದರಣ್ಯಂ ನೈಮಿಷಮಿತ್ಯುಚ್ಯತೇ।
ನೈಮಿಷಾರಣ್ಯೇ ಇತ್ಯರ್ಥಃ। ಯಥೋಕ್ತಂ ವರಾಹಪುರಾಣೇ -
ಏವಂ ಕೃತ್ವಾ ತತೋ ದೇವೋ ಮುನಿಂ ಗೌರಮುಖಂ ತದಾ।
ಉವಾಚ ನಿಮಿಷೇಣೇದಂ ನಿಹತಂ ದಾನವಂ ಬಲಮ್ ॥
ಅರಣ್ಯೇಽಸ್ಮಿಂಸ್ತತಸ್ತ್ವೇತನ್ನೈಮಿಷಾರಣ್ಯಸಂಜ್ಞಿತಮ್।
ಭವಿಷ್ಯತಿ ಯಥಾರ್ಥಂ ವೈ ಬ್ರಾಹ್ಮಣಾನಾಂ ವಿಶೇಷಕಮ್ ॥ ಇತಿ।
-ಯದುಪತ್ಯಾಚಾರ್ಯಕೃತ ಭಾಗವತಟಿಪ್ಪಣೀ(೧/೧/೪)

೨. ವಿಶಿಷ್ಟಕ್ಷೇತ್ರದರ್ಶನಾಯ ದೇವಪ್ರಹಿತಸ್ಯ ಸುದರ್ಶನಸ್ಯ ನೇಮಿರ್ಯಸ್ಮಿನ್ ವಿಶೀರ್ಯತ ತನ್ನಿಮಿಷಂ ತದೇವ ನೈಮಿಷಮಿತಿ ಯತ್ ತಚ್ಚಿಂತ್ಯಮ್। – ವಿಜಯಧ್ವಜೀಯವ್ಯಾಖ್ಯಾನ

೩. ಶ್ರೀನರಹರ್ಯಾದಿಸುರವರಸನ್ನಿಧಾನಾವಾಸೇ। – ವಿಜಯಧ್ವಜೀಯ ವ್ಯಾಖ್ಯಾನ

೪. ನೈಮಿಷಂ ಮೃಗಯಾನಸ್ಯ ಪಾಪಸ್ಯಾರ್ಧಂ ಪ್ರಣಶ್ಯತಿ।
ಪ್ರವಿಷ್ಟಮಾತ್ರಸ್ತು ನರಃ ಸರ್ವಪಾಪೈಃ ಪ್ರಮುಚ್ಯತೇ ॥

[1]ಹಸ್ತಿನಪುರೀ

ಅಂತರ್ನಿವಿಷ್ಟಕಲಿಕೌರವಸೈನಿಕಾऽಪಿ
ಯಾ ಧರ್ಮಮೇವ ದಯಿತಂ ವರಯಾಂಬಭೂವ।
ಯೋಗೀಂದ್ರಬುದ್ಧಿರಿವ ಭೀಮಪರಾಕ್ರಮೇಣ
ಸಾ ಭಾತಿ ಹಸ್ತಿನಪುರೀ ಪ್ರಥಿತಾ ಪೃಥಿವ್ಯಾಮ್ ॥ ೩೭ ॥

---

ತತ್ರ ಮಾಸಂ ವಸೇದ್ಧೀರೋ ನೈಮಿಷೇ ತೀರ್ಥತತ್ಪರಃ।
ಪೃಥಿವ್ಯಾಂ ಯಾನಿ ತೀರ್ಥಾನಿ ತಾನಿ ತೀರ್ಥಾನಿ ನೈಮಿಷೇ ॥
ಕೃತಾಭಿಷೇಕಸ್ತತ್ರೈವ ನಿಯತೋ ನಿಯತಾಶನಃ।
ಗವಾಂಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಭಾರತ।
ಪುನಾತ್ಯಾಸಪ್ತಮಂ ಚೈವ ಕುಲಂ ಭರತಸತ್ತಮ।
ಯಸ್ತ್ಯಜೇನ್ನೈಮಿಷೇ ಪ್ರಾಣಾನುಪವಾಸಪರಾಯಣಃ।
ಸ ಮೋದೇತ್ ಸರ್ವಲೋಕೇಷು ಏವಮಾಹುರ್ಮನೀಷಿಣಃ।
ನಿತ್ಯಂ ಮೇಧ್ಯಂ ಚ ಪುಣ್ಯಂ ಚ ನೈಮಿಷಂ ನೃಪಸತ್ತಮ ॥ – ಭಾರತ (೩/೮೪/೬೦-೬೪)

೧. ಹಸ್ತಿನಪುರವು ಡೆಲ್ಲಿ - ಹರಿದ್ವಾರ ಮಾರ್ಗದಲ್ಲಿರುವ ಮೀರತ್ ನಗರದಿಂದ ದಕ್ಷಿಣಕ್ಕೆ ೩೫ಕಿ.ಮೀ. ದೂರದಲ್ಲಿದೆ. ಪಾಂಡವರ ಕಾಲದಲ್ಲಿ ಗಂಗಾತೀರದಲ್ಲಿದ್ದ ಈ ಪಟ್ಟಣವು, ಈಗ ಗಂಗೆಯು ಪಾತ್ರವನ್ನು ಬದಲಿಸಿರುವುದರಿಂದಾಗಿ ಸುಮಾರು ೭ ಕಿ.ಮೀ. ದೂರದಲ್ಲಿದೆ. ಆದರೆ ಗಂಗೆಯ ಒಂದು ಕವಲು ಇಂದೂ ಈ ಪಟ್ಟಣದ ಬಳಿ ಹರಿಯುತ್ತಿದ್ದು ಆದನ್ನು 'ವೃದ್ಧಗಂಗಾ'(ಬೇಡ್) ಎನ್ನುವರು. ★'ಹಸ್ತೀ' ಎಂಬ ಕುರುವಂಶದ ದೊರೆಯ ನಿರ್ಮಾಣವಾದ್ದರಿಂದ ಇದಕ್ಕೆ 'ಹಸ್ತಿನಾಪುರ' ಎಂದು ಹೆಸರಾಗಿದೆ. ಕುರುಕ್ಷೇತ್ರ ಯುದ್ಧದ ಅನಂತರ ಪಾಂಡವರು ೩೬ ವರ್ಷಗಳಷ್ಟು ದೀರ್ಘಕಾಲ ಈ ಪಟ್ಟಣವನ್ನು ರಾಜಧಾನಿಯನ್ನಾಗಿ ಹೊಂದಿದ್ದರು; ಅವರು ೧೫ ವರ್ಷಗಳಷ್ಟು ದೀರ್ಘಕಾಲ ಅಶ್ವಮೇಧಯಜ್ಞಗಳನ್ನು ಮಾಡಿದ ಪವಿತ್ರಸ್ಥಳವೂ ಇದೇ ಆಗಿದೆ. ಮಹಾಭಾರತದುದ್ದಕ್ಕೂ ವಿಶಿಷ್ಟಸ್ಥಾನವಹಿಸುವ ಈ ಪಟ್ಟಣದ ಕಥೆಯೇ ಭೌಗೋಲಿಕ ಮಹಾಭಾರತ ಎನ್ನಬಹುದು. ತಾವು ಭೀಮನಾಗಿದ್ದಾಗ ೩೬ ವರ್ಷಗಳಷ್ಟು ಕಾಲ ಯುವರಾಜರಾಗಿದ್ದ ಈ ಸ್ಥಳದಲ್ಲಿ ಶ್ರೀಮಧ್ವಾಚಾರ್ಯರು ಒಮ್ಮೆ ಚಾತುರ್ಮಾಸ್ಯಕ್ಕೆ ಕುಳಿತಿದ್ದ ವಿವರವು ಸುಮಧ್ವವಿಜಯದಲ್ಲಿದೆ (೧೦/೩೪-೩೬) :

ಪ್ರಾಪ್ತಸ್ತತೋ ಹಸ್ತಿನರಾಜಧಾನೀಂ ಮಾಸಾನುವಾಸೇಹ ಸ ವಾಸಯೋಗ್ಯಾನ್।
ಮಠಾಂತರೇऽನಂತಗುಣಾಂತರಃ ಸನ್ನೇಕಾಂತದೇಶೇ ಸರಿತೋऽಸಮೀಪೇ ॥
ಭಿತ್ವಾ ಭುವಂ ದೇವನದೀ ಜಗಾಮ ಶಾಖಾವಿಶೇಷೇಣ ನಿಷೇವಿತುಂ ತಮ್।
ವಾಣೀ ಚ ಯತ್ರೇಷ್ಯತಯಾ ಕೃತಾರ್ಥಾ ಶಿವಾದಿವಂದ್ಯಾ ನ ತದತ್ರ ಚಿತ್ರಮ್ ॥
ಗುರುಪ್ರಬರ್ಹಸ್ಯ ಪದಾರವಿಂದಂ ವಿದೂರತಃ ಸಾ ಪ್ರಣನಾಮ ಮೂರ್ತಾ।
ಔದಾರ್ಯಸೌಂದರ್ಯತನುಂ ತನೂಂ ತಾಮಾಲಕ್ಷ್ಯ ಶಿಷ್ಯೈರತಿವಿಸ್ಮಿತಂ ತೈಃ ॥

★ ಸುಹೋತ್ರಃ ಖಲು ಇಕ್ಷ್ವಾಕುಕನ್ಯಾಮುಪಯೇಮೇ ಸುವರ್ಣಾಂ ನಾಮ। ತಸ್ಯಾಮಸ್ಯ ಜಜ್ಞೇ ಹಸ್ತೀ। ಯ ಇದಂ ಹಸ್ತಿನಾಪುರಂ ಸ್ಥಾಪಯಾಮಾಸ। ಏತದಸ್ಯ ಹಸ್ತಿನಾಪುರತ್ವಮ್।
– ಮಹಾಭಾರತ ಆದಿ. (೯೫/೩೪)

ಅ: ಯಾ = ಯಾವುದು; ಅಂತರ್ನಿವಿಷ್ಟಕಲಿಕೌರವಸೈನಿಕಾ ಅಪಿ =ತನ್ನೊಳಗೆ ಪ್ರವೇಶಿಸಿದ್ದ 'ಕಲಿ'ಯಾದ ದುರ್ಯೋಧನನ ಸೈನಿಕರಿಂದ ಕೂಡಿದ್ದರೂ ಸಹ; **ಭೀಮಪರಾಕ್ರಮೇಣ** = ಶ್ರೀಭೀಮಸೇನದೇವರ ಪರಾಕ್ರಮದಿಂದ; **ಧರ್ಮಂ ಏವ** = ಧರ್ಮರಾಜ(ಯುಧಿಷ್ಠಿರ)ನನ್ನೇ; **ದಯಿತಂ** = (ಅಧಿ)ಪತಿಯನ್ನಾಗಿ; **ವರಯಾಂಬಭೂವ**= ವರಿಸಿತೋ; **ಸಾ** = ಅಂತಹ; **ಪೃಥಿವ್ಯಾಂ** = ಭೂಮಿಯಲ್ಲಿ; **ಪ್ರಥಿತಾ** = ಪ್ರಸಿದ್ಧವಾದ; **ಹಸ್ತಿನಪುರೀ** = ಹಸ್ತಿನಾಪುರವು; **ಯೋಗೀಂದ್ರಬುದ್ಧಿಃ ಇವ** = ಯೋಗಿಶ್ರೇಷ್ಠರ ಬುದ್ಧಿಯೋ ಎಂಬಂತೆ; **ಭಾತಿ** = ಶೋಭಿಸುತ್ತಿರುವುದು **(ಶ್ಲೇಷಾಲಂಕಾರ =ಉಪಮಾಲಂಕಾರ)**

**'ಕಲಿ'ಯಾದ ದುರ್ಯೋಧನನ ಸೈನಿಕರು ಒಳಗೆ ನುಗ್ಗಿದ್ದರೂ ಯೋಗಿಶ್ರೇಷ್ಠರ ಬುದ್ಧಿಯಂತೆ ಭೀಮಪರಾಕ್ರಮದಿಂದ ಧರ್ಮರಾಜನನ್ನೇ ಅಧಿಪತಿಯನ್ನಾಗಿ ಸ್ವೀಕರಿಸಿದ ಈ ಹಸ್ತಿನಾಪುರವು ಭೂಮಿಯಲ್ಲೇ ಅತಿಸುಪ್ರಸಿದ್ಧಕ್ಷೇತ್ರವಾಗಿ ಕಂಗೊಳಿಸುತ್ತಿದೆ.**

ವಿ: ೧. ಯೋಗಿಶ್ರೇಷ್ಠರ ಮನಸ್ಸಿನಲ್ಲಿ (ಮೊದಲು ಹೇಗೆ) ಕಲಿಯ ಭಟರಾದ ಕಾಮಾದಿ-ದೋಷಗಳು ತುಂಬಿದ್ದರೂ, ಗಾಳಿ, ನೀರು, ಎಲೆ ಮೊದಲಾದವುಗಳನ್ನು ಮಾತ್ರ ತಿಂದು ಸೇವಿಸುವ ಭಯಂಕರವಾದ ತಪಶ್ಚರ್ಯೆಯಿಂದ, ಅವರ ಬುದ್ಧಿಯು (ಕಾಮಾದಿಗಳನ್ನು ಜಯಿಸಿ) ಪುಣ್ಯವನ್ನೇ ಸಂಪಾದಿಸುವುದೋ, ಅದೇ ರೀತಿಯಾಗಿ ಹಸ್ತಿನಾಪುರಿಯೂ ಸಹ ತನ್ನಲ್ಲಿ ದುರ್ಯೋಧನನ ಸೈನಿಕರು ತುಂಬಿದ್ದರೂ, ಶ್ರೀಭೀಮಸೇನದೇವರ ಪರಾಕ್ರಮದಿಂದಾಗಿ ಅವರನ್ನೆಲ್ಲ ಪರಿಹರಿಸಿ-ಕೊಂಡು ಧರ್ಮರಾಜನನ್ನೇ (ಅಧಿ)ಪತಿಯನ್ನಾಗಿ ಹೊಂದಿತು ಎಂದು ಭಾವ.

೨. ಹಸ್ತಿನಾಪುರದಲ್ಲಿ ದುರ್ಯೋಧನನ ಆಳ್ವಿಕೆಯು ಪರಿಹಾರವಾಗಿ ಧರ್ಮರಾಜನ ಆಳ್ವಿಕೆಯು ನೆಲೆಸಿದ ಪ್ರಸಂಗವನ್ನು ಮಹಾಭಾರತದ ಸಾರವಾದ ಶ್ರೀಭೀಮಸೇನನ ಪರಾಕ್ರಮದ ಫಲ ಎಂದು ವರ್ಣಿಸುವ ಈ ಶ್ಲೋಕವು ಸಾಧಕನ ಜೀವನದಲ್ಲಿ ಶ್ರೀವಾಯುದೇವರ ಪಾತ್ರ ಮತ್ತು ಉಗ್ರತಪಶ್ಚರ್ಯೆಯ ಮಹತ್ತ್ವಗಳನ್ನು ತುಂಬಾ ಸುಂದರವಾಗಿ ವಿವರಿಸಿದೆ.

೩. ಹಸ್ತಿನಾಪುರವನ್ನು ಲಕ್ಷಣಾಸ್ವಯಂವರದ ಹಿನ್ನೆಲೆಯಲ್ಲಿ ಸಾಂಬನ ನಿಮಿತ್ತ ಶ್ರೀಬಲ-ರಾಮದೇವರು ತಮ್ಮ ನೇಗಿಲಿನಿಂದ ಎಳೆದಾಗ ಅದು ಗಂಗೆಯಲ್ಲಿ ಮುಳುಗುವಂತಾಯಿತೆಂದೂ ಅದು ಅನಂತರವೂ ಅದೇ ಸ್ಥಿತಿಯಲ್ಲಿ ಉಳಿಯಿತೆಂದೂ ಭಾಗವತಪುರಾಣದಲ್ಲಿ ಉಲ್ಲೇಖವುಂಟು. ಇಂದೂ ಸಹ ಹಸ್ತಿನಪುರವು ಗಂಗೆಯತ್ತ ವಾಲಿರುವ ದಿಣ್ಣೆಯ ಮೇಲಿನ ಸ್ಥಳವಾಗಿದೆ ಎಂಬುದು ಗಮನಾರ್ಹ[೧].

೪. ಹಸ್ತಿನಪುರದಲ್ಲಿ ಇಂದಿಗೂ ವಿದುರನ ಮನೆ, ಕರ್ಣನು ಸಂಧ್ಯಾವಂದನೆ ಮಾಡುತ್ತಿದ್ದ ಸ್ಥಳ ಮೊದಲಾದವುಗಳನ್ನು ಗಂಗಾತೀರದಲ್ಲಿ ತೋರಿಸುವರು.

೫. ಹಸ್ತಿನಾಪುರಕ್ಕೆ ಸುಮಾರು ೩೫ ಕಿ.ಮೀ. ದೂರದಲ್ಲಿ ಅರಗಿನ ಮನೆ ಇದ್ದ 'ವಾರಣಾವತ' ವಿದೆ. ಅದನ್ನು ಇಂದು ಬರ್ನಾವಾ ಎನ್ನುವರು.

---

೧. ಅದ್ಯಾಪಿ ವಃ ಪುರಂ ಹ್ಯೇತತ್ ಸೂಚಯದ್ರಾಮವಿಕ್ರಮಮ್ ।
ಸಮುನ್ನತಂ ದಕ್ಷಿಣತೋ ಗಂಗಾಯಾಂ ನನು ದೃಶ್ಯತೇ ॥ - ಭಾಗವತ (೧೦/೬೦/೫೫)

## ಕುರುಕ್ಷೇತ್ರ

ಶ್ರೀಭೀಮಸೇನಕರಕಂಜಗದಾಪ್ರಹಾರೈ-
ಶ್ಚೂರ್ಣೀಕೃತಾಶ್ವಗಜಪತ್ತಿಮೃದುಗ್ರಪಿಂಡಮ್ ।
ಉತ್ಖಾತಪಾರ್ಥಶರಸಸ್ಯಪದಂ ಕುರೂಣಾಂ
ಕ್ಷೇತ್ರಂ ದಿಶಾಸು ವಿತತಾನ ಸುಕೀರ್ತಿಧಾನ್ಯಮ್ ॥ ೩೮ ॥

ಅ: ಶ್ರೀಭೀಮಸೇನಕರಕಂಜಗದಾಪ್ರಹಾರೈಃ = ಶ್ರೀಭೀಮಸೇನನ ಕರಕಮಲದಲ್ಲಿರುವ ಗದೆಯ ಪೆಟ್ಟುಗಳಿಂದ; ಚೂರ್ಣೀಕೃತಾಶ್ವಗಜಪತ್ತಿಮೃದುಗ್ರಪಿಂಡಂ = ಪುಡಿ ಮಾಡಲ್ಪಟ್ಟ ಕುದುರೆ, ಆನೆ ಮತ್ತು ಕಾಲಾಳುಗಳೆಂಬ ಮಣ್ಣಿನ ಕಠಿನವಾದ ಹೆಂಟೆಗಳನ್ನುಳ್ಳ; ಉತ್ಖಾತ-ಪಾರ್ಥಶರಸಸ್ಯಪದಂ = ನೆಟ್ಟ ಅರ್ಜುನನ ಬಾಣಗಳೆಂಬ ಸಸ್ಯಗಳಿಗೆ ನೆಲೆಯಾಗಿರುವ; ಕುರೂಣಾಂ ಕ್ಷೇತ್ರಂ = ಕುರುಕ್ಷೇತ್ರವು; ದಿಶಾಸು = ದಿಕ್ಕುಗಳಲ್ಲಿ; ಸುಕೀರ್ತಿಧಾನ್ಯಂ = 'ಸುಕೀರ್ತಿ' ಎಂಬ ಧಾನ್ಯಗಳನ್ನು; ವಿತತಾನ = ಪಸರಿಸಿತು (ರೂಪಕಾಲಂಕಾರ).

ಶ್ರೀಭೀಮಸೇನನ ಕರಕಮಲದ ಗದೆಯ ಪೆಟ್ಟುಗಳಿಂದ ಪುಡಿ ಮಾಡಲ್ಪಟ್ಟ ಕುದುರೆ ಆನೆ ಹಾಗೂ ಕಾಲಾಳುಗಳೆಂಬ ಮಣ್ಣಿನ ಗಟ್ಟಿ ಹೆಂಟೆಗಳನ್ನುಳ್ಳ, ನೆಟ್ಟ ಅರ್ಜುನನ ಬಾಣಗಳೆಂಬ ಸಸ್ಯಗಳಿಗೆ ನೆಲೆಯಾಗಿರುವ ಕುರುಕ್ಷೇತ್ರವು, ದಿಕ್ಕುಗಳಲ್ಲಿ 'ಸುಕೀರ್ತಿ' ಎಂಬ ಧಾನ್ಯಗಳನ್ನು ಪಸರಿಸಿತು.

ವಿ: ೧. ವ್ಯವಸಾಯ ಮಾಡುವವರು ಉತ್ತ ನೆಲದಲ್ಲಿನ ಮಣ್ಣಹೆಂಟೆಗಳನ್ನು ಪುಡಿಮಾಡಿ, [1]ಸಸ್ಯಗಳನ್ನು ನೆಟ್ಟು ಧಾನ್ಯಗಳನ್ನು [2]ಬೆಳೆದು ದಿಕ್ಕು ದಿಕ್ಕುಗಳಿಗೆ ಸಾಗಿಸುವರು. ಕುರುಕ್ಷೇತ್ರವೆಂಬ ಉತ್ತಮ ಸಾಧನಕ್ಷೇತ್ರದಲ್ಲಿದ್ದ ಶತ್ರುಪಕ್ಷದ ಆನೆ ಕುದುರೆ ಪದಾತಿಗಳೆಂಬ ಮಣ್ಣಹೆಂಟೆಗಳು ಶ್ರೀಭೀಮಸೇನದೇವರ ಗದಾಪ್ರಹಾರಗಳಿಂದ ಪುಡಿಮಾಡಲ್ಪಟ್ಟವು; ಅರ್ಜುನನ ಬಾಣಗಳೆಂಬ ಸಸ್ಯಗಳು ನೆಡಲ್ಪಟ್ಟವು; ಉತ್ತಮವಾದ ಕೀರ್ತಿ ಎಂಬ ಧಾನ್ಯವು ಬೆಳೆದು ಸಕಲ ದಿಕ್ಕುಗಳಲ್ಲಿಯೂ ಪಸರಿಸಿತು ಎಂದು ಭಾವ.

೨. [3]ಧರ್ಮಕ್ಷೇತ್ರವಾದ ಕುರುಕ್ಷೇತ್ರವು ಉತ್ತಮವಾದ ಸಾಧನಕ್ಷೇತ್ರ; [4]ಶ್ರೀಭೀಮ-ಸೇನದೇವರದೇ ಇದರಲ್ಲಿ ಪ್ರಧಾನಪಾತ್ರ; ಅನಂತರದ ಹಿರಿಮೆ ಅರ್ಜುನನದು; ಇವೇ ಮೊದಲಾದ ತತ್ತ್ವಗಳು ಇಲ್ಲಿ ತುಂಬಾ ಸುಂದರವಾಗಿ ನಿರೂಪಿತವಾಗಿವೆ.

---

೧. ಕೃಷೀವಲಾಃ ಹಲೋತ್ಖಾತೇನ ಉದ್ಭೂತಾನ್ ಮೃತ್ಪಿಂಡಾನ್ ಬೀಜಾವಾಪನಾಯ ಭೂಮೇಃ ಸಮೀಕರಣಾರ್ಥಂ ಲಗುಡೇನ ಚೂರ್ಣಯಂತೀತಿ ಕೃಷೀವಲವ್ಯಾಪಾರೋಽನೇನಾವಗಮ್ಯತೇ ।ವ್ಯಾ

೨. ಯಥಾ ಕೃಷೀವಲೈಃ ಸಮ್ಯಕ್ ಕರ್ಷಣೇನಾರೋಪಿತಸಸ್ಯಂ ಕ್ಷೇತ್ರಂ ಫಲತಿ ತದ್ವತೀತಿ ಭಾವಃ ॥ – ವ್ಯಾ

೩. ಧರ್ಮಕ್ಷೇತ್ರೇ ಕುರುಕ್ಷೇತ್ರೇ - ಭಗವದ್ಗೀತೆ (೧/೧)

೪. ಅಸ್ಮಿನ್ ಯುದ್ಧೇ ಭೀಮಸೇನ ತ್ವಯಿ ಭಾರಃ ಸಮಾಹಿತಃ ।
ಧೂರರ್ಜುನೇನ ವೋಢವ್ಯಾ ವೋಢವ್ಯ ಇತರೋ ಜನಃ ॥
- ಎಂಬ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಉದ್ಧೃತವಾಗಿರುವ (೨/೧೬೯) ಮಹಾಭಾರತದ ಮಾತಿನ ಹಿನ್ನೆಲೆಯನ್ನೂ ಈ ಶ್ಲೋಕದಲ್ಲಿ ಗುರುತಿಸಬಹುದು.

೩. ಕುರುಕ್ಷೇತ್ರವು ಭರತಖಂಡದ ಅತ್ಯಂತ ಪವಿತ್ರಕ್ಷೇತ್ರಗಳಲ್ಲಿ ಒಂದು; ಸ್ನಾನಕಾಲದಲ್ಲಿ ಪ್ರತಿನಿತ್ಯ ಸ್ಮರಿಸಲೇಬೇಕಾದ ಪವಿತ್ರಕ್ಷೇತ್ರಗಳಲ್ಲಿ ಒಂದು ಎಂಬುದು ಇದರ ಮತ್ತೊಂದು ಹಿರಿಮೆ. ಡೆಲ್ಲಿ, ಹರಿದ್ವಾರ ಮೊದಲಾದ ಸ್ಥಳಗಳಿಂದ ಇಲ್ಲಿಗೆ ನೇರವಾಗಿ ಬಸ್‌ಮಾರ್ಗದಲ್ಲಿ ತಲುಪಬಹುದು. ಇಂದು 'ಕುರುಕ್ಷೇತ್ರ' ವೆಂಬ ಹೆಸರಿನಿಂದಲೇ ಪ್ರಸಿದ್ಧವಾಗಿರುವ ಈ ನಗರಕ್ಕೆ ಥಾನೇಶ್ವರ್ ಸಿಟಿ, ಕುರುಕ್ಷೇತ್ರ, ಅಮೀನ್, ಕೈಥಲ್, ಜೀಂದ್ ಎಂಬ ರೈಲ್ವೆ ನಿಲ್ದಾಣಗಳು ಸಹ ಉಂಟು.

೪. ಕುರುವೆಂಬ ಪುರುವಂಶದ ರಾಜನು ಇಲ್ಲಿಯ ಸರಸ್ವತೀನದಿಯ ತೀರದಲ್ಲಿ ರುದ್ರದೇವರ ಎತ್ತು ಮತ್ತು ಯಮದೇವರ ಕೋಣಗಳನ್ನು ಹೂಡಿ, ಚಿನ್ನದ ನೇಗಿಲಿನಿಂದ ಉತ್ತು ಶ್ರೀಮಹಾವಿಷ್ಣುವಿನ ಚಕ್ರದಿಂದ ಕತ್ತರಿಸಲ್ಪಟ್ಟ ತನ್ನ ದೇಹವನ್ನೇ ಬೀಜವನ್ನಾಗಿ ಬಿತ್ತಿದ್ದರಿಂದ ಇದಕ್ಕೆ 'ಕುರುಕ್ಷೇತ್ರ' ವೆಂದು ಹೆಸರು ಉಂಟಾಯಿತೆಂದು ಪೌರಾಣಿಕವಿವರಗಳು ಇವೆ.(ವಾಮನಪುರಾಣ); ಚಿತ್ರಾಂಗದನೆಂಬ ಶಂತನುಪುತ್ರನಿಗೂ 'ಚಿತ್ರಾಂಗದ' ಎಂಬ ಗಂಧರ್ವ- ನಿಗೂ, ಭೀಷ್ಮ ಪರಶುರಾಮದೇವರಿಗೂ ಯುದ್ಧ ನಡೆದದ್ದು ಇದೇ ಕ್ಷೇತ್ರದಲ್ಲಿ; ಇಲ್ಲಿ ನಡೆದ ಕುರುಪಾಂಡವರ ಯುದ್ಧವಂತೂ ವಿಶ್ವದಾಖಲೆಯ ಮಹಾಯುದ್ಧವಾಗಿದೆ. ಮಹಾಭಾರತದ ಸಾರವಾದ ಭಗವದ್ಗೀತೆ ಮತ್ತು ವಿಷ್ಣುಸಹಸ್ರನಾಮಗಳು ಉಪದೇಶಿಸಲ್ಪಟ್ಟ ಸ್ಥಳ, ಶ್ರೀಕೃಷ್ಣನು ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿದ ಸ್ಥಳ, ಎಂಬುದು ಇದರ ಅಸಾಧಾರಣವಾದ ವೈಶಿಷ್ಟ್ಯ;

೫. ಶ್ರೀಪರಶುರಾಮದೇವರು ದುಷ್ಟಕ್ಷತ್ರಿಯರನ್ನು ಸಂಹರಿಸಿ ನಿರ್ಮಿಸಿದ 'ಸ್ಯಮಂತ-ಪಂಚಕ' ತೀರ್ಥದಿಂದಾಗಿ ಇದರ ಹಿರಿಮೆ ಅಪಾರವಾಗಿದೆ; ಮಹಾಭಾರತಯುದ್ಧದ ಅನಂತರ ಒಮ್ಮೆ ಶ್ರೀಕೃಷ್ಣನು ಇಲ್ಲಿ ಹನ್ನೆರಡುವರ್ಷಗಳ ಕಾಲ ಯಜ್ಞವೊಂದನ್ನು ಮಾಡಿದ ಉಲ್ಲೇಖ [೧]ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ. (೩೨/೧);

೬. ಅಲ್ಲದೆ ಒಮ್ಮೆ ಸೂರ್ಯಗ್ರಹಣಕಾಲದಲ್ಲಿ ಶ್ರೀಕೃಷ್ಣನು ಇಲ್ಲಿಗೆ ತೀರ್ಥಸ್ನಾನಕ್ಕೆಂದು ಆಗಮಿಸಿದ ವಿವರವೂ [೨]ಮಹಾಭಾರತತಾತ್ಪರ್ಯನಿರ್ಣಯ (೨೧/೪) ಮತ್ತು ಭಾಗವತ(೬/೮೨)ದಲ್ಲಿದೆ.

೭. ಶ್ರೀಮದಾಚಾರ್ಯರು ತಮ್ಮ ದ್ವಿತೀಯಬದರೀಯಾತ್ರೆಯ ಸಂದರ್ಭದಲ್ಲಿ ಇದನ್ನು ಸಂದರ್ಶಿಸಿ ತಾವು ಭೀಮಾವತಾರಕಾಲದಲ್ಲಿ ಉಪಯೋಗಿಸಿದ್ದ ಆಯುಧವನ್ನು ಸತ್ಯತೀರ್ಥಾದಿ ಶಿಷ್ಯವರ್ಗಕ್ಕೆ ತೋರಿಸಿಕೊಟ್ಟ ಸಂಗತಿ ಸುಮಧ್ವವಿಜಯ ಮತ್ತು ಅದರ ಭಾವಪ್ರಕಾಶಿಕೆಗಳಲ್ಲಿ ದಾಖಲಾಗಿದೆ[೩].

---

೧. ತತಃ ಕುರುಕ್ಷೇತ್ರಮವಾಪ್ಯ ಕೃಷ್ಣೋ ದೀಕ್ಷಾಂ ಪ್ರಪೇದೇ ದ್ವಿಷಡಬ್ದಸತ್ರೇ।
ಸ ಏವ ಚ ವ್ಯಾಸಭೃಗೂದ್ವಹಾತ್ಮಾ ಚಕ್ರೇಽತ್ರ ಸಾದಸ್ಯಮಜೋಽಪ್ರಮೇಯಃ॥ -(೩೨/೧)

೨. ತತೋ ವಸನ್ ಸ್ವಪುರ್ಯಜಃ ಕ್ವಚಿದ್ರವಿಗ್ರಹೇ ಹರಿಃ।
ಸದಾರಪುತ್ರಬಾಂಧವಃ ಸ್ಯಮಂತಪಂಚಕಂ ಯಯೌ॥ (೨೧/೪)

೩. ಪ್ರಾಜ್ಞೋ ರಾಜ್ಞಾಂ ತ್ರಿದಿವಪದವೀಂ ಕೌರವಂ ಕ್ಷೇತ್ರಮಾಪ್ತಃ
ಸಸ್ಮಾರಾಥ ಸ್ವವಿಹೃತಿಪತದ್ದಸ್ತಿಯುದ್ಧೋತ್ಸವಾನಾಮ್।

೮. ಹೀಗೆ ಹರಿಸರ್ವೋತ್ತಮತ್ವ ಮತ್ತು ವಾಯುಜೀವೋತ್ತಮತ್ವಾದಿ ಸಕಲತತ್ತ್ವ-ಗಳಿಗೂ ಸ್ಮಾರಕವಾಗಿರುವ ಈ ಕ್ಷೇತ್ರವನ್ನು ಮಹಾಭಾರತಾದಿ ಪ್ರಮುಖಗ್ರಂಥಗಳೆಲ್ಲ ಅಪಾರವಾಗಿ ವರ್ಣಿಸಿವೆ.

೯. ಕುರುಕ್ಷೇತ್ರದಲ್ಲಿ ಕಾಮ್ಯಕವನ, ಅದಿತಿವನ, ವ್ಯಾಸವನ, ಫಲಕೀವನ, ಸೂರ್ಯವನ, ಶೀತವನ ಎಂಬ ಏಳುವನಗಳೂ, ಸರಸ್ವತೀ, ವೈತರಣೀ, ಆಪಗಾ, ಮಧುಸ್ರವಾ, ಕೌಶಕೀ, ದೃಷದ್ವತೀ, ಹಿರಣ್ವತೀ ಎಂಬ ಏಳು ನದಿಗಳೂ ಇದ್ದುವೆಂದು ಪುರಾಣಗಳಲ್ಲಿ ಉಲ್ಲೇಖವಿದೆ (ವಾಮನಪುರಾಣ)[೧].

---

ಸತ್ಯಾತ್ಮಾದ್ಯೈರಿಹ ಪರಿವೃತೋ ಭಾವಿಮಾರೀಚದೃಗ್ಭಿ-
ರ್ವಿಸ್ಮೇರೈಃ ಸ್ವೈರ್ನಿಜನೃಪತನೂಹೇತಿದೃಷ್ಟ್ಯಾಽತಿತುಷ್ಟೈಃ॥ -ಸುಮಧ್ವವಿಜಯ (೧೦/೪೯)

ತಪಸ್ವಿವತ್ ಸ್ಥಿತಂ ಡಾಂಭಂ ಜ್ಞಾತ್ವಾ ಮಾರೀಚಮಭ್ಯಧಾತ್ ।
ಮಧ್ವಃ ಪರೀಕ್ಷಯಾ ಚೈನಂ ತೇ ವಿಷ್ಣುದ್ವೇಷಿಣಂ ವಿದುಃ ॥
ಯೌಧೋಽತ್ರ ರಾಜಾ ತ್ವಮಿತೀರಿತೇಽಮುನಾ
ಮಮಾ(ತವಾ)ಯುಧಂ ಕ್ವೇತಿ ಜಗಾದ ಸತ್ಯವಾಕ್।
ಖ್ಯಾತೇಽಮುನೋಕ್ತೇ ಕುತಲೇ ಮಹಾಗದಾಂ
ದೃಷ್ಟ್ವಾಽಽಪ್ತವಾಚಂ ಶ್ರದಧುರ್ಗುರುಂ ಹಿ ತೇ॥ -ಸು.ವಿ.ಭಾವಪ್ರಕಾಶಿಕಾ(೧೦/೪೯)

೧. ಶ್ರುಣು ಸಪ್ತವನಾನೀಹ ಕುರುಕ್ಷೇತ್ರಸ್ಯ ಮಧ್ಯತಃ ।
ಯೇಷಾಂ ನಾಮಾನಿ ಪುಣ್ಯಾನಿ ಸರ್ವಪಾಪಹರಾಣಿ ಚ ॥
ಕಾಮ್ಯಕಂ ಚ ವನಂ ಪುಣ್ಯಂ ತಥಾಽದಿತಿವನಂ ಮಹತ್ ।
ವ್ಯಾಸಸ್ಯ ಚ ವನಂ ಪುಣ್ಯಂ ಫಲಕೀವನಮೇವ ಚ ॥
ತತ್ರ ಸೂರ್ಯವನಸ್ಥಾನಂ ತಥಾ ಮಧುವನಂ ಮಹತ್ ।
ಪುಣ್ಯಂ ಶೀತವನಂ ನಾಮ ಸರ್ವಕಲ್ಮಷನಾಶನಮ್ ॥
ವನಾನ್ಯೇತಾನಿ ವೈ ಸಪ್ತ ನದೀಃ ಶ್ರುಣುತ ಮೇ ದ್ವಿಜಾಃ ।
ಸರಸ್ವತೀ ನದೀ ಪುಣ್ಯಾ ತಥಾ ವೈತರಣೀ ನದೀ ।
ಆಪಗಾ ಚ ಮಹಾಪುಣ್ಯಾ ಗಂಗಾ ಮಂದಾಕಿನೀ ನದೀ ।
ಮಧುಸ್ರವಾ ವಾಸುನದೀ ಕೌಶಿಕೀ ಪಾಪನಾಶಿನೀ ॥
ದೃಷದ್ವತೀ ಮಹಾಪುಣ್ಯಾ ತಥಾ ಹಿರಣ್ವತೀ ನದೀ ।
ವರ್ಷಾಕಾಲವಹಾಃ ಸರ್ವಾ ವರ್ಜಯಿತ್ವಾ ಸರಸ್ವತೀಮ್ ॥
ಏತಾಸಾಮುದಕಂ ಪುಣ್ಯಂ ಪ್ರಾವೃಟ್ಕಾಲೇ ಪ್ರಕೀರ್ತಿತಮ್ ॥
ರಜಸ್ವಲಾತ್ವಮೇತಾಸಾಂ ವಿದ್ಯತೇ ನ ಕದಾಚನ ।
ತೀರ್ಥಸ್ಯ ಪ್ರಭಾವೇನ ಪುಣ್ಯಾ ಹ್ಯೇತಾಃ ಸರಿದ್ವರಾಃ ।
ಶೃಣ್ವಂತು ಮುನಯಃ ಪ್ರೀತಾಸ್ತೀರ್ಥಸ್ನಾನಫಲಂ ಮಹತ್॥
ಗಮನಂ ಸ್ಮರಣಂ ಚೈವ ಸರ್ವಕಲ್ಮಷನಾಶನಮ್ ॥

-ವಾಮನಪುರಾಣ (ಸರೋಮಾಹಾತ್ಮ್ಯ- ಅ.೧೩.ಶ್ಲೋ.೩/೧೦)

೧೦. ಓಘವತೀ ಎಂಬ ಮತ್ತೊಂದು ನದಿಯು ಇಲ್ಲಿ ಹರಿಯುತ್ತಿದ್ದ ಉಲ್ಲೇಖ ಮಹಾಭಾರತದಲ್ಲಿದೆ; ಅದರ ಸಮೀಪದಲ್ಲೇ ಶ್ರೀಭೀಷ್ಮರು ಶರಮಂಚದ ಮೇಲೆ ಒರಗಿದ್ದರಂತೆ:

'ನದೀಮೋಘವತೀಮನು' -ಶಾಂತಿಪರ್ವ(೧೫/೨೮)

೧೧. ಕುರುಕ್ಷೇತ್ರದ ದರ್ಶನ, ಅಲ್ಲಿಗೆ ಹೋಗುವೆನು, ಅಲ್ಲಿ ನೆಲೆಸುವೆನು ಎಂಬ ಸಂಕಲ್ಪ, ಅಲ್ಲಿಂದ ಬೀಸಿ ಬರುವ ಗಾಳಿ, ಹಾರಿ ಬರುವ ಧೂಳು, ಅದರ ಸ್ಮರಣೆ, ಅಲ್ಲಿಯ ತೀರ್ಥಗಳಲ್ಲಿ ಮಾಡುವ ಸ್ನಾನ ಮೊದಲಾದ ಪ್ರತಿಯೊಂದು ಕಾರ್ಯವೂ ಸಹ ಸಕಲಪಾಪನಾಶಕವೂ, ಅಪಾರ ಪುಣ್ಯಪ್ರಾಪಕವೂ ಆದ ಮಹತ್ತರವಾದ ಪುಣ್ಯಕಾರ್ಯ ಎಂಬುದಾಗಿ ಮಹಾಭಾರತಾದಿಗಳಲ್ಲಿ ಇದರ ವರ್ಣನೆಯು ಬಂದಿದೆ:

ತತೋ ಗಚ್ಛೇತ ರಾಜೇಂದ್ರ ಕುರುಕ್ಷೇತ್ರಮಭಿಷ್ಟುತಮ್ ।
ಪಾಪೇಭ್ಯೋ ಯತ್ರ ಮುಚ್ಯಂತೇ ದರ್ಶನಾತ್ ಸರ್ವಜಂತವಃ ॥
ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಮ್ ।
ಯ ಏವಂ ಸತತಂ ಬ್ರೂಯಾತ್ ಸರ್ವಪಾಪೈಃ ಪ್ರಮುಚ್ಯತೇ ॥

೧೨. ಇಂದು ಇಲ್ಲಿ 'ಬ್ರಹ್ಮಸರ'ವೆಂಬ ಒಂದು ತುಂಬಾ ದೊಡ್ಡ ಸರೋವರ ಉಂಟು; ಗ್ರಹಣಕಾಲ ಮೊದಲಾದ ಪರ್ವಕಾಲಗಳಲ್ಲಿ ಇಂದಿಗೂ ಇಲ್ಲಿ ಲಕ್ಷಗಟ್ಟಲೆ ಜನ ಸೇರುವರು; ಪ್ರಾಯಃ ಇದೇ ಮಹಾಭಾರತ ಮತ್ತು ತಾತ್ಪರ್ಯನಿರ್ಣಯಗಳಲ್ಲಿ ಉಲ್ಲೇಖಿಸಲ್ಪಟ್ಟಿರುವ ದುರ್ಯೋಧನನು ಜಲಸ್ತಂಭನ ವಿದ್ಯೆಯಿಂದ ಅಡಗಿ ಕುಳಿತಿದ್ದನೆಂದು ಹೇಳಲಾಗುವ 'ದ್ವೈಪಾಯನ ಸರೋವರ'ವಾಗಿರಬೇಕು.[೧]

೧೩. ಕುರುಕ್ಷೇತ್ರದಲ್ಲಿ ಇಂದು, ಗೀತೋಪದೇಶ ಮಾಡಿದ ಸ್ಥಳವೆನ್ನಲಾಗುವ 'ಜ್ಯೋತಿಃಸರ' ಎಂಬ ಸ್ಥಳವನ್ನೂ, ಭೀಷ್ಮರು ಶರಮಂಚದ ಮೇಲೆ ಮಲಗಿದ ಸ್ಥಳವನ್ನೂ, ಅದರ ಪಕ್ಕದಲ್ಲೇ ಭೀಷ್ಮರಿಗೆ ಅರ್ಜುನನು ವಾರುಣಾಸ್ತ್ರದಿಂದ ಜಲವನ್ನಿತ್ತ ಸ್ಥಳವಾದ ಬಾಣಕುಂಡ ಎಂಬ ಸರೋವರವನ್ನೂ ಕಾಣಬಹುದು[೨]. ಅಲ್ಲದೆ ಅಭಿಮನ್ಯು ಮತ್ತು ಕರ್ಣ, ಭೂರಿಶ್ರವಸ್‌ರು

---

೧. ಆದ್ಯಂ ಬ್ರಹ್ಮಸರಃ ಪ್ರೋಕ್ತಂ ತತೋ ರಾಮಹ್ರದಃ ಸ್ಮೃತಃ ।
ಕುರುಣಾ ಋಷಿಣಾ ಕೃಷ್ಟಂ ಕುರುಕ್ಷೇತ್ರಂ ತತಃ ಸ್ಮೃತಮ್ ॥
- ವಾಮನಪುರಾಣ (ಸರೋಮಾಹತ್ಮ್ಯ-೬, ೧೧ ಶ್ಲೋ -೨೪)

೨. ನಾತಃ ಪರತರಂ ಪುಣ್ಯಂ ಭೂಮೇಃ ಸ್ಥಾನಂ ಭವಿಷ್ಯತಿ ।
ಇಹ ತಪ್ಸ್ಯಂತಿ ಯೇ ಕೇಚಿತ್ ತಪಃ ಪರಮಕಂ ನರಾಃ ॥
ದೇಹತ್ಯಾಗೇನ ತೇ ಸರ್ವೇ ಯಾಸ್ಯಂತಿ ಬ್ರಹ್ಮಣಃ ಕ್ಷಯಮ್ ।
ಯಕ್ಷ್ಯಂತಿ ಯೇ ಚ ಕ್ರತುಭಿರ್ಮಹದ್ಭಿರ್ಮನುಜೇಶ್ವರಾಃ ।
ತೇಷಾಂ ತ್ರಿವಿಷ್ಟಪೇ ವಾಸೋ ಯಾವದ್ಭೂಮಿರ್ಧರಿಷ್ಯತಿ ॥
ಪಾಂಸವೋऽಪಿ ಕುರುಕ್ಷೇತ್ರಾತ್ ವಾಯುನಾ ಸಮುದೀರಿತಾಃ ।
ಅಪಿ ದುಷ್ಕೃತಕರ್ಮಾಣಂ ನಯಂತಿ ಪರಮಾಂ ಗತಿಮ್ ॥
-ಮಹಾಭಾರತ(ಶಲ್ಯಪರ್ವ- ಅ,೫೩. ಶ್ಲೋ,೧೭, ೨೧,೨೨)

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋऽಪಿ ವಾ ।

ಹತರಾದರೆನ್ನಲಾಗುವ 'ಅಮೀನ್', 'ರಾಜಾ ಕರ್ಣ ಕಿ ಕಿಲೆ', ಮತ್ತು 'ಬೋರೆ' ಎಂಬ ಸ್ಥಳಗಳನ್ನೂ ತೋರಿಸುವರು.

## ಶಂಬಲ (ಕ್ಷೇತ್ರ)

**ಕಲೇರ್ಭೀತಜನಾ ಯಾತ ಶಂಬಲಂ ಜಗತಾಂ ಬಲಮ್ ।**
**ಕಲಿಶೌರ್ಯಹರಃ ಕಲ್ಕೀ ಯತ್ರ ಪ್ರಾದುರ್ಭವಿಷ್ಯತಿ ॥ ೩೯ ॥**

**ಅ:** **ಕಲೇಃ** = ಕಲಿಯುಗಕ್ಕೆ ಅಭಿಮಾನಿಯಾದ 'ಕಲಿ'ಎಂಬ ಅಸುರನ ದೆಸೆಯಿಂದ; **ಭೀತಜನಾಃ** = ಭೀತರಾದ ಜನರೇ; **ಜಗತಾಂಬಲಂ** = ಜಗತ್ತಿಗೆ ಬಲಪ್ರದವಾದ; **ಶಂಬಲಂ** = 'ಶಂಬಲ' ವೆಂಬ ಕ್ಷೇತ್ರವನ್ನು (ಕುರಿತು); **ಯಾತ** = ತೆರಳಿರಿ; (ಏಕೆಂದರೆ)

---

ಯಃ ಸ್ಮರೇತ್ ಕುರುಕ್ಷೇತ್ರಂ ಸ ಬಾಹ್ಯಾಭ್ಯಂತರೇ ಶುಚಿಃ ॥
ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಮ್ ।
ಇತ್ಯೇವಂ ವಾಚಮುತ್ಸೃಜ್ಯ ಸರ್ವಪಾಪೈಃ ಪ್ರಮುಚ್ಯತೇ ॥
ಬ್ರಹ್ಮಜ್ಞಾನಂ ಗಯಾಶ್ರಾದ್ಧಂ ಗೋಗ್ರಹೇ ಮರಣಂ ತಥಾ ।
ವಾಸಃ ಪುಂಸಾಂ ಕುರುಕ್ಷೇತ್ರೇ ಮುಕ್ತಿರುಕ್ತಾ ಚತುರ್ವಿಧಾ ॥
ದೂರಸ್ಥೋಽಪಿ ಕುರುಕ್ಷೇತ್ರೇ ಗಚ್ಛಾಮಿ ಚ ವಸಾಮ್ಯಹಮ್ ।
ಏವಂ ಯಃ ಸತತಂ ಬ್ರೂಯಾತ್ ಸೋಽಪಿ ಪಾಪೈಃ ಪ್ರಮುಚ್ಯತೇ ॥
- ವಾಮನಪುರಾಣ(ಸರೋಮಾಹಾತ್ಮ್ಯ - ಅ.೧೨, ಶ್ಲೋಕ೬,೭,೮,೧೦)
ಪಾಂಸವೋಽಪಿ ಕುರುಕ್ಷೇತ್ರೇ ವಾಯುನಾ ಸಮುದೀರಿತಾಃ ।
ಅಪಿ ದುಷ್ಕೃತಕರ್ಮಾಣಂ ನಯಂತಿ ಪರಮಾಂ ಗತಿಮ್ ॥
ಮನಸಾಽಪ್ಯಾಭಿಕಾಮಸ್ಯ ಕುರುಕ್ಷೇತ್ರಂ ಯುಧಿಷ್ಠಿರ ।
ಪಾಪಾನಿ ವಿಪ್ರಣಶ್ಯಂತಿ ಬ್ರಹ್ಮಲೋಕಂ ಚ ಗಚ್ಛತಿ ॥
ಗತ್ವಾ ಹಿ ಶ್ರದ್ಧಯಾ ಯುಕ್ತಃ ಕುರುಕ್ಷೇತ್ರಂ ಕುರೂದ್ವಹ ।
ಫಲಂ ಪ್ರಾಪ್ನೋತಿ ಚ ತದಾ ರಾಜಸೂಯಾಶ್ವಮೇಧಯೋಃ ॥
ಪೃಥಿವ್ಯಾಂ ನೈಮಿಷಂ ತೀರ್ಥಮಂತರಿಕ್ಷೇ ಚ ಪುಷ್ಕರಮ್ ।
ತ್ರಯಾಣಾಮಪಿ ಲೋಕಾನಾಂ ಕುರುಕ್ಷೇತ್ರಂ ವಿಶಿಷ್ಯತೇ ॥
- ಮಹಾಭಾರತ(ವನಪರ್ವ- ೮೩/೧-೩,೭,೮, ೮೪ -೨೦೩,೨೦೮)

ಕಾಲಿದಾಸನ 'ಮೇಘದೂತ'ದಲ್ಲೂ ಈ ಕುರುಕ್ಷೇತ್ರದ ವರ್ಣನೆಯು ಬಂದಿದೆ:

ಬ್ರಹ್ಮಾವರ್ತಂ ಜನಪದಮಥ ಛಾಯಯಾ ಗಾಹಮಾನಃ
ಕ್ಷೇತ್ರಂ ಕ್ಷತ್ರಪ್ರಧನಪಿಶುನಂ ಕೌರವಂ ತದ್ಭಜೇಥಾಃ ।
ರಾಜನ್ಯಾನಾಂ ಶಿತಶರಶತೈರ್ಯತ್ರ ಗಾಂಡೀವಧನ್ವಾ
ಧಾರಾಪಾತೈಸ್ತ್ವಮಿವ ಕಮಲಾನ್ಯಭ್ಯಂಷಿಂಚನ್ಮುಖಾನಿ ॥ -(೧/೫೦)

- ಆದರೆ ಇಲ್ಲಿ ಅರ್ಜುನನ ಮಹತ್ತ್ವದ ವರ್ಣನೆಯು ಮಾತ್ರವೇ ಬಂದಿದೆ; ಅತ್ಯಂತ ಪ್ರಮುಖವಾದ ಭೀಮಸೇನನ ಹಿರಿಮೆ ಬಿಟ್ಟು ಹೋಗಿದೆ; ಆದರೆ ಶ್ರೀವಾದಿರಾಜರ ವರ್ಣನೆಯಲ್ಲಿ ಭೀಮ ಮತ್ತು ಅರ್ಜುನರ ಹಿರಿಮೆಯು ತಾರತಮ್ಯಕ್ರಮದಲ್ಲೇ ಬಂದಿದೆ; ಒಬ್ಬ ಲೋಕಕವಿಗೂ, ಶಾಸ್ತ್ರಕವಿಗೂ ಇರುವ ಮೂಲಭೂತವಾದ ವ್ಯತ್ಯಾಸವನ್ನು ವರ್ಣನೆಗಳಲ್ಲಿನ ಇಂತಹ ವ್ಯತ್ಯಾಸದಿಂದ ಅರಿಯಬಹುದು.

ಯತ್ರ = ಆ ಕ್ಷೇತ್ರದಲ್ಲಿ; ಕಲಿಶೌರ್ಯಹರಃ = ಕಲಿಯ ಸಾಮರ್ಥ್ಯವನ್ನು ನಾಶಪಡಿಸುವ; ಕಲ್ಕೀ = ಕಲ್ಕಿನಾಮಕನಾದ ಶ್ರೀಹರಿಯು; ಪ್ರಾದುರ್ಭವಿಷ್ಯತಿ = ಪ್ರಾದುರ್ಭವಿಸಲಿರುವನು.

**ಕಲಿಗೆ ಅಂಜಿದ ಜನರೇ ! ಜಗತ್ತಿಗೆ ಬಲ ನೀಡುವ ಶಂಬಲಕ್ಷೇತ್ರಕ್ಕೆ ತೆರಳಿರಿ; ಅಲ್ಲಿ ಕಲಿಯ ಬಲವನ್ನು ಸದೆಬಡೆಯುವ ಕಲ್ಕಿಯು ಅವತರಿಸಲಿರುವನು.**

ವಿ: ೧. [೧]ದಿನಾರ್ಧದಲ್ಲಿ ದುಷ್ಟರನ್ನು ಸಂಹರಿಸಿ, ಕೃತಯುಗಕ್ಕೆ ನಾಂದಿಹಾಡುವ; ಕಲ್ಕಿನಾಮಕ ಭಗವದ್ರೂಪವು ಪ್ರಾದುರ್ಭವಿಸುವ ಸ್ಥಳವೇ ಈ 'ಶಂಬಲ'ಕ್ಷೇತ್ರ. ಇಂತಹ ಈ ಕ್ಷೇತ್ರದ ಯಾತ್ರೆಯಿಂದ ಕಲಿಯ ಭಯ ಪರಿಹಾರವಾಗುವುದು ಎಂದು ಭಾವ.[೨]

೨. ಉತ್ತರಪ್ರದೇಶದ ಮುರಾದಾಬಾದ್ ಜಿಲ್ಲೆಯಲ್ಲಿ ಇಂದು 'ಸಂಭಲ್' ಎಂದು ಪ್ರಸಿದ್ಧವಾಗಿರುವ ಸ್ಥಳವೇ ಈ 'ಶಂಬಲ' ಕ್ಷೇತ್ರ. ಕಲಿಯುಗದ ಕೊನೆಯ ವೇಳೆಗೆ ಇಲ್ಲಿ ನೆಲೆಸಿದ ಸ್ವಾಯಂಭುವಮನುವಿನ ಅವತಾರದ[೩] 'ವಿಷ್ಣುಯಶಸ್' ಎಂಬ ಬ್ರಾಹ್ಮಣನ ಪುತ್ರತ್ವೇನ ಶ್ರೀಹರಿಯು ಕಲ್ಕಿರೂಪದಿಂದ ಅವತರಿಸುವನು ಎಂಬುದು ಪುರಾಣಗಳಲ್ಲಿ ಪ್ರಸಿದ್ಧವಾಗಿರುವ ವಿಚಾರ.

೩. ಕೃತಾದಿಯುಗಗಳಲ್ಲಿ ಇದಕ್ಕೆ ಕ್ರಮವಾಗಿ 'ಸತ್ಯವ್ರತ', 'ಮಹದ್ಗಿರಿ', ಪಿಂಗಲ' ಮತ್ತು 'ಶಂಬಲ' ಎಂಬ ಹೆಸರುಗಳು ಇರುತ್ತವೆ. ಇಲ್ಲಿ 'ಭವಿಷ್ಯಗಂಗಾ' ಮೊದಲಾದ ೬೮ ತೀರ್ಥಗಳಿವೆ. ಸೂರ್ಯ, ಚಂದ್ರ, ಗುರು ಮತ್ತು ಪುಷ್ಯ ಇವರೆಲ್ಲ ಏಕರಾಶಿಯಲ್ಲಿ ಸೇರಿದಾಗ ಕಲ್ಕ್ಯವತಾರ ಆಗುವುದು ಎಂದು ಪ್ರಸಿದ್ಧಿಯುಂಟು.

೪. ಕಲಿಯನ್ನು ಕಾತ್ಕಾರ ಮಾಡುವುದರಿಂದಲೇ 'ಕಲ್ಕಿ' ಎಂಬ ಹೆಸರು ಆ ರೂಪಕ್ಕೆ ಬಂದಿದೆ ಎಂಬುದಾಗಿ ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ ತಿಳಿಸಿರುವುದರ ಹಿನ್ನೆಲೆಯಲ್ಲಿ ಇಲ್ಲಿಯ ವಿವರಣೆಯ ಔಚಿತ್ಯವನ್ನು ಗ್ರಹಿಸಬಹುದು.[೪]

---

೧. ಸಮಸ್ತದಸ್ಯುವಿನಾಶನಂ ತೇನ ದಿನಾತ್ ವ್ಯಧಾಯಿ। -ಭಾ.ತಾ.ನಿ.(೩೨/೧೬೭)

೨. ಶಂಬಲಕ್ಷೇತ್ರಯಾತ್ರಯಾ ಕಲಿಭಯಪರಿಹಾರೋ ಭವತೀತಿ ಭಾವಃ। -ವ್ಯಾ

೩. ಅಥಾಸೌ ಯುಗಸಂಧ್ಯಾಯಾಂ ದಸ್ಯುಪ್ರಾಯೇಷು ರಾಜಸು।
ಜನಿತಾ ವಿಷ್ಣುಯಶಸೋ ನಾಮ್ನಾ ಕಲ್ಕಿರ್ಜಗತ್ಪತಿಃ॥ -ಭಾಗವತ(೧/೩/೨೫)
ಶಾಸ್ತಾ ಭವಿಷ್ಯತಿ ಕಲೇರ್ಭಗವಾನ್ ಯುಗಾಂತೇ। -ಭಾಗವತ(೨/೭/೩೮)
ಹರಿವ್ರತಃ ಕಲ್ಕಿಪಿತಾ ಮನುಃ ಸ್ವಾಯಂಭುವಸ್ತ್ವತಿ।
-ಅಂಶಾವತಾರ(ನಾರಾಯಣಪಂಡಿತಾಚಾರ್ಯಕೃತ)
ಯದಾ ಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯಬೃಹಸ್ಪತೀ।
ಏಕರಾಶ್ಯಾಂ ಸಮೇಷ್ಯಂತಿ ತದಾ ಭವತಿ ತತ್ಕೃತಮ್॥ -ಭಾಗವತ (೧೨/೨/೨೪)

೪. ಕಲೇಸ್ತು ಕಾತ್ಕಾರತ ಏವ ಕಲ್ಕೀ ಜ್ಞಾನಂ ಕಲಂಕಂ ಸುಖಮೇವ ತದ್ವಾನ್।
ಕಲ್ಕೀತಿ ವಾ ತೇನ..... ॥ – ಮಹಾಭಾರತತಾತ್ಪರ್ಯನಿರ್ಣಯ (೩೨/೧೬೪)

## [1]ಷಟ್‌ಪ್ರಯಾಗಗಳು

**ಷಟ್‌ಪ್ರಯಾಗಾಃ ಸ್ವವೇಗೇನ ಕಾಮಾದ್ಯರಿಮಹೀರುಹಃ ।**
**ಉನ್ಮೂಲಯಂತು ಪಾಪಾಖ್ಯಂ ಪಂಕಂ ಪ್ರಕ್ಷಾಲಯಂತು ನಃ ॥ ೪೦ ॥**

ಅ: ಷಟ್‌ಪ್ರಯಾಗಾಃ = ಆರು ಪ್ರಯಾಗಗಳು; ಸ್ವವೇಗೇನ = ತಮ್ಮ (ಪ್ರವಾಹ) ವೇಗದಿಂದ; ನಃ = ನಮ್ಮ; ಕಾಮಾದ್ಯರಿಮಹೀರುಹಃ = ಕಾಮ, ಕ್ರೋದ,ಲೋಭ, ಮೋಹ, ಮದ, ಮತ್ಸರ ಎಂಬ (ಆರು) ಶತ್ರುಗಳೆಂಬ ವೃಕ್ಷಗಳನ್ನು; ಊನ್ಮೂಲಯಂತು = ಬುಡಸಮೇತ ಕಿತ್ತು ಹಾಕಲಿ; ಪಾಪಾಖ್ಯಂ = ಪಾಪವೆಂಬ; ಪಂಕಂ (ಚ) = ಕೆಸರನ್ನೂ; ಪ್ರಕ್ಷಾಲಯಂತು = ತೊಳೆದು ಹಾಕಲಿ. (ವಿನಿಮಯಾಲಂಕಾರ)

ಆರು ಪ್ರಯಾಗಗಳು ತಮ್ಮ ಪ್ರವಾಹವೇಗದಿಂದ ನಮ್ಮ ಕಾಮಾದಿ ಆರು ಶತ್ರುಗಳೆಂಬ ವೃಕ್ಷಗಳನ್ನು ಬುಡಸಮೇತ ಕೀಳಲಿ; ಪಾಪವೆಂಬ ಕೆಸರನ್ನು ತೊಡೆಯಲಿ.

ವಿ: ೧. ಪ್ರಯಾಗದಿಂದ ಆರಂಭಿಸಿ ಬದರಿಯಲ್ಲಿನ 'ಭೀಮಸೇತು' ಎಂಬಲ್ಲಿಯವರೆಗೆ ಒಟ್ಟು ಆರು ಪ್ರಯಾಗಗಳು ಇವೆ.(ಪ್ರಯಾಗವೆಂದರೆ ಎರಡು ನದಿಗಳ ಸಂಗಮ ಎಂದರ್ಥ); ವಟಪ್ರಯಾಗ, ದೇವಪ್ರಯಾಗ, ರುದ್ರಪ್ರಯಾಗ, ಸ್ಕಂದಪ್ರಯಾಗ ಮತ್ತು ಕೇಶವಪ್ರಯಾಗ ಎಂಬವೇ ಷಟ್ ಪ್ರಯಾಗಗಳು.[2]

೨. ಪ್ರಯಾಗ ಸ್ಥಳದಲ್ಲಿ ಅಪರಿಮಿತವಾದ ವೇಗದಿಂದಾಗಿ ವೃಕ್ಷಗಳು ಬುಡಸಮೇತ ಉರುಳುತ್ತವೆ; ಕೆಸರೂ ಇರುವುದಿಲ್ಲ; ಅವುಗಳ ಸ್ನಾನದಿಂದ ನಮ್ಮ ದೃಢವಾದ ಕಾಮಾದಿ ಪಾಪಗಳೆಂಬ ವೃಕ್ಷಗಳೂ ನಿರ್ಮೂಲವಾಗುವವು; ಪಾಪವೆಂಬ ಕೆಸರೂ ಪರಿಹಾರವಾಗುವುದು ಎಂದು ಭಾವ.

## ಬದರೀ(ಕ್ಷೇತ್ರ)

**ಅಮರೀಭ್ರಮರೀಪುಂಜಸುಮರೀಚಿಭಿರಂಚಿತಾ ।**
**ಬದರೀ ವದ ರೇ ಕಿಂ ಕಿಮಧರೀಕುರುತೇ ನ ಸಾ ॥ ೪೧ ॥**

---

೧. ಹೃಷೀಕೇಶದಿಂದ ಬದರಿ ಪರ್ಯಂತ ಇರುವ ಆರುಮುಖ್ಯ ಪ್ರಯಾಗಗಳು ಹೀಗಿವೆ:
೧) ದೇವಪ್ರಯಾಗ -೬೮ ಕಿ.ಮೀ.(ಭಾಗೀರಥೀ + ಅಲಕನಂದಾ)
೨) ರುದ್ರಪ್ರಯಾಗ -೧೩೮ಕಿ.ಮೀ.(ಮಂದಾಕಿನೀ+ ಅಲಕನಂದಾ)
೩) ಕರ್ಣಪ್ರಯಾಗ -೧೭೩ ಕಿ.ಮೀ.(ಪಿಂಡಾರ + ಅಲಕನಂದಾ)
೪) ನಂದಪ್ರಯಾಗ -೧೯೨ ಕಿ.ಮೀ.(ನಂದಾಕಿನೀ+ ಅಲಕನಂದಾ)
೫) ವಿಷ್ಣುಪ್ರಯಾಗ -೨೫೦ ಕಿ.ಮೀ.(ವಿಷ್ಣುಗಂಗಾ+ ಅಲಕನಂದಾ)
೬) ಕೇಶವಪ್ರಯಾಗ -ಬದರಿಯಿಂದ ಸುಮಾರು ೩ ಕಿ.ಮೀ. (ಸರಸ್ವತೀ+ಅಲಕನಂದಾ)

೨. 'ವಟಪ್ರಯಾಗಃ ದೇವಪ್ರಯಾಗಃ, ರುದ್ರಪ್ರಯಾಗಃ, ಸ್ಕಂದಪ್ರಯಾಗಃ, ನಂದಪ್ರಯಾಗಃ, ಕೇಶವಪ್ರಯಾಗಃ'। ಇತಿ ವಟಾದಿ ಷಟ್ ಪ್ರಯಾಗಾಃ ತ್ರಿವೇಣೀಸಂಗಮಮಾರಭ್ಯ ಬದರಿಕಾಶ್ರಮ ಪರ್ಯಂತಂ ಭಾಗೀರಥೀತೀರೇ ಸ್ಥಾನೇ ಸ್ಥಾನೇ ಸಂತಿ । ತೇಷಾಂ ಪ್ರಾರ್ಥನಮಿದಮ್ । -ವ್ಯಾ

ಅ: ಅಮರೀಭ್ರಮರೀಪುಂಜಸುಮರೀಚಿಭಿಃ = ದೇವತಾಸ್ತ್ರೀಯರುಗಳೆಂಬ ಹೆಣ್ಣು ದುಂಬಿಗಳ ಸಮುದಾಯದ ಶೋಭನಕಾಂತಿಯುಕ್ತವಾದ ಕಿರಣಗಳಿಂದ; ಅಂಚಿತಾ = ಶೋಭಿತವಾಗಿರುವ; ಸಾ ಬದರೀ = ಆ ಬದರಿಕಾಶ್ರಮವು; ಕಿಂಕಿಂ (ಕ್ಷೇತ್ರಂ) = ಯಾವ ಯಾವ ಕ್ಷೇತ್ರವನ್ನು (ತಾನೇ); ನ ಅಧರೀಕುರುತೇ = ಮೀರಿಸದೆ ಇರದು; ರೇ ವದ =ಎಲೈ ಜೀವನೇ; ಹೇಳು,(ಛೇಕಾನುಪ್ರಾಸಾಲಂಕಾರ)

**ದೇವಸ್ತ್ರೀಯರೆಂಬ ಹೆಣ್ಣು ದುಂಬಿಗಳ ಹಿಂಡಿನ ಉಜ್ಜ್ವಲಕಿರಣಗಳಿಂದ ಕಂಗೊಳಿಸುವ ಬದರಿಕಾಶ್ರಮವು ಯಾವ ಕ್ಷೇತ್ರವನ್ನು ತಾನೇ ಮೀರಿಸಲಾರದು; ಹೇಳು !**

ವಿ: ೧. ದೇವಾಂಗನೆಯರು[೧] ಸಹ ಯಾವ ಕ್ಷೇತ್ರದ ಹಿರಿಮೆಯಿಂದ ಮೋಹಿತರಾಗಿ ಸತತ ಸಂಚರಿಸುವರೋ ಅಂತಹ ಬದರಿಯ ಮುಂದೆ ಎಲ್ಲ ಕ್ಷೇತ್ರಗಳೂ ತುಂಬಾ ಚಿಕ್ಕವೇ ಸರಿ ಎಂದು ಭಾವ.ಬದರಿಯಷ್ಟು ಎತ್ತರದಲ್ಲಿ ಬೇರಾವ ವೈಷ್ಣವಕ್ಷೇತ್ರವೂ ಇಲ್ಲದಿರುವುದು ಸಹ ಅದರ ಹಿರಿಮೆಗೆ ಪ್ರತ್ಯಕ್ಷಸಾಕ್ಷಿಯಾಗಿದೆ ಎಂಬ ಸೂಚನೆಯೂ ಇಲ್ಲಿದೆ.[೨]

೨. ಬದರಿಯು ಭರತಖಂಡದ ಸರ್ವಶ್ರೇಷ್ಠ ಪುಣ್ಯಕ್ಷೇತ್ರ; ಇದರ ವರ್ಣನೆಯು ಮಹಾ-ಭಾರತ, ಹರಿವಂಶ, ಭಾಗವತ ಮೊದಲಾದ ಇತಿಹಾಸ ಪುರಾಣಗಳಲ್ಲಿ ವಿಪುಲವಾಗಿ ಬಂದಿದೆ. ಭರತಖಂಡದ ಆಧ್ಯಾತ್ಮಿಕ ರಾಜಧಾನಿ ಎಂಬುದಾಗಿ ಇದನ್ನು ಭಾಗವತಪುರಾಣವು ಬಣ್ಣಿಸಿದೆ. ಆದ್ದರಿಂದಲೇ ಇದರ ಯಾತ್ರೆಗೆ ಭಾರತದೇಶದ ಧಾರ್ಮಿಕಜನತೆಯಲ್ಲಿ ಅತ್ಯುನ್ನತ ಸ್ಥಾನ ಲಭಿಸಿದೆ.

೩. ಬದರಿಯು ಅತ್ಯುತ್ತಮ ಕ್ಷೇತ್ರವಾದ್ದರಿಂದಲೇ, ಇದರ ಸ್ವಾಮಿಯಾದ ನಾರಾಯಣನೇ ಸರ್ವೋತ್ತಮ ದೇವತೆಯಾಗಿರುವನು ಎಂಬುದು ಸಿದ್ಧವಾಗುವುದು; ಇಲ್ಲಿ ಹರಿಯುವ ಗಂಗಾ (ಅಲಕನಂದಾ) ನದಿಯು ಜಗತ್ತಿನ ಸರ್ವಶ್ರೇಷ್ಠ ನದಿಯಾಗಿದೆ; ಇದು ಮೂಲತಃ ನಾರಾಯಣನ ಪಾದೋದಕವೆಂಬುದೂ ಗಮನಾರ್ಹ. ಪ್ರಾಚೀನಯುಗಗಳ ಧ್ರುವ, ಪೃಥು, ಪ್ರಿಯವ್ರತ ಮೊದಲಾದ ಸಕಲರಾಜರುಗಳೂ, ನಾರದಾದಿಮುನಿಗಳೂ, ಬ್ರಹ್ಮಾದಿದೇವತೆಗಳೂ ಬಹಳವಾಗಿ ಸೇವಿಸಿದ ಕ್ಷೇತ್ರವೆಂಬುದು ಇದರ ಅಸಾಧಾರಣವಾದ ವೈಶಿಷ್ಟ್ಯ.

೪. ಧರ್ಮಪುತ್ರತ್ವೇನ ಅವತರಿಸಿದ ಶ್ರೀನಾರಾಯಣನು ನರನೊಂದಿಗೆ ಲೋಕಶಿಕ್ಷಣಕ್ಕಾಗಿ ತಪಸ್ಸು ಮಾಡಿದ ಸ್ಥಳ; ಇಂದ್ರಪ್ರೇಷಿತರಾದ ಕಾಮಾದಿಗಳು ಪರಾಜಿತರಾದ ಸ್ಥಳ; ಊರ್ವಶಿಯು ಶ್ರೀನಾರಾಯಣನಿಂದ ಜನ್ಮ ತಳೆದ ಸ್ಥಳ; ಶ್ರೀಕೃಷ್ಣರೂಪದಿಂದ ಶ್ರೀಹರಿಯು ಘಂಟಾಕರ್ಣರಿಗೆ ಮೋಕ್ಷವಿತ್ತ ಸ್ಥಳ; ಭೀಮಸೇನಾದಿ ಪಾಂಡವರು ಅವತರಿಸಿದ ಸ್ಥಳ. ಪಾಂಡವರು ಬಾಲ್ಯವನ್ನು ಕಳೆದುದಲ್ಲದೆ ತಮ್ಮ ತೀರ್ಥಯಾತ್ರೆಯ ಕಾಲದಲ್ಲೂ, ಮಹಾಪ್ರಸ್ಥಾನದ ಸಮಯದಲ್ಲೂ ಸಂದರ್ಶಿಸಿದ್ದ ಸ್ಥಳ ಮೊದಲಾದ ಅನೇಕ ವಿಧ ಹಿರಿಮೆ ಇದಕ್ಕೆ ಉಂಟು.

---

೧. ಬದರ್ಯಾಂ ಸುರಾಂಗನಾಃ ಸಂಚರಂತೀತಿ ಭಾವಃ। –ವ್ಯಾಖ್ಯಾನ

೨. ಬದರಿಕಾಶ್ರಮಸ್ಯ ಉತ್ತುಂಗಶೃಂಗಗತತ್ವೇನ ಉಚ್ಚತಾಯಾಃ, ಕ್ಷೇತ್ರಾಂತರಾಣಾಂ ತದಧೋಗತತ್ವೇನ ಅಧಮತಾಯಾಶ್ಚ ಪ್ರತ್ಯಕ್ಷಮೇವ ಪ್ರಮಾಣಮಿತಿ ಭಾವಃ। – ವ್ಯಾಖ್ಯಾನ

೫. ಶ್ರೀಮಧ್ವಾಚಾರ್ಯರು ತಮ್ಮ ಪ್ರಥಮ ಸಂದರ್ಶನ ಸಮಯದಲ್ಲಿ ಗೀತಾಭಾಷ್ಯವನ್ನು ಸಮರ್ಪಿಸಿದ್ದು, ಪಾಠ ಹೇಳಿದ್ದು, ೪೮ ದಿನಗಳ ಕಾಲ ಕಾಷ್ಠಮೌನ ವ್ರತವನ್ನು, ಉಪವಾಸವನ್ನು ಆಚರಿಸಿದ್ದು, ಶಿಷ್ಯರಿಗೆ ಸಂದೇಶವಿತ್ತು ತೆರಳಿದ್ದು, ಶ್ರೀವ್ಯಾಸನಾರಾಯಣರನ್ನು ಸಂದರ್ಶಿಸಿ ಉತ್ತರ(ಮಹಾ) ಬದರಿಯಿಂದ ಮರಳುತ್ತಲೇ ಬ್ರಹ್ಮಸೂತ್ರಭಾಷ್ಯವನ್ನು ರಚಿಸಿದ್ದು, ಶ್ರೀಸತ್ಯತೀರ್ಥರು ಬ್ರಹ್ಮಸೂತ್ರಭಾಷ್ಯದ ಪ್ರಥಮ ಪ್ರತಿಯನ್ನು ಲೇಖನ ಮಾಡಿದ್ದು ಈ ಪವಿತ್ರ ಸ್ಥಳದಲ್ಲಿ ಎಂದು ಸುಮಧ್ವವಿಜಯಾದಿಗ್ರಂಥಗಳಲ್ಲಿ ವರ್ಣಿತವಾಗಿದೆ.

೬. ಬದರಿಯಲ್ಲಿ ಪರಸ್ಪರ ಎದುರಿನಲ್ಲಿ ನಾರಾಯಣಪರ್ವತ ಮತ್ತು ನರಪರ್ವತವೆಂಬ ಎರಡು ಪರ್ವತಗಳು ಇವೆ. ಬದರಿನಾರಾಯಣನ ಗುಡಿಯಿರುವ ಪರ್ವತವೇ ನಾರಾಯಣ-ಪರ್ವತ. ಎದುರಿನದು ನರಪರ್ವತ. ನಾರಾಯಣಪರ್ವತದ ಬಲಭಾಗದಲ್ಲಿ ಉರ್ವಶೀ ಪರ್ವತವಿದೆ;[೧] ನಾರಾಯಣಪರ್ವತದ ಬುಡದಲ್ಲೇ ಅಲಕನಂದೆಯು ಭೋರ್ಗರೆಯುತ್ತ ಹರಿಯುತ್ತದೆ; ಅದರ ತೀರದಲ್ಲೇ ಶ್ರೀನಾರಾಯಣದೇವರ ಧ್ಯಾನಮಗ್ನಮೂರ್ತಿ; ದೇವತಾ ಪರಿವಾರವೂ ಇವೆ; ಘಂಟಾಕರ್ಣರ ಮೋಕ್ಷಪ್ರಾಪ್ತಿಪ್ರಸಂಗವನ್ನು ಸೂಚಿಸುವ ಘಂಟಾಕರ್ಣರ ಸ್ಥಾನವು ದೇವಸ್ಥಾನದ ಹೊರವಲಯದಲ್ಲಿದೆ. ಅಲಕನಂದೆಯು ಇಲ್ಲಿ ಸ್ಪರ್ಶಿಸಲೂ ಆಗದಷ್ಟು ತಂಪಾಗಿದೆ; ಅದರ ತೀರದಲ್ಲೇ ತಪ್ತಕುಂಡ(ಬಿಸಿನೀರಿನ ಬುಗ್ಗೆಗಳು) ಇರುವುದು ಇಲ್ಲಿಯ ವಿಶೇಷ; ಆಳ, ವೇಗ ಮತ್ತು ಶೀತದಿಂದಾಗಿ ಅಲಕನಂದೆಯ ಸ್ನಾನವು ಇಲ್ಲಿ ಸಾಮಾನ್ಯರಿಗೆ ಎಂದೂ ಸಾಧ್ಯವಾಗುವುವಂತಹುದಲ್ಲ;

೭. ದೇವಾಲಯದ ಒಳ ಅಂಗಳವೇ ಅನಂತಮಠವೆಂದು ಪ್ರಸಿದ್ಧಸ್ಥಳವೆಂದು ಶ್ರೀಸುಮಧ್ವವಿಜಯ ವ್ಯಾಖ್ಯಾನಗಳಲ್ಲಿದೆ[೨]; ಶ್ರೀಮದಾಚಾರ್ಯರು ಅಲ್ಲಿಯೇ ತಂಗಿದ್ದು ಶ್ರೀಗೀತಾಭಾಷ್ಯವನ್ನು ರಚಿಸಿದರು.

೮. ಉರ್ವಶೀ ಪರ್ವತದಿಂದ ಹರಿಯುವ ಋಷಿಗಂಗಾ ಎಂಬ ಮತ್ತೊಂದು ಚಿಕ್ಕನದಿಯು ಇಲ್ಲಿ ಅಲಕನಂದೆಯನ್ನು ಕೂಡುತ್ತದೆ.

೯. ಬದರಿಯಿಂದ ಸುಮಾರು ೩ ಕಿ.ಮಿ. ದೂರದಲ್ಲಿ [೩]ಕೇಶವಪ್ರಯಾಗವೆಂಬ (ಸರಸ್ವತೀ-ಅಲಕನಂದಾ ಸಂಗಮ) ಅಪೂರ್ವಸ್ಥಳವಿದೆ; ಅದರ ಬಳಿಯಲ್ಲೇ ಬೆಟ್ಟದಲ್ಲಿ '**ಗಣೇಶ ಗುಹಾ**' ಎಂಬ ಸ್ಥಳವಿದ್ದು, ಅದು ವ್ಯಾಸಭಾರತವನ್ನು ಗಣೇಶನು ಬರೆದ ಸ್ಥಳ ಎನ್ನುವರು; ಗಣೇಶಗುಹೆಯಿಂದ ಕೆಲವು ಅಡಿಗಳಷ್ಟು ಎತ್ತರದಲ್ಲಿ ಪರ್ವತದಲ್ಲಿ '**ವ್ಯಾಸಗುಹೆ**'ಎಂಬ ಗುಹೆಯೊಂದಿದ್ದು, ಅದನ್ನು ವ್ಯಾಸಾಶ್ರಮವೆಂದು ಕರೆಯುವರು; ಅಲ್ಲಿಂದಮೇಲೆ ಸುಮಾರು ೧೦ ಕಿ.ಮೀ. ಗಳಷ್ಟು ದೂರದಲ್ಲಿ ಮುಚುಕುಂದ ಮಲಗಿದ್ದ, ಕಾಲಯವನು ಭಸ್ಮವಾದ, ಮುಚುಕುಂದನಿಗೆ ಶ್ರೀಕೃಷ್ಣದರ್ಶನವಾದ **ಮುಚುಕುಂದ ಗುಹೆ** ಉಂಟು; ಕೇಶವಪ್ರಯಾಗದಲ್ಲಿ

---

೧. ಈ ಪರ್ವತದಲ್ಲಿ ಋಷಿಗಂಗಾತೀರದಲ್ಲಿ ನಾರಾಯಣನ ಎಡತೊಡೆಯ ಮೇಲೆ ಉರ್ವಶಿಯು ಕುಳಿತಿರುವ ವಿಗ್ರಹವಿರುವ ಒಂದು ಚಿಕ್ಕ ಗುಡಿಯೂ ಇದೆ.

೨. ಅನಂತಮಠ ಇತಿ ಮನುಷ್ಯಗೋಚರಬದರಿಕಾಶ್ರಮೇ ನಾರಾಯಣಮಂದಿರಸ್ಯ ಆಖ್ಯಾ(ವೇ)।

೩. ಇದರ ಬಳಿ ಯಮಧರ್ಮಪತ್ನಿಯಾದ ಮೂರ್ತಿದೇವಿಯ ಗುಡಿಯೂ ಇದೆ.

ಅಲಕನಂದೆಯನ್ನು ಸೇರುವ ಸರಸ್ವತಿಯು ಸುಮಾರು ೧ ಕಿ.ಮೀ. ಮೊದಲು ಪರ್ವತದಿಂದ ನೂರಾರು ಅಡಿಗಳಷ್ಟು ಕೆಳಕ್ಕೆ ಧುಮುಕುವ ರುದ್ರರಮಣೀಯವಾದ ದೃಶ್ಯವನ್ನು ಕಾಣಬಹುದು; ಅದು ಧುಮುಕುವ ಸ್ಥಳದಲ್ಲೇ ಶ್ರೀಭೀಮಸೇನದೇವರು ಮಹಾಪ್ರಸ್ಥಾನಕಾಲದಲ್ಲಿ ಒಂದು ಪರ್ವತ ಶಿಖರವನ್ನು ಮುರಿದಿಟ್ಟು ಸೇತುವೆಯಾಗಿ ನಿಲ್ಲಿಸಿರುವ 'ಭೀಮಸೇತು' ಎಂಬ ಸೇತುವೆಯಿದೆ; ಜಗತ್ತಿನ ಯಾವ ಪ್ರಸಿದ್ಧ ಜಲಪಾತಕ್ಕೂ ಇಂತಹ ಏಕಶಿಲೆಯ ಸೇತುವೆ ಇರುವುದಿಲ್ಲ; ಇದು ಶ್ರೀಭೀಮಸೇನದೇವರ ಅಗಾಧ ಬಲ ಹಾಗು ಜ್ಞಾನಗಳಿಗೆ ಪ್ರತ್ಯಕ್ಷ ಸಾಕ್ಷಿಯಾಗಿದೆ; ಅಲ್ಲಿಯ ಹಳ್ಳಿಯ ಜನರು ಈ ಕಥೆಯನ್ನು ತುಂಬಾ ಶ್ರದ್ಧೆಯಿಂದ ಇಂದೂ ಹೇಳುವರು.

೧೦. ಈ ಸರಸ್ವತೀನದಿಯ ತೀರದ ಸ್ಥಳವೇ ಭಾಗವತಪುರಾಣದಲ್ಲಿ ಉಲ್ಲೇಖಿಸಲ್ಪಟ್ಟಿರುವ 'ಶ್ರಮ್ಯಾಪ್ರಾಸ'ವೆಂಬ ಭಾಗವತ ರಚನೆಯ ಪುಣ್ಯಸ್ಥಳವಾಗಿರಬೇಕು. ಭೃಗುಮುನಿಗಳು ವಿಷ್ಣುಸರ್ವೋತ್ತಮತ್ವ ಸ್ಥಾಪನೆಗೆ ಹೊರಡಲು ಕಾರಣವಾದ ಋಷಿಗಳ ಯಜ್ಞವು ನಡೆದ ಸ್ಥಳವೂ ಈ ಸರಸ್ವತೀತೀರವೇ ಆಗಿದೆ.

೧೧. ಬದರಿಗಿಂತ ಮುಂಚಿತವಾಗಿ ೨೦ ಕಿ.ಮೀ. ದೂರದಲ್ಲಿ ಪಾಂಡಕೇಶ್ವರ ಎಂಬ ಸ್ಥಳವಿದೆ;ಅಲಕನಂದಾ ತೀರದ ಈ ಸ್ಥಳದಲ್ಲೇ ಪಾಂಡುರಾಜನು ತನಗೆ ಕಿಂದಮ ಋಷಿಗಳಿಂದ ಶಾಪಬಂದ ಅನಂತರ ಕಾಲದಲ್ಲಿ ವಾಸಿಸಿದ್ದನೆಂದು ಮಹಾಭಾರತ, ಮಹಾಭಾರತತಾತ್ಪರ್ಯ-ನಿರ್ಣಯ ಮತ್ತು ತಾತ್ಪರ್ಯನಿರ್ಣಯ ಭಾವಪ್ರಕಾಶಿಕೆಗಳಿಂದ ತಿಳಿಯುತ್ತದೆ.[೧]

೧೨. ಬದರಿಯಲ್ಲಿ ಅಲಕನಂದೆಯ ಸ್ನಾನಘಟ್ಟದ ಬಳಿಯೇ ಬ್ರಹ್ಮಕಪಾಲ, ಗರುಡಶಿಲಾ, ನಾರದಶಿಲಾ ಮೊದಲಾದ ಸ್ಥಳಗಳಿವೆ. ಬ್ರಹ್ಮಕಪಾಲದಲ್ಲಿ ಸಮರ್ಪಿಸಲ್ಪಡುವ ಪಿಂಡದಿಂದ ಪಿತೃಗಳಿಗೆ ಸದ್ಗತಿಯು ಪ್ರಾಪ್ತವಾಗುತ್ತದೆ ಎಂಬ ಕಾರಣದಿಂದಾಗಿ ಗಯಾ ವಿಷ್ಣುಪಾದ ಶ್ರಾದ್ಧದಂತೆ ಇಲ್ಲಿಯ ಶ್ರಾದ್ಧಕ್ಕೂ ತುಂಬಾ ಮಹತ್ತವನ್ನು ಶಾಸ್ತ್ರಗಳು ವಿಧಿಸಿವೆ.

೧೩. ಪ್ರಸಿದ್ಧವಾದ ಎರಡು ಬದರಿಗಳಲ್ಲಿ ವಿಶಾಲಬದರಿಯೇ ನಾರಾಯಣಾಶ್ರಮದ ಬದರಿಯಾಗಿದೆ. ಭಾಗವತಾದಿಗಳಲ್ಲಿ ಇದನ್ನು ವಿಶಾಲಬದರೀ ಎಂದೇ [೨]ಕರೆಯಲಾಗಿದೆ. ಶ್ರೀವೇದವ್ಯಾಸರು ಸಾಕ್ಷಾತ್ತಾಗಿ ಅದ್ಯಾಪಿ ನೆಲೆಸಿರುವ 'ಉತ್ತರಬದರೀ' ಎಂಬ ಇನ್ನೂ ಶ್ರೇಷ್ಠ-

---

೧. ನೃಸಿಷ್ಣುರುಕ್ತಃ ಪೃಥಯಾ ಸ ನೇತಿ ಪ್ರಮಾಣಪೂರ್ವಂ ನ್ಯವಸತ್ ತಥೈವ ।
ತಾಭ್ಯಾಂ ಸಮೇತಃ ಶತಶೃಂಗಪರ್ವತೇ ನಾರಾಯಣಸ್ಯಾಶ್ರಮಮಧ್ಯಗೇ ಪುರಃ ॥
-ಮ.ಭಾ.ತಾ.ನಿ.(೧೧/೧೭೭)

-ಇತ್ಯತ್ರ ಸಪಾದಲಕ್ಷಶೃಂಗವತ್ವಾತ್ ಪೂರ್ವಾಪರವಾರಿಧಿಪರ್ಯಂತಂ ಮಹಾನ್ ಸಪಾದಲಕ್ಷಾಖ್ಯಃ ಪರ್ವತೋಽಸ್ತಿ । ತನ್ಮಧ್ಯೇ ಶತಶೃಂಗಾಖ್ಯ ಅವಾಂತರಪರ್ವತಃ । ತಸ್ಯ ಮಧ್ಯೇ ಪೂರ್ವತಃ ಪಶ್ಚಿಮತಶ್ಚ ನರನಾರಾಯಣಶೃಂಗಾಭ್ಯಾಂ ಮಧ್ಯೇ ಅಲಕನಂದಯಾ ಚಾಲಂಕೃತಃ ಬದರಿಕಾಖ್ಯ-ನಾರಾಯಣಾಶ್ರಮಸ್ತಿಷ್ಠತಿ। ತಸ್ಯ ದಕ್ಷಿಣಭಾಗೇ ಯೋಜನಪ್ರಮಾಣಾದಧಸ್ತಾತ್ ಪಾಂಡುಚಕ್ರವರ್ತಿ-ನಾಽಧಿಷ್ಠಿತತ್ವಾತ್ ಪಾಂಡುಕೇಶ್ವರಾಖ್ಯಂ ಪುಣ್ಯಕ್ಷೇತ್ರಂ ಚ ವರ್ತತೇ। ಇತಿ ವಸ್ತುಸ್ಥಿತಿಃ।
-ಮ.ಭಾ.ತಾ.ನಿ. ಭಾವಪ್ರಕಾಶಿಕಾ

೨. ಸ ಪ್ರಯಯೌ ವಿಶಾಲಾಮ್ । -ಭಾಗವತ(೪/೧೨/೧೬)

ವಾದ ಮತ್ತೊಂದು ಬದರಿಯ ಪ್ರಸ್ತಾಪ ಮಹಾಭಾರತದಲ್ಲೂ ಮಹಾಭಾರತತಾತ್ಪರ್ಯ-ನಿರ್ಣಯದಲ್ಲೂ[೧] ಬಂದಿದೆ.

೧೪. ನರಾಗಮ್ಯವಾದ ಆ ಬದರಿಯನ್ನು ಶ್ರೀಮದಾಚಾರ್ಯರು ಎರಡು ಬಾರಿ ಸಂದರ್ಶಿಸಿ ಅಲ್ಲಿ ಶ್ರೀನಾರಾಯಣದೇವರಿಂದಲೂ, ಅದರ ಸಮೀಪದ ನಾರಾಯಣಾಶ್ರಮದಲ್ಲಿ ಶ್ರೀವೇದವ್ಯಾಸರಿಂದಲೂ ವಿಶೇಷವಾಗಿ ಅನುಗ್ರಹೀತರಾದ ವಿವರವು ಸುಮಧ್ವವಿಜಯಾದಿ-ಗಳಲ್ಲಿ ಉಕ್ತವಾಗಿದೆ. ಅಲ್ಲದೆ ಅವರು ಅದ್ಯಾಪಿ ಈ ಬದರಿಯಲ್ಲಿ ನೆಲೆಸಿರುವುದರೆಂದೂ ದೇವಮಾನದ ನೂರುವರ್ಷಗಳ ಅನಂತರ ಅವರು ತಮ್ಮ ಮೂಲರೂಪದೊಂದಿಗೆ ಐಕ್ಯ ಹೊಂದುವರೆಂದೂ ಶ್ರೀವಾದಿರಾಜರು ತಮ್ಮ ಸರಸಭಾರತೀವಿಲಾಸದಲ್ಲಿ (೭/೧೦,೭/೨೫) ತಿಳಿಸಿರುವರು.

೧೫. ಆಗ ಹಿಮಕಾಲದಲ್ಲಿ ಬದರಿಯ ಜನರು ಪಶುಪಕ್ಷ್ಯಾದಿಗಳ ಸಮೇತ ಈ ಪಾಂಡಕಕ್ಷೇತ್ರದಲ್ಲಿ ನೆಲೆಸುತ್ತಿದ್ದರೆಂಬ ಸ್ವಾರಸ್ಯಕರ ಅಂಶವನ್ನೂ ಶ್ರೀವಾದಿರಾಜರು ತಮ್ಮ ಮಹಾಭಾರತತಾತ್ಪರ್ಯನಿರ್ಣಯ ಭಾವಪ್ರಕಾಶಿಕೆಯಲ್ಲಿ ತಿಳಿಸಿರುವರು (೧೧/೧೭೭)[೩]:

## ಬದರೀ ನಾರಾಯಣ

**ಧರ್ಮಾದ್ಯೋಽಜನಿ ಧರ್ಮ ಏವ ಸ ರತಿಂ ದದ್ಯಾತ್ ಸ್ವಯೋಗಶ್ರಿಯಂ**
**ಯೋಗಾಭ್ಯಾಸರತಃ ಸ್ಮರಾದಿವಿಜಯಂ ಕಂದರ್ಪದರ್ಪಾಪಹಃ ।**

---

೧. ನೇದೃಶಂ ಸ್ಥಲಮಲಂ ಶಮಲಘ್ನಂ ನಾಸ್ಯ ತೀರ್ಥಸಲಿಲಸ್ಯ ಸಮಂ ವಾಃ ।
ನಾಸ್ತಿ ವಿಷ್ಣುಸದೃಶಂ ನನು ದೈವಂ ನಾಸ್ಮದುಕ್ತಿಸದೃಶಂ ಹಿತರೂಪಮ್ ॥-ಸುಮಧ್ವವಿಜಯ(೬/೪೭)
ಅತೀತ್ಯ ಶರ್ವಶ್ವಶುರಂ ಗಿರಿಂ ತೇ ಸುವರ್ಣಕೂಟಂ ನಿಷಧಂ ಗಿರಿಂ ಚ ।
ಮೇರೋಃ ಪ್ರಾಚ್ಯಾಂ ಗಂಧಮಾದೇ ಗಿರೌ ಚ ಪ್ರಾಪುರ್ಬದರ್ಯಾಶ್ರಮುತ್ತಮಂ ಭುವಿ॥
—ಮ.ಭಾ.ತಾ.ನಿ. (೨೨/೨೮೩)
ಗಂಧಮಾದೇ - ಉತ್ತುಂಗಗಂಧಮಾದನಪರ್ವತಸ್ಯ ಅಧೋಭಾಗೇ - ಅಧೋಭಾಗಸ್ಥ
ನಾರಾಯಣಾಶ್ರಮೇ -ಮ.ಭಾ.ತಾ.ನಿ. (ಭಾವಪ್ರಕಾಶಿಕಾ)
ಅಥ ಹೈಮವತೇ ತಟಾಂತರೇ ಬದರೀಷಂಡವಿಶೇಷಮಂಡಿತಮ್ ।
ಪರಮಾಶ್ರಮಮಾಶ್ರಯಂ ಶ್ರಿಯಃ ಸಕಲಜ್ಞಃ ಸ ದದರ್ಶ ವಿಶ್ರುತಮ್ ॥-ಸುಮಧ್ವವಿಜಯ (೭/೧)
೨. ಅದ್ಯಾಪಿ ಬದರೀಶೈಲೇ ಬದರೀಷಂಡಮಂಡಿತೇ ।
ಮಧ್ಯೇ ಮನೀನಾಮಧ್ಯಾಸ್ತೇ ವಿದ್ವಾನ್ ವ್ಯಾಸಸ್ಯ ಸನ್ನಿಧೌ ॥
ಶರಚ್ಛತೇ ವ್ಯತೀತೇ ತು ದೇವಾನಾಮಾಜ್ಞಯಾ ಪ್ರಭೋಃ ।
ಏಕತಾಂ ಮೂಲರೂಪೇಣ ಲೋಕೇ ಸ್ವಿಯೇ ಗಮಿಷ್ಯತಿ ॥
೩. ನಾರಾಯಣಾಶ್ರಮೇ ಹಿಮಕಾಲೇ ಷಣ್ಮಾಸಪರ್ಯಂತಮಾಕಾಶಾತ್ ಪತಮಾನಗಿರಿ ಶೃಂಗೋಪಮ ಶಿಲೀಭೂತಹಿಮಾನೀಭಯಾತ್ ತತ್ರತ್ಯಾಃ ಪಶವೋ ಪಕ್ಷಿಣೋ ಮೃಗಾ ಮನುಷ್ಯಾಶ್ಚಪಾಂಡಕಕ್ಷೇತ್ರಂ ಪ್ರತ್ಯಾಯಂತಿ ।

**ಉತ್ತುಂಗಾದ್ರಿಗತಃ ಸದೋಚ್ಚಪದವೀಂ ಯೋಷಿತ್ಕದಂಬೇಷು ನಃ**
**ಪುತ್ರೀವನ್ಮತಿಮುರ್ವಶೀಜನಯಿತಾ ನಾರಾಯಣಃ ಸದ್ಗುಣಾನ್ ॥ ೪೨ ॥**

ಅ: ಯಃ = ಯಾವನು; **ಧರ್ಮಾತ್** = ಯಮಧರ್ಮನಿಂದ; ಅಜನಿ = ಪ್ರಾದುರ್ಭವಿಸಿದನೋ; ಸಃ **ನಾರಾಯಣಃ** = ಅಂತಹ ನಾರಾಯಣನು; ನಃ = ನಮಗೆ; **ಧರ್ಮೇ ಏವ** = ಧರ್ಮದಲ್ಲಿಯೇ; **ರತಿಂ** = ಆಸಕ್ತಿಯನ್ನು; **ದದ್ಯಾತ್** = ಕೊಡಲಿ; **ಯೋಗಾಭ್ಯಾಸರತಃ** = ಯೋಗಾಭ್ಯಾಸದಲ್ಲಿ ನಿರತನಾದ ಅವನು; **ಸ್ವಯೋಗಶ್ರಿಯಂ (ದದ್ಯಾತ್)** = ತನ್ನನ್ನು ತಿಳಿಸಿಕೊಡುವ ಧ್ಯಾನಸಂಪತ್ತನ್ನು ಕೊಡಲಿ; **ಕಂದರ್ಪದರ್ಪಾಪಹಃ** = ಮನ್ಮಥನ ಸೊಕ್ಕನ್ನು ಅಡಗಿಸಿದ ಅವನು; **ಸ್ಮರಾದಿವಿಜಯಂ (ದದ್ಯಾತ್)** = ಕಾಮಾದಿ (ಆರು) ಶತ್ರುಗಳ ಮೇಲೆ ಜಯವನ್ನು ಕೊಡಲಿ; **ಉತ್ತುಂಗಾದ್ರಿಗತಃ** = ಉನ್ನತವಾದ ಪರ್ವತದಲ್ಲಿ ನೆಲೆಸಿರುವ ಅವನು; **ಸದಾ** = ಯಾವಾಗಲೂ; **ಉಚ್ಚಪದವೀಂ (ದದ್ಯಾತ್)** = ಉನ್ನತ ಸ್ಥಾನವನ್ನು ಕೊಡಲಿ; **ಉರ್ವಶೀಜನಯಿತಾ** = ಉರ್ವಶಿಗೆ ಜನ್ಮವಿತ್ತ (ಅವನು) **ಯೋಷಿತ್ಕದಂಬೇಷು** = ಸ್ತ್ರೀ ಸಮೂಹಗಳಲ್ಲಿ; **ಪುತ್ರೀವತ್** = ಇವರು ನನ್ನ ಪುತ್ರಿಯರು ಎಂಬಂತಹ; **ಮತಿಂ (ದದ್ಯಾತ್)** = ಬುದ್ಧಿಯನ್ನು ಕೊಡಲಿ; **ನಾರಾಯಣಃ** = ಸಕಲಸದ್ಗುಣ ಪೂರ್ಣನಾದ ಅವನು; **ಸದ್ಗುಣಾನ್** = ಜ್ಞಾನಾದಿಸದ್ಗುಣಗಳನ್ನು ಕೊಡಲಿ.

ಯಮನಿಂದ ಅವತರಿಸಿದ ಈ ನಾರಾಯಣನು ನಮಗೆ ಧರ್ಮದಲ್ಲಿಯೇ ಆಸಕ್ತಿಯನ್ನು, ಯೋಗಾಭ್ಯಾಸದಲ್ಲಿ ನಿರತನಾದ ಇವನು ತನ್ನನ್ನು ತಿಳಿಸಿಕೊಡುವ ಧ್ಯಾನಸಂಪತ್ತನ್ನು, ಮನ್ಮಥನ ಸೊಕ್ಕನ್ನು ಅಡಗಿಸಿದ ಇವನು ಕಾಮಾದಿ ಶತ್ರುಗಳ ಮೇಲೆ ಜಯವನ್ನು, ಉನ್ನತಪರ್ವತದಲ್ಲಿ ನೆಲೆಸಿರುವ ಇವನು ಸದಾ ಉನ್ನತಸ್ಥಾನವನ್ನು, ಉರ್ವಶಿಗೆ ಜನ್ಮವಿತ್ತ ಇವನು ಸ್ತ್ರೀವೃಂದದಲ್ಲಿ ಪುತ್ರೀಭಾವವನ್ನು, ಸಕಲ ಸದ್ಗುಣಪೂರ್ಣನಾದ ಇವನು ನಮಗೆ ಜ್ಞಾನಾದಿಸದ್ಗುಣಗಳನ್ನು ಕರುಣಿಸಲಿ.

ವಿ: ೧. ನಾರಾಯಣನು ಬದರಿಕಾಶ್ರಮದ ಅಧಿದೇವತೆ, ಅವನ ಹಿರಿಮೆಯನ್ನೂ ಮತ್ತು ಅವನಿಂದ ಬೇಡಿಕೊಳ್ಳಬೇಕಾದ ವಿಷಯಗಳನ್ನೂ ಶ್ರೀವಾದಿರಾಜರು ಈ ಶ್ಲೋಕದಲ್ಲಿ ತುಂಬಾ ಹೃದಯಂಗಮವಾಗಿ ವರ್ಣಿಸಿರುವರು.

೨. [೧]ನಾರಾಯಣನು ಯಮಧರ್ಮಪುತ್ರತ್ವೇನ ಅವತರಿಸಿದ ಭಗವದ್ರೂಪ (ಧರ್ಮಾದ್ಯೋಽಜನಿ); ಲೋಕಶಿಕ್ಷಣಕ್ಕಾಗಿ ತಪಸ್ಸಿನ ರೀತಿಯನ್ನು ಸ್ವತಃ ಆಚರಿಸಿ ತೋರಿಸಿಕೊಟ್ಟವನು

---

೧. ಧರ್ಮಸ್ಯ ದಕ್ಷದುಹಿತರ್ಯಜನಿಷ್ಟ ಮೂರ್ತ್ಯಾಂ
ನಾರಾಯಣೋ ನರಋಷಿಪ್ರವರಃ ಪ್ರಶಾಂತಃ।
ನೈಷ್ಕರ್ಮ್ಯಲಕ್ಷಣಮುವಾಚ ಚಚಾರ ಕರ್ಮ
ಯೋಽದ್ಯಾಪಿ ಚಾಸ್ತ ಋಷಿವರ್ಯನಿಷೇವಿತಾಂಘ್ರಿಃ ॥
ಭಾರತೇಽಪಿ ವರ್ಷೇ ಭಗವಾನ್ ನಾರಾಯಣಾಖ್ಯಃ ಆಕಲ್ಪಾಂತಮುಚಿತಧರ್ಮಜ್ಞಾನವೈರಾಗ್ಯೈಶ್ವರ್ಯೋಪಶಮೋ ಪರಮಾತ್ಮೋಪಲಂಭನಮನುಗ್ರಹಾಯಾತ್ಮವತಾಮನುಕಂಪಯಾ ತಪೋಽವ್ಯಕ್ತಗತಿಶ್ಚರತಿ -ಭಾಗವತ(೫/೧೯/೯)

(ಯೋಗಾಭ್ಯಾಸನಿರತಃ); ಇಂದ್ರನ ಆದೇಶದಂತೆ ತನ್ನ ತಪಸ್ಸನ್ನು ಕೆಡಿಸಲು ಬಂದ ಮನ್ಮಥ ಮೊದಲಾದವರ ಗರ್ವವನ್ನು ಅಡಗಿಸಿದವನು (ಕಂದರ್ಪದರ್ಪಾಪಹಃ)[೧]; ಅತ್ಯಂತ ಉನ್ನತವಾದ ಪರ್ವತದ ಮೇಲೆ ನೆಲೆಸಿರುವವನು (ಉತ್ತುಂಗಾದ್ರಿಗತಃ); ತನ್ನ ಮುಂದೆ ಲಾವಣ್ಯದ ಬಲೆಯನ್ನು ಬೀಸಿದ ಅಪ್ಸರೆಯರ ಗರ್ವಶಮನಕ್ಕಾಗಿ ಊರ್ವಶಿಯನ್ನು ಸೃಷ್ಟಿಸಿಕೊಟ್ಟವನು[೨] (ಊರ್ವಶೀಜನಯಿತಾ); ಮತ್ತು ಅನಂತಸದ್ಗುಣಪೂರ್ಣನು (ನಾರಾಯಣಃ).

೩. ತನ್ನ ತಂದೆಯಲ್ಲಿ ಆದರವನ್ನು ಹುಟ್ಟಿಸುವುದು [೩]ಸತ್ಪುತ್ರನ ಸ್ವಭಾವ. ಆದ್ದರಿಂದ ಧರ್ಮಪುತ್ರನಾದ ನಾರಾಯಣನು ನಮಗೆ ಧರ್ಮದಲ್ಲಿ ಆದರವನ್ನು ಹುಟ್ಟಿಸಲಿ; ಯೋಗಾಭ್ಯಾಸ ನಿರತನಾದ ಅವನು ತನ್ನನ್ನು ಧ್ಯಾನಿಸುವ ಯೋಗಸಂಪತ್ತನ್ನು ಕರುಣಿಸಲಿ; ಕಾಮಾದಿಗಳ

---

೧. ಇಂದ್ರೋಽಪಿ ನಾಕ್ಯಸುಖಮೇಷ ಜಿಘೃಕ್ಷತೀತಿ
ಕಾಮಂ ನ್ಯಯುಂಕ್ತ ಸಗಣಂ ಸ ಬದರ್ಯುಪಾಖ್ಯಮ್ ।
ಗತ್ವಾಽಪ್ಸರೋಗಣವಸಂತಸುಮಂದವಾತೈಃ
ಸ್ತ್ರೀಪ್ರೇಕ್ಷಣೇಷುಭಿರವಿಧ್ಯದತನ್ಮಹಿಜ್ಞಃ ॥
ವಿಜ್ಞಾಯ ಶಕ್ರಕೃತಮಕ್ರಮಮಾದಿದೇವಃ
ಪ್ರಾಹ ಪ್ರಹಸ್ಯ ಗತವಿಸ್ಮಯ ಏಜಮಾನಾನ್ ।
ಮಾ ಭೈರ್ವಿಭೋ ಮದನ ಮಾರುತ ದೇವವಧ್ವೋ
ಗೃಹ್ಣೀತ ನೋ ಬಲಿಮಶೂನ್ಯಮಿಮಂ ಕುರುಧ್ವಮ್ ॥
ಇತ್ಥಂ ಬ್ರುವತ್ಯಭಯದೇ ನರದೇವದೇವೇ
ಸವ್ರೀಡನಮ್ರಶಿರಸಃ ಸಘೃಣಂ ತಮೂಚುಃ ।
ನೇಯಂ ವಿಭೋ ತ್ವಯಿ ಹರೇಽವಿಕೃತಿರ್ವಿಚಿತ್ರಾ
ಸ್ವಾರಾಮಧೀರನಿಕರಾನತಪಾದಪದ್ಮೇ ॥ - ಭಾಗವತ(೧೧/೪/೭-೯)

'ತಪೋವಿಘಾತಾಯೇಂದ್ರೇಣ ನಾರಾಯಣಾಶ್ರಮಂ ಪ್ರತಿ ಪ್ರೇಷಿತಃ ಕಾಮಸ್ತಸ್ಯ ಮನೋವಿಜೇತುಮಸಮರ್ಥಃ ಸ್ವಯಮೇವ ತತ್ಪರಿಚಾರಕಮನೋಹರನಾರೀವಿಜಿತಮನಸ್ಕಃ ಸನ್ನಾರಾಯಣಮರ್ಚಯಿತ್ವಾತತ ಏಕಾಮುರ್ವಶೀನಾಮ್ನೀಂ ಸ್ವರ್ಗಂ ಪ್ರತಿ ನಿನ್ಯೇ ಇತಿ ಪೌರಾಣಿಕೀ ಕಥಾ । ವ್ಯಾ

೨. ಇತಿ ಪ್ರಗೃಣತಾಂ ತೇಷಾಂ ಸ್ತ್ರಿಯೋಽತ್ಯದ್ಭುತದರ್ಶನಾಃ ।
ದರ್ಶಯಾಮಾಸ ಶುಶ್ರೂಷಾಮರ್ಚನಂ ಕುರ್ವತೀರ್ವಿಭುಃ ॥
ತೇ ದೇವಾನುಚರಾ ದೃಷ್ಟ್ವಾ ಸ್ತ್ರಿಯಃ ಶ್ರೀರಿವ ರೂಪಿಣೀಃ ।
ಗಂಧೇನ ಮುಮುಹುಸ್ತಾಸಾಂ ರೂಪೌದಾರ್ಯಹತಶ್ರಿಯಃ ॥
ತಾನಾಹ ದೇವದೇವೇಶಃ ಪ್ರಣತಾನ್ ಪ್ರಹಸನ್ನಿವ ।
ಆಸಾಮೇಕತಮಾಂ ವೃಙ್ಧ್ವಂ ಸುವರ್ಣಾಂ ಸ್ವರ್ಗಭೂಷಣಾಮ್ ॥
ಓಮಿತ್ಯಾದೇಶಮಾದಾಯ ನತ್ವಾ ತಂ ಸುರವಂದಿನಃ ।
ಊರ್ವಶೀಮಪ್ಸರಃಶ್ರೇಷ್ಠಾಂ ಪುರಸ್ಕೃತ್ಯ ದಿವಂ ಯಯುಃ ॥ – ಭಾಗವತ(೧೧/೪/೧೨-೧೫)

೩. 'ಸರ್ವೇಽಪಿ ಸ್ವಪಿತರಿ ಸ್ನೇಹಮುತ್ಪಾದಯಂತಿ ಯತೋಽತಃ ಅಯಮಪಿ ಧರ್ಮಪುತ್ರತ್ವಾತ್ ಧರ್ಮ ಏವ ಸ್ನೇಹಮುತ್ಪಾದಯತು' ಇತ್ಯರ್ಥಃ । – ವ್ಯಾಖ್ಯಾನ

ಗರ್ವವನ್ನು ಅಡಗಿಸಿದ ಅವನು ನಮಗೆ ಕಾಮಾದಿಜಯವನ್ನು ಅನುಗ್ರಹಿಸಲಿ; ಉನ್ನತಪರ್ವತದಲ್ಲಿ ನೆಲೆಸಿರುವ ಅವನು ನಮಗೆ ಉನ್ನತ ಪದವಿಯನ್ನು ಕೊಡಲಿ; ತನ್ನನ್ನು ವಂಚಿಸಲು ಬಂದ ಅಪ್ಸರೆಯರು ತನಗೆ ಪುತ್ರಿಯರಿದ್ದಂತೆ ಎಂದು ತೋರಿಸಲು ಊರ್ವಶಿಯನ್ನು ಸೃಷ್ಟಿ ಮಾಡಿದ ಅವನು ನಮಗೆ ಸ್ತ್ರೀಜನರಲ್ಲಿ ಇವರು ನನ್ನ ಪುತ್ರಿಯರು ಎಂಬ ನಿರ್ಮಲಭಾವವನ್ನು ಕೊಡಲಿ. ಅನಂತಸದ್ಗುಣಪೂರ್ಣನಾದ ಅವನು ನಮಗೂ ಯಥಾಯೋಗ್ಯವಾಗಿ ಜ್ಞಾನಾನಂದಾದಿ ಸದ್ಗುಣಗಳನ್ನು ಕರುಣಿಸಲಿ.[೧]

೪. ನಾರಾಯಣರೂಪದ ಹಿರಿಮೆಯನ್ನು ಭಾಗವತಾದಿಗ್ರಂಥಗಳ ಹಿನ್ನೆಲೆಯಲ್ಲಿ ವರ್ಣಿಸುತ್ತಲೇ, ಅವನಿಂದ ನಾವು ಬೇಡಬೇಕಾದುದನ್ನು ಸಹ ತಿಳಿಸಿಕೊಡುವ ಅಪೂರ್ವ ಶ್ಲೋಕವಿದು.

---

೧. ನಾರಾಯಣಃ ಪ್ರಭುರ್ವಿಷ್ಣುಃ ಶಾಶ್ವತಃ ಪುರುಷೋತ್ತಮಃ ।
ತಸ್ಯಾತಿಯಶಸಃ ಪುಣ್ಯಾಂ ವಿಶಾಲಾಂ ಬದರೀಮನು ॥
ಆಶ್ರಮಃ ಖ್ಯಾಯತೇ ಪುಣ್ಯಸ್ತ್ರಿಷು ಲೋಕೇಷು ವಿಶ್ರುತಃ ।
ಉಷ್ಣತೋಯವಹಾ ಗಂಗಾ ಶೀತತೋಯವಹಾ ಪುರಾ ।
ಸುವರ್ಣಸಿಕತಾ ರಾಜನ್ ವಿಶಾಲಾಂ ಬದರೀಮನು ।
ಋಷಯೋ ಯತ್ರ ದೇವಾಶ್ಚ ಮಹಾಭಾಗಾ ಮಹೌಜಸಃ ।
ಪ್ರಾಪ್ಯ ನಿತ್ಯಂ ನಮಸ್ಯಂತಿ ದೇವಂ ನಾರಾಯಣಂ ಪ್ರಭುಮ್ ॥
ಯತ್ರ ನಾರಾಯಣೋ ದೇವಃ ಪರಮಾತ್ಮಾ ಸನಾತನಃ ।
ತತ್ರ ಕೃತ್ಸ್ನಂ ಜಗತ್ಸರ್ವಂ ತೀರ್ಥಾನ್ಯಾಯತನಾನಿ ಚ ॥
ತತ್ ಪುಣ್ಯಂ ಪರಮಂ ಬ್ರಹ್ಮ ತತ್ ತೀರ್ಥಂ ತತ್ ತಪೋವನಮ್ ।
ತತ್ ಪರಂ ಪರಮಂ ದೇವಂ ಭೂತಾನಿ ಪರಮೇಶ್ವರಮ್ ॥
ಶಾಶ್ವತಂ ಪರಮಂ ಚೈವ ಧಾತಾರಂ ಪರಮಂ ಪದಂ ।
ಯಂ ವಿದಿತ್ವಾ ಶೋಚಂತಿ ವಿದ್ವಾಂಸಃ ಶಾಸ್ತ್ರದೃಷ್ಟಯಃ ॥
ತತ್ರ ದೇವರ್ಷಯಃ ಸಿದ್ಧಾಃ ಸರ್ವೇ ಚೈವ ತಪೋಧನಾಃ ।
ಆದಿದೇವೋ ಮಹಾಯೋಗೀ ಯತ್ರಾಸ್ತೇ ಮಧುಸೂದನಃ ।
ಪುಣ್ಯಾನಾಮಪಿ ತತ್ ಪುಣ್ಯಂ ಯತ್ರ ತೇ ಸಂಶಯೋಽಸ್ತು ಮಾ ॥
-ಮಹಾಭಾರತ(ವನಪರ್ವ -೯೦/೨೪ -೩೨)

ಅನ್ಯತ್ರ ಮರಣಾನ್ಮುಕ್ತಿಃ ಸ್ವಧರ್ಮವಿಧಿಪೂರ್ವಕಮ್ ।
ಬದರೀದರ್ಶನಾದೇವ ಮುಕ್ತಿಃ ಪುಂಸಾಂ ಕರೇ ಸ್ಥಿತಾ ॥ -ಮಹಾಭಾರತ

ಶ್ರೀಬದರ್ಯಾಶ್ರಮಂ ಪುಣ್ಯಂ ಯತ್ರ ಯತ್ರ ಸ್ಥಿತಃ ಸ್ಮರೇತ್ ।
ಸ ಯಾತಿ ವೈಷ್ಣವಂ ಸ್ಥಾನಂ ಪುನರಾವೃತ್ತಿವರ್ಜಿತಃ । – ವರಾಹಪುರಾಣ

ಯತ್ರ ನಿತ್ಯಂ ಜಗನ್ನಾಥಃ ಸಾಕ್ಷಾದ್ವಸತಿ ಕೇಶವಃ ।
ಯತ್ರ ಯಜ್ಞಾಃ ಪ್ರವರ್ತಂತೇ ನಿತ್ಯಂ ಮುನಿಗಣೈಃ ಸಹ ॥
ಸಿದ್ಧಕ್ಷೇತ್ರಮಿದಂ ಪ್ರಾಹುಃ ಋಷಯೋ ವೀತಮತ್ಸರಾಃ ।
ವಿಶಾಲಾಂ ಬದರೀಂ ವಿಷ್ಣುಸ್ತಾಂ ದ್ರಷ್ಟುಂ ಸಕಲೇಶ್ವರಃ ॥ ಹರಿವಂಶ(ಭವಿಷತ್ಪರ್ವ ೭೬/೨೫, ೩೦)

## ಬದರೀನಾರಾಯಣಧ್ಯಾನ

ಹಸ್ತದ್ವಂದ್ವಗಚಕ್ರಶಂಖರುಚಿರಂ ವೃತ್ತೋರುಮಧ್ಯಸ್ಫುರ –
ದ್ರಕ್ತೋತ್ತಾನಕರಾರವಿಂದಯುಗಲಂ ಪದ್ಮಾಸನಸ್ಥಂ ಪ್ರಭುಮ್ ।
ವಿಷ್ವಙ್ ನಾರದಮುಖ್ಯಯೋಗಿನಿಕರೈಃ ಸಂಸೇವ್ಯಮಾನಂ ಸುಧಾ-
ವೀಕ್ಷಾಕ್ಷಾಲಿತಭಕ್ತಕಿಲ್ಬಿಷವಿಷಂ ನಾರಾಯಣಂ ಚಿಂತಯೇ ॥ ೪೩ ॥

ಅ: ಹಸ್ತದ್ವಂದ್ವಗಚಕ್ರಶಂಖರುಚಿರಂ = ಮೇಲಿನ ಎರಡು ಕೈಗಳಲ್ಲಿರುವ ಚಕ್ರ ಮತ್ತು ಶಂಖಗಳಿಂದ ಮನೋಹರನಾಗಿರುವ (ಅವುಗಳಿಗೆ ಶೋಭೆ ಉಂಟುಮಾಡುವ); ವೃತ್ತೋರುಮಧ್ಯಸ್ಫುರದ್ರಕ್ತೋತ್ತಾನಕರಾರವಿಂದಯುಗಲಂ = ದುಂಡಾಗಿರುವ ಎರಡು ತೊಡೆಗಳ ಮಧ್ಯದಲ್ಲಿ ಕಂಗೊಳಿಸುತ್ತಿರುವ ಕೆಂಪಾದ ಮೇಲ್ಮುಖವಾಗಿರುವ ಕಮಲದಂತಹ (ಮತ್ತೆರಡು) ಕೈಗಳನ್ನು ಹೊಂದಿರುವ; [1]ಪದ್ಮಾಸನಸ್ಥಂ = ಪದ್ಮಾಸನದಲ್ಲಿ ಕುಳಿತಿರುವ; ಪ್ರಭುಂ = ಸಮರ್ಥನಾದ; ವಿಷ್ವಙ್ = ಸುತ್ತಲೂ; ನಾರದಮುಖ್ಯಯೋಗಿನಿಕರೈಃ = ನಾರದರೇ ಮೊದಲಾದ ಯೋಗಿಗಳ ಸಮುದಾಯಗಳಿಂದ; ಸಂಸೇವ್ಯಮಾನಂ = ಚೆನ್ನಾಗಿ ಸೇವಿಸಲ್ಪಡುತ್ತಿರುವ; ಸುಧಾವೀಕ್ಷಾಕ್ಷಾಲಿತಭಕ್ತಕಿಲ್ಬಿಷವಿಷಂ = ತನ್ನ ಅಮೃತಮಯ ನೋಟದಿಂದ ಭಕ್ತರ ಪಾಪವೆಂಬ ವಿಷವನ್ನು ತೊಡೆದು ಹಾಕಿರುವ; ನಾರಾಯಣಂ= ನಾರಾಯಣನನ್ನು; ಚಿಂತಯೇ = ಧ್ಯಾನಿಸುವೆನು.

ಎರಡು ಕೈಗಳಲ್ಲಿ ಚಕ್ರ ಶಂಖಗಳಿಂದ ಶೋಭಿಸುವ, ದುಂಡಾದ ತೊಡೆಗಳ ಮಧ್ಯದಲ್ಲಿ ಕಂಗೊಳಿಸುವ ಮೇಲ್ಮುಖವಾದ ಕೆಂಪುಕಮಲದಂತಹ ಎರಡು ಕೈಗಳುಳ್ಳ, ಪದ್ಮಾಸನದಲ್ಲಿ ಕುಳಿತಿರುವ, ಸಮರ್ಥನಾದ, ಸುತ್ತ ನಾರದ ಮೊದಲಾದ ಯೋಗಿವೃಂದದಿಂದ ಬಹುವಾಗಿ ಸೇವಿಸಲ್ಪಡುವ, ತನ್ನ ಅಮೃತಮಯ ನೋಟದಿಂದ ಭಕ್ತರ ಪಾಪವೆಂಬ ವಿಷವನ್ನು ತೊಡೆದು ಹಾಕಿರುವ, ಪ್ರಭುವಾದ ನಾರಾಯಣನನ್ನು ಧ್ಯಾನಿಸುವೆನು.

ವಿ: ಬದರಿಯಲ್ಲಿ ನಾರಾಯಣಮೂರ್ತಿಯು ಚತುರ್ಭುಜದ ಆಕೃತಿ; ಅದರ ಮೇಲಿನ ಎರಡು ಕೈಗಳಲ್ಲಿ ಕ್ರಮವಾಗಿ ಚಕ್ರ ಮತ್ತು ಶಂಖಗಳಿವೆ; ಕೆಳಗಿನ ಎರಡು ಕೈಗಳು ತೊಡೆಯ ಮಧ್ಯೆ ಮೇಲ್ಮುಖವಾಗಿ ಧ್ಯಾನಮುದ್ರೆಯಲ್ಲಿವೆ; ಕುಳಿತಿರುವುದು ಪದ್ಮಾಸನದಲ್ಲಿ; ಅವನ ಸುತ್ತಲೂ ನಾರದ, ಗರುಡ, ಉದ್ಧವ, ಕುಬೇರ, ಗಣೇಶ, ಲಕ್ಷ್ಮೀ, ನರ, ನಾರಾಯಣ, ಶ್ರೀದೇವಿ ಮತ್ತು ಭೂದೇವಿ ಇವರುಗಳು ಇರುವರು. ನಾರಾಯಣನ ನೋಟ ಅಮೃತಮಯವಾಗಿದ್ದು[2], ಅದರ ದರ್ಶನ ಮಾತ್ರದಿಂದಲೇ ಭಕ್ತರ ಪಾಪವೆಂಬ ವಿಷವು ನಾಶ ಹೊಂದುತ್ತದೆ; ಇಂತಹ ನಾರಾಯಣನನ್ನು ಧ್ಯಾನಿಸಬೇಕು ಎಂದು ಭಾವ.

---

೧. ಎರಡು ಪಾದಗಳು ತೊಡೆಗಳ ಮೇಲೆ ಬರುವಂತೆ ಕುಳಿತುಕೊಳ್ಳುವ ಆಸನವನ್ನು ಪದ್ಮಾಸನವೆನ್ನು-ವರು (ಪದೋರೂರ್ಧ್ವಗಂ) - ತಂತ್ರಸಾರ

೨. ನಿಖಿಲಾಘೌಘವಿನಾಶನಪರಸೌಖ್ಯಪ್ರದದೃಷ್ಟೇ । - ದ್ವಾದಶಸ್ತೋತ್ರ

## ಶ್ರೀಹಯಗ್ರೀವ ವರ್ಣನೆ (ಬದರಿಕಾಶ್ರಮ)

**ಯತ್ರ ಕ್ಷೇತ್ರೇ ವಿಧೇಃ ಸತ್ರೇ ಹಯಗ್ರೀವೋ ಹ್ಯವಾತರತ್ ।**
**ಧಾರಾದ್ವಾರಾ ತ್ರಯೀ ತತ್ರ ಶ್ರೂಯತೇಽದ್ಯಾಪಿ ಸೂರಿಭಿಃ ॥ ೪೪ ॥**

ಅ: ಯತ್ರ ಕ್ಷೇತ್ರೇ = ಯಾವ ಬದರಿಕಾಶ್ರಮ ಕ್ಷೇತ್ರದಲ್ಲಿ; ವಿಧೇಃ = ಬ್ರಹ್ಮದೇವರ; ಸತ್ರೇ = ಯಾಗದಲ್ಲಿ (ನರಪರ್ವತದ ತುದಿಯಲ್ಲಿರುವ [1]ಯಾಗಕುಂಡದಲ್ಲಿ ಎಂದರ್ಥ); ಹಯಗ್ರೀವಃ =ಶ್ರೀಹಯಗ್ರೀವರೂಪಿ ಶ್ರೀಹರಿಯು; ಅವಾತರತ್ ಹಿ = ಅವತರಿಸಿದನೋ; ತತ್ರ = ಆ ಸ್ಥಳದಲ್ಲಿ; ಧಾರಾದ್ವಾರಾ = [2](ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಉಪವೇದಗಳೆಂಬ) ಐದುಧಾರೆಗಳ ಮೂಲಕ; ತ್ರಯೀ = ವೇದವು; ಸೂರಿಭಿಃ =(ಅಲ್ಲಿ ಸ್ನಾನ ಮಾಡುವ) ವಿದ್ವಾಂಸರುಗಳಿಂದ; ಅದ್ಯಾಪಿ = ಈಗಲೂ; ಶ್ರೂಯತೇ = ಕೇಳಲ್ಪಡುವುದು.

**ಈ ಕ್ಷೇತ್ರದಲ್ಲಿ ಬ್ರಹ್ಮದೇವರ ಯಾಗದಲ್ಲಿ ಶ್ರೀಹಯಗ್ರೀವರೂಪಿ ಶ್ರೀಹರಿಯು ಅವತರಿಸಿದ; ಇಲ್ಲಿ ಧಾರೆಗಳ ಮೂಲಕ ಜ್ಞಾನಿಗಳಿಗೆ ವೇದವಾಣಿಯು ಈಗಲೂ ಕಿವಿಗೆ ಬೀಳುವುದು.**

ವಿ: ೧. ಬದರಿಯಿಂದ ೮ ಕಿ. ಮೀ. ದೂರದಲ್ಲಿ ಅಲಕನಂದೆಯು ಧುಮುಕುವ ಸ್ಥಳವು 'ವಸುಧಾರಾ' ಎಂದು ಪ್ರಸಿದ್ಧವಾಗಿದೆ; ಇಲ್ಲೊಮ್ಮೆ ಬ್ರಹ್ಮದೇವರು ಯಜ್ಞವೊಂದನ್ನು ಮಾಡಿದಾಗ ಆ ಯಜ್ಞವೇದಿಕೆಯಲ್ಲಿ ಶ್ರೀಹಯಗ್ರೀವದೇವರು ಪ್ರಾದುರ್ಭವಿಸಿದರು ಎಂದು ಪೌರಾಣಿಕ-ಪ್ರಸಿದ್ಧಿಯಿದೆ;

೨. [3]ಅಲ್ಲಿಯ ಜಲಧಾರೆಯಲ್ಲಿ ಸ್ನಾನಮಾಡುವ ಜ್ಞಾನಿಗಳಿಗೆ ಇಂದಿಗೂ ಶ್ರೀಹಯ-ಗ್ರೀವದೇವರ ಅವತಾರಸ್ಥಳದ ಸ್ಮಾರಕವಾಗಿ ಅಲ್ಲಿಯ ಧಾರೆಗಳಲ್ಲಿ ಋಗ್ವೇದಾದಿಗಳ ಧ್ವನಿಯು ಕಿವಿಗೆ ಬೀಳುತ್ತದೆ ಎಂದು ಭಾವ.

## ಹಯಗ್ರೀವಸ್ತುತಿಃ

**ಧಾತರ್ದೇವಸಮೂಹ ಮಂದರ ಮಹಿ ಪ್ರಹ್ಲಾದ ಶಕ್ರ ದ್ವಿಜ-**
**ವ್ರಾತ [4]ಖ್ಯಾತಸಮುದ್ರ ಪಾರ್ಥ ಶಿವ ಸದ್ಧರ್ಮಾನೃತಂ ಮಾ ವದ[5] ।**

---

೧. ನರಪರ್ವತಾಗ್ರಸ್ಥಿತಯಾಗಕುಂಡೇ ಇತ್ಯರ್ಥಃ। - ವ್ಯಾಖ್ಯಾನ

೨. ಋಗ್ವೇದಯಜುರ್ವೇದಸಾಮವೇದಅಥರ್ವವೇದೋಪವೇದಾಖ್ಯಧಾರಾಪಂಚಕದ್ವಾರಾ। -ವ್ಯಾಖ್ಯಾನ

೩. ಋಗ್ವೇದಧಾರಾಯಾಂ ಋಗ್ವೇದಸ್ವರವತ್ ಯಜುರ್ವೇದಾದಿಧಾರಾಸು ಚ ತತ್ತತ್ಸ್ವರೈಶ್ಚಘೋಷಃ ಶ್ರೂಯತೇ ಇತಿ ಕಿಂವದಂತೀ। ವ್ಯಾ

೪. ಸಮುದ್ರಮಧ್ಯೇ ರಾಮಸೇತ್ವಾಖ್ಯಮಹಾಕ್ಷೇತ್ರಕರಣೇನ ಸಮುದ್ರಸ್ಯ ಕೀರ್ತಿದಾನಾಖ್ಯಮುಪಕಾರಂ ಸೂಚಯಿತುಂ ಖ್ಯಾತೇತಿ ವಿಶೇಷಣಂ। -ವ್ಯಾ

೫. ಅನೃತಂ ಮಾ ವದ ಇತಿ ಪ್ರತ್ಯೇಕಂ ಸಂಬಧ್ಯತೇ । ಸಾಕ್ಷಿವಚನಂ ವಾಚಯಂತೋಽಪಿ ಪ್ರತ್ಯೇಕಂ

**ಅಶ್ವಗ್ರೀವಮಮುಂ ವಿಹಾಯ ಕತಮಂ ದೇವಂ ನಮಾಮಃ ಸ್ತುಮಃ**
**ಸತ್ಕುರ್ಮಃ ಕಿಮು ಕರ್ಮ ಶರ್ಮದಮಿತೋऽನ್ಯದ್ಬ್ರಹ್ಮ ಕಿಂ ವಾऽಸ್ತಿ ನಃ ॥೪೫॥**

**ಅ: ಧಾತಃ !** = ಎಲೈ ಬ್ರಹ್ಮದೇವನೇ; **ದೇವಸಮೂಹ !** = ದೇವಸಮುದಾಯವೇ !; **ಮಂದರ !** = ಮಂದರಪರ್ವತವೇ !; **ಮಹಿ !** = ಭೂದೇವಿಯೇ !; **ಪ್ರಹ್ಲಾದ** = ಪ್ರಹ್ಲಾದನೇ !; **ಶಕ್ರ** = ಇಂದ್ರನೇ !; **ದ್ವಿಜವ್ರಾತ** = ಬ್ರಾಹ್ಮಣವೃಂದವೇ !; **ಖ್ಯಾತಸಮುದ್ರ** = ಸುಪ್ರಸಿದ್ಧವಾದ ಸಮುದ್ರವೇ; **ಪಾರ್ಥ** = ಅರ್ಜುನನೇ; **ಶಿವ !** = ಶಿವನೇ; **ಸದ್ಧರ್ಮ** = ಉತ್ತಮವಾದ ಧರ್ಮವೇ !; **ಅನೃತಂ** = ಸುಳ್ಳನ್ನು; **ಮಾ ವದ(ತ)**= ಹೇಳಬೇಡಿರಿ !; **ಅಮುಂ** = ಈ; **ಅಶ್ವಗ್ರೀವಂ** = ಹಯಗ್ರೀವ (ದೇವ)ನನ್ನು (ಶ್ರೀಹರಿಯನ್ನು); **ವಿಹಾಯ** = ತೊರೆದು; **ಕತಮಂ ದೇವಂ** = ಬೇರೆ ಯಾವ ದೇವತೆಯನ್ನು ತಾನೇ (**ವಯಂ** = ನಾವು); **ನಮಾಮಃ** = ನಮಸ್ಕರಿಸೋಣ; **ಸ್ತುಮಃ** = ಸ್ತುತಿಸೋಣ; **ಸತ್ಕುರ್ಮಃ** = ಸತ್ಕರಿಸೋಣ; ನಮಗೆ; **ಕರ್ಮ** = ಕರ್ಮ ಮಾತ್ರವೇ?; **ಶರ್ಮದಂ** = ನಿತ್ಯಸುಖವಾದ ಮೋಕ್ಷವನ್ನು ಕೊಡುವುದಾಗಿ; **ಕಿಮು** = ಆಗಬಲ್ಲುದೇನು?; **ನಃ** = ನಮಗೆ; **ಇತಃ** = ಶ್ರೀಹಯಗ್ರೀವನನ್ನು ಬಿಟ್ಟು; **ಅನ್ಯತ್** = ಬೇರೆಯ; **ಬ್ರಹ್ಮ** = ಪರಬ್ರಹ್ಮವಸ್ತುವು; **ಕಿಂ ವಾ ಅಸ್ತಿ** = ಇರುವುದೇನು?

ಬ್ರಹ್ಮದೇವರೇ ! ದೇವವೃಂದವೇ ! ಮಂದರಪರ್ವತವೇ ! ಭೂದೇವಿಯೇ ! ಪ್ರಹ್ಲಾದನೇ ! ಇಂದ್ರನೇ ! ಬ್ರಾಹ್ಮಣವೃಂದವೇ ! ಸುಪ್ರಸಿದ್ಧವಾದ ಸಮುದ್ರವೇ ! ಅರ್ಜುನನೇ ! ಶಿವನೇ ! ಉತ್ತಮವಾದ ಧರ್ಮವೇ ! ಸುಳ್ಳನ್ನು ಹೇಳದಿರಿ ! ಈ ಹಯಗ್ರೀವದೇವರನ್ನು ತೊರೆದು ಬೇರೆ ಯಾವ ದೇವತೆಯನ್ನು ತಾನೇ ನಾವು ನಮಸ್ಕರಿಸೋಣ? ಸ್ತುತಿಸೋಣ? ಸತ್ಕರಿಸೋಣ;? ನಮಗೆ ಕರ್ಮ ಒಂದೇ ಮೋಕ್ಷ ನೀಡೀತೇ? ಶ್ರೀಹಯಗ್ರೀವನ ಹೊರತು ಮತ್ತೊಂದು ಪರಬ್ರಹ್ಮವಸ್ತುವು ಇರಬಲ್ಲದೆ?

ವಿ: ೧. ಶ್ರೀವಾದಿರಾಜರು ಈ ಶ್ಲೋಕದಲ್ಲಿ ಶ್ರೀಹರಿಯ ಸರ್ವೋತ್ತಮತ್ವವನ್ನು (ಅನಂತ-ಗುಣಪೂರ್ಣತ್ವ ಸಕಲದೋಷದೂರತ್ವಗಳನ್ನು); ಚತುರ್ಮುಖ ಬ್ರಹ್ಮದೇವರೇ ಮೊದಲಾದ ಹನ್ನೊಂದು ಸಾಕ್ಷಿಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ಕೇಳಿಕೊಳ್ಳುತ್ತ ಜಡವಾದ ಕರ್ಮದಿಂದಲೇ ಮೋಕ್ಷವೆಂಬ ಮೀಮಾಂಸಕ ಮತವನ್ನೂ, ಸಗುಣಬ್ರಹ್ಮನಿಂದ ಬೇರೆಯಾದ ನಿರ್ಗುಣಬ್ರಹ್ಮ ಮತ್ತೊಬ್ಬನಿರುವನೆಂಬ ಅದ್ವೈತತತ್ತ್ವವನ್ನೂ, ಶಿವ, ಸ್ಕಂದ, ಗಣಪತಿ, ಸೂರ್ಯ, ಶಕ್ತಿ ಮೊದಲಾದವರನ್ನೂ ಸರ್ವೋತ್ತಮರೆಂದು ಹೇಳುವ ಶೈವಾದಿ ಮತಗಳನ್ನೂ ತುಂಬಾ ಪರಿಣಾಮಕಾರಿಯಾಗಿ ನಿರಾಕರಿಸುತ್ತಾ ಸಮರ್ಥಿಸಿರುವರು.

೨. ವಿಷಯಗಳ ಬಗ್ಗೆ ವಿವಾದವೆದ್ದಾಗ ಸಾಕ್ಷಿಗಳನ್ನು ಕರೆಯುವುದು, ಅಂತಹ ಸಾಕ್ಷಿಗಳು ಶ್ರೇಷ್ಠರಾಗಿ ವಿಷಮ ಸಂಖ್ಯಾಕರಾಗಿರಬೇಕೆಂಬುದು ಮತ್ತು ಅವರನ್ನು ಪ್ರತ್ಯೇಕವಾಗಿ ಪ್ರಶ್ನಿಸಿ

---

ತತ್ತನ್ಮುಖಾದ್ವಾಚಯಂತಿ ತಥೇದಮಿತಿ ಬೋದ್ಧವ್ಯಂ। -ವ್ಯಾಖ್ಯಾನ

ತಿಳಿದುಕೊಳ್ಳಬೇಕು ಎಂಬುದು ನ್ಯಾಯಪ್ರಾಪ್ತವಾದ ವಿಚಾರ. ಪ್ರಕೃತ ವಿಷ್ಣುಸರ್ವೋತ್ತಮತ್ವದಂತಹ ಅತ್ಯಂತ ಮಹತ್ತ್ವದ ವಿಷಯವನ್ನೂ, ಇತರ ಮತಗಳ ಅಸಾರತ್ವವನ್ನೂ, ಅತ್ಯಂತ ಪ್ರಬಲರಾದ ಹನ್ನೊಂದು ಸಾಕ್ಷಿಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಕೇಳಿಕೊಳ್ಳುವ ಮೂಲಕ ತುಂಬಾ ಸುಂದರವಾಗಿ ವಿವರಿಸಿರುವರು.[೧]

೩. ಇಲ್ಲಿಯ ಹನ್ನೊಂದು ಸಾಕ್ಷಿಗಳಲ್ಲಿ ಬ್ರಹ್ಮದೇವರು ಮತ್ಸ್ಯ, ಹಯಗ್ರೀವಾದಿ ಸಕಲ ಅವತಾರಗಳಲ್ಲಿ ಸ್ವಾತಂತ್ರ್ಯೇಣ ತಮ್ಮಿಂದಾಗದ ತಪೋಹನನ, ಮಧುಕೈಟಭಹನನ, ವೇದಾಹರಣ ಮೊದಲಾದ ಕಾರ್ಯಗಳನ್ನು ಕಂಡವರು; (ಜೀವೋತ್ತಮರಾದ್ದರಿಂದ ಇವರೇ ಶ್ರೀಹರಿಸರ್ವೋತ್ತಮತ್ವಸಮರ್ಥನೆಗೆ ಮುಖ್ಯಸಾಕ್ಷಿ ಎಂಬುದನ್ನು ಸೂಚಿಸಲು ಇವರನ್ನೇ ಪ್ರಪ್ರಥಮವಾಗಿ ಉಲ್ಲೇಖಿಸಿರುವರು); ದೇವಸಮೂಹ ಮತ್ತು ಮಂದರಪರ್ವತಗಳು ಕೂರ್ಮಾವತಾರದಲ್ಲಿ ಶ್ರೀಹರಿಯಿಂದ ಮಂದರಾನಯನ, ಮಂದರೋದ್ಧರಣಾದಿ ಕಾರ್ಯಗಳನ್ನು ಕಂಡಿವೆ; ಭೂದೇವಿಯು ಘನೋದಕದಲ್ಲಿ ಮುಳುಗಿದ್ದವಳಾಗಿ ದೈತ್ಯನಿಂದ ಮುಳುಗಿಸಲ್ಪಟ್ಟವಳಾಗಿ, ಶ್ರೀಹರಿಯಿಂದ ಉದ್ಧರಿಸಲ್ಪಟ್ಟವಳಾಗಿ, ಶ್ರೀಹರಿಯಿಂದ ಉದ್ಧರಿಸಲ್ಪಟ್ಟವಳು; ಪ್ರಹ್ಲಾದ ರಾಜರು ನರಸಿಂಹಾವತಾರದಲ್ಲಿ ಇತರ ಯಾರಿಗೂ ಆಗದ ಹಿರಣ್ಯಕಶಿಪುವಿನ ಹನನವನ್ನು ಮಾಡಿ ಶ್ರೀಹರಿಯು ಬ್ರಹ್ಮಾದಿ ಸಕಲದೇವತೆಗಳಿಂದ ಸ್ತುತ್ಯನಾದದ್ದನ್ನು ಪ್ರತ್ಯಕ್ಷ ನೋಡಿದವರು; ಇಂದ್ರ-ದೇವರು ವಾಮನಾವತಾರದಲ್ಲಿ ಶ್ರೀಹರಿಯು ತನಗಾಗಿ ತ್ರಿವಿಕ್ರಮರೂಪದಿಂದ ತ್ರಿಲೋಕವನ್ನು ವ್ಯಾಪಿಸಿದ್ದನ್ನು ನಖಾಗ್ರದಿಂದ ಬ್ರಹ್ಮಾಂಡವನ್ನು ಭೇದಿಸಿದ್ದನ್ನು ಕಂಡವರು; ಬ್ರಾಹ್ಮಣಸಮುದಾಯವು ಪರಶುರಾಮಾವತಾರದಲ್ಲಿ ಶ್ರೀಹರಿಯು ೨೧ ಬಾರಿ ದುಷ್ಟಕ್ಷತ್ರಿಯಕುಲವನ್ನು ಸಂಹರಿಸಿ ತಮಗೆ ಸಪ್ತದ್ವೀಪ ಸಮೇತವಾದ ಭೂಮಿಯನ್ನು ದಾನ ಮಾಡಿದ ಶೌರ್ಯ, ಔದಾರ್ಯಾದಿ ಗುಣಗಳನ್ನು ಕಂಡವರು; ಸಮುದ್ರವು ಶ್ರೀರಾಮಾವತಾರದಲ್ಲಿ ತನ್ನಲ್ಲಿದ್ದ ಮ್ಲೇಚ್ಛರನ್ನು ದಹಿಸಿದ್ದು, ತನ್ನ ಜಲವನ್ನು ದರ್ಶನಮಾತ್ರೇಣ ಶೋಷಿಸಿದ್ದು ಇತರಾಸಾಧ್ಯವಾದ ಸೇತುನಿರ್ಮಾಣ, ರಾವಣ-ಹನನಾದಿಗಳನ್ನು ಕಂಡಿದೆ. ಅರ್ಜುನನು ಶ್ರೀಕೃಷ್ಣಾವತಾರದಲ್ಲಿ ವಿಶ್ವರೂಪದರ್ಶನಾದಿಗಳಿಂದ ಶ್ರೀಹರಿಯ ಮಾಹಾತ್ಮ್ಯವನ್ನು ಕಂಡವನು; ಶ್ರೀರುದರದೇವರು ತ್ರಿಪುರದಹನಪ್ರಸಂಗ, ಭಸ್ಮಾಸುರವಧಪ್ರಸಂಗ, ಯೋಗಿನೀಪ್ರಸಂಗ (ಚಿಂತಾಮಣಿ ನರಸಿಂಹ ೧/೧೬ ನೋಡಿ) ಮೊದಲಾದ ವಿಶಿಷ್ಟ ಸಂದರ್ಭಗಳಲ್ಲಿ ದುರ್ವಾಸಾದಿ ಅವತಾರಗಳಲ್ಲಿ ಅಂಬರೀಷ-ಪ್ರಸಂಗಾದಿಗಳಲ್ಲೂ ಶ್ರೀಹರಿಯಮಾಹಾತ್ಮ್ಯವನ್ನು ಸ್ವತಃ ಕಂಡವರು; ಕಲ್ಕ್ಯವತಾರದಿಂದ ಶ್ರೀಹರಿಯು ದುಷ್ಟನಿಗ್ರಹ ಮೂಲಕ ತನ್ನನ್ನು ಪುನಃ ಪ್ರತಿಷ್ಠಾಪನೆ ಮಾಡಿದ್ದನ್ನು ಸದ್ಧರ್ಮವು ಕಂಡಿದೆ.

---

೧. ಅನೇನ ಶ್ಲೋಕೇನ ಹಯಗ್ರೀವಮತ್ಸ್ಯಾದಿರೂಪಿಣೋ ಹರೇರವತಾರಕಥಾಂ ಮನಸಿ ನಿಧಾಯ ಸಾಕ್ಷಿಣಾಂ ವಿಷಮಸಂಖ್ಯಾಕತ್ವನಿಯಮೇನ ತಸ್ಮಿಂಸ್ತಸ್ಮಿನ್ನವತಾರೇ ಕೃತ ಪ್ರಯೋಜನಾನ್ ಬ್ರಹ್ಮಾದಿ-ಧರ್ಮಾಂತಾನೇಕಾದಶದೇವಾಂಶ್ಚ ಸಾಕ್ಷೀಕೃತ್ಯ ಹಯಗ್ರೀವಾಖ್ಯಹರೇಃ ಸರ್ವೋತ್ತಮತಾಂ ಸರ್ವಜನಸಂಮತಾಂ ಕರೋತಿ ತದ್ವಿರುದ್ಧದರ್ಶನಾನಿ ಚ ತತ ಏವ ಧಿಕ್ಕರೋತಿ। -ವ್ಯಾಖ್ಯಾನ

೪. ಜೀವೋತ್ತಮರಾದ್ದರಿಂದ ಬ್ರಹ್ಮದೇವರು, ಸಂಖ್ಯೆಯಿಂದಾಗಿ ದೇವಸಮೂಹವು, ಸಾಧನರಂಗವಾಗಿ ಭೂಮಿಯೂ, ಚಿನ್ನದ ವಸ್ತುವಾಗಿ ಮಂದರವು, ವಿಜಾತೀಯ ಅಸುರ ವಂಶಜನಾಗಿ ಮತ್ತು ಶತ್ರುಪುತ್ರನಾಗಿ [1]ಪ್ರಹ್ಲಾದನು, ಸಹಸ್ರಾಕ್ಷನೆಂಬ ಕಾರಣದಿಂದ ಇಂದ್ರ-ದೇವರು, ವರ್ಣಶ್ರೇಷ್ಠರಾಗಿ ಬ್ರಾಹ್ಮಣರು, ಜಲ(ಡ)ನಿಧಿ ಎಂಬ ಕಾರಣದಿಂದ ಸಮುದ್ರವು, ವಿಶ್ವರೂಪ ಕಂಡವನು ಎಂಬ ಕಾರಣದಿಂದ ಅರ್ಜುನನು, ಶೈವಾದಿದುರ್ಮತಗಳಲ್ಲಿ ಪ್ರಧಾನವಾದ ಶೈವಮತದ ದೇವತೆ ಎಂಬ ಕಾರಣದಿಂದ ಶ್ರೀರುದ್ರದೇವರು, ಮಾನವನ ಉನ್ನತಿಯ ಸಾಧನ ಎಂಬ ಕಾರಣದಿಂದ ಧರ್ಮವು ಇಲ್ಲಿ ಮುಖ್ಯ ಸಾಕ್ಷಿಗಳೆನ್ನಿಸಿರುವರು.

೫. ಹೀಗೆ ವಿಭಿನ್ನರಾದ ಹನ್ನೊಂದು ಸಾಕ್ಷಿಗಳು ಶ್ರೀಹರಿಸರ್ವೋತ್ತಮತ್ವಾದಿ ಸಕಲ-ಪ್ರಮೇಯಗಳ ಸ್ಥಾಪನೆಯ ವಿಷಯದಲ್ಲಿ, ಮುಖ್ಯಸಾಕ್ಷಿಗಳೆನ್ನಿಸಿರುವರು;[2]

---

೧. ವಿಜಾತೀಯಕುಲಜತ್ವಾದ್ವೈರಿಪುತ್ರತ್ವಾಚ್ಚ ಪ್ರಬಲೋಽಯಂ ಸಾಕ್ಷೀ । -ವ್ಯಾ

೨. ಶ್ರೀವಾದಿರಾಜಶ್ರೀಚರಣರ 'ಅಭಯಸಂಸ್ತವಃ' ಎಂಬ ಸ್ತೋತ್ರಕೃತಿಯು ಈ ಶ್ಲೋಕದ ವಿವರಣೆಯಂತಿರುವುದು ಗಮನಾರ್ಹ :

ಯಸ್ಮಾನ್ಮಯಿ ದಯಾಲುಸ್ತ್ವಮಾಭಿಮುಖ್ಯಂ ಪುರಾಽಕರೋಃ ।
ತಸ್ಮಾತ್ ಕದಾಽಪಿ ಕುತ್ರಾಪಿ ಕುತೋಽಪಿ ನ ಭಯಂ ಮಮ ॥ ೧ ॥
ತ್ವದ್ದಯಾರ್ದ್ರದೃಶಾ ದೃಷ್ಟ್ವಾ ಬ್ರಹ್ಮಾದ್ಯಾ ಲೋಕಪಾಲತಾಮ್ ।
ಅಗಮನ್ನಿಗಮೋದ್ಧರ್ತಃ ಕ್ವ ದೈನ್ಯಂ ಕ್ವ ಚ ತೇ ದಯಾ ॥ ೨ ॥
ಯಂ ಪಾಸಿ ತ್ವಂ ಕಿಂಪುರುಷೇ ಸೋಽತ್ರ ಸಾಕ್ಷೀ ಕಪೀಶ್ವರಃ ।
ತಥಾ ವಿಭೀಷಣಃ ಸಾಕ್ಷೀ ದಿವಿ ಸಾಕ್ಷೀ ಧ್ರುವೋ ಧ್ರುವಃ ॥ ೩ ॥
ಭುವೋಽಧಸ್ತಾದ್ಬಲಿಃ ಸಾಕ್ಷೀ ಯದ್ದ್ವಾರ್ಯದ್ಯಾಪಿ ವರ್ತಸೇ ।
ಧರಾ ಚ ಸಾಕ್ಷಿಣೀ ಯಾ ಪ್ರಾಗ್ವರಾಹವಪುಷೋದ್ಧೃತಾ ॥ ೪ ॥
ವೇದಶ್ಚ ಸಾಕ್ಷೀ ಯದ್ಗ್ರಂಥಂ ಬಿಭರ್ಷಿ ಕರಪಂಜರೇ ।
ಗಿರಿಶ್ಚ ಮಂದರಃ ಸಾಕ್ಷೀ ದೇವಾಶ್ಚಾಧ್ವನಿ ಚೂರ್ಣಿತಾಃ ॥ ೫ ॥
ಭವಃ ಸಾಕ್ಷೀ ಭಸ್ಮದೈತ್ಯಭಸ್ಮೀಕರಣವಿಕ್ರಮ ।
ದಕ್ಷಃ ಸಾಕ್ಷೀ ರಕ್ಷಿತೋ ಯಸ್ತ್ವಯಾ ದೇವರ್ಷಿಸಂಸದಿ ॥ ೬ ॥
ದ್ರೌಪದೀ ಚ ತಥಾ ಸಾಕ್ಷಿಣ್ಯಕ್ಷಯಾಂಬರದಾಯಕ ।
ಸೌಭದ್ರಸ್ಯ ಸುತಃ ಸಾಕ್ಷೀ ಯಂ ದ್ರೌಣ್ಯಸ್ತ್ರಾದಜೀವಯಃ ॥ ೭ ॥
ಸುಧಾದೃಷ್ಟ್ಯಾ ಮೃತಾಶೇಷಸ್ವಸೈನ್ಯೋಜ್ಜೀವನೈಕದ ।
ಕಪಿಸೇನಾ ಸಾಕ್ಷಿಣೀ ಸಾ ಪ್ರಹ್ಲಾದಾಜಾಮಿಳಾವಪಿ ॥ ೮ ॥
ಭೂಯೋ ಭೂಯಃ ಸಾಹಚರ್ಯಾದ್ವ್ಯಾಪ್ತಿರ್ನಿರ್ಣೀಯತೇ ಮಯಾ ।
ಅತಸ್ತ್ವಂ ನಿಯಮೇನಾಸಿ ಭಕ್ತಾನಾಂ ಭಯಭಂಜನಃ ॥ ೯ ॥
ಅಕುತಶ್ಚಿದ್ಭಯಂ ಪ್ರಾಹ ಯತಸ್ತೇ ಪಾದಸೇವನಮ್ ।
ಸ್ಮೃತಿರ್ಭಾಗವತಾಖ್ಯಾ ತದ್ವ್ಯಾಪ್ತಿರಾಪ್ತೋಕ್ತಿತೋಽಪ್ಯಭೂತ್ ॥ ೧೦ ॥
ದಶದಿಕ್ಷು ಗತಾ ಸದ್ಭ್ಯಃ ಸತಾಂ ಭಯಜಿಹೀರ್ಷಯಾ ।
ದಶಶ್ಲೋಕ್ಯಾ ವಾದಿರಾಜಶ್ಚಕಾರಾಭಯಸಂಸ್ತವಮ್ ॥ ೧೧ ।

ಇತರ ಮತಗಳಿಗೆ ಇಂತಹ ಒಬ್ಬ ಸಾಕ್ಷಿಯೂ ದೊರೆಯುವುದಿಲ್ಲವಾದ್ದರಿಂದ ಅವು ಅಗ್ರಾಹ್ಯ ಎಂದೂ ಭಾವ[1].

೬. 'ಅಶ್ವಗ್ರೀವಮಮುಂ' ಇತ್ಯಾದಿ ಮಾತುಗಳಿಂದ ಶೈವ, [2]ಶಾಕ್ತೇಯ, ಗಾಣಪತ, ಸ್ಕಾಂದ, ಸೌರಾದಿ ದೇವತಾಂತರಪರತ್ವಪ್ರತಿಪಾದಕವಾದ ಮತಗಳೂ, ಕಿಮು ಕರ್ಮ ಶರ್ಮದಂ[3] ಎಂಬ ಮಾತಿನಿಂದ ಭಾಟ್ಟಪ್ರಾಭಾಕರಾದಿ ಮೀಮಾಂಸಾಮತವೂ, 'ಇತೋಽನ್ಯದ್ಬ್ರಹ್ಮ' ಇತ್ಯಾದಿ ಮಾತಿನಿಂದ ನಿರ್ಗುಣ ಬ್ರಹ್ಮನನ್ನೊಪ್ಪುವ ಅದ್ವೈತಮತವೂ ನಿರಾಕೃತವಾಗಿದೆ ಎಂದು ತಿಳಿಯಬೇಕು.[4]

೭. ಏಕಾದಶ ಸಾಕ್ಷಿಗಳನ್ನು ಇಲ್ಲಿ ಉಲ್ಲೇಖಿಸಿರುವುದು ಪರಮಾತ್ಮನ ಸಕಲರ ಏಕಾದಶೇಂದ್ರಿಯ ಪ್ರೇರಕತ್ವ(ಹೃಷೀಕೇಶತ್ವ)ವನ್ನು, ಏಕಾದಶಿಯ ವ್ರತೋತ್ತಮತ್ವವನ್ನೂ ಧ್ವನಿಸುವಂತಿವೆ ಎಂಬುದನ್ನು ಗಮನಿಸಬೇಕು.

೮. ಬ್ರಹ್ಮಾದಿ ದೇವತೆಗಳ ವಚನಗಳನ್ನು ಉಲ್ಲೇಖಿಸಿ ಶ್ರೀಹರಿಯ ಸರ್ವೋತ್ತಮತ್ವವನ್ನು ಸಮರ್ಥಿಸುವ ಶ್ರೀಮದಾಚಾರ್ಯರ 'ಕೃಷ್ಣಾಮೃತಮಹಾರ್ಣವ' ಗ್ರಂಥದ ಪ್ರಭಾವವನ್ನು ಈ ಶ್ಲೋಕದಲ್ಲಿ ಸ್ಫುಟವಾಗಿ ಕಾಣಬಹುದು.

**ಶ್ಲೋಕೇನೈಕೇನ ಲೋಕೇಶಶ್ಲೋಕಾಲ್ಲೇಶೋಽನುವರ್ಣಿತಃ ।**
**ತಚ್ಚ ಸಚ್ಚರಿತಶ್ಚಿತ್ತೇ ಪ್ರತ್ಯರ್ಪ್ಯ ಪ್ರೀಯತಾಂ ಮಮ ॥ ೪೬ ॥**

॥ ಇತಿ ಶ್ರೀಮದ್ವಾದಿರಾಜತೀರ್ಥಶ್ರೀಪಾದವಿರಚಿತತೀರ್ಥಪ್ರಬಂಧೇ ಉತ್ತರಪ್ರಬಂಧಃ ॥ ೨ ॥

ಅ: ಏಕೇನ ಶ್ಲೋಕೇನ =(ಹೀಗೆ)ಒಂದು ಶ್ಲೋಕದಿಂದ, [5]**ಲೋಕೇಶಶ್ಲೋಕಾತ್**= ಲೋಕೇಶನಾದ ಶ್ರೀನಾರಾಯಣನ ಬಹುತರವಾದ ಯಶೋರಾಶಿಯಿಂದ; **ಲೇಶಃ** = (ಅನೇಕಾವತಾರ ಕಥಾರೂಪವಾದ) ಅಲ್ಪಭಾಗವು; **ಅನುವರ್ಣಿತಃ** = (ಯಥಾಶಕ್ತಿ) ವರ್ಣಿತವಾಯಿತು; **ತತ್ ಚ** = ಈ ವರ್ಣನ ಕೌಶಲವನ್ನು; **ಸಚ್ಚರಿತಃ** = ಮಂಗಲ

---

೧. ಏವಂ ಚೋಕ್ತಬಲಾತ್ ಹಯಗ್ರೀವಾಖ್ಯಹರೇಃ ಸರ್ವೋತ್ತಮತ್ವಮೇವ ಬಹುಸಂವಾದಸದ್ಭಾವಾತ್ ಪ್ರಾಮಾಣಿಕಮ್ । ತತೋಽತಿರಿಕ್ತಂ ಸರ್ವಂ ಮತಂ ಏಕಸಂವಾದಸ್ಯಾಪ್ಯಭಾವಾತ್ ಅಪ್ರಾಮಾಣಿಕಮೇವೇತಿ ಭಾವಃ। -ವ್ಯಾ

೨. 'ಅಶ್ವಗ್ರೀವಮಮುಂ ವಿಹಾಯ ಕತಮಂ ದೇವಂ ನಮಾಮಃ ಸ್ತುಮಃ ಸತ್ಕುರ್ಮಃ'ಇತ್ಯನೇನ ಶೈವಶಾಕ್ತೇಯಗಾಣಪತ್ಯಸ್ಕಾಂದಸೌರಾದಿದೇವತಾಂತರಪರತ್ವಪ್ರತಿಪಾದಕದುರ್ಮತಧಿಕ್ಕರಣಮ್ ।

೩. 'ಕಿಮು ಕರ್ಮ ಶರ್ಮದಂ' ಇತ್ಯನೇನ ಭಾಟ್ಟಪ್ರಾಭಾಕರಮತಧಿಕ್ಕರಣಂ। -ವ್ಯಾ

೪. 'ಇತ್ಯೋಽನ್ಯದ್ಬ್ರಹ್ಮ ಕಿಂ ವಾಽಸ್ತಿ ನಃ' ಇತ್ಯನೇನ ನಿರ್ಗುಣಜೀವಾನಾಂ ಪರತ್ವಪ್ರತಿಪಾದಕ ದುರ್ಮತಾಂತರನಿರಾಕರಣಂ॥ -ವ್ಯಾ

೫. ಜಾತ್ಯೇಕವಚನಮಿದಂ ಬಹುತರಯಶೋರಾಶಿತಃ ಇತ್ಯರ್ಥಃ। -ವ್ಯಾ

ಚರಿತನಾದ ಭಗವಾನ್ ನಾರಾಯಣನು; ಚಿತ್ತೇ = ಮನಸ್ಸಿನಲ್ಲಿ; ಪ್ರತ್ಯರ್ಪ್ಯ = ಸ್ವೀಕರಿಸಿ (ಅಂಗೀಕರಿಸಿ); ಮಮ = ನನಗೆ; ಪ್ರೀಯತಾಂ = ಪ್ರೀತನಾಗಲಿ.

> ಹೀಗೆ ಒಂದೇ ಶ್ಲೋಕದಿಂದ, ಲೋಕೇಶನಾದ ಶ್ರೀನಾರಾಯಣನ ಯಶೋ-ರಾಶಿಯಲ್ಲಿ ಅಲ್ಪಭಾಗವು ಯಥಾಶಕ್ತಿ ವರ್ಣಿತವಾಯಿತು; ಇದನ್ನು ಮಂಗಲಚರಿತನಾದ ಅವನು ಮನಸ್ಸಿಗೆ ತಂದುಕೊಂಡು ನನಗೆ ಒಲಿಯಲಿ.

ವಿ: ಬಹ್ವರ್ಥವನ್ನು ನಿರೂಪಿಸುವ ಹಿಂದಿನ ಶ್ಲೋಕವನ್ನು ಕೌಶಲಪೂರ್ಣವಾಗಿ ಶ್ರೀಹರಿಗೆ ಸಮರ್ಪಿಸುತ್ತ ಉತ್ತರಪ್ರಬಂಧವನ್ನು ಶ್ರೀವಾದಿರಾಜರು ಮುಕ್ತಾಯ ಮಾಡುತ್ತಿರುವರು. ಹಿಂದಿನ ಶ್ಲೋಕವು ಶ್ರೀಹರಿಯ ಅನೇಕವಿಧಮಾಹಾತ್ಮ್ಯವನ್ನು ಅಪೂರ್ವರೀತಿಯಲ್ಲಿ ವರ್ಣಿಸುವ ಅಪೂರ್ವ [೧] ಶ್ಲೋಕ; ಆದರೆ ಅದರಲ್ಲಿ ವರ್ಣಿತವಾದ ಶ್ರೀಹರಿಮಹಿಮೆ ಒಟ್ಟಾಗಿ ಅತ್ಯಲ್ಪ ಮಾತ್ರ; ತನ್ನ ಅನುಗ್ರಹದಿಂದ ಮೂಡಿ ಬಂದ ಇಂತಹ ಶ್ಲೋಕವನ್ನು (ಉಪಲಕ್ಷಣದಿಂದ ತಮ್ಮ ಸಕಲ ರಚನೆಯನ್ನೂ) ಶ್ರೀಹರಿಯು ಒಪ್ಪಿಕೊಂಡು ನಮಗೆ ಪ್ರಸನ್ನನಾಗಲಿ ಎಂದರ್ಥ.

★★★★★

---

೧. ಸ್ವಕೃತಶ್ಲೋಕಂ ಸಕೌಶಲಂ ಹರಾವರ್ಪಯನ್ ತತ್ಪ್ರೀತಿಂ ಪ್ರಾರ್ಥಯತೇ। -ವ್ಯಾ

# ಪೂರ್ವಪ್ರಬಂಧಃ

[ಗಂಗಾಸಾಗರಸಂಗಮ - ಜಗನ್ನಾಥ (ಪುರೀಕ್ಷೇತ್ರ) - ಶ್ರೀಶೈಲ ಮಲ್ಲಿಕಾರ್ಜುನ (ಕ್ಷೇತ್ರ) - ಅಹೋಬಲ (ಕ್ಷೇತ್ರ) - ಭವನಾಶಿನೀ - ನಿವೃತ್ತಿ ಸಂಗಮಃ - ತುಂಗಭದ್ರಾ - ಶ್ರೀವಿಠಲ(ಹಂಪೆ) - ವಿರೂಪಾಕ್ಷಃ (ಹಂಪೆ) - ಪಂಪಾಕ್ಷೇತ್ರ (ಹಂಪೆ) - ದುರ್ಗಾದೇವಿ (ಪಂಪಾಕ್ಷೇತ್ರ) - ಗಜಗಹ್ವರ (ಆನೆಗೊಂದಿ) - ಶ್ರೀಜಯತೀರ್ಥರು (ಮಳಖೇಡ) - ಶ್ರೀವೇಂಕಟೇಶಃ (ತಿರುಪತಿ) - ಸುವರ್ಣಮುಖೀ (ನದೀ) - ವರದರಾಜ (ಕಂಚೀಕ್ಷೇತ್ರ) - ಏಕಾಮ್ರೇಶ್ವರ (ಶಿವಕಂಚೀ) - ಕಾಮಾಕ್ಷೀ (ಕಂಚೀ) - ಅರುಣಾಚಲೇಶ್ವರ (ತಿರುವಣ್ಣಾಮಲೈ) - ತ್ರಿವಿಕ್ರಮ (ತಿರು-ಕೋಯಿಲೂರು) - ವೃದ್ಧಾಚಲೇಶ್ವರ(ಕ್ಷೇತ್ರ) - ಶ್ರೀಭೂವರಾಹ (ಶ್ರೀಮುಷ್ಣ ಕ್ಷೇತ್ರ) - ಕುಂಭಘೋಣ (ಕ್ಷೇತ್ರ)]

## ಗಂಗಾಸಾಗರಸಂಗಮ

ಅಬ್ಧೇ [1]ಸ್ನಿಗ್ಧೋಽಸಿ ಸರಸೇಷ್ವಾದ್ಯೋಽಸ್ಯಬ್ಜಸಖೋಽಪ್ಯಸಿ ।
ಮುಖೈರನೇಕೈರ್ಯೋ ಗಂಗಾಮುಖಾನ್ಯಾಚುಂಬ್ಯ ಜೃಂಭಸೇ ॥ ೧ ॥

ಅ: (ಹೇ)ಅಬ್ಧೇ = ಎಲೈ ಸಾಗರವೇ ! (ತ್ವಂ = ನೀನು); ಸ್ನಿಗ್ಧಃ = ಸ್ನೇಹ (ಅಂಟು, ಅನುರಾಗ)ದಿಂದ ಕೂಡಿದವನಾಗಿ; ಅಸಿ = ಇರುವಿ; ಸರಸೇಷು = ಸರೋವರಗಳಲ್ಲಿ (ಸರಸಿಗಳಲ್ಲಿ); ಆದ್ಯಃ = ಮೊದಲಿಗನಾಗಿ; ಅಸಿ = ಇರುವಿ; ಅಬ್ಜಸಖಃ ಅಪಿ = ಚಂದ್ರನಿಗೆ ಸಖನಾಗಿಯೂ; ಅಸಿ = ಇರುವಿ;(ಏಕೆಂದರೆ) ಯಃ (ತ್ವಂ) = ಯಾವ (ನೀನು); ಅನೇಕೈಃ ಮುಖೈಃ = ಅನೇಕಮುಖ[2](ನದೀಸಮುದ್ರ ಸಂಗಮಪ್ರದೇಶ)ಗಳಿಂದ;ಗಂಗಾಮುಖಾನಿ[3] = ಗಂಗೆಯ ಮುಖಗಳನ್ನು; ಆಚುಂಬ್ಯ = ಮುದ್ದಿಸಿ; ಜೃಂಭಸೇ = ಉಬ್ಬುತ್ತಿರುವಿ.

ಸಾಗರವೇ ! ಅನೇಕಮುಖಗಳಿಂದ ಗಂಗೆಯ ಮುಖಗಳನ್ನು ಮುದ್ದಿಸಿ ನಲಿಯುವ ನೀನು ಸ್ನೇಹಪೂರ್ಣನು; ರಸಿಕರಲ್ಲಿ ಅಗ್ರೇಸರನು; ಚಂದ್ರನಿಗೆ ಗೆಳೆಯನು;

ವಿ: ೧. ಕಲ್ಕತ್ತಾದಿಂದ ಸುಮಾರು ೧೫೦ ಕಿ.ಮೀ. ದೂರದಲ್ಲಿ ಗಂಗಾಸಾಗರಸಂಗಮ-ವೆಂಬ ಪ್ರದೇಶವಿದೆ. ಹಿಂದೆ ಅಲ್ಲಿಯೇ ಗಂಗೆಯು ಸಾವಿರಾರು ಕವಲುಗಳಾಗಿ ಸಮುದ್ರವನ್ನು ಸೇರುತ್ತಿತ್ತು; ಈಗ ಪಾತ್ರ ವ್ಯತ್ಯಾಸದಿಂದಾಗಿ ಸ್ವಲ್ಪ ಸ್ಥಳ ವ್ಯತ್ಯಾಸವಾಗಿದೆ. ಸಾವಿರಮುಖಿಯಾಗಿ ತನ್ನ ಬಳಿ ಸಾರುವ ಗಂಗೆಯನ್ನು ಸ್ವೀಕರಿಸುವುದರಿಂದ ಸಮುದ್ರವನ್ನು ಸ್ನಿಗ್ಧನೆಂದೂ, ಚುಂಬಿಸುವುದರಿಂದ [4]ರಸಿಕನೆಂದೂ, ಚಂದ್ರನಿಂದ ಉದ್ದೀಪನಗೊಳ್ಳುವುದರಿಂದ ಚಂದ್ರಸಖನೆಂದೂ ಶ್ರೀವಾದಿರಾಜರು ಸಮುದ್ರವನ್ನು [5]ವರ್ಣಿಸಿರುವರು.

---

೧. 'ಸರಸಾಮಸ್ಮಿ ಸಾಗರಃ' - ಎಂಬ ಭಗವದ್ಗೀತೆಯ ವಚನವು(೧೦/೨೪) 'ಸರಸೇಷ್ವಾದ್ಯೋಽಸಿ' ಎಂಬುದಕ್ಕೆ ಆಧಾರವಾಗಿದೆ.

೨. 'ನದೀಸಮುದ್ರಸಂಗಮಪ್ರದೇಶಂ ಮುಖಮಿತ್ಯಾಹುಃ' । -ವ್ಯಾ

೩. ಗಂಗಾ ಸಹಸ್ರಮುಖೀ ಭೂತ್ವಾ ಸಮುದ್ರಂ ಗಚ್ಛತೀತ್ಯತಃ ಮುಖಾನೀತಿ ಬಹುವಚನಂ । ವ್ಯಾ

೪. ಅನೇಕಮುಖೈಃ ಸ್ತ್ರೀಮುಖಚುಂಬನೇನ ಸ್ನಿಗ್ಧತ್ವಂ ರಸಿಕತ್ವಂ ಸದಾಸ್ತ್ರೀಮುಖಚುಂಬನಾದಿವಿಲಾಸ-ರಸಸ್ಯ ತದುದ್ದೀಪನವಿಭಾವತ್ವಾಚ್ಚಂದ್ರೋಽಪಿ ಸಖಾ । ಅತೋಽಬ್ಜಸುಹೃತ್ತ್ವಂ ಚೋಪಪಾದಿತಂ ಭವತಿ । -ವ್ಯಾ

೫. ಚಂದ್ರನ ದರ್ಶನಕ್ಕೆ ಸಾಗರವು ಉಕ್ಕುವುದು ಲೋಕಸಿದ್ಧವೂ ಆಗಿದೆ.

೨. ಹಿಂದೊಮ್ಮೆ ಪರ್ವಕಾಲದಲ್ಲಿ ಬ್ರಹ್ಮದೇವರು ಇಲ್ಲಿ ಸ್ನಾನಕ್ಕೆಂದು ಬಂದಿದ್ದಾಗ ಇಲ್ಲಿಯ ಸಮುದ್ರದ ನೀರು ಅವರಿಗೆ ಸಿಡಿದಾಗ, ಅವರು ಸಮುದ್ರಕ್ಕಿತ್ತ ಶಾಪದ ಫಲವಾಗಿ ವರುಣನು ಮಹಾಭಿಷಕ್ ಮತ್ತು ಶಂತನು ಎಂಬ ಎರಡು ಜನ್ಮಗಳನ್ನು ಹೊಂದಬೇಕಾಯಿತೆಂದು ಮಹಾಭಾರತ ಮತ್ತು ಹರಿವಂಶಗಳಲ್ಲಿದೆ. ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಈ ಪ್ರಸಂಗದ ಸಂಗ್ರಹವಿದೆ (೧೧/೧೬=೧೮). ಇಲ್ಲಿಯ 'ಸರಸೇಷು ಆದ್ಯೋಽಸಿ' ಎಂಬ ಪದದಲ್ಲಿ ಈ ಪ್ರಸಂಗಕ್ಕೆ ಸೂಚನೆಯೂ ಇದೆ.

## ಜಗನ್ನಾಥ (ಪುರೀಕ್ಷೇತ್ರ)

**ಜಗನ್ನಾಥೋ ವಿಜಯತೇ ಜಗತಾಮರ್ಚಿತಃ ಸದಾ ।**
**ಜ್ಞಾನಾಖ್ಯರಮ್ಯಪರಶೋರ್ಯಂ ದಾರು ಜಗುರಾಗಮಾಃ ॥ ೨ ॥**

ಅ: ಸದಾ = ಸರ್ವದಾ; ಜಗತಾಂ = ಲೋಕಗಳಿಗೆ; ಅರ್ಚಿತಃ = ಪೂಜ್ಯನಾದ; (ಅತ ಏವ = ಆದ್ದರಿಂದಲೇ); ಜಗನ್ನಾಥ = ಜಗನ್ನಾಥ (ಪುರುಷೋತ್ತಮ)ನಾಗಿರುವ ಶ್ರೀಹರಿಯು; ವಿಜಯತೇ = ಉತ್ಕೃಷ್ಟ(ಸರ್ವೋತ್ತಮ)ನಾಗಿರುವ್ವನು; ಯಂ = ಆ ಜಗನ್ನಾಥನನ್ನು; ಆಗಮಾಃ = ('ಅದೋ ಯದ್ದಾರು ಪ್ಲವತೇ...' ಇತ್ಯಾದಿ) ಆಗಮಗಳು; ಜ್ಞಾನಾಖ್ಯ-ರಮ್ಯಪರಶೋಃ = ತತ್ತ್ವಜ್ಞಾನವೆಂಬ ರಮಣೀಯವಾದ ಕೊಡಲಿಗೆ; ದಾರು = (ಹಿಡಿರೂಪದಲ್ಲಿ ಸಾಧನವಾಗಿರುವ) ಕಟ್ಟಿಗೆ ಎಂಬುದಾಗಿ; ಜಗುಃ = ಹಾಡಿವೆ.

**ತತ್ತ್ವಜ್ಞಾನವೆಂಬ ರಮಣೀಯ ಕೊಡಲಿಗೆ ಹಿಡಿರೂಪದ ಕಟ್ಟಿಗೆ ಎಂಬುದಾಗಿ ಆಗಮಗಳು ಕೊಂಡಾಡಿರುವ, ಲೋಕಗಳಿಗೆ ಸದಾ ಪೂಜ್ಯನಾಗಿರುವ ಈ ಜಗನ್ನಾಥನು ಸರ್ವೋತ್ತಮನು.**

ವಿ: ೧. ಕೊಡಲಿಯು ವೃಕ್ಷವನ್ನು ಛೇದಿಸಲು ಸಮರ್ಥವಾಗುವುದು ಅದಕ್ಕೆ ಮರದ ಹಿಡಿ ಇದ್ದಾಗ ಮಾತ್ರ. ಅದೇ ರೀತಿಯಾಗಿ ತತ್ತ್ವಜ್ಞಾನವೆಂಬ ಶಸ್ತ್ರವು ಜಗದ್ವೃಕ್ಷವನ್ನು ಛೇದಿಸುವ ಸಾಧನವಾಗುವುದು ಅದು ಶ್ರೀಹರಿಸರ್ವೋತ್ತಮತ್ವಪರವಿದ್ದಾಗ ಮಾತ್ರ ಎಂದು ಭಾವ. ಜ್ಞಾನವಿಷಯಕನಾದ ಅವನೇ ಜ್ಞಾನಪ್ರದನೂ ಆಗಿರುವನು ಎಂಬ ಧ್ವನಿಯು ಇಲ್ಲಿದೆ.

---

೧. ಅದೋ ಯದ್ದಾರು ಪ್ಲವತೇ ಸಿಂಧೋಃ ಪಾರೇ ಅಪೂರುಷಮ್ ।
ತದಾ ರಭಸ್ವ ದುರ್ಹಣೋ ತೇನ ಗಚ್ಛ ಪರಸ್ತರಮ್ ॥ – ಋಗ್ವೇದ(೧೦/೧೦/೧೫೫)
೨. ಕೇವಲ ದಾರುತ್ವಸ್ಯ ಹೀನತ್ವಾತ್ ಭಗವತ್ಪರಾ ಶ್ರುತಿರಿಮಮೇವಾರ್ಥಮಭಿಪ್ರೈತೀತ್ಯುತ್ಪ್ರೇಕ್ಷಾ । -ವ್ಯಾಖ್ಯಾನ
೩. ಯದಾ ಪರಶುರಾಧಾರಭೂತದಾರುಸಂಬದ್ಧ ಏವ ವೃಕ್ಷಂ ಛೇತ್ತುಂ ಸಮರ್ಥಃ, ತಥಾ ಪರಮಾತ್ಮಸಂಬದ್ಧಮೇವ ಜ್ಞಾನಂ ಸಂಸಾರಂ ಛೇತ್ತುಂ ಸಮರ್ಥಮಿತಿ ಭಾವಃ । ಅತ್ರ ಸಂಬಂಧೋ ವಿಷಯವಿಷಯಿಭಾವಃ । ನತ್ವಾಶ್ರಯಾಶ್ರಯೀಭಾವಃ । ಪರಶೌ ತು ಆಶ್ರಯಾಶ್ರಯೀಭಾವಃ । –ವ್ಯಾಖ್ಯಾನ
೪. ಅಶ್ವತ್ಥಮೇನಂ ಸುವಿರೂಢಮೂಲಮಸಂಗಶಸ್ತ್ರೇಣ ದೃಢೇನ ಛಿತ್ತ್ವಾ । –ಗೀತಾ (೧೫/೩)

ಪುರಿಯಲ್ಲಿನ[೧] ಜಗನ್ನಾಥ ವಿಗ್ರಹವು 'ಮರದವಿಗ್ರಹ' ವಾಗಿರುವುದರ ಹಿನ್ನೆಲೆಯಲ್ಲಿ ಈ ಉಕ್ತಿಯು ತುಂಬಾ ಸಾರ್ಥಕವಾಗಿದೆ. ಜಗನ್ನಾಥ ಯಾತ್ರೆಯಿಂದ ಶ್ರೀಹರಿಯ ಅನುಗ್ರಹದಿಂದ ತತ್ತ್ವಜ್ಞಾನವು ಲಭಿಸುವುದು ಎಂದು ಭಾವ.

೨. ಜಗನ್ನಾಥಪುರಿಯು ಬದರೀ (ಉತ್ತರ =ಕೃತಯುಗ); ಜಗನ್ನಾಥ (ಪೂರ್ವ = ಕಲಿಯುಗ), ರಾಮೇಶ್ವರ (ದಕ್ಷಿಣಾ =ತ್ರೇತಾಯುಗ) ಮತ್ತು ದ್ವಾರಕಾ(ಪಶ್ಚಿಮ = ದ್ವಾಪರಯುಗ) ಎಂಬ ನಾಲ್ಕು ಪ್ರಸಿದ್ಧಕ್ಷೇತ್ರಗಳಲ್ಲಿ ಪೂರ್ವದಿಕ್ಕಿನ ಮಹಾಕ್ಷೇತ್ರ; ಕಲಿಯುಗದ ಮಹಾಕ್ಷೇತ್ರವೆಂಬುದು ಇದರ ಮತ್ತೊಂದು ಹಿರಿಮೆ; ಇದಕ್ಕೆ ಪುರುಷೋತ್ತಮಕ್ಷೇತ್ರ, ಜಗನ್ನಾಥಕ್ಷೇತ್ರ, ಶ್ರೀಕ್ಷೇತ್ರ, ಶಂಖಕ್ಷೇತ್ರ (ಶಂಖಾಕಾರವಾಗಿರುವುದರಿಂದ) ಎಂಬುದಾಗಿಯೂ ಪ್ರಸಿದ್ಧಿಯುಂಟು. ಇದು ಇಂದು ಒರಿಸ್ಸಾ (ಕಳಿಂಗ) ರಾಜ್ಯಕ್ಕೆ ಸೇರಿದೆ. 'ಕೋನಾರ್ಕ' ಎಂಬ ಸುಪ್ರಸಿದ್ಧ ಸೂರ್ಯಕ್ಷೇತ್ರವು ಇಲ್ಲಿಂದ ಸುಮಾರು ೧೦೦ ಕಿ.ಮೀ. ಮತ್ತು ಭುವನೇಶ್ವರವೆಂಬ ಮತ್ತೊಂದು ಕ್ಷೇತ್ರವು ಇಲ್ಲಿಂದ ೬೦ ಕಿ.ಮೀ.ದೂರದಲ್ಲಿ ಇವೆ.

೩. ಪುರಿಯಲ್ಲಿ ಸಮುದ್ರದ ಅಲೆಗಳು ಆಳೆತ್ತರದಲ್ಲಿ ಬಹಳ ವೇಗದಿಂದ ಅಪ್ಪಳಿಸುತ್ತವೆ. ದೇವಸ್ಥಾನದಿಂದ ಸುಮಾರು ೩ ಕಿ.ಮೀ. ದೂರದಲ್ಲಿರುವ ಚಂದ್ರತೀರ್ಥದಲ್ಲಿ ಮಿಂದು ಅನಂತರ ಸಮುದ್ರಸ್ನಾನ ಮಾಡಿ ದೇವರದರ್ಶನ ಮಾಡಬೇಕು. ಇದು ಜಾಗಟೆಗಳಿಗೆ ತುಂಬಾ ಪ್ರಸಿದ್ಧವಾದ ಸ್ಥಳ.

೪. ಮೊದಲು ಇಲ್ಲಿ ನೀಲಾಚಲವೆಂಬ ಪರ್ವತವೂ ಅದರಲ್ಲಿ ನೀಲಮಾಧವನೆಂಬ ವಿಷ್ಣುವಿಗ್ರಹವೂ ಇದ್ದುವೆಂದೂ, ಕಾಲಕ್ರಮದಲ್ಲಿ ಆ ಪರ್ವತವು (ಸಮುದ್ರದೊಳಗೆ ಮುಳುಗಿ) ಅದೃಶ್ಯವಾದಾಗ ಅಲ್ಲಿದ್ದ ವಿಗ್ರಹವನ್ನು ದೇವತೆಗಳು ತಮ್ಮ ಲೋಕಕ್ಕೆ ಒಯ್ದರೆಂದೂ ಪ್ರಸಿದ್ಧಿಯುಂಟು.

೫. ಮಾಲವಾಧಿಪತಿಯಾದ ಇಂದ್ರದ್ಯುಮ್ನರಾಜನಿಗೆ ಒಲಿದು ಸಮುದ್ರದಲ್ಲಿ ದೇವತಾ ಸನ್ನಿಧಿಯುಕ್ತವಾದ ಮರದ ದಿಮ್ಮಿಯೊಂದು ತೇಲಿ ಬಂದಿತಂತೆ. ದೇವಶಿಲ್ಪಿಯಾದ ವಿಶ್ವಕರ್ಮನು ಆ ದಿಮ್ಮಿಯಿಂದ ಕಡೆದ ಶ್ರೀಕೃಷ್ಣ ಬಲರಾಮ, ಮತ್ತು ಸುಭದ್ರಾ ವಿಗ್ರಹಗಳೇ ಇಲ್ಲಿಯ ಮೂರ್ತಿಗಳು. ನಾರದ ಮುನಿಗಳ ಪ್ರಾರ್ಥನೆಯಂತೆ ಆ ಮೂವರೂ ಮರದ ವಿಗ್ರಹಗಳ ರೂಪದಲ್ಲಿ ನಿಂತಿರುವರೆಂದು ಪ್ರಸಿದ್ಧಿಯುಂಟು.

## ಶ್ರೀಶೈಲ ಮಲ್ಲಿಕಾರ್ಜುನ (ಕ್ಷೇತ್ರ)

ಶ್ರೀಶೈಲಶಿಖರಾವಾಸೋ ಭಾತೀಶೋ ಮಲ್ಲಿಕಾರ್ಜುನಃ ।
ಬದ್ಧಸ್ವೀಯಜಟಾಜೂಟಮಧ್ಯಸ್ಥ ಇವ ಚಂದ್ರಮಾಃ ॥ ೩ ॥

---

೧. ಜಗನ್ನಾಥಮೂರ್ತೇರ್ದಾರುತ್ವಾದಿಯಮುಕ್ತಿಃ । -ವ್ಯಾ
೨. 'ಅಜ್ಞಾನಾಂ ಜ್ಞಾನದೋ ವಿಷ್ಣುಃ' -ಇತ್ಯಾದಿ.

ಅ: ಶ್ರೀಶೈಲಶಿಖರಾವಾಸಃ = ಶ್ರೀಶೈಲ ಪರ್ವತದಲ್ಲಿ ನೆಲೆಸಿರುವ; ಮಲ್ಲಿಕಾ-ರ್ಜುನಃ = ಮಲ್ಲಿಗೆ ಹೂವಿನಂತೆ ಬೆಳ್ಳಗಿರುವ (ಆದ್ದರಿಂದಲೇ ಮಲ್ಲಿಕಾರ್ಜುನನೆಂಬ ಹೆಸರಿನ); ಈಶಃ = ಈಶ್ವರನು; ಬದ್ಧಸ್ವೀಯಜಟಾಜೂಟಮಧ್ಯಸ್ಥಃ = ಕಟ್ಟಲ್ಪಟ್ಟಿರುವ ತನ್ನ ಜಟಾಜೂಟದ ಮಧ್ಯದಲ್ಲಿರುವ; ಚಂದ್ರಮಾಃ ಇವ = ಚಂದ್ರನಂತೆ; ಭಾತಿ = ಕಂಗೊಳಿಸುತ್ತಿರುವನು. (ಉಪಮಾಲಂಕಾರ)

ಶ್ರೀಶೈಲಪರ್ವತದಲ್ಲಿ ನೆಲೆಸಿರುವ, ಮಲ್ಲಿಗೆಯಂತೆ ಬೆಳ್ಳಗಿರುವ, ಶಿವನು ತನ್ನ ಕಟ್ಟಿದ ಜಟಾಜೂಟದ ಮಧ್ಯದಲ್ಲಿನ ಚಂದ್ರನಂತೆ ಕಂಗೊಳಿಸುತ್ತಿರುವನು.

ವಿ: ೧. ಕಾರಣಾಂತರದಿಂದ ಕೈಲಾಸವನ್ನು ತೊರೆದು ಷಣ್ಮುಖನು ಶ್ರೀಶೈಲಕ್ಕೆ ಬಂದಾಗ ಶಿವಪಾರ್ವತಿಯರೂ ಸಹ ಇಲ್ಲಿಗೆ ಬಂದು ನೆಲೆಸಿದರೆಂಬ ಪೌರಾಣಿಕ ಹಿನ್ನೆಲೆಯು ಈ ಕ್ಷೇತ್ರಕ್ಕುಂಟು; ಇಲ್ಲಿಯ ಶಿವಲಿಂಗವು ಜ್ಯೋತಿರ್ಲಿಂಗಗಳಲ್ಲೊಂದು;

೨. ಆಂಧ್ರಪ್ರದೇಶದ ಕರ್ನೂಲು ಅಥವಾ ನಂದ್ಯಾಲದಿಂದ ಶ್ರೀಶೈಲಕ್ಕೆ ನೇರವಾಗಿ (ಬಸ್ಸಿನಲ್ಲಿ) ಹೋಗಬಹುದು. ಇಲ್ಲಿಯ ರುದ್ರದೇವರ ಪೂಜ್ಗೆ ಮತ್ತು ಇಲ್ಲಿಯ ದೇವಹ್ರದದ ಸ್ನಾನಗಳು ಅಶ್ವಮೇಧಯಾಗದ ಫಲವನ್ನು ಕೊಡುತ್ತವೆ ಎಂದು ಮಹಾಭಾರತದಲ್ಲಿದೆ.

೩. ಉನ್ನತವಾದ ಪರ್ವತದ ಮೇಲೆ ಕಪ್ಪಾದ ಅರಣ್ಯಗಳ ಮಧ್ಯೆ ಶೋಭಿಸುವ ಶಿವನನ್ನು ಅವನದೇ ಆದ ಎತ್ತರದ ಕಪ್ಪಾದ ಜಟಾಜೂಟದಲ್ಲಿ ಹೊಳೆಯುವ ಚಂದ್ರನಿಗೆ ಹೋಲಿಸಿರುವ ಇಲ್ಲಿಯ 'ಉಪಮಾಲಂಕಾರ' ತುಂಬಾ ಅಪೂರ್ವವಾದುದು. ಶಿವನ ಜಟೆಯ ಮಧ್ಯೆ ಇರುವ ಚಂದ್ರನು ಅಪೂರ್ಣಚಂದ್ರ; ಅದರಂತೆ ರುದ್ರದೇವರೂ ಸಹ ಅಪೂರ್ಣರೇ ಎಂಬ ಶಾಸ್ತ್ರಧ್ವನಿಯೂ ಇದರಲ್ಲಿದೆ;

೪. ಶಿವನನ್ನು ಸ್ತುತಿಸುತ್ತಲೇ ಆತನ ಸರ್ವೋತ್ತಮತ್ವವನ್ನು ಒಪ್ಪುವ ಶೈವಮತವನ್ನು ಖಂಡಿಸುವ ಇಲ್ಲಿಯ ಚಾತುರ್ಯವು ಅದ್ಭುತವಾದುದು; ಹೀಗೆ ಯುಕ್ತಿಮಲ್ಲಿಕಾಕಾರರಾದ ಶ್ರೀವಾದಿರಾಜರು ಮಲ್ಲಿಕಾರ್ಜುನನನ್ನು ವರ್ಣಿಸುವಲ್ಲಿನ ಯುಕ್ತಿವೈಭವವೂ ತುಂಬಾ ಗಮನಾರ್ಹವಾಗಿದೆ.

೫. ಶ್ರೀಶೈಲದಲ್ಲಿರುವ ಪಾರ್ವತಿಗೆ 'ಮಲ್ಲಿಕಾ'ಎಂದೂ, ಈಶ್ವರನಿಗೆ 'ಅರ್ಜುನ' ಎಂದೂ ಹೆಸರುಂಟು. ಆದ್ದರಿಂದ 'ಮಲ್ಲಿಕಯಾ ಸಹಿತೋ ಅರ್ಜುನಃ' ಮಲ್ಲಿಕಾರ್ಜುನಃ' ಮಲ್ಲಿಕಾ ಎಂಬ

---

೧. ಅಶ್ವಮೇಧಮವಾಪ್ನೋತಿ ಪೂಜಯಿತ್ವಾ ವೃಷಧ್ವಜಮ್ ।
ಶ್ರೀಪರ್ವತೇ ಮಹಾದೇವೋ ದೇವ್ಯಾ ಸಹ ಮಹಾದ್ಯುತಿಃ ॥
ನ್ಯವಸತ್ ಪರಮಪ್ರೀತೋ ಬ್ರಹ್ಮಾ ಚ ತ್ರಿದಶೈಃ ಸಹ ।
ತತ್ರ ದೇವಹ್ರದೇ ಸ್ನಾತ್ವಾ ಶುಚಿಃ ಪ್ರಯತಮಾನಸಃ ।
ಅಶ್ವಮೇಧಮವಾಪ್ನೋತಿ ಪರಾಂ ಸಿದ್ಧಿಂ ಚ ಗಚ್ಛತಿ ॥- ಮಹಾಭಾರತ(ವನಪರ್ವ ೮೫/೧೯, ೨೦)

೨. 'ಪತ್ಯುರಸಾಮಂಜಸ್ಯಾತ್' ಎಂಬ ಬ್ರಹ್ಮಸೂತ್ರವನ್ನು ಇಲ್ಲಿ ಸ್ಮರಿಸಬಹುದು.

ಪಾರ್ವತಿಯಿಂದೊಡಗೂಡಿದ ಅರ್ಜುನ ಎಂಬ ಶಿವ' ಎಂದೂ ಇದಕ್ಕೆ ಅರ್ಥಮಾಡಬಹುದು (ಮಧ್ಯಮಪದಲೋಪೀಕರ್ಮಧಾರಯ)

೬. ಶ್ರೀಶೈಲವು ಶೇಷಪರ್ವತದ 'ಪುಚ್ಛ' ವೆಂದೂ, ವೆಂಕಟಗಿರಿಯು ಅದರ ಹೆಡೆಯೆಂದೂ ಪುರಾಣಪ್ರಸಿದ್ಧಿಯಿದೆ.

## ಅಹೋಬಲ (ಕ್ಷೇತ್ರ)

**ಅಹೋಬಲನೃಸಿಂಹಸ್ಯ ಮಹೋಬಲಮುಪಾಶ್ರಿತಾಃ ।**
**ಅಸತ್ತಮಿಸ್ರಸಂಮಿಶ್ರಾಂ ಗಣಯಾಮೋ ನ ಸಂಸೃತಿಮ್ ॥ ೪ ॥**

ಅ: ಅಹೋಬಲನೃಸಿಂಹಸ್ಯ = ಅಹೋಬಲಕ್ಷೇತ್ರದಲ್ಲಿರುವ ಶ್ರೀನರಸಿಂಹ ದೇವರ; ಮಹೋಬಲಂ = ತೇಜಸ್ಸಿನ ಬಲವನ್ನು; ಉಪಾಶ್ರಿತಾಃ(ವಯಂ) = ಅವಲಂಬಿಸಿರುವ (ನಾವು); ಅಸತ್ತಮಿಸ್ರಸಂಮಿಶ್ರಾಂ = (ಪ್ರತಿವಾದಿ)ಮಿಥ್ಯಾಜ್ಞಾನಿಗಳೆಂಬ ಕತ್ತಲೆಯಿಂದ ಕೂಡಿದ; ಸಂಸೃತಿಂ = ಸಂಸಾರವನ್ನು; ನ ಗಣಯಾಮಃ = ಲೆಕ್ಕಿಸಲಾರೆವು.

ಅಹೋಬಲಕ್ಷೇತ್ರದಲ್ಲಿರುವ ಶ್ರೀನರಸಿಂಹನ ತೇಜೋಬಲವನ್ನು ಅವಲಂಬಿಸಿರುವ ನಾವು ಮಿಥ್ಯಾಜ್ಞಾನಿಗಳೆಂಬ ಕತ್ತಲೆ ಕವಿದ ಸಂಸಾರವನ್ನು ಲೆಕ್ಕಿಸಲಾರೆವು.

ವಿ: ೧. ದೀಪವನ್ನು ಆಶ್ರಯಿಸಿದವರಿಗೆ ಕತ್ತಲೆ ತುಂಬಿದ ಹಾದಿಯಲ್ಲೂ ಪ್ರಯಾಣ ದುಷ್ಕರವೆನ್ನಿಸದು. ಅಂತೆಯೇ (ಅಹೋಬಲ)ನರಸಿಂಹದೇವರ [1]ತೇಜೋಬಲವನ್ನು ಆಶ್ರಯಿಸಿದ ಭಕ್ತರಾದ ನಮಗೂ ಕುತ್ಸಿತರಾದ ಪ್ರತಿವಾದಿಗಳಿಂದ ತುಂಬಿದ ಸಂಸಾರಘನ್ನು ದಾಟುವುದು ಸಹ ಅಶಕ್ಯವೆನ್ನಿಸದು ಎಂದು ಭಾವ[2].

೨. ನರಸಿಂಹನ ತೇಜೋಬಲದಿಂದ ಮಿಥ್ಯಾಜ್ಞಾನದ ಕತ್ತಲೆಯು ಪರಿಹಾರವಾಗುವದು ಎಂದೂ ಭಾವ.

**ಯಸ್ತಂಭೇ ಪ್ರಕಟೀಬಭೂವ ಸ ಮಯಿ ಸ್ತಂಭಾಯಿತೇಽಪಿ ಸ್ಫುಟೀ-**
**ಭೂಯಾದ್ಯೋ ಭವನಾಶಿನೀತಟಗತಶ್ಛಿಂದ್ಯಾತ್ ಸ ಮೇಽಮುಂ ಭವಮ್ ।**
**ಯೋಽಪಾದ್ಬಾಲಕಮಪ್ಯಸೌ ನರಹರಿರ್ಮಾಂ ಬಾಲಿಶಂ ಪಾತು ಯೋ**
**ರಕ್ಷೋಽಶಿಕ್ಷದಸೌ ಪ್ರಭುಃ ಖಲಕುಲಂ ಶಿಕ್ಷೇದರೂಕ್ಷಪ್ರಿಯಃ ॥ ೫ ॥**

---

೧. ನರಸಿಂಹೋಽಖಿಲಜ್ಞಾನಮತಧ್ವಾಂತದಿವಾಕರಃ ।
ಜಯತ್ಯಮಿತಸಜ್ಜ್ಞಾನಸುಖಶಕ್ತಿಪಯೋನಿಧಿಃ ॥ — ಮಾಯಾವಾದಖಂಡನ

೨. ಯಥಾ ದೀಪಮಾಶ್ರಿತಾನಾಂ ಅಂಧಕಾರೋಪೇತಮಾರ್ಗನಿಸ್ತರಣಂ ನ ದುರ್ಘಟಂ । ತಥಾ ನರಸಿಂಹತೇಜೋಬಲಮಾಶ್ರಿತಾನಾಂ ಕುತ್ಸಿತಪ್ರತಿವಾದಿಭರಿತಸಂಸಾರನಿಸ್ತರಣಂ ನ ದುರ್ಘಟಮಿತಿ ಭಾವಃ । -ವ್ಯಾಖ್ಯಾನ

ಅ: ಯಃ = ಯಾವನು; ಸ್ತಂಭೇ = (ಹಿರಣ್ಯಕಶಿಪುವಿನ ಸಭೆಯ) [೧] ಕಂಭದಲ್ಲಿ; ಪ್ರಕಟೀಬಭೂವ = ಪ್ರಾದುರ್ಭೂತನಾದನೋ; ಸಃ = ಆ ನೃಸಿಂಹನು; ಸ್ತಂಭಾಯಿತೇ = ಕಂಭದಂತಿರುವ (ಜ್ಞಾನಶೂನ್ಯನಾಗಿರುವ); ಮಯಿ ಅಪಿ = ನನ್ನಲ್ಲೂ; ಸ್ಫುಟೀಭೂಯಾತ್= ಪ್ರಕಟನಾಗಲಿ; ಯಃ = ಯಾವನು; ಭವನಾಶಿನೀತಟಗತಃ = ಭವನಾಶಿನೀ ನದಿಯ ತೀರದಲ್ಲಿರುವನೋ; ಸಃ = ಅಂತಹ ನರಸಿಂಹದೇವರು; ಮೇ = ನನ್ನ; ಅಮುಂ = ಈ; ಭವಂ = ಸಂಸಾರವನ್ನು; ಛಿಂದ್ಯಾತ್ = ನಾಶಮಾಡಲಿ; ಯಃ = ಯಾವನು; ಬಾಲಕಂ = ಬಾಲಕನಾದ ಪ್ರಹ್ಲಾದನನ್ನು; ಅಪಾತ್ = ಪಾಲಿಸಿದನೋ; ಸಃ = ಅಂತಹ ನರಸಿಂಹನು; ಬಾಲಿಶಂ ಮಾಂ ಅಪಿ = ಬಾಲಿಶ(ಪೂರ್ವೋತ್ತರಗಳನ್ನರಿಯದ)ನಾದ ನನ್ನನ್ನೂ; ಪಾತು = ಪಾಲಿಸಲಿ; ಯಃ = ಯಾವನು; ರಕ್ಷಃ = ಹಿರಣ್ಯಕಶಿಪುವೆಂಬ ರಾಕ್ಷಸನನ್ನು; ಅಶಿಕ್ಷತ್ = ಶಿಕ್ಷಿಸಿದನೋ; ಅಂತಹ; ಅರೂಕ್ಷಪ್ರಿಯಃ = ಶಾಂತರಿಗೆ ಪ್ರಿಯನಾದ; ಪ್ರಭುಃ = ಪ್ರಭುವಾದ; ಅಸೌ ನರಹರಿಃ = ಈ ನರಸಿಂಹದೇವರು; ಖಲಕುಲಂ = ದುರ್ಜನ ಸಮೂಹವನ್ನು; ಶಿಕ್ಷೇತ್ = ಶಿಕ್ಷಿಸಲಿ.

ಕಂಭದಲ್ಲಿ ಪ್ರಾದುರ್ಭವಿಸಿದ ಈ ನರಸಿಂಹನು ಕಂಬದಂತಿರುವ ನನ್ನಲ್ಲೂ ಕಾಣಿಸಿಕೊಳ್ಳಲಿ; ಭವನಾಶಿನೀ ತೀರದಲ್ಲಿ ನೆಲೆಸಿರುವ ಇವನು ನನ್ನ ಭವವನ್ನು ನಾಶಮಾಡಲಿ; ಬಾಲಕನಾದ ಪ್ರಹ್ಲಾದನನ್ನು ಪಾಲಿಸಿದ ಇವನು ಬಾಲಿಶನಾದ ನನ್ನನ್ನೂ ಪಾಲಿಸಲಿ; ಹಿರಣ್ಯಕಶಿಪುವೆಂಬ ರಾಕ್ಷಸನನ್ನು ಶಿಕ್ಷಿಸಿದ ಶಾಂತಪ್ರಿಯನಾದ ಇವನು ದುರ್ಜನ ಸಮೂಹವನ್ನು ಶಿಕ್ಷಿಸಲಿ.

ವಿ: ಕಂಭದಲ್ಲಿ ಪ್ರಕಟಗೊಂಡ ನರಸಿಂಹನು ಕಂಭದಂತೆ ಅಜ್ಞಾನಿಯಾಗಿರುವ ನನ್ನಲ್ಲೂ ಪ್ರಕಟನಾಗಲಿ (ಪ್ರತ್ಯಕ್ಷನಾಗಲಿ); ಭವನಾಶಿನೀ ನದಿಯ ತೀರದಲ್ಲಿದ್ದು ತಾನು ಭವನಾಶಕನೆಂದು ತಿಳಿಸಿಕೊಡುತ್ತಿರುವ [೨] ನರಸಿಂಹನು ನನ್ನ ಭವ(ಸಂಸಾರ) ವನ್ನು ಪರಿಹರಿಸಲಿ, ಬಾಲಕನಾದ ಪ್ರಹ್ಲಾದನನ್ನು ಪಾಲಿಸಿದ ಆ ನರಹರಿಯು ಬಾಲಿಶ(ಹಿಂದು ಮುಂದು ತಿಳಿಯದ ಅಜ್ಞ) ನಾದ ನನ್ನನ್ನೂ ಸಲಹಲಿ; ರಾಕ್ಷಸನಾದ ಹಿರಣ್ಯಕಶಿಪುವನ್ನು ಸಂಹರಿಸಿದ ನರಸಿಂಹನು ರಾಕ್ಷಸರಂತಹ ದುಷ್ಟಜನತೆಯನ್ನು ಸಂಹರಿಸಲಿ ಎಂದು ಭಾವ.

**ವಿರುದ್ಧಧರ್ಮಧರ್ಮಿತ್ವಂ ಸರ್ವಾಂತರ್ಯಾಮಿತಾಂ ತಥಾ ।**
**ನರಸಿಂಹೋಽದ್ಭುತಸ್ತಂಭಸಂಭೂತಃ ಸ್ಪಷ್ಟಯತ್ಯಯಮ್ ॥ ೬ ॥**

---

೧. ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ ।
ಅದೃಶ್ಯತಾತ್ಯದ್ಭುತರೂಪಮುದ್ವಹನ್ ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಮ್ ॥
-ಭಾಗವತ (೭/೮/೧೮)

೨. ಭವನಾಶಿನೀತಟಸ್ಥಸ್ಯ ಭವನಾಶಕತ್ವಮುಚಿತಮಿತಿ ಭಾವಃ । ಅಸ್ಮಿನ್ ಪದ್ಯೇ ಸರ್ವತ್ರೈವಮೇವ ಭಾವೋ ದ್ರಷ್ಟವ್ಯಃ ।
– ವ್ಯಾಖ್ಯಾನ

ಅ: ಅದ್ಭುತಸ್ತಂಭಸಂಭೂತಃ = ಅದ್ಭುತ(ಆಶ್ಚರ್ಯಕರ)ನೂ, [೧] ಸ್ತಂಭದಿಂದ ಪ್ರಾದುರ್ಭವಿಸಿದವನೂ ಆದ; ಅಯಂ = ಈ ನರಸಿಂಹಃ = ನರಸಿಂಹನು; ವಿರುದ್ಧಧರ್ಮಧರ್ಮಿತ್ವಂ = (ತನ್ನಲ್ಲಿರುವ) ಒಂದೆಡೆ ಇರಲಾರದಂತಹ ವಿರುದ್ಧಧರ್ಮಗಳಿಗೆ ಆಧಾರವಾಗಿರುವಿಕೆಯನ್ನೂ; ತಥಾ = ಹಾಗೆಯೇ; ಸರ್ವಾಂತರ್ಯಾಮಿತಾಂ = ಸರ್ವತ್ರ ಅಂತರ್ನಿಯಾಮಕನಾಗಿರುವಿಕೆಯನ್ನೂ; ಸ್ಪಷ್ಟಯತಿ = ಸ್ಫುಟಪಡಿಸುತ್ತಿರುವನು.

ಅದ್ಭುತಸ್ತಂಭದಿಂದ ಪ್ರಾದುರ್ಭವಿಸಿದ ಈ ನರಸಿಂಹನು ತಾನು ಪರಸ್ಪರ ವಿರುದ್ಧಧರ್ಮಗಳನ್ನು ಹೊಂದಿದವನು ಹಾಗೂ ಸರ್ವಾಂತರ್ಯಾಮಿಯಾದವನು ಎಂಬುದನ್ನು ಸ್ಫುಟಪಡಿಸುತ್ತಿರುವನು.

ವಿ: ೧. ಬೇರೆಲ್ಲೂ ಒಂದೆಡೆ ಕಾಣದ ನರತ್ವ ಮತ್ತು ಸಿಂಹತ್ವಗಳೆಂಬ ಎರಡು ವಿರುದ್ಧ ಧರ್ಮಗಳನ್ನು ಹೊಂದಿರುವ ಮೂಲಕ ನರಸಿಂಹನು ತಾನು ಅಣುತ್ವ ಮಹತ್ವಾದಿ ವಿರುದ್ಧ ಧರ್ಮಗಳನ್ನು ಹೊಂದಿದ ಅಚಿಂತ್ಯಾದ್ಭುತಶಕ್ತಿಸಂಪನ್ನನೆಂಬುದನ್ನು ಸ್ಪಷ್ಟಪಡಿಸಿರುವನು; ಸ್ತಂಭ-ದಲ್ಲಿ ಪ್ರಕಟನಾಗುವ ಮೂಲಕ ತಾನು ಸರ್ವಾಂತರ್ಯಾಮಿ ಎಂಬುದನ್ನು ಪ್ರಕಟಿಸಿರುವನು ಎಂದು [೨] ಭಾವ.

೨. ನರಾಕಾರ ಸಿಂಹಾಕಾರಗಳನ್ನು ಹೊಂದಿರುವ ಮೂಲಕ ತಾನು ವಿಶ್ವಾಕಾರನೆಂದು ನರಸಿಂಹನು ತಿಳಿಸುತ್ತಿರುವನು ಎಂದು ಮಾಯಾವಾದಿಗಳು [೩] ಹೇಳುವರು. ಆದರೆ ಸಿಂಹಾಕಾರದ ಮೂಲಕ ನರತಾದಾತ್ಮ್ಯವನ್ನೂ ನರಾಕಾರದ ಮೂಲಕ ಸಿಂಹತಾದಾತ್ಮ್ಯವನ್ನೂ, ಎರಡನ್ನೂ ಹೊಂದಿರುವ ಮೂಲಕ ತನ್ನನ್ನು ಬಿಟ್ಟು ಇತರ ಎಲ್ಲರಿಂದಲೂ ಐಕ್ಯವನ್ನು ನಿರಾಕರಿಸುವ ಮೂಲಕ ಇಲ್ಲಿ ನರಸಿಂಹದೇವರು ಆ ಮಾಯಾವಾದ ಮತವನ್ನು ಖಂಡಿಸುತ್ತಿರುವರು; ಪ್ರಹ್ಲಾದಪರಿಪಾಲನ ಮತ್ತು ಹಿರಣ್ಯಕಶಿಪುವಿನ ವಕ್ಷೋವಿದಾರಣದ ಮೂಲಕವೂ ಇಲ್ಲಿ ಸರ್ವಾಭೇದವು ನಿರಾಕೃತವಾಗಿದೆ; ತನ್ನನ್ನು ತಾನೇ ರಕ್ಷಿಸಿಕೊಳ್ಳುವುದು, ಶಿಕ್ಷಿಸಿಕೊಳ್ಳುವುದು ಲೋಕದಲ್ಲಿ ಎಲ್ಲಿ ತಾನೇ ಕಂಡಿತು? ಎಂಬ ಭಾವವು ಸಹ ಇಲ್ಲಿ [೪] ಸೂಚಿತವಾಗಿದೆ.

೩. ನರಸಿಂಹಾವತಾರವು 'ಸರ್ವಧರ್ಮೋಪಪತ್ತೇಶ್ಚ' (೨/೧/೨೦) ಎಂಬ ಬ್ರಹ್ಮ-ಸೂತ್ರೋಕ್ತಪ್ರಮೇಯಕ್ಕೆ ನಿದರ್ಶನರೂಪ ಎಂಬುದನ್ನು ಸಹ ಗಮನಿಸಬೇಕು. 'ಅರ್ಥೋಽಯಂ

---

೧. ನರಸಿಂಹಃ - ಅನ್ಯತ್ರಸಹಾನವಸ್ಥಿತನರಾಕಾರಸಿಂಹಾಕಾರವಾನ್ । -ವ್ಯಾಖ್ಯಾನ

೨. ವಿರುದ್ಧಯೋರ್ನರತ್ವಸಿಂಹತ್ವಯೋರಧಿಕರಣತ್ವೇನ ವಿರುದ್ಧಧರ್ಮಧರ್ಮಿತ್ವಂ । ಸ್ತಂಭಸಂಭೂತತ್ವೇನ ಸರ್ವಾಂತರ್ಯಾಮಿತ್ವಂ ಸ್ಪಷ್ಟಯತೀತಿ ಭಾವಃ । -ವ್ಯಾ

೩. ನರಾಕಾರಸಿಂಹಾಕಾರತ್ವಾತ್ ವಿಶ್ವಾಕಾರತಾಂ ಸ್ಪಷ್ಟಯತೀತಿ ಮಾಯಾವಾದಿನಃ । 'ಯಃ ಪಂಚಾನನಃ ಪಾಂಚಜನ್ಯವಪುಷಾ ವ್ಯಾದಿಷ್ಟ ವಿಶ್ವಾತ್ಮತಾಂ' ಇತಿ ತತ್ತ್ವಪ್ರದೀಪಿಕಾಯಾಮುಕ್ತತ್ವಾತ್ । -ವ್ಯಾ

೪. ಸಿಂಹಾಕಾರತ್ವೇನ ನರತಾದಾತ್ಮ್ಯಾಭಾವಸ್ಯ ನರಾಕಾರತ್ವೇನ ಸಿಂಹತಾದಾತ್ಮ್ಯಾಭಾವಸ್ಯ ಉಭಯಾಕಾರತ್ವೇನ ನರಸಿಂಹವ್ಯತಿರಿಕ್ತಸಕಲಜೀವತಾದಾತ್ಮ್ಯಾಭಾವಸ್ಯ ಚ ಸೂಚಿತತ್ವೇನ ಮಾಯಾವಾದ್ಯಭಿಲಷಿತಪ್ರಮೇಯಸ್ಯ ವಿರುದ್ಧತ್ವಾತ್। ನರಸಿಂಹಾಕಾರಸ್ಯ ಪ್ರಹ್ಲಾದಪರಿಪಾಲನೇನ ಹಿರಣ್ಯಕಶಿಪೋರುದರವಿದಾರಣೇನ ವಿರುದ್ಧತ್ವಾಚ್ಚ ಸರ್ವತಾದಾತ್ಮ್ಯಸ್ಯ । ನ ಹಿ ಸ್ವಾತ್ಮಾನಮೇವ ಸ್ವಯಂ ರಕ್ಷತಿ ಶಿಕ್ಷಯತಿ ಚೇತಿ ಯುಕ್ತಮ್। ಅತೋ ಯತ್ಕಿಂಚಿದೇತತ್। -ವ್ಯಾ

ಬ್ರಹ್ಮಸೂತ್ರಾಣಾಂ' ಇತ್ಯಾದಿ ಪ್ರಮಾಣಾನುಸಾರ ಬ್ರಹ್ಮಸೂತ್ರಾರ್ಥರೂಪವಾಗಿರುವ ಭಾಗವತ ಪ್ರಸಂಗವನ್ನು ಹೀಗೆ ವಿವರಿಸುವ ಶ್ರೀವಾದಿರಾಜರ ಈ ಮಾತು [೧]ಬ್ರಹ್ಮಸೂತ್ರಭಾಷ್ಯದ ವಿವರಣೆಯಾಗಿಯೂ ಮಾನ್ಯವಾಗುತ್ತದೆ.

ವಿದಾರಿತರಿಪೂದರಪ್ರಕಟಿತಾಂತ್ರಮಾಲಾಧರಂ
ತದಾತ್ಮಜಮುದಾವಹಪ್ರಿಯತರೋಗ್ರಲೀಲಾಕರಮ್ ।
ಉದಾರರವಪೂರಿತಾಂಬುಜಭವಾಂಡಭಾಂಡಾಂತರಂ
ಸದಾ ನರಹರಿಂ ಶ್ರಯೇ ನಖರನವ್ಯವಜ್ರಾಂಕುರಮ್ ॥ ೭ ॥

ಅ: ವಿದಾರಿತರಿಪೂದರಪ್ರಕಟಿತಾಂತ್ರಮಾಲಾಧರಂ = ಸೀಳಲ್ಪಟ್ಟಂತಹ ಶತ್ರುವಾದ ಹಿರಣ್ಯಕಶಿಪುನ ಉದರದಿಂದ ಹೊರಬಂದ ಕರುಳಮಾಲೆಯನ್ನು ಧರಿಸಿದ; ತದಾತ್ಮಜ-ಮುದಾವಹಪ್ರಿಯತರೋಗ್ರಲೀಲಾಕರಂ = ಆ ಶತ್ರುವಾದ ಹಿರಣ್ಯಕಶಿಪುವಿನ ಪುತ್ರನಾದ ಪ್ರಹ್ಲಾದನಿಗೆ ಹರ್ಷವನ್ನುಂಟುಮಾಡುವಂತಹ ಸಜ್ಜನರಿಗೆ ಅತ್ಯಂತ ಪ್ರಿಯವಾದಂತಹ, ದುಷ್ಟರಿಗೆ ಭಯಂಕರನಾದಂತಹ ಲೀಲೆಗಳಿಗೆ ಆಶ್ರಯನಾದ; ಉದಾರರವಪೂರಿತಾಂಬುಜ-ಭವಾಂಡಭಾಂಡಾಂತರಂ = ಉತ್ಕೃಷ್ಟನಾದ ತನ್ನ (ಸಿಂಹ)ನಾದದಿಂದ ಬ್ರಹ್ಮಾಂಡವೆಂಬ ಮಣ್ಣಿನ ಪಾತ್ರೆಯನ್ನೆಲ್ಲ ತುಂಬಿಸಿದ; ನಖರನವ್ಯವಜ್ರಾಂಕುರುಮ್= ಉಗುರುಗಳೆಂಬ ಸುತ್ತ್ಯವಾದ ಅಭಿನವ ವಜ್ರಾಂಕುರಗಳನ್ನು ಹೊಂದಿರುವ; ನರಹರಿಂ = ನರಸಿಂಹದೇವರನ್ನು; ಸದಾ = ನಿರಂತರವೂ; ಶ್ರಯೇ = ನಾನು ಆಶ್ರಯಿಸುವೆನು. (ಪೃಥ್ವೀವೃತ್ತ)

ಶತ್ರುವಿನ ಸೀಳಿದ ಉದರದಿಂದ ಹೊರಬಂದ ಕರುಳಮಾಲೆಯನ್ನು ಧರಿಸಿದ, ಹಿರಣ್ಯಕಶಿಪುವಿನ ಪುತ್ರನಾದ ಪ್ರಹ್ಲಾದನಿಗೆ ಬಹಳ ಮುದನೀಡಿದ, ಉಗ್ರಲೀಲೆಯನ್ನು ತೋರಿದ, ಭಯಂಕರ ಸಿಂಹನಾದದಿಂದ ಬ್ರಹ್ಮಾಂಡದ ಒಳಹೊರಗನ್ನು ತುಂಬಿಸಿದ, ಉಗುರುಗಳೆಂಬ ಅಭಿನವವಜ್ರಾಯುಧವನ್ನು ಹಿಡಿದ, ಈ ನರಸಿಂಹನನ್ನು ಸದಾ ಆಶ್ರಯಿಸುವೆನು.

ವಿ: ೧. ನರಸಿಂಹದೇವರು ತಮ್ಮ ಶತ್ರುವಾದ ಹಿರಣ್ಯಕಶಿಪುವಿನ ಉದರವನ್ನು ಸೀಳಿ, ಅದರಿಂದ ಹೊರಬಂದ ಕರುಳುಗಳನ್ನು ಮಾಲೆಯಾಗಿ ಧರಿಸಿದರು; ಅವನ ಪುತ್ರ ಪ್ರಹ್ಲಾದನಿಗೆ [೨]ಸಂತೋಷವನ್ನುಂಟುಮಾಡುವ, ಸಜ್ಜನರಿಗೆ ಅತ್ಯಂತ ಪ್ರೀತಿಯನ್ನುಂಟುಮಾಡುವ, ದುಷ್ಟರಿಗೆ ಭಯಂಕರವಾದ ಲೀಲೆಗಳನ್ನು ಮಾಡಿದರು; ತಮ್ಮ ಉತ್ಕೃಷ್ಟವಾದ ಸಿಂಹನಾದದಿಂದ

---

೧. ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ ।
ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾಃ ॥
ಇತಿ ಸರ್ವಗುಣೋಪಪತ್ತಿಶ್ರುತೇಶ್ಚ ॥
- ಎಂಬುದಾಗಿ ಶ್ರೀಮದಾಚಾರ್ಯರು ಇದನ್ನು ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ ವಿವರಿಸಿರುವರು.

೨. ಮೋದೇತ ಸಾಧುರಪಿ ವೃಶ್ಚಿಕಸರ್ಪಹತ್ಯಾ -ಭಾಗವತ(೭/೯/೧೪).

ಬ್ರಹ್ಮಾಂಡವನ್ನೆಲ್ಲ ತುಂಬಿಸಿದರು. ತಮ್ಮ [೨]ಉಗುರುಗಳನ್ನೇ ವಜ್ರಾಯುಧವನ್ನಾಗಿಸಿಕೊಂಡರು. ಇಂತಹ ಅಪಾರ ಮಹಿಮರಾದ ಶ್ರೀನರಸಿಂಹದೇವರನ್ನು ನಾನು ಆಶ್ರಯಿಸುವೆನು.

೨. ನರಸಿಂಹದೇವರನ್ನು ಆಶ್ರಯಿಸಿದ ಪ್ರಹ್ಲಾದನು ನಿತ್ಯಸುಖಿಯಾದಂತೆ ಅವನನ್ನು ಆಶ್ರಯಿಸಿದ ಭಕ್ತರೆಲ್ಲರೂ ಸದಾ ಸುಖಿಗಳಾಗುವರು ಎಂದು ಭಾವ.

**ಉದ್ಯನ್ಮಧ್ವಮತಾಯುಧೇನ ಪರಿತಃ ಸಂಸಾರಸಂಜ್ಞೇ ವನೇ**
**ಮಾದ್ಯನ್ಮಾಯಿಮತಂಗಮರ್ದನವಿಧೌ ಸೋಽಹಂ ಸಹಾಯಸ್ತ್ವಿತಿ ।**
**ಹರ್ಯಕ್ಷಸ್ಯ ಸದೃಕ್ಷತಾಂ ವಹತಿ ಯಸ್ತಸ್ಯ ದ್ವಿತೀಯೋಽಪ್ಯಹಂ**
**ಸಾಜಾತ್ಯೇನ ಸದಾ ಮಾನವತುಲಾಂ ಪಾಯಾನ್ನೃಸಿಂಹಃ ಪ್ರಭುಃ ॥ ೮ ॥**

ಅ: ಯಃ =ಯಾವನು; ಸಂಸಾರಸಂಜ್ಞೇ = ಸಂಸಾರವೆಂಬ; ವನೇ[೨]=ಅರಣ್ಯದಲ್ಲಿ ; **ಉದ್ಯನ್ಮಧ್ವಮತಾಯುಧೇನ** = ಹೊಳೆಯುವ ಮಧ್ವಮತವೆಂಬ ಆಯುಧದಿಂದ; ಪರಿತಃ = ಎಲ್ಲೆಡೆಯಲ್ಲಿಯೂ; **ಮಾದ್ಯನ್ಮಾಯಿಮತಂಗಮರ್ದನವಿಧೌ** = ಉನ್ಮತ್ತರಾದ ಮಾಯಾವಾದಿಗಳೆಂಬ ಆನೆಗಳನ್ನು ಮರ್ದಿಸುವ ಕಾರ್ಯದಲ್ಲಿ; (ಭಕ್ತರಿಗೆ) **ಸೋಽಹಂ** = ಅಂತಹ ನಾನು; **ಸಹಾಯಃ ತು ಇತಿ** = ಸಹಾಯಕನಾಗಿರುವೆನು ಎಂಬುದನ್ನು (ತಿಳಿಸಲು) **ಹರ್ಯಕ್ಷಸ್ಯ** = ಸಿಂಹದ; **ಸದೃಕ್ಷತಾಂ** = ಆಕಾರವನ್ನು; **ವಹತಿ** = ಧರಿಸಿರುವನೋ; **ತಸ್ಯ** = (ಮತ್ತು) ಅಂತಹ ಶ್ರೀಮಧ್ವಾಚಾರ್ಯಮತಾನುವರ್ತಿಯಾದ ಪುರುಷನಿಗೆ; **ಸಾಜಾತ್ಯೇನ** = ಮನುಷ್ಯತ್ವವೆಂಬ ಸಮಾನಜಾತಿಯ ನಿಮಿತ್ತದಿಂದಾಗಿ; **ಅಹಂ** = ನಾನು; **ಸದಾ** = ಯಾವಾಗಲೂ; **ದ್ವಿತೀಯೋಽಪಿ** = ಸಹಾಯವಾಗುವೆನು ಎಂಬುದನ್ನು (ತಿಳಿಸಲು); **ಮಾನವತುಲಾಂ** = ಮನುಷ್ಯಾಕೃತಿಯನ್ನೂ; (**ವಹತಿ** = ಧರಿಸಿರುವೆನೋ); (ಅಂತಹ) **ಪ್ರಭುಃ** = ಸಮರ್ಥನಾದ; **ನೃಸಿಂಹಃ** = ಶ್ರೀನರಸಿಂಹನು (**ಅಸ್ಮಾನ್** = ನಮ್ಮನ್ನು) **ಪಾಯಾತ್** = ಪಾಲಿಸಲಿ.

ಸಂಸಾರವೇ ಅರಣ್ಯ, ಹೊಳೆಯುವ ಮಧ್ವಮತವೇ ಆಯುಧ, ಸೊಕ್ಕಿದ ಮಾಯಾವಾದಿಗಳೇ ಆನೆಗಳು, ಅವರನ್ನು ಮರ್ದಿಸುವ ಕಾರ್ಯದಲ್ಲಿ ತಾನು ನೆರವಾಗುವವನು ಎಂದು ತಿಳಿಸಲು ಸಿಂಹದ ಮುಖವನ್ನು, ಮಾನವರಿಗೆ ತಿಳಿಸಲೆಂದು ಮನುಷ್ಯರೂಪವನ್ನು ಧರಿಸಿರುವ ಪ್ರಭುವಾದ ಶ್ರೀನರಸಿಂಹನು ನಮ್ಮನ್ನು ಪಾಲಿಸಲಿ.

ವಿ: ೧. ನರಾಕಾರ ಮತ್ತು ಸಿಂಹಾಕಾರಗಳೆರಡನ್ನೂ ಹೊಂದಿರುವ ನರಸಿಂಹಾವತಾರದಿಂದ ಭಗವಂತನು ಸೂಚಿಸುವ ತತ್ತ್ವವನ್ನು ಶ್ರೀವಾದಿರಾಜರು ತಿಳಿಸುತ್ತ ಅಂತಹ ನರಸಿಂಹನು ನಮ್ಮನ್ನು ಪಾಲಿಸಲಿ ಎಂಬುದಾಗಿ ಈ ಶ್ಲೋಕದಲ್ಲಿ ಪ್ರಾರ್ಥಿಸಿರುವರು.

---

೧. ಶ್ರೀಮತ್ಕಂಠೀರವಾಸ್ಯಪ್ರತತಸುನಖರಾಃ (ಪಾಂತು) -ನಖಸ್ತುತಿ

೨. 'ವನಂಗತೋ ಯದ್ಧರಿಮಾಶ್ರಯೇತ' ಎಂಬ ಭಾಗವತ(೭/೫/೫) ಶ್ಲೋಕವನ್ನು ಇಲ್ಲಿ ಗಮನಿಸಬಹುದು.

೨. ಅಹೋಬಲಕ್ಷೇತ್ರವು ಇಂದು ರಾಮಾನುಜೀಯರ ವಶದಲ್ಲಿದ್ದರೂ, ಅದು ಮೂಲತಃ ವೈಷ್ಣವ ಕ್ಷೇತ್ರ ಎಂಬುದು ಶ್ರೀವಾದಿರಾಜರ ವರ್ಣನೆಯಿಂದ ವ್ಯಕ್ತವಾಗುತ್ತದೆ. ಅಹೋಬಲ ಪರ್ವತದ ಕೆಳಗೆ, ಮಧ್ಯ ಮತ್ತು ಮೇಲ್ಭಾಗ ಈ ಮೂರು ಸ್ಥಳಗಳಲ್ಲೂ ಮೂರು ದೇವಸ್ಥಾನಗಳಿದ್ದು ಭವನಾಶಿನೀ ನದಿಯು ಇಲ್ಲಿಯ ಪ್ರಧಾನ ತೀರ್ಥವಾಗಿದೆ.

ಜ್ವಾಲಾನೃಸಿಂಹ, ಅಹೋಬಲನೃಸಿಂಹ, ಮಾಲ್ಗೋಲನೃಸಿಂಹ, ಕ್ರೋಡಾಕಾರನೃಸಿಂಹ, ಕಾರಂಜನೃಸಿಂಹ, ಭಾರ್ಗವನೃಸಿಂಹ, ಯೋಗಾನಂದ ನೃಸಿಂಹ, ಛತ್ರವಟನೃಸಿಂಹ ಪಾವನ-ನೃಸಿಂಹ ಎಂಬ ನವನಾರಸಿಂಹರಿಂದಾಗಿ ಈ ಕ್ಷೇತ್ರವು ನವನಾರಸಿಂಹಕ್ಷೇತ್ರವೆಂದೂ ಪ್ರಸಿದ್ಧವಾಗಿದೆ. ಇಂತಹ ಅಹೋಬಲಕ್ಷೇತ್ರದಲ್ಲಿನ ನರಸಿಂಹದೇವರನ್ನು ವಾದಿರಾಜರು ಐದು ಶ್ಲೋಕಗಳಿಂದಲೂ, ಅಲ್ಲಿರುವ ಭವನಾಶಿನೀ ನದಿಯನ್ನು ಒಂದು ಶ್ಲೋಕದಿಂದಲೂ ವರ್ಣಿಸಿರುವರು[೧].

೩. ಅಹೋಬಲವು ಹಿರಣ್ಯಕಶಿಪುವಿನ ರಾಜಧಾನಿಯಾಗಿದ್ದಿತೆಂದೂ ಇದೇ ನರಸಿಂಹಾವತಾರವಾದ ಸ್ಥಳವೆಂಬುದಾಗಿಯೂ ಸ್ಥಳಪುರಾಣದಲ್ಲಿದೆ. ಇಲ್ಲಿ ಒಂದೆಡೆ ಪ್ರಹ್ಲಾದನು ಅಕ್ಷರಾಭ್ಯಾಸ ಮಾಡಿದ ಬಂಡೆಯನ್ನೂ ತೋರಿಸುವರು.

೪. ಸಂಸಾರವೆಂಬ ಅರಣ್ಯದಲ್ಲಿ ಹೋಳೆಯುವ ಮಧ್ವಮತವೆಂಬ ಆಯುಧವನ್ನು ಧರಿಸಿ ಉನ್ಮತ್ತರಾದ ಮಾಯಾವಾದಿಗಳೆಂಬ ಆನೆಗಳನ್ನು ಮರ್ದಿಸುವ ಕಾರ್ಯದಲ್ಲಿ ತೊಡಗುವವರಿಗೆ ತಾನು ಸಹಾಯಕನಾಗಿರುವೆನು ಎಂಬುದನ್ನು ನರಸಿಂಹನು ತನ್ನ ಸಿಂಹಾಕೃತಿಯಿಂದಲೂ, ಅಂತಹ ಪುರುಷನಿಗೆ ತಾನು ಸಹಾಯ ಮಾಡಲು ಮನುಷ್ಯತ್ವವೆಂಬ ಸಮಾನಜಾತಿಯೇ ನಿಮಿತ್ತವಾಗಿದೆ ಎಂಬುದನ್ನು ನರಾಕೃತಿಯಿಂದಲೂ ಸೂಚಿಸುತ್ತಿರುವನು; ಶ್ರೀಮಧ್ವಾಚಾರ್ಯಮತಾನುವರ್ತಿಗಳಿಂದ ನಡೆಯುವ ಮಾಯಾವಾದಿಗಳನ್ನು ಜಯಿಸುವ ಕಾರ್ಯದಲ್ಲಿ ಶ್ರೀನರಸಿಂಹದೇವರು ಸದಾ ಸಹಾಯಕರಾಗಿರುವರು ಎಂದು ಭಾವ[೨].

೫. ಈ ಭಾವಕ್ಕೆ ಶ್ರೀಮದಾಚಾರ್ಯರ ಮಾಯಾವಾದಖಂಡನದ ಮಂಗಲಾಚರಣ ಶ್ಲೋಕವು ಗಮಕವಾಗಿದೆ ಎಂಬುದು [೩]ಸ್ಪಷ್ಟ

### ಭವನಾಶಿನೀ

ನೃಸಿಂಹವಿಲಸತ್ಪಾದಕುಶೇಶಯಕೃತೋತ್ಸವೇ ।
ಭವನಾಶಿನಿ ಮಚ್ಚೀರ್ಣಪಾಪಾನಾಂ ಭವ ನಾಶಿನೀ ॥ ೯ ॥

---

೧. ಆಂಧ್ರಪ್ರದೇಶದ ನಂದ್ಯಾಲ ಅಥವಾ ಕಡಪಾದಿಂದ ಅಹೋಬಲಕ್ಕೆ ನೇರವಾಗಿ ಹೋಗಬಹುದು ೩೫ ಕಿ.ಮೀ.)

೨. ಶ್ರೀಮಧ್ವಾಚಾರ್ಯಮತಾನುವರ್ತಿಭಿಃ ಕ್ರಿಯಮಾಣಮಾಯಾವಾದಿಪರಾಜಯಸ್ಯ ನರಸಿಂಹಃ ಸಹಾಯೋ ಭವತೀತಿ ಭಾವಃ ॥ -ವ್ಯಾ

೩. ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ ।
ಜಯತ್ಯಮಿತಸಜ್ಜ್ಞಾನಸುಖಶಕ್ತಿಪಯೋನಿಧಿಃ ॥ -ಮಾಯಾವಾದಖಂಡನ

ಅ: ನೃಸಿಂಹವಿಲಸತ್ಪಾದಕುಶೇಶಯಕೃತೋತ್ಸವೇ = ನರಸಿಂಹದೇವರ ಹೊಳೆಯುವ ಪಾದಕಮಲಗಳಲ್ಲಿ (ಅಭಿಷೇಕಾದಿರೂಪ) ಉತ್ಸವವನ್ನು ಮಾಡಿರುವ (ಅಥವಾ ನರಸಿಂಹದೇವರ ಪಾದಕಮಲಗಳಲ್ಲಿ ತನ್ನಲ್ಲಿನ ಕಮಲಗಳಿಂದ (ಜನರಿಂದ) ಚರಿಸಲ್ಪಡುವ ಪೂಜಾರೂಪ ಉತ್ಸವವನ್ನು ಹೊಂದಿರುವ); (ಹೇ) ಭವನಾಶಿನಿ ! = ಎಲೈ ಭವನಾಶಿನಿ(ನದಿ) ಯೇ !; (ತ್ವಂ = ನೀನು); ಮಚ್ಚೀರ್ಣಪಾಪಾನಾಂ = ನನ್ನಿಂದ ಮಾಡಲ್ಪಟ್ಟಿರುವ ಪಾಪಗಳನ್ನು; ನಾಶಿನೀ = ಪರಿಹರಿಸುವವಳಾಗಿ; ಭವ = ಆಗು.

ನರಸಿಂಹದೇವರ ಹೊಳೆಯುವ ಪಾದಕಮಲಗಳನ್ನು ತನ್ನ ಕಮಲಗಳಿಂದ ಅರ್ಚಿಸಿ ಸಂಭ್ರಮಿಸುವ ಎಲೈ ಭವನಾಶಿನಿಯೇ ! ನೀನು ನಾನು ಮಾಡಿದ ಪಾಪಗಳನ್ನು ನಾಶಮಾಡುವವಳಾಗು.

ವಿ: ೧. ಅಹೋಬಲದಲ್ಲಿರುವ ಭವನಾಶಿನೀನದಿಯು ಶ್ರೀನರಸಿಂಹದೇವರ ಪಾದಕಮಲಗಳ ಸೇವೆಗೆ ಅಭಿಷೇಕಾದಿಗಳಿಂದ ಸಾಧನವಾಗುವ ಪುಣ್ಯನದಿ; ಇಂತಹ ನದಿಯು ನಮ್ಮ ಪಾಪಗಳನ್ನು ನಾಶಪಡಿಸಲಿ ಎಂದು ಭಾವ.

೨. ಭವನಾಶಿನೀ: ಭವನಾಶಿನಿಯು ನರ್ಮದಾ, ಸಿಂಧು ನದಿಗಳಿಗೆ ಸಮಾನ; ಆದರಲ್ಲಿ ನರಸಿಂಹ ದೇವರನ್ನು ಚಿಂತಿಸಬೇಕು.

೩. 'ಭವನಾಶಿನಿ'ಯನ್ನು 'ಪಾಪಾನಾಂ ನಾಶಿನೀ ಭವ' ಎಂದು ಶ್ರೀವಾದಿರಾಜರು ಪ್ರಾರ್ಥಿಸಿರುವ ರೀತಿ ಅವರ ಅನನ್ಯ ವರ್ಣನಕೌಶಲಕ್ಕೆ ಒಂದು ಅಪೂರ್ವ ನಿದರ್ಶನ.

## ನಿವೃತ್ತಿ ಸಂಗಮ

**ನಿವೃತ್ತಿಸಂಗಮೋ ಭಾತಿ ಯತ್ರ ಮರ್ತ್ಯಮುಪಾಶ್ರಿತಾಃ ।**
**ನಿವರ್ತಂತೇಽಖಿಲಾ ದೋಷಾಃ ಸಂಯುನಕ್ತಿ ಶುಭಾವಲೀಮ್ ॥ ೧೦ ॥**

ಅ: ಯತ್ರ = ಎಲ್ಲಿ; ಮರ್ತ್ಯಂ = ಮನುಷ್ಯನನ್ನು; ಉಪಾಶ್ರಿತಾಃ = ಆಶ್ರಯಿಸಿಕೊಂಡಿರುವ; ಅಖಿಲಾಃ = ಸಕಲ; ದೋಷಾಃ = ದೋಷಗಳೂ; ನಿವರ್ತಂತೇ = ಪರಿಹಾರವಾಗುವವೋ; ಮತ್ತು (ಯಃ = ಯಾವುದು); ಮರ್ತ್ಯಂ = ಮನುಷ್ಯನಿಗೆ; ಶುಭಾವಲೀಂ = ಶುಭಸಂಚಯವನ್ನು; ಸಂಯುನಕ್ತಿ = ಒದಗಿಸಿಕೊಡುವುದೋ; (ಸಃ = ಅಂತಹ); ನಿವೃತ್ತಿಸಂಗಮಃ = ನಿವೃತ್ತಿಸಂಗಮಕ್ಷೇತ್ರವು; ಭಾತಿ = ಶೋಭಿಸುತ್ತಿದೆ.

ಮನುಷ್ಯನಲ್ಲಿ ಮನೆಮಾಡಿದ ಸಕಲದೋಷಗಳನ್ನೂ ನಿವೃತ್ತಿಗೊಳಿಸುವ, ಪುಣ್ಯ-ರಾಶಿಯ ಸಂಗಮ ಮಾಡಿಸುವ ನಿವೃತ್ತಿಸಂಗಮವು ಶೋಭಿಸುತ್ತಿದೆ.

ವಿ: ೧. [೧]ನಿವೃತ್ತಿ ಸಂಗಮವು ಕೃಷ್ಣಾ-ವೇಣೀ, ಮಲಾಪಹಾರೀ, ಭೀಮರಥೀ, ತುಂಗಾ, ಭದ್ರಾ, ಮತ್ತು ಭವನಾಶಿನೀ ಎಂಬ ಏಳು ನದಿಗಳ ಸಂಗಮರೂಪವಾದ ಪುಣ್ಯಕ್ಷೇತ್ರ.

---

೧. ಕೃಷ್ಣವೇಣೀಮಲಾಪಹಾರೀಭೀಮರಥೀತುಂಗಭದ್ರಾಭವಾನ್ಯಾಖ್ಯಸಪ್ತನದೀನಾಂಸಂಗಮೋನಿವೃತ್ತಿ-ಸಂಗಮ ಇತ್ಯುಚ್ಯತೇ । -ವ್ಯಾ

ನಿವೃತ್ತಿಸಂಗಮಕ್ಷೇತ್ರದಲ್ಲಿ ಪಾಪಗಳ ನಿವೃತ್ತಿಯೂ ಪುಣ್ಯಗಳ ಪ್ರಾಪ್ತಿಯೂ ಆಗುತ್ತದೆ ಎಂದು ಭಾವ.[೧]

೨. ನಿವೃತ್ತಿ (ಪರಿಹಾರ) ಮತ್ತು ಸಂಗಮ(ಪ್ರಾಪ್ತಿ) ಎಂಬ ಹೆಸರಿನಲ್ಲಿಯ ಪದಗಳಿಗೆ ಪಾಪನಿವೃತ್ತಿ ಮತ್ತು ಪುಣ್ಯಸಂಗಮ ಎಂಬ ಅರ್ಥವನ್ನು ತೀರ ಸಹಜ ರೀತಿಯಲ್ಲಿ ವರ್ಣಿಸುವ ಇಲ್ಲಿಯ ಕೌಶಲ ಅತ್ಯಪೂರ್ವವಾದುದು.

೩. ನಿವೃತ್ತಿಸಂಗಮವು ಪ್ರಧಾನವಾಗಿ ಕೃಷ್ಣಾ ಮತ್ತು ತುಂಗಾಭದ್ರಾನದಿಗಳು ಸಂಗಮವಾಗುವ ಸ್ಥಳ; ಇದು ಕರ್ನೂಲಿನಿಂದ ಸುಮಾರು ೩೦ ಕಿ.ಮೀ. ದೂರದಲ್ಲಿರುವ ಒಂದು ದುರ್ಗಮ ಸ್ಥಳ; ಈಗ ಶ್ರೀಶೈಲದ ಆಣೇಕಟ್ಟಿನ ನಿರ್ಮಾಣದಿಂದಾಗಿ ನದಿಯಲ್ಲಿ ಮುಳುಗಿಹೋಗಿದೆ; ಬೇಸಿಗೆಯಲ್ಲಿ ಮಾತ್ರ ಇದರ ಸ್ವಲ್ಪಭಾಗ ಗೋಚರಿಸುತ್ತದೆ. ಇದು ಶ್ರೀಉತ್ತರಾದಿಮಠದ ಶ್ರೀಸತ್ಯನಿಧಿತೀರ್ಥರ ಮೂಲಬೃಂದಾವನದ ಸ್ಥಳವೂ ಆಗಿತ್ತು; ನೀರಿನಲ್ಲಿ ನಿವೃತ್ತಿಸಂಗಮವು ಮುಳುಗುವ ಮುನ್ನ ಅಲ್ಲಿಯ ಆ ಮೂಲಬೃಂದಾವನವನ್ನು ಕರ್ನೂಲಿನ ಉತ್ತರಾದಿಮಠದ ಆವರಣದಲ್ಲಿ ಅಲ್ಲಿಯ ಸಮಗ್ರ ಅವಶೇಷಗಳ ಸಮೇತ ಶ್ರೀಉತ್ತರಾದಿಮಠಾಧೀಶರಾದ ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳಗವರು ಸ್ಥಳಾಂತರಿಸಿ ಪುನಃ ಪ್ರತಿಷ್ಠಾಪಿಸಿರುವರು.

## ತುಂಗಭದ್ರಾ (ನದೀ)

ನತೋಽಸ್ಮಿ ತುಂಗಾಂ ವಿಲಸತ್ತರಂಗಾ-
ಮಘೌಘಭಂಗಾಂ ಹರಿಪಾದಸಂಗಾಮ್ ।
ಶ್ರಿತೋಽಸ್ಮಿ ಭದ್ರಾಂ ಹೃತಪಾಪನಿದ್ರಾಂ
ವಿಮುಕ್ತಿಪದ್ಯಾಂ ವಿಮಲೈಕಸಾಧ್ಯಾಮ್ ॥ ೧೧ ॥

ಅ: ವಿಲಸತ್ತರಂಗಾಂ = ಬಹಳವಾಗಿ ಶೋಭಿಸುವ ಅಲೆಗಳಿಂದ ಕೂಡಿರುವ; ಅಘೌಘಭಂಗಾಂ = ಪಾಪಸಮೂಹವನ್ನು ಪರಿಹರಿಸುವ; ಹರಿಪಾದಸಂಗಾಂ = ಶ್ರೀಹರಿಯ ಪಾದಗಳ ಸಂಪರ್ಕವನ್ನು ಹೊಂದಿರುವ; ತುಂಗಾಂ = ತುಂಗಾ(ನದಿ)ಯನ್ನು; (ಅಹಂ) ನತಃ ಅಸ್ಮಿ = ನಾನು ನಮಸ್ಕರಿಸುವೆನು; ಹೃತಪಾಪನಿದ್ರಾಂ = ಪಾಪವೆಂಬ ನಿದ್ರೆಯನ್ನು ಪರಿಹರಿಸುವ; ವಿಮುಕ್ತಿಪದ್ಯಾಂ = ಮೋಕ್ಷಕ್ಕೆ ಮಾರ್ಗವಾಗಿರುವ; ವಿಮಲೈಕಸಾಧ್ಯಾಂ = ನಿರ್ಮಲಾಂತಃಕರಣರಾದ ಜನರಿಗೆ ಮಾತ್ರ ದೊರೆಯುವ; ಭದ್ರಾಂ = ಭದ್ರಾ(ನದಿ)ಯನ್ನು; (ಅಹಂ) ಶ್ರಿತಃ ಅಸ್ಮಿ = ನಾನು ಆಶ್ರಯಿಸುವೆನು.

---

೧. ತಸ್ಯ ಸಕಲದೋಷನಿವರ್ತಕತ್ವಾತ್ ಶುಭಸಂಗಮಯಿತೃತ್ವಾಚ್ಚ ನಿವೃತ್ತಿಸಂಗಮತ್ವಮಿತಿ ಭಾವಃ।

- ವ್ಯಾಖ್ಯಾನ

ಕಂಗೊಳಿಸುವ ಅಲೆಗಳಿಂದ ಕೂಡಿರುವ, ಪಾಪಸಮೂಹ ತರಿಯುವ, ಶ್ರೀಹರಿಯ ಪಾದಗಳ ಸಂಪರ್ಕ ಹೊಂದಿರುವ, ತುಂಗೆಯನ್ನು ನಾನು ನಮಸ್ಕರಿಸುವೆನು. ಪಾಪವೆಂಬ ನಿದ್ರೆಯನ್ನು ಪರಿಹರಿಸುವ, ಮೋಕ್ಷಕ್ಕೆ ಮಾರ್ಗವಾಗಿರುವ, ಶುದ್ಧ-ಮನಸ್ಸಿನವರಿಗೆ ಮಾತ್ರ ಲಭಿಸುವ, ಭದ್ರಾನದಿಯನ್ನು ನಾನು ಆಶ್ರಯಿಸುವೆನು.

ವಿ: ೧. ತುಂಗಾ ಮತ್ತು ಭದ್ರಾ ನದಿಗಳು ಒಟ್ಟಾಗಿ ತುಂಗಭದ್ರಾ ನದಿಯಾಗಿದೆ. ಹೀಗೆ ಒಟ್ಟಾಗಿರುವ ಎರಡು ನದಿಗಳನ್ನು ಒಂದೇ ಶ್ಲೋಕದಲ್ಲಿ ಒಟ್ಟಾಗಿ ಸ್ತುತಿಸಿರುವರು; ಪೂರ್ವಾರ್ಧವು ತುಂಗಾಸ್ತುತಿಯೂ, ಉತ್ತರಾರ್ಧವು ಭದ್ರಾಸ್ತುತಿಯೂ ಆಗಿದೆ.

೨. ಅನುಪ್ರಾಸಾಲಂಕಾರದಿಂದ ತುಂಬಿರುವ ಈ ತುಂಗಭದ್ರಾಸ್ತೋತ್ರವು ಶ್ರೀವಾದಿರಾಜ ವಾಗ್ಗಂಗಾಪ್ರವಾಹವೇ ಸರಿ.

**ತಟಿನೀಷು ತುಂಗಭದ್ರೇ ಸ್ವಾದೂದಕ-**
**ಸಂಕುಲಾ ತ್ವಮಸಿ ನೂನಮ್ ।**
**ಕಸ್ಮಾತ್ ತೀರ್ಥಪದೋಽಸೌ ಧತ್ತೇ**
**ತ್ವಾಮೇವ ದಂಷ್ಟ್ರಯೋರ್ನೋ ಚೇತ್॥೧೨॥**

ಅ: (ಹೇ) ತುಂಗಭದ್ರೇ = ಎಲೈ ತುಂಗಭದ್ರಾನದಿಯೇ !; ತ್ವಂ = ನೀನು; **ತಟಿನೀಷು** = ನದಿಗಳ ಮಧ್ಯದಲ್ಲಿ; **ಸ್ವಾದೂದಕಸಂಕುಲಾ** = ಸವಿಯಾದ ಜಲವನ್ನು ಹೊಂದಿರುವವಳಾಗಿ; ಅಸಿ = ಇರುವಿ; **ನೂನಂ** = ಇದು ನಿಶ್ಚಯ; **ನೋ ಚೇತ್** = ಇಲ್ಲವಾಗಿದ್ದಲ್ಲಿ; **ತೀರ್ಥಪದಃ** = [1]'ತೀರ್ಥಪಾದ'ನಾದ ಶ್ರೀವರಾಹರೂಪೀ; **ಅಸೌ** = ಈ ವಿಷ್ಣುವು; **ತ್ವಾಮೇವ** = (ಇತರ ನದಿಗಳನ್ನು ಬಿಟ್ಟು) ನಿನ್ನನ್ನೇ; **ದಂಷ್ಟ್ರಯೋಃ** =ಕೋರೆಗಳಲ್ಲಿ; **ಕಸ್ಮಾತ್** = ಏತಕ್ಕೋಸ್ಕರ; **ಧತ್ತೇ** =ಧರಿಸುತ್ತಿದ್ದನು? (ಉತ್ಪ್ರೇಕ್ಷಾಲಂಕಾರಃ)

ತುಂಗಭದ್ರೆ ! ನದಿಗಳ ಮಧ್ಯದಲ್ಲಿ ಸವಿಯಾದ ಜಲ ನಿನ್ನದು ಎಂಬುದು ನಿಶ್ಚಿತ; ಇಲ್ಲವಾಗಿದ್ದಲ್ಲಿ 'ತೀರ್ಥಪಾದ'ನಾದ ಶ್ರೀವರಾಹರೂಪೀ ಶ್ರೀಹರಿಯು ಇತರ ನದಿಗಳನ್ನು ಬಿಟ್ಟು ನಿನ್ನನ್ನೇ ಕೋರೆಗಳಲ್ಲಿ ಏತಕ್ಕೋಸ್ಕರ ಧರಿಸುತ್ತಿದ್ದ?

ವಿ: ೧. ತುಂಗಭದ್ರಾನದಿಯು ನದಿಗಳಲ್ಲೆಲ್ಲ ಅತ್ಯಂತ ಸವಿಯಾದ ಜಲವನ್ನು ಹೊಂದಿರುವ ನದಿ; 'ಗಂಗಾಸ್ನಾನ ತುಂಗಾಪಾನ' ಎಂಬ ಮಾತು ಇದಕ್ಕೆ ಪೋಷಕವಾಗಿದೆ; ತುಂಗೆಯ ಜಲ ತುಂಬಾ ಸವಿ ಎಂಬುದು ಅದನ್ನು ಶ್ರೀವರಾಹರೂಪಿ ಶ್ರೀಹರಿಯು ದಂತಗಳಿಂದ ಧರಿಸಿರು-ವುದರಿಂದಲೇ ತಿಳಿಯುತ್ತದೆ; ವರಾಹರೂಪೀ ಶ್ರೀಹರಿಯ ದಂತಗಳಿಂದ ತುಂಗಾ, ಭದ್ರಾ ನದಿಗಳು ಹುಟ್ಟಿವೆ ಎಂಬ ವಿವರದ ಹಿನ್ನೆಲೆಯಲ್ಲಿ ಅದನ್ನು ಶ್ರೀವಾದಿರಾಜರು ಹೀಗೆ [2]ಉತ್ಪ್ರೇಕ್ಷಿಸಿರುವರು.

---

೧. ಪುಣ್ಯಶ್ಲೋಕಃ ತೀರ್ಥಪಾದಃ... – ಕೃಷ್ಣಾಷ್ಟೋತ್ತರಶತನಾಮಸ್ತೋತ್ರ
೨. ಮಾಧುರ್ಯಾಸ್ವಾದನವ್ಯತಿರೇಕಣ ದಂಷ್ಟ್ರಯೋರ್ಧಾರಣೇ ಪ್ರಯೋಜನಾಭಾವಾದಿತಿ ಭಾವಃ ।

೨. 'ತೀರ್ಥಪಾದ' ನಾದ ಶ್ರೀಹರಿಯ ದಂತೋದ್ಭವೆ ಎಂಬುದೇ ಈ ನದಿಯ ಸವಿಗೆ ಸಾಕ್ಷಿ ಎಂದರ್ಥ.

೩. ತುಂಗಾ ಮತ್ತು ಭದ್ರಾ ಎಂಬ ಎರಡು ನದಿಗಳು ಸಹ್ಯಾದ್ರಿಯ ವರಾಹ ಪರ್ವತದ ಶೃಂಗಗಳಿಂದ ಹುಟ್ಟುವ ಅವಳಿ ನದಿಗಳು; ಇವು ಶಿವಮೊಗ್ಗ ಜಿಲ್ಲೆಯ (ಶ್ರೀ ಉತ್ತರಾಧಿಮಠದ ಸತ್ಯಧರ್ಮತೀರ್ಥರ ಮೂಲಬೃಂದಾವನವಿರುವ ಹೊಳೆಹೊನ್ನೂರಿನಿಂದ ಎರಡು ಕಿ.ಮೀ. ದೂರದಲ್ಲಿರುವ) 'ಕೂಡ್ಲಿ' ಎಂಬ ಸ್ಥಳದಲ್ಲಿ ಸಂಗಮವಾಗಿ 'ತುಂಗಭದ್ರಾ' ಎಂದು ಹೆಸರು ಪಡೆದಿವೆ. ಹಂಪೆಯ ಬಳಿ ಬಂದ ಶ್ರೀವಾದಿರಾಜರು ಅಲ್ಲಿಯ ತುಂಗಭದ್ರೆಯನ್ನು ಎರಡು ಶ್ಲೋಕಗಳಿಂದ ಹೀಗೆ ವರ್ಣಿಸಿರುವರು. ಈ ನದಿಯು ಮುಂದೆ ನಿವೃತ್ತಿಸಂಗಮದ ಬಳಿ ಕೃಷ್ಣಾನದಿಯನ್ನು ಸೇರುವುದು.

೪. ಸಾವಿರಜನರು ಪ್ರಯತ್ನಿಸಿ ವಿಫಲರಾಗಿದ್ದ ದೊಡ್ಡ ಬಂಡೆಯನ್ನು ಶ್ರೀಮಧ್ವಾಚಾರ್ಯರು ತಮ್ಮ ಒಂದೇ ಹಸ್ತದಿಂದ ಎತ್ತಿ ಸೇತುವೆಯಂತೆ ಈ ಭದ್ರಾನದಿಗೆ ಅಡ್ಡವಾಗಿ ಇಟ್ಟಿರುವ ಪ್ರಸಂಗವು ಸುಮಧ್ವವಿಜಯದಲ್ಲಿ ನಿರೂಪಿತವಾಗಿದೆ.[೧] ಚಿಕ್ಕಮಗಳೂರು ಜಿಲ್ಲೆಯ ಬಾಳೆಹೊನ್ನೂರಿನ ಬಳಿ ಕಳಸ ಎಂಬ ಗ್ರಾಮದ ಅಂಬುತೀರ್ಥ ಎಂಬಲ್ಲಿರುವ ಈ ಬಂಡೆಯ ಮೇಲೆ ಇಂದೂ 'ಶ್ರೀಮಧ್ವಾಚಾರ್ಯೈರೇಕಹಸ್ತೇನ ಆನೀಯ ಸ್ಥಾಪಿತಾ ಶಿಲಾ' ಎಂಬ ಶಾಸನವೂ, ಶ್ರೀಮಧ್ವಾಚಾರ್ಯರ ನಿಂತಭಂಗಿಯ ಒಂದು ರೇಖಾಚಿತ್ರವೂ, ದಂಡಕಮಂಡಲುಗಳ ಚಿತ್ರವೂ ಇದೆ.(ಚಿಕ್ಕಮಗಳೂರು ಜಿಲ್ಲಾಶಾಸನ ನಂ.೮೨) ಈ ಬಂಡೆಯ ಗಾತ್ರ ೨೦ x ೧೬ x ೧೦ ಮತ್ತು ತೂಕ ೫೦ ಟನ್ನುಗಳು.

೫. ತುಂಗಭದ್ರಾನದಿಯ[೨] ತೀರದಲ್ಲಿ ಅನೇಕ ಪುಣ್ಯಕ್ಷೇತ್ರಗಳಿವೆ; ಸುಪ್ರಸಿದ್ಧ ವೈಷ್ಣವ ಶಿರೋಮಣಿಗಳಾದ ಶ್ರೀರಾಘವೇಂದ್ರಸ್ವಾಮಿಗಳ ಬೃಂದಾವನವಿರುವ ಮಂತ್ರಾಲಯವು ಈ ತುಂಗಭದ್ರಾತೀರದ ಪವಿತ್ರಸ್ಥಳಗಳಲ್ಲೊಂದು.

## ಶ್ರೀವಿಠಲ(ಹಂಪೆ)

**ಚೌರ್ಯಾನ್ಮಾತೃನಿಬದ್ಧಚಾರುಚರಣಃ ಪಾಪೌಘಚೌರ್ಯಾದ್ಬುಧೈಃ**
**ಬದ್ಧಸ್ತ್ವಂ ಪಥಿ ಪುಂಡರೀಕಮುನಿನಾ ಜಾರೇತಿ ಸಂಬೋಧಿತಃ।**

---

ವರಾಹದಂಷ್ಟ್ರಯೋರುತ್ಪನ್ನತ್ವಾತ್ತುಂಗಭದ್ರಾಯಾ ಇಯಮುತ್ಪ್ರೇಕ್ಷಾ। -ವ್ಯಾ

೧. ನಿನ್ಯೇ ತಾಂ ಗಿರಿಮಿವ ವಾನರೀಕೃತಾತ್ಮಾ ಲೀಲಾವತ್ಕರಮಲೇನ ಸೋಽಮಲೇನ।
ತತ್ರಾಪಿ ನ್ಯಧಿತ ತಯಾಽಸ್ಯ ಸೂಚ್ಯತೇಽಲಂ ತತ್ತುಂಗಾಂ ನನು ನಿಕಷಾಽಧುನಾಽಪಿ ಕರ್ಮ॥
– ಸುಮಧ್ವವಿಜಯ(೧೬/೯)

೨. ಶ್ರೀವಾದಿರಾಜರು ತುಂಗಾನದಿಯನ್ನು ತಮ್ಮ ಸರಸಭಾರತೀವಿಲಾಸ ಗ್ರಂಥದಲ್ಲೂ ವರ್ಣಿಸಿರುವರು.(೨/೪೮):
ತುಂಗೇ ತುರಂಗವದನೋತ್ತುಂಗದಂಷ್ಟ್ರಾಸಮುದ್ಭವೇ।
ತಂ ಗೇಯಂ ಕವಿಭಿರ್ಮೇಽಂತರಂಗೇ ಸಾಂಗಂ ಸ್ಥಿರೀ ಕುರು॥

**ತುಂಗಾತೀರಗತೋಽಸಿ ವಿಟ್ಠಲ ದಿಶನ್ನನ್ಯಾಕೃತಿರ್ವಾಂಛಿತಂ**
**ವೇತ್ತೄಣಾಂ ಯದಿ ಮೇ ನ ದಾಸ್ಯಸಿ ಪದಂ ತ್ವತ್ಸಂಸ್ಥಿತಿಃ ಕಥ್ಯತೇ ॥ ೧೩ ॥**

ಅ: (ಹೇ) [1]ವಿಠಲ = (ಎಲೈ) ವಿಠಲನೇ; **ಚೌರ್ಯಾತ್** = (ನವನೀತಾದಿಗಳ) ಕಳ್ಳತನದ ದೆಸೆಯಿಂದ; **ಮಾತೃನಿಬದ್ಧಚಾರುಚರಣಃ** = ತಾಯಿಯಾದ ಯಶೋದೆಯಿಂದ ಕಟ್ಟಲ್ಪಟ್ಟ ಮನೋಹರ ಚರಣನಾದೆ; (ಪಶ್ಚಾತ್ ಬುಧಹೃದಯಗುಹಾಂ ಪ್ರವಿಷ್ಟಃ, ತತ್ರಾಪಿ = ಜ್ಞಾನಿಗಳ ಹೃದಯಗುಹೆಯನ್ನು ಪ್ರವೇಶಿಸಿದ ನೀನು, ಅಲ್ಲೂ); **ಪಾಪೌಘಚೌರ್ಯಾತ್** = ಪಾಪಸಮೂಹದ [2]ಕಳ್ಳತನದಿಂದಾಗಿ; **ಬುಧೈಃ** = ಆ ಜ್ಞಾನಿಗಳಿಂದಲೂ; **ಬದ್ಧಃ** = (ಭಕ್ತಿಪಾಶದಿಂದ) ಕಟ್ಟಲ್ಪಟ್ಟವನಾದೆ; **ತ್ವಂ** = ನೀನು;(ಹೀಗೆ ಉಭಯತ್ರ ಚೌರ್ಯನಿಮಿತ್ತ ಬಂಧನವೊದಗಿದ್ದನ್ನು ಕಂಡು, ಬೇರೆಡೆ ಹೊರಟಾಗ); **ಪಥಿ** = ದಾರಿಯಲ್ಲಿ; (ಭೀಮರಥೀತೀರದಲ್ಲಿ); **ಪುಂಡರೀಕಮುನಿನಾ** = ಪುಂಡರೀಕಮುನಿಯಿಂದ, **ಜ್ಞಾರ ಇತಿ** = ಎಲೈ (ಗೋಪೀಜನ)ಜಾರನೇ ! ಎಂದು; **ಸಂಬೋಧಿತಃ** = ಸಂಬೋಧಿತನಾದೆ; [3]**ಅನ್ಯಾಕೃತಿಃ** = (ನನ್ನ ಜಾರತ್ವವು ಇವನಿಗೆ ತಿಳಿಯಿತೆಂದು) ಮತ್ತೊಂದು ವೇಷವನ್ನು ಧರಿಸಿದವನಾಗಿ (ನೀನು); **ವೇತ್ತೄಣಾಂ** = ನಿನ್ನ ಚೋರತ್ವ ಜಾರತ್ವಗಳನ್ನು ತಿಳಿದವನಿಗೆ; **ವಾಂಛಿತಂ** = ಅವರ ಅಭೀಷ್ಟವನ್ನು; **ದಿಶನ್** = (ತನ್ನ ದೋಷವನ್ನು ಅನ್ಯತ್ರ ಹೇಳಿಯಾರು ಎಂಬ ಭಯದಿಂದಲೋ ಎಂಬಂತೆ) ಕೊಡುತ್ತ; [4]**ತುಂಗಾತೀರಗತೋಽಸಿ** = (ಆ ಪುಂಡರೀಕ ಕ್ಷೇತ್ರದಿಂದ) ಈ ತುಂಗಾತೀರಕ್ಕೆ ಬಂದಿರುವಿ ; (ಎಲೈ ವಿಠಲನೇ !); **ಯದಿ ಮೇ ವಾಂಛಿತಂ**

---

೧. 'ವಿಠಲ' ಶಬ್ದವನ್ನು ವೈಷ್ಣವಸಾಹಿತ್ಯದಲ್ಲಿ ಪ್ರಥಮಬಾರಿಗೆ ಗ್ರಂಥಸ್ಥವಾಗಿ ಪ್ರಯೋಗಿಸಿದ ಹಿರಿಮೆ ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರಲ್ಲೊಬ್ಬರಾದ ಶ್ರೀಹೃಷೀಕೇಶತೀರ್ಥರದು; ಅವರ 'ಸಂಪ್ರದಾಯಪದ್ಧತಿ' ಕೃತಿಯಲ್ಲಿ 'ಶ್ರೀವಿಠಲಂ' ಎಂಬುದಾಗಿ ಶ್ಲೋ.೧೬ ಮತ್ತು ೧೭ರಲ್ಲಿ ಎರಡು ಬಾರಿ ಬಂದಿದೆ.

'ವಿದಾ ಜ್ಞಾನೇನ ತಾನ್ ಶೂನ್ಯಾನ್ ಲಾತಿ ಗೃಹ್ಣಾತಿ ಯಃ ಸ್ವಯಮ್ ।
ಅಜ್ಞಾನುಗ್ರಹಕೃದ್ದೇವೋ ವಿಠಲಃ ಕಥ್ಯತೇ ಬುಧೈಃ ॥'

- ಎಂದು 'ವಿಠಲ' ಶಬ್ದದ ಅರ್ಥ(ವಿವರಗಳಿಗೆ ನನ್ನಿಂದ ಸಂಪಾದಿತವಾಗಿರುವ ಶ್ರೀಮಾಧ್ವರಾದ್ಧಾಂತ ಸಂವರ್ಧಕಸಭಾ ಉಡುಪಿಯಿಂದ ಪ್ರಕಾಶಿತವಾಗಿರುವ ತೀರ್ಥಪ್ರಬಂಧಃ-ಸವ್ಯಾಖ್ಯಾನ ಸಂಸ್ಕೃತ ಆವೃತ್ತಿಪುಟ ೭೦-೭೧ ನೋಡಿರಿ.)

೨. ನವನೀತಚೌರ್ಯಾದಿಕರ್ಮಸ್ಮರಣೇನ ಸಕಲದುರಿತಕ್ಷಯೇ ಸತಿ ನಿರ್ಮಲಾಂತಃಕರಣೈರ್ಜ್ಞಾನಿಭಿಃ ಸ್ವಹೃದಯೇ ಭಕ್ತಿಪಾಶೇನ ಸ್ಥಾಪಿತ ಇತ್ಯರ್ಥಃ । - ವ್ಯಾ

೩. ಇಲ್ಲಿಯ ವಿಠಲನನ್ನು 'ಅನ್ಯಾಕೃತಿ' ಎಂದು ಕರೆದಿರುವುದರಿಂದ ಇಲ್ಲಿಯ ವಿಗ್ರಹವು ಪಂಢರಪುರದ ವಿಠಲ ಮೊದಲಾದ ವಿಗ್ರಹಗಳಿಗಿಂತ ಆಕೃತಿಯಲ್ಲಿ ತುಸು ಭಿನ್ನ ಎಂಬ ಸೂಚನೆಯನ್ನು ಕಾಣಬಹುದು.

೪. ಯಥಾ ಕಶ್ಚಿತ್ ಸ್ವದೇಶಸ್ಥಃ ಸ್ವಕೃತಚೌರ್ಯಾದಿಕೇ ಜ್ಞಾತೇ ಸತಿ ತತಃ ಪಲಾಯನ್ ಸ್ವಚ್ಛಿದ್ರವೇತ್ತೄಣಾಂ ಕಿಂಚಿತ್ ಕಿಂಚಿತ್ ವಾಂಛಿತಂ ಪ್ರಯಚ್ಛನ್ ಸ್ವದೋಷಗೂಹನಾಯಾಜ್ಞಾತಚರಂ ದೇಶಂ ಗಚ್ಛತಿ । ತದ್ವದಯಮಪಿ ಉತ್ತರದೇಶೇ ಜ್ಞಾತಚೇಷ್ಟಃ ದಕ್ಷಿಣದೇಶೇ ಆಗತ್ಯ ತಿಷ್ಠತೀತಿ ಭಾವಃ । - ವ್ಯಾ

ಪದಂ = ನೀನೇನಾದರೂ ನನಗೆ ಅಪೇಕ್ಷಿತವಾದ ಮೋಕ್ಷವನ್ನು; ನ ದಾಸ್ಯಸಿ = ಕೊಡದೇ ಹೋದಲ್ಲಿ; ತ್ವತ್ಸಂಸ್ಥಿತಿಃ = ನಿನ್ನ (ಜಾರತ್ವ, ಚೋರತ್ವ ರೂಪವಾದ) ವಾರ್ತೆಯು; ಕಥ್ಯತೇ = ನನ್ನಿಂದ ಹೇಳಲ್ಪಡುವುದು (ವಿಷಮಾಲಂಕಾರ).

ಎಲೈ ವಿಠಲ ! ಕದ್ದದ್ದರಿಂದಾಗಿ ತಾಯಿ ಯಶೋದೆ ನಿನ್ನ ಕಾಲುಗಳನ್ನು ಬಿಗಿದಳು. ಆಗ ನೀನು ಜ್ಞಾನಿಗಳ ಹೃದಯಗುಹೆಯನ್ನು ಹೊಕ್ಕೆ; ಅಲ್ಲೂ ನೀನು ಪಾಪರಾಶಿಯನ್ನು ಕದ್ದದ್ದರಿಂದ ಅವರೂ ನಿನ್ನನ್ನು ಭಕ್ತಿಪಾಶದಿಂದ ಬಿಗಿದರು. ಆಗ ನೀನು ಬೇರೆಡೆಗೆ ಸಾಗಿದಾಗ ದಾರಿಯಲ್ಲಿ ಪುಂಡರೀಕಮುನಿ ನಿನ್ನನ್ನು 'ಗೋಪೀಜನಜಾರ' ಎಂದು ಕರೆದ; ಆಗ ನೀನು ನಿನ್ನ ಗುರುತು ಸಿಗದಿರಲಿ ಎಂದು ವೇಷಾಂತರದಿಂದ ಈ ತುಂಗಾತೀರಕ್ಕೆ ಬಂದೆ. ನಿನ್ನ ಜಾರತ್ವ, ಚೋರತ್ವವನ್ನು ತಿಳಿದವರಿಗೆ ಅವರು ಕೇಳಿದ್ದನ್ನು ಕೊಡುತ್ತಾ ಇಲ್ಲಿ ನೆಲೆಸಿರುವೆ; ನಾನು ಬಯಸುವ ಮೋಕ್ಷವನ್ನು ನೀಡದಿದ್ದಲ್ಲಿ ನಿನ್ನ ಇರವನ್ನು ನಾನು ಸಾರಿಬಿಡುವೆನು.

ವಿ: ೧. ಇದು ವಿಜಯನಗರವೆಂದು ಸುಪ್ರಸಿದ್ಧವಾಗಿದ್ದ ಹಂಪೆಯಲ್ಲಿನ ವಿಜಯವಿಠಲ-ಮೂರ್ತಿಯ ವರ್ಣನೆ; ವಿಜಯನಗರದ ಅರಸರ ರಾಜಧಾನಿಯಾಗಿದ್ದ ಹಂಪೆಯು ಇತ್ತೀಚಿನ ಶತಕಗಳಲ್ಲೇ ಅತ್ಯಂತ ಮಹತ್ತ್ವವನ್ನು ಹೊಂದಿದ ಪ್ರಮುಖ ಪಟ್ಟಣ. ಕೃಷ್ಣದೇವರಾಯನಂತಹ ಅರಸನಿಂದಾಗಿ ರಾಜಕೀಯವಾಗಿ ವಿಶ್ವಖ್ಯಾತಿಯನ್ನು ಗಳಿಸಿದ್ದ ಈ ಪಟ್ಟಣವು, ಶ್ರೀವ್ಯಾಸರಾಜ-ರಂತಹ ವೈಷ್ಣವಯತಿಶೇಖರರಿಂದಾಗಿ ಶ್ರೀಪುರಂದರದಾಸರಂತಹ ಹರಿದಾಸಶೇಖರರಿಂದಾಗಿ ಅಸಾಮಾನ್ಯ ಆಧ್ಯಾತ್ಮಿಕ ಮಹತ್ತ್ವವನ್ನು ಹೊಂದಿದೆ. ಇದು ಇಂದಿಗೂ ಇಲ್ಲಿರುವ ವ್ಯಾಸರಾಜ ಮಂಟಪ, ಚಕ್ರತೀರ್ಥಸಮೀಪದ ಶ್ರೀವ್ಯಾಸರಾಜಪ್ರತಿಷ್ಠಿತ ಯಂತ್ರೋದ್ಧಾರ ಪ್ರಾಣದೇವರು, ಶ್ರೀಪುರಂದರದಾಸರ ಮಂಟಪ, ಶ್ರೀನರಹರಿತೀರ್ಥರ ಮೂಲಬೃಂದಾವನಗಳಿಂದಾಗಿ ವೈಷ್ಣವರ ಪ್ರಸಿದ್ಧ ಯಾತ್ರಾಸ್ಥಳವಾಗಿದೆ;

೨. ವಿಜಯನಗರದ ಅರಸರು ಮೂಲತಃ ಶ್ರೀಮಧ್ವಾಚಾರ್ಯರ ಶಿಷ್ಯವರ್ಗಕ್ಕೆ ಸೇರಿದವರು ಎನ್ನಲು ಪ್ರಬಲ ಆಧಾರಗಳಿವೆ. ಇಲ್ಲಿಯ ಉಗ್ರನರಸಿಂಹ, ವಿಠಲಮಂದಿರ, ಕೋದಂಡ-ರಾಮಮಂದಿರ, ವಿರೂಪಾಕ್ಷ ಮಂದಿರ, ಹಜಾರರಾಮದೇವಸ್ಥಾನ ಮೊದಲಾದವುಗಳ ಅಪಾರ ಶಿಲ್ಪವೈಭವದಿಂದಾಗಿ ಹಂಪೆಯು ಜಗತ್ತಿನ ಗಮನ ಸೆಳೆಯುವ ಪ್ರವಾಸಿ ಕೇಂದ್ರವೂ ಆಗಿದೆ.

೩. ಇಲ್ಲಿಯ ವಿಜಯಮಂದಿರದಲ್ಲಿ ವಿಠಲಮೂರ್ತಿಯನ್ನು ಶ್ರೀಕೃಷ್ಣದೇವರಾಯನು ತನ್ನ ಉದಯಗಿರಿ ವಿಜಯದ ಕುರುಹಾಗಿ ಸ್ಥಾಪಿಸಿದ್ದನೆಂದೂ, ವಿಜಯನಗರದ ಪತನದ ಅನಂತರ ಮಂದಿರವು ಭಗ್ನವಾಯಿತೆಂದೂ, ಮೂರ್ತಿಯು ಮರೆಯಾಯಿತೆಂದೂ ಐತಿಹ್ಯ ಉಂಟು.

---

೧. ಅಹಮಪ್ಯಭೀಷ್ಟಮೋಕ್ಷದಾನಪರ್ಯಂತಂ ಜಾರೋಽಸಿ ಚೋರೋಽಸಿ ಇತಿ ತ್ವತ್ಕಥಾಮೇವ ಕಥಯಾಮಿ । ಮೋಕ್ಷೇ ದತ್ತೇ ಪುನರತ್ರ ಸಂಚಾರಾಭಾವಾತ್ ನಾತ್ರ ಕಥಯಾಮೀತಿ ಭಾವಃ । ಗೋಪೀಜನಜಾರನವನೀತಚೋರೇಽತಿ ವದತಾಂ ಶ್ರೀವಿಠಲೋ ವಾಂಛಿತಂ ದದಾತೀತಿ ಸಮಗ್ರಶ್ಲೋಕಸ್ಯ ಭಾವಃ । - ವ್ಯಾ

೨. ''ಮತ್ತೊಂದು ಅಪೂರ್ವ ದಾಖಲೆ'' (ತತ್ತ್ವವಾದ ಮಾಸಪತ್ರಿಕೆ ೧೯೮೨)ಎಂಬ ನನ್ನ ಲೇಖನವನ್ನು ನೋಡಿ.

೪. ಶ್ರೀವಾದಿರಾಜರು ತಾವು ಸಂದರ್ಶಿಸಿದಾಗ ಅಲ್ಲಿಯೇ ಇದ್ದ ವಿಠಲಮೂರ್ತಿಯನ್ನು ಈ ಶ್ಲೋಕದಲ್ಲಿ ಅಪೂರ್ವರೀತಿಯಲ್ಲಿ ವರ್ಣಿಸಿರುವರು.

೫. ಮೂಲತಃ ಶ್ರೀಕೃಷ್ಣನೇ ಇಲ್ಲಿಯ ವಿಜಯವಿಠಲ; ನವನೀತಚೋರನೆಂದು ಇವನ ಚರಣಗಳನ್ನು ಮೊದಲು ಕಟ್ಟಿಹಾಕಿದವಳು ಯಶೋದೆ; ಆದ್ದರಿಂದ ಬೇಸತ್ತ ಶ್ರೀಕೃಷ್ಣನು ಜ್ಞಾನಿಗಳ ಹೃದಯಗುಹೆಯನ್ನು ಪ್ರವೇಶಿಸಲು, ಅಲ್ಲಿಯೂ ಅವನನ್ನು ಜ್ಞಾನಿಗಳು 'ಇವನು ನಮ್ಮ ಪಾಪವನ್ನೆಲ್ಲ ಕದ್ದವನು'[೧] ಎಂದು ಬಲವಾಗಿ ಕಟ್ಟಿಹಾಕಿದರು; ಅಲ್ಲಿಂದ ಅವನು ದಕ್ಷಿಣ ಭಾರತದತ್ತ ಬರುವಾಗ, ಪುಂಡರೀಕಮುನಿಯು ಭೀಮರಥಿತೀರದ (ಪಂಢರಪುರದ) ಲ್ಲಿ ಇವನನ್ನು ಗೋಪೀಜನಜಾರನಾದ ಶ್ರೀಕೃಷ್ಣ ಎಂದು ಗುರುತಿಸಿಬಿಟ್ಟನು. ಹೀಗೆ ತನ್ನ ಚೋರತ್ವ ಜಾರತ್ವಗಳನ್ನು ತಿಳಿದ ಅವರಿಗೆಲ್ಲ ಕೇಳಿದ್ದನ್ನೆಲ್ಲ ಕೊಟ್ಟು ಈಗ ತುಂಗಭದ್ರಾತೀರಕ್ಕೆ ಬಂದಿರುವ ಇಂತಹ ನಿನ್ನನ್ನು ನಾನೀಗ ಗುರುತಿಸಿರುವೆನು; ನೀನೀಗ ನನಗೆ ಇಷ್ಟವಾದ ಮೋಕ್ಷವನ್ನು ಕೊಡು; ಇಲ್ಲವಾದಲ್ಲಿ ನಿನ್ನ ಚೋರತ್ವಜಾರತ್ವರೂಪ ಇತಿಹಾಸವನ್ನೆಲ್ಲ ತಿಳಿಸಿ ನೀನಾರು ಎಂದು ಎಲ್ಲರ ಮುಂದೆ ಹೇಳಿ ಬಿಡುವೆನು ಎಂದು ಈ ಶ್ಲೋಕದ ಅಭಿಪ್ರಾಯ.

೬. ಚೋರತ್ವ, ಜಾರತ್ವವನ್ನು ಮಾಡಿದವರು ತನ್ನನ್ನು ಗುರುತಿಸಿದವರಿಗೆಲ್ಲ ಅವರು ಕೇಳಿದ್ದನ್ನು ಕೊಟ್ಟು ಮುಂದೆ ಹೋಗುವಂತೆ ಶ್ರೀಕೃಷ್ಣನು ತನ್ನ ಭಜಕರಿಗೆ ಇಷ್ಟಾರ್ಥ-ಪ್ರದನಾಗಿರುವನೆಂದು ಭಾವ.

೭. ಚೋರತ್ವ ಜಾರತ್ವಾದಿಗಳು ಮೂಲತಃ ಶ್ರೀಕೃಷ್ಣನಿಗೆ ಭೂಷಣವಾದ ಗುಣಗಳೇ ಹೊರತು ದೋಷಗಳಲ್ಲ ಎಂಬ ಶಾಸ್ತ್ರ ತತ್ತ್ವವನ್ನು ಅತ್ಯಂತ ಚಮತ್ಕಾರದಿಂದ ಬಣ್ಣಿಸುವ ಈ ಶ್ಲೋಕಕ್ಕೆ ಸ್ವತಃ ಶ್ರೀವಾದಿರಾಜರೇ ತಿಳಿಸಿರುವ ಅನೇಕ ಅರ್ಥಗಳಿದ್ದು ಅವನ್ನೆಲ್ಲ ಗ್ರಂಥಗೌರವ ಭಯದಿಂದ ತಾವು ಬರೆಯುತ್ತಿಲ್ಲ ಎಂದು ವ್ಯಾಖ್ಯಾನಕಾರರು ಬರೆದಿರುವರು (**ಅಸ್ಮಿನ್ ಪದ್ಯೇ ಗುರುಭಿರುಕ್ತೋ ಭಾವೋ ಭೂಯಾಂಸ್ತಿಷ್ಠತಿ । ಗ್ರಂಥಗೌರವಭಯಾನ್ಮಯಾ ನ ಲಿಖ್ಯತೇ ॥**)

## ವಿರೂಪಾಕ್ಷ (ಹಂಪೆ)

**ಪಂಪಾಧ್ಯಕ್ಷೋ ವಿರೂಪಾಕ್ಷಃ ಸಂಪದೇ ಸ್ಯಾತ್ ಸತಾಂ ಸದಾ ।**
**ಯೋ ಹೇಮಗಿರಿಸೀಮಾಯಾಂ ರಾಜತೇ ರಾಜಶೇಖರಃ ॥ ೧೪ ॥**

**ಅ:** **ಪಂಪಾಧ್ಯಕ್ಷಃ** = ಪಂಪಾಕ್ಷೇತ್ರಕ್ಕೆ ಅಧಿಪತಿಯಾದ; **ವಿರೂಪಾಕ್ಷಃ** = ಈಶ್ವರನು; **ಸದಾ** = ಸರ್ವದಾ; **ಸತಾಂ** = ಸಜ್ಜನರಿಗೆ; **ಸಂಪದೇ** = ಸಂಪತ್ತಿಗೆ ಕಾರಣನಾಗಿ; **ಸ್ಯಾತ್** =

---

೧. ನಾರಾಯಣೋ ನಾಮ ನರೋಣಾಂ ಪ್ರಸಿದ್ಧಚೋರಃ ಕಥಿತಸ್ತ್ರಿಲೋಕ್ಯಾಮ್ ।
ಅನೇಕ ಜನ್ಮಾರ್ಜಿತಪಾಪಸಂಚಯಂ ಹರತ್ಯಶೇಷಂ ಸ್ಮೃತಮಾತ್ರ ಏವ ॥
- ಎಂಬ ಶ್ರೀಮದಾಚಾರ್ಯರ ಕೃಷ್ಣಾಮೃತಮಹಾರ್ಣವದಲ್ಲಿನ ಮಾತನ್ನೂ,
ಚೋರತ್ವದಲ್ಲಿ ಮಾಡಿದ ಪಾಪಗಳಗೆಲ್ಲ ಹೇ ನವನೀತಚೋರ ಎಂದರೆ ಸಾಲದೆ ।
ಜಾರತ್ವದಲಿ ಮಾಡಿದ ಪಾಪಗಳಿಗೆಲ್ಲ ಹೇ ಗೋಪೀಜನಜಾರ ಎಂದರೆ ಸಾಲದೆ ।
- ಎಂಬ ಶ್ರೀವ್ಯಾಸರಾಜರ ಮಾತುಗಳನ್ನೂ ಇಲ್ಲಿ ಸ್ಮರಿಸಬಹುದು.

ಆಗಲಿ; ರಾಜಶೇಖರಃ = ಚಂದ್ರಶೇಖರನಾಗಿರುವ; ಯಃ (ಸಃ) = ಅವನು; ಹೇಮಗಿರಿ-ಸೀಮಾಯಾಂ = ಹೇಮಕೂಟವೆಂಬ ಪರ್ವತ ಪ್ರದೇಶದಲ್ಲಿ; ರಾಜತೇ = ಶೋಭಿಸು-ತ್ತಿರುವನು.

**ಹೇಮಕೂಟವೆಂಬ ಪರ್ವತ ಪ್ರಾಂತದಲ್ಲಿ ಶೋಭಿಸುತ್ತಿರುವ, ಪಂಪಾಕ್ಷೇತ್ರಕ್ಕೆ ಅಧಿಪತಿಯಾದ ಶಿವನು ಸರ್ವದಾ ಸಜ್ಜನರ ಸಂಪತ್ತಿಗೆ ಕಾರಣನಾಗಲಿ.**

ವಿ: ೧. ಹಂಪೆಯಲ್ಲಿ ಹೇಮಕೂಟ ಪರ್ವತದ ಬದಿಯಲ್ಲಿ ತುಂಗಭದ್ರಾ ತೀರದಲ್ಲಿ ವಿರೂಪಾಕ್ಷ ದೇವಸ್ಥಾನವಿದೆ; ಕ್ಷೇತ್ರದೇವತೆಯಾದ ಈ ಶಿವನನ್ನು ಕುರಿತು ಶ್ರೀವ್ಯಾಸರಾಜರು ರಚಿಸಿರುವ ಸ್ತುತಿಯು [೧]'ಶಿವಸ್ತುತಿ' ಎಂದೇ ಪ್ರಸಿದ್ಧವಾಗಿದೆ. ಶ್ರೀಪುರಂದರದಾಸರು[೨] ಸಹ ಅನೇಕ ಕೃತಿಗಳನ್ನು ವಿರೂಪಾಕ್ಷನ ಮೇಲೆ ರಚಿಸಿರುವರು. ಹೇಮಕೂಟ ಪರ್ವತದ ಮೇಲೆ ಕಡಲೆಕಾಳು ಗಣೇಶ, ಸಾಸಿವೆಕಾಳು ಗಣೇಶ ಎಂಬ ಬೃಹದಾಕಾರದ ಗಣೇಶವಿಗ್ರಹಗಳು ಇವೆ.

೨. ಚಂದ್ರಚೂಡನೂ,ಹೇಮಕೂಟಪರ್ವತಸೀಮೆಯಲ್ಲಿ ನೆಲೆಸಿರುವನೂ ಆಗಿರುವು-ದರಿಂದಲೇ ಶಿವನು ಸಂಪತ್ಪ್ರದನೆಂಬುದು ಉಚಿತವಾಗಿದೆ. ಅಂತಹ ಶಿವನು ಸಜ್ಜನರಿಗೆ ಸಂಪತ್ಕರನಾಗಲಿ ಎಂದು ಭಾವ.[೩]

## ಪಂಪಾಕ್ಷೇತ್ರ (ಹಂಪೆ)

**ಪಂಪಾ ಸಂಪತ್ಕರೀ ಸೇಯಂ ಕಿಂ ಪಾಪಂ ನ ಹರೇನ್ನೃಣಾಮ್ ।**
**ಯಾಽಧೋಮುಖೀಕರೋತ್ಯೇತನ್ನಾಮೋಚ್ಚಾರಣಮಾತ್ರತಃ ॥ ೧೫ ॥**

ಅ: ನೃಣಾಂ = ಮಾನವರಿಗೆ; ಸಂಪತ್ಕರೀ =ಸಂಪತ್ಪ್ರದವಾಗಿರುವ; ಸಾ = ಅಂತಹ; ಇಯಂ = ಈ; ಪಂಪಾ = ಪಂಪಾಕ್ಷೇತ್ರವು; ಕಿಂ = ಯಾವ; ಪಾಪಂ = ಪಾಪವನ್ನೂ (ತಾನೇ); ನ ಹರೇತ್ = ಪರಿಹರಿಸಲಾರದು?; ಯಾ = ಇದು; ನಾಮೋಚ್ಚಾರಣಮಾತ್ರತಃ= ನಾಮೋಚ್ಚಾರಣ ಮಾತ್ರದಿಂದಲೇ; ಏತ್ಯತ್ = ಪಾಪವನ್ನು; ಅಧೋಮುಖೀಕರೋತಿ = ತಲೆಕೆಳಗಾಗಿಸುತ್ತದೆ (ಚಮತ್ಕಾರೋಕ್ತಿ).

**ತನ್ನ ನಾಮೋಚ್ಚಾರಣ ಮಾತ್ರದಿಂದಲೇ ಪಾಪವನ್ನು ತಲೆಕೆಳಗಾಗಿಸುವ, ಸಂಪತ್ಪ್ರದವಾಗಿರುವ ಈ ಪಂಪಾಕ್ಷೇತ್ರವು ಮನುಜರ ಯಾವ ಪಾಪವನ್ನು ತಾನೇ ಪರಿಹರಿಸಲಾರದು?**

---

೧. ಈ 'ಶಿವಸ್ತುತಿ'ಯು ಸ್ತೋತ್ರಮಾಲಿಕಾ ಭಾಗ-೧(ಐತರೇಯ ಪ್ರಕಾಶನ ವ್ಯಾಸನಕೆರೆ)ರಲ್ಲಿ ಮುದ್ರಿತವಾಗಿದೆ.

೨. 'ಪಂಪಾಪುರದ ಲಿಂಗ ಭವಭಸಿತ ಅಂಗ' ಮೊದಲಾದ ಶ್ರೀಪುರಂದರದಾಸರ ಕೃತಿಗಳು ಅವರ ಕೀರ್ತನಸಂಗ್ರಹದಲ್ಲಿ ಮುದ್ರಿತವಾಗಿದೆ.

೩. ಹೇಮಗಿರಿಸ್ಥತ್ವಾತ್ ರಾಜಶೇಖರತ್ವಾಚ್ಚ ತಸ್ಯ ಸಂಪತ್ಪ್ರದತ್ವಂ ನ ದುರ್ಘಟಮಿತಿ ಭಾವಃ। -ವ್ಯಾ

೪. ಪಾಪಮಿತ್ಯಸ್ಯ ವ್ಯತ್ಯಯೋಚ್ಚಾರಣೇ ಪಂಪೇತಿ ಸ್ಯಾದತಃ ಪಾಪಸ್ಯಾಧೋಮುಖತ್ವಮಿತಿ ಚಮತ್ಕಾರೋಕ್ತಿಃ। -ವ್ಯಾ

ವಿ: ೧. 'ಪಾಪಂ'ಎಂಬ ಪದವನ್ನು ತಳಕೆಳಗಾಗಿ (ಹಿಂದುಮುಂದಾಗಿ) ಉಚ್ಚರಿಸಿದಾಗ 'ಪಂಪಾ' ಎಂದಾಗುತ್ತದೆ; ಹೀಗೆ ಅದರ ನಾಮೋಚ್ಚಾರಣೆಯಿಂದಲೇ ಪಾಪವು ತಲೆಕೆಳಗಾಗು-ವುದರಿಂದ, ಪಂಪಾಕ್ಷೇತ್ರದ ಸೇವನೆಯಿಂದ ಪಾಪಗಳು ಪರಿಹಾರವಾಗುತ್ತವೆ ಎಂಬುದು ಕೈಮುತ್ಯಸಿದ್ಧ ಎಂದು ಭಾವ.

೨. 'ದಕ್ಷಿಣಕಾಶಿ'[೧] ಎಂದು ಪ್ರಸಿದ್ಧವಾಗಿರುವ ಪಂಪಾಕ್ಷೇತ್ರವು ಪಾಪಪರಿಹಾರಕವಾದ ಅಪೂರ್ವಕ್ಷೇತ್ರ ಎಂದು ಭಾವ.

೩. ಈ ಹಂಪೆಯಲ್ಲಿ ಶ್ರೀವಾದಿರಾಜರು ಶ್ರೀವ್ಯಾಸರಾಜರ ಬಳಿ ಶಾಸ್ತ್ರಾಧ್ಯಯನವನ್ನು ಮಾಡಿದರೆಂದು ಪ್ರತೀತಿಯುಂಟು. ಆಗ ವಿಜಯನಗರವನ್ನು ಪಾಲಿಸುತ್ತಿದ್ದ ಕೃಷ್ಣದೇವರಾಯ, ಅಚ್ಯುತರಾಯರಿಗೆ ಒಮ್ಮೆ ಅಪಾರವಾಗಿ ದ್ರವ್ಯಾಭಾವ ಒದಗಿದಾಗ ಶ್ರೀವಾದಿರಾಜರು ಅಲ್ಲಿಯ ಕಿಷ್ಕಿಂದೆಯ ಗುಹೆಯಲ್ಲಿದ್ದ ವಾಲಿಭಂಡಾರ ಸುಗ್ರೀವ ಭಂಡಾರಗಳನ್ನು ತೋರಿಸಿ ಅಪಾರ ಧನವನ್ನು ಅನುಗ್ರಹಿಸಿದರೆಂದು ಐತಿಹ್ಯವಿದೆ.

## ದುರ್ಗಾದೇವಿ (ಪಂಪಾಕ್ಷೇತ್ರ)

**ಮಾಲಾಭಿಃ ಸಮಲಂಕೃತಾಽತಿವಿಮಲಾ ಲೋಲೋಲ್ಲಸಲ್ಲೋಚನಾ**
**ಶೂಲೇನ ತ್ರಿದಲೇನ ದೈತ್ಯಕಲನೇ ಕಾಲಾಯಿತೇನ ದ್ವಿಷಃ ।**
**ಫಾಲೇ ಪಾದತಲಂ ನಿಧಾಯ ಬಲಿನಂ ಯೋನ್ಮೂಲಯಂತೀ ಖಲಂ**
**ಬಾಲಾ ಮೇ ಬಲದಾಽಸ್ತು ಲೋಲವಲಯಾ ಶ್ರೀಬಾಲಹಂಪಾಲಯಾ ॥೧೬॥**

ಅ: **ಮಾಲಾಭಿಃ** = ರತ್ನಮಾಲೆಗಳಿಂದಲೂ, ಪುಷ್ಪಮಾಲೆಗಳಿಂದಲೂ; **ಸಮಲಂಕೃತಾ** = ಚೆನ್ನಾಗಿ ಅಲಂಕೃತಳಾಗಿರುವ; **ಅತಿವಿಮಲಾ** = ಅತ್ಯಂತ ನಿರ್ಮಲಳಾಗಿರುವ; **ಲೋಲೋಲ್ಲಸಲ್ಲೋಚನಾ** = ಚಂಚಲವಾದ ಹೊಳೆಯುವ (ಮೂರು) ಕಣ್ಣುಗಳುಳ್ಳ; **ದೈತ್ಯಕಲನೇ** = ದೈತ್ಯರನ್ನು ನಾಶಪಡಿಸುವುದರಲ್ಲಿ; **ಕಾಲಾಯಿತೇನ** = ಕಾಲಮೃತ್ಯುವಿನಂತಿ-ರುವ; **ತ್ರಿದಲೇನ** = ಮೂರು ಎಸಳು (ಮುಖ)ಗಳನ್ನುಳ್ಳ; **ಶೂಲೇನ** = ಶೂಲದಿಂದ (ತ್ರಿಶೂಲದಿಂದ ಎಂದರ್ಥ); **ದ್ವಿಷಃ** = ಶತ್ರುವಾದ ಮಹಿಷಾಸುರನ; **ಫಾಲೇ** = ಲಲಾಟ-ದಲ್ಲಿ; **ಪಾದತಲಂ** = ಅಂಗಾಲನ್ನು; **ನಿಧಾಯ** = ಇರಿಸಿ; **ಬಲಿನಂ** = ಬಲಿಷ್ಠನಾದ; **ಖಲಂ** = ಆ ದುಷ್ಟ ಮಹಿಷಾಸುರನನ್ನು; **ಉನ್ಮೂಲಯಂತೀ** = ಬುಡಸಮೇತ ನಾಶಪಡಿಸುತ್ತಿರುವ; **ಲೋಲವಲಯಾ** = ಚಂಚಲವಾದ ಬಳೆಗಳನ್ನುಳ್ಳ; **ಬಾಲಾ** = ಅನಾದಿಕಾಲದಿಂದಲೂ ಕುಮಾರಿಯಂತೆ ಇರುವ; **ಶ್ರೀಬಾಲಹಂಪಾಲಯಾ** = 'ಶ್ರೀಬಾಲಹಂಪಾ' ಎಂಬಲ್ಲಿ ನೆಲೆಸಿರುವ; **ಯಾ(ಸಾ)** = ಆ ದುರ್ಗೆಯು; **ಮೇ** = ನನಗೆ; **ಬಲದಾ** = ಬಲಪ್ರದಳಾಗಿ; **ಅಸ್ತು** = ಆಗಲಿ.

---

೧. ಧರೆಯೊಳಗೆ ದಕ್ಷಿಣಕಾಶೀ ಎನಿಸುವ ಪಂಪಾಪುರವಾಸಿ । - ಶ್ರೀಪುರಂದರದಾಸರು
೨. ಶ್ರೀವಾದಿರಾಜಗುರುವರಚರಿತಾಮೃತ (೩/೩೪-೪೧)

ಮಾಲೆಗಳ ಅಲಂಕಾರ, ಹೊಳೆಯುವ ಚಂಚಲನೇತ್ರಗಳು, ದೈತ್ಯರ ಪಾಲಿನ ಕಾಲ-ಮೃತ್ಯು, ಮೂರು ತುದಿಗಳ ಶೂಲದಿಂದ ಶತ್ರುವಿನ ಲಲಾಟದಲ್ಲಿ ಅಂಗಾಲನ್ನಿರಿಸಿ ಬಲಿಷ್ಠನಾದ ಆ ದುಷ್ಟನನ್ನು ನಿರ್ಮೂಲಮಾಡುತ್ತಿರುವ ಭಂಗಿ, ಕೈಯಲ್ಲಿ ಚಲಿಸುವ ಬಳೆಗಳು, ಸದಾ ಕುಮಾರಿಯಾಗಿರುವ 'ಶ್ರೀಬಾಲಹಂಪಾ' ಎಂಬಲ್ಲಿ ನೆಲೆಸಿರುವ ಈ ದುರ್ಗೆಯು ನನಗೆ ಬಲಪ್ರದಳಾಗಲಿ.

ವಿ: ಹಂಪೆಯ ನದಿಯ ಆಚೆಯ ಪ್ರದೇಶದಲ್ಲಿರುವ 'ಪಂಪಾಸರೋವರ'ವೆಂಬ ತೀರ್ಥದ ಬಳಿಯಲ್ಲಿರುವ ದುರ್ಗಾದೇವಿಯನ್ನು ಶ್ರೀವಾದಿರಾಜರು ಈ ಶ್ಲೋಕದಲ್ಲಿ ಸ್ತುತಿಸಿರುವರು. ಹಂಪೆಯ ವಿರೂಪಾಕ್ಷದೇವಾಲಯದ ಆವರಣದಲ್ಲೂ ಒಂದು ಹಂಪಾಲಯವಿದೆ.

## ಗಜಗಹ್ವರ (ಆನೆಗೊಂದಿ)

**ರಾಜಧಾನೀ ಜಯತಿ ಸಾ ಗಜಗಹ್ವರಸಂಜ್ಞಿತಾ ।**
**ಯತ್ರ ಭಾಂತಿ ಗಜಾ ಮಾಧ್ವರಾದ್ಧಾಂತಧರಣೀಧರಾಃ ॥ ೧೭ ॥**

ಅ: ಗಜಗಹ್ವರಸಂಜ್ಞಿತಾ = ಆನೆಗೊಂದಿ ಎಂಬ ಹೆಸರನ್ನು ಹೊಂದಿರುವ; ಸಾ ರಾಜಧಾನೀ = ಆ ರಾಜಧಾನಿಯು; ಜಯತಿ = ಉತ್ಕೃಷ್ಟವಾಗಿದೆ. ಯತ್ರ = ಅಲ್ಲಿ; ಮಾಧ್ವರಾದ್ಧಾಂತಧರಣೀಧರಾಃ = ಮಧ್ವಸಿದ್ಧಾಂತವೆಂಬ ಭೂಮಿಯನ್ನು ಧರಿಸಿರುವ; ಗಜಾಃ= (ಶ್ರೀಮಧ್ವಾಚಾರ್ಯರ ಶಿಷ್ಯಪ್ರಶಿಷ್ಯರೆಂಬ) ಆನೆಗಳು; ಭಾಂತಿ = ಶೋಭಿಸುತ್ತಿವೆ.

ಮಧ್ವಸಿದ್ಧಾಂತವೆಂಬ ಭೂಮಿಯನ್ನು ಹೊತ್ತ, ಮಧ್ವಶಿಷ್ಯರೆಂಬ ದಿಗ್ಗಜಗಳು ಕಂಗೊಳಿಸುತ್ತಿರುವ 'ಆನೆಗೊಂದಿ' ಎಂಬ ಹೆಸರಿನ ಈ ರಾಜಧಾನಿಯು ಉತ್ಕೃಷ್ಟವಾಗಿದೆ.

ವಿ: ೧. ಆನೆಗೊಂದಿಯು ಅನೇಕ ವರ್ಷಗಳ ಕಾಲ ವಿಜಯನಗರ ಸಾಮ್ರಾಜ್ಯಕ್ಕೆ ರಾಜ-ಧಾನಿಯಂತಿದ್ದ ಸ್ಥಳ. ಇದು ಹಂಪೆ ಬಳಿ ನದಿಯ ಆಚೆಯ ದಂಡೆಯಲ್ಲಿದೆ; ಶ್ರೀಪದ್ಮನಾಭತೀರ್ಥರು ಮೊದಲಾದ ಮಧ್ವಶಿಷ್ಯರ ವಾಸ್ತವ್ಯದಿಂದಲೂ, ಶ್ರೀವ್ಯಾಸರಾಜರಂತಹ ವಿದ್ವನ್ಮಣಿಗಳಿಂದಲೂ ಭೂಷಿತವಾಗಿದ್ದ ಪುಣ್ಯಭೂಮಿ.

೨. ಇಲ್ಲಿಯ ವೈಷ್ಣವ ಜ್ಞಾನಿಗಳನ್ನು ಮಧ್ವಸಿದ್ಧಾಂತ ಭೂಮಿಯನ್ನು ಧರಿಸುವ ದಿಗ್ಗಜಗಳು ಎಂಬುದಾಗಿ ಶ್ರೀವಾದಿರಾಜರು ವರ್ಣಿಸಿರುವರು. 'ದಿಗ್ಗಜ' ಎಂಬಲ್ಲಿನ ಎಂಟು ಎಂಬ ಧ್ವನಿಯಿಂದಾಗಿ ಇಲ್ಲಿಯ ಪ್ರಧಾನ ಎಂಟು ಜನ ಪರಮಹಂಸರನ್ನು ಪ್ರಶಂಸಿಸಿರುವರು. ಎಂದು ತಿಳಿಯಬಹುದಾದರೂ, ಮೂಲದಲ್ಲಾಗಲೀ, ವ್ಯಾಖ್ಯಾನದಲ್ಲಾಗಲೀ ಸಂಖ್ಯೆಯು ನಿರ್ದಿಷ್ಟ-ವಾಗಿಲ್ಲವಾಗಿಲ್ಲದಿರುವುದರಿಂದ ಎಂಟು ಎಂಬ ಸಂಖ್ಯೆ ಇಲ್ಲಿ ಅಷ್ಟು ಪ್ರಧಾನವಾಗುವುದಿಲ್ಲ.

೩. ವ್ಯಾಖ್ಯಾನಕಾರರು 'ಮಧ್ವಸಿದ್ಧಾಂತಧರಣೀಧರಾಃ ಪದ್ಮನಾಭತೀರ್ಥ ಶ್ರೀಮಚ್ಚರಣ-ಪ್ರಭೃತಯಃ ಶ್ರೀಮಧ್ವಾಚಾರ್ಯಶಿಷ್ಯಪ್ರಶಿಷ್ಯಭೂತಾಃ ಸಂನ್ಯಾಸಿನಃ' ಎಂದು ಅರ್ಥ ಬರೆದಿರುವರು. ಇದರಿಂದ ಈ ಶ್ಲೋಕದಲ್ಲಿ ಪ್ರಸ್ತಾಪಿತರಾಗಿರುವವರು ಪರಮಹಂಸರು ಎಂಬುದು ಶ್ರೀಪದ್ಮನಾಭ ಶಿಷ್ಯ ಪ್ರಶಿಷ್ಯಭೂತರಾದ ಶ್ರೀಪದ್ಮನಾಭತೀರ್ಥಾದಿಗಳು

ಎಂದಿರುವುದರಿಂದ ಪ್ರಧಾನವಾಗಿ ಬೃಂದಾವನಸ್ಥರಾಗಿರುವವರು ಎಂದೂ ಅರ್ಥ ಬರುತ್ತದೆ; ಶ್ರೀಪದ್ಮನಾಭತೀರ್ಥರು ಶಿಷ್ಯರು ಮತ್ತು ಶ್ರೀನರಹರಿತೀರ್ಥರು ಸಾಕ್ಷಾತ್ ಶಿಷ್ಯರಾದರೂ ಪೀಠಪರಂಪರೆಯಲ್ಲಿ ಪ್ರಶಿಷ್ಯರಾಗಿರುವರು; 'ಆದಿ'ಶಬ್ದದಿಂದ ಶ್ರೀಕವೀಂದ್ರತೀರ್ಥರು, ಶ್ರೀವಾಗೀಶತೀರ್ಥರನ್ನೂ ಗ್ರಹಿಸಬಹುದು. ಶ್ರೀಅಕ್ಷೋಭ್ಯತೀರ್ಥಮಠದ ಶ್ರೀನಾರಾಯಣ-ತೀರ್ಥರ, ಕೈಬರಹದ [1]ದಾಖಲೆಯಂತೆ ಆನೆಗೊಂದಿಯಲ್ಲಿ ಶ್ರೀಅಕ್ಷೋಭ್ಯತೀರ್ಥರು, ಶ್ರೀಮಾಧವತೀರ್ಥರು ಮತ್ತು ಶ್ರೀಜಯತೀರ್ಥರ ಮೃತ್ತಿಕಾಬೃಂದಾವನಗಳು ಆನೆಗೊಂದಿಯ 'ರಾಜವಾಡೆ' ಎಂಬಲ್ಲಿ ಸ್ಥಾಪಿತವಾಗಿದ್ದವೆಂದು ತಿಳಿಯುತ್ತದೆ. ಆ ಮೂರು ಬೃಂದಾವನಗಳೊಂದಿಗೆ ಶ್ರೀವ್ಯಾಸರಾಜರ ಬೃಂದಾವನವನ್ನೂ ಸೇರಿಸಿದರೆ ಒಟ್ಟು ಎಂಟು ವೃಂದಾವನಗಳಾಗುವುದರಿಂದ 'ದಿಗ್ಗಜ' ಎಂಬಲ್ಲಿನ 'ಎಂಟು' ಎಂಬ ಸಂಖ್ಯೆಯೂ ಒಂದು ರೀತಿಯಲ್ಲಿ ಸರಿ ಹೋಗುತ್ತದೆ। ಅಲ್ಲದೆ ಇದು 'ಶ್ರೀಮಧ್ವಾಚಾರ್ಯಶಿಷ್ಯಪ್ರಶಿಷ್ಯಭೂತಾಃ' ಎಂಬ ವ್ಯಾಖ್ಯಾನದ ಮಾತಿಗೂ ಹೊಂದುತ್ತದೆ.

೪. ಮುಂದಿನ ಶ್ಲೋಕದಲ್ಲಿ ಶ್ರೀಜಯತೀರ್ಥರ ವರ್ಣನೆ ಪ್ರತ್ಯೇಕವಾಗಿ ಬಂದಿರುವುದರಿಂದ ಇಲ್ಲಿ ಅವರ ಬದಲು ಶ್ರೀರಘುವರ್ಯರ ಮೂಲಬೃಂದಾವನವನ್ನು ಎಂದು ಸಹ ಅರ್ಥ ಮಾಡಿಕೊಳ್ಳಬಹುದು. ಸಂಖ್ಯೆ ಎಂಟೇ ಎಂಬುದನ್ನು ಕೈಬಿಟ್ಟಲ್ಲಿ ಶ್ರೀಸುಧೀಂದ್ರತೀರ್ಥರ (೧೬೨೩) ವೃಂದಾವನವನ್ನು ಬಿಟ್ಟು ಶ್ರೀನಿವಾಸತೀರ್ಥರು, ಶ್ರೀರಾಮತೀರ್ಥರು ಮತ್ತು ಶ್ರೀಗೋವಿಂದಒಡೆಯರ ವೃಂದಾವನವನ್ನು ಸೇರಿಸಿಕೊಳ್ಳಬಹುದು.

## ಶ್ರೀಜಯತೀರ್ಥರು (ಮಳಖೇಡ)

**ಮಾಧ್ವಗ್ರಂಥಾನ್ ಸ್ವಬಂಧೂನಿವ ಸರಸಹೃದಾಽಽಲಿಂಗ್ಯ ವಿಜ್ಞಾತಭಾವಃ**
**ಸಂಯೋಜ್ಯಾಲಂಕೃತಾಭಿಃ ಸ್ವಸಹಜಮತಿಸಂಭೂತವಾಗ್ಭಿರ್ವಧೂಭಿಃ ।**
**ಕೃತ್ವಾನ್ಯೋಕ್ತೀಶ್ಚ ದಾಸೀರ್ಬುಧಹೃದಯಗೃಹಂ ಪ್ರೌಢವೃತ್ತೀಶ್ಚ ವೃತ್ತೀಃ**
**ದತ್ವಾನ್ಯೋನ್ಯಾಭಿಯೋಗಂ ಜಯಮುನಿರಸಕೃದ್ವೀಕ್ಷ್ಯ ರೇಮೇ ಕೃತಾರ್ಥಃ।೧೮।**

ಅ: ಜಯಮುನಿಃ = ಶ್ರೀಜಯತೀರ್ಥಮುನಿಗಳು; ಮಾಧ್ವಗ್ರಂಥಾನ್ = ಶ್ರೀಮಧ್ವಾ-ಚಾರ್ಯರಿಂದ ರಚಿಸಲ್ಪಟ್ಟ ಸೂತ್ರಭಾಷ್ಯಾದಿ ಗ್ರಂಥಗಳನ್ನು; ಸ್ವಬಂಧೂನಿವ = (ತಮ್ಮ ಮನೆಗೆ ಆಗಮಿಸಿದ) ಬಂಧುಗಳನ್ನೆಂಬಂತೆ; ಸರಸಹೃದಾ = ಸ್ನೇಹ ಪೂರ್ಣವಾದ ಮನಸ್ಸಿನಿಂದ; ಆಲಿಂಗ್ಯ = ತಬ್ಬಿಕೊಂಡು; ವಿಜ್ಞಾತಭಾವಃ = ಅವುಗಳ ಭಾವವನ್ನು ಚೆನ್ನಾಗಿ ಅರಿತವರಾಗಿ; ಅಲಂಕೃತಾಭಿಃ = (ಅನೇಕ ತೆರನಾಗಿ) ಅಲಂಕೃತವಾದ; ಸ್ವಸಹಜಮತಿಸಂಭೂತ-ವಾಗ್ಭಿರ್ವಧೂಭಿಃ = ತಮ್ಮ ಸ್ವಾಭಾವಿಕವಾದ ಬುದ್ಧಿಯಿಂದ ಹುಟ್ಟಿದ ಟೀಕಾರೂಪವಾದ ವಚನಗಳೆಂಬ; ವಧೂಭಿಃ = ವಧುಗಳಿಂದ; ಸಂಯೋಜ್ಯ = ಜೊತೆಗೂಡಿಸಿ (ವಿವಾಹ ಮಾಡಿ); ಅನ್ಯೋಕ್ತೀಃ = ಇತರವಾದಿಗಳ ಟೀಕೋಕ್ತಿಗಳನ್ನು; ದಾಸೀಃ = ದಾಸಿಯರನ್ನಾಗಿ;

---

೧. 'ಮತ್ತೊಂದು ಅಪೂರ್ವದಾಖಲೆ' (ತತ್ತ್ವವಾದ, ೧೯೮೨) ಎಂಬ ನನ್ನ ಲೇಖನವನ್ನು ನೋಡಿ

ಕೃತ್ವಾ = ಮಾಡಿ; ಬುಧಹೃದಯಗೃಹಂ = ವಿದ್ವಾಂಸರ ಹೃದಯವೆಂಬ ಮನೆಯನ್ನು; ದತ್ವಾ = ನೀಡಿ; ಚ = ಹಾಗೂ; ಪ್ರೌಢವೃತ್ತೀಃ = ಪ್ರೌಢಪಂಡಿತರ ಜ್ಞಾನವಿಶೇಷಗಳೆಂಬ; ವೃತ್ತೀಃ = (ಹೊಲ ಮನೆ ಮೊದಲಾದ) ಜೀವನೋಪಾಯಗಳನ್ನು; ದತ್ವಾ = ನೀಡಿ; ಅಸಕೃತ್ = ಮತ್ತೆ ಮತ್ತೆ ಅನ್ಯೋನ್ಯಾಭಿಯೋಗಂ = ಅವರ ಪರಸ್ಪರ ಹೊಂದಾಣಿಕೆಯನ್ನು; ವೀಕ್ಷ್ಯ = ನೋಡಿ; ಕೃತಾರ್ಥಃ = ಕೃತಕೃತ್ಯರಾಗಿ; ರೇಮೇ = ಆನಂದಿಸಿದರು.

ಶ್ರೀಮಧ್ವಾಚಾರ್ಯರ ಗ್ರಂಥಗಳೆಂಬ ವರಗಳನ್ನು ಬಂಧುಗಳನ್ನೆಂಬಂತೆ ಸ್ನೇಹಪೂರ್ಣವಾದ ಮನಸ್ಸಿನಿಂದ ತಕ್ಕೈಸಿ, ಅವುಗಳ ಭಾವವನ್ನು ಚೆನ್ನಾಗಿ ಗ್ರಹಿಸಿ, ಬಹುವಾಗಿ ಅಲಂಕೃತವಾದ ತಮ್ಮ ಸಹಜಬುದ್ಧಿಯಿಂದ ಹುಟ್ಟಿದ ಟೀಕಾವಚನಗಳೆಂಬ ವಧುಗಳೊಂದಿಗೆ ಲಗ್ನ ಮಾಡಿ, ಪ್ರತಿವಾದಿಗಳ ಟೀಕೋಕ್ತಿಗಳನ್ನು ದಾಸಿಯರನ್ನಾಗಿ ಮಾಡಿ, ವಿದ್ವಾಂಸರ ಹೃದಯವೆಂಬ ಮನೆಯನ್ನು ನೀಡಿ, ಪ್ರೌಢವೃತ್ತಿ ಎಂಬ ಜೀವನೋಪಾಯ ಕಲ್ಪಿಸಿ, ಮತ್ತೆ ಮತ್ತೆ ಅವರ ಪರಸ್ಪರ ಹೊಂದಾಣಿಕೆಯನ್ನು ನೋಡಿ ಕೃತಕೃತ್ಯರಾಗಿ ಆನಂದಿಸಿವರು ಶ್ರೀಜಯತೀರ್ಥರು.

ವಿ: ೧. 'ಶ್ರೀಟೀಕಾಕೃತ್ಪಾದ'ರೆಂದೇ ವೈಷ್ಣವವೇದಾಂತಪರಂಪರೆಯಲ್ಲಿ ಮಾನ್ಯರಾಗಿರುವ ಶ್ರೀಜಯತೀರ್ಥಶ್ರೀಚರಣ(೧೩೬೫-೧೩೮೮)ರನ್ನು ಅಪೂರ್ವರೀತಿಯಿಂದ ಶ್ರೀವಾದಿ-ರಾಜರು ಈ ಶ್ಲೋಕದಲ್ಲಿ ಕೊಂಡಾಡಿರುವರು.

೨. ಶ್ರೀಜಯತೀರ್ಥರು ಶ್ರೀಅಕ್ಷೋಭ್ಯತೀರ್ಥರ ಶಿಷ್ಯರಾಗಿ ಅವರ ಅನಂತರ ವೇದಾಂತಸಾಮ್ರಾಜ್ಯವನ್ನು ೨೩ ವರ್ಷಗಳಷ್ಟು ಕಾಲ ಅಲಂಕರಿಸಿದ್ದ ಮಹನೀಯರು ಶ್ರೀಮದಾಚಾರ್ಯರ ಗ್ರಂಥಗಳಿಗೆ ತಾವು ರಚಿಸಿದ ಟೀಕಾಗ್ರಂಥಗಳಿಂದಾಗಿ 'ಟೀಕಾ-ಚಾರ್ಯ'ರೆಂದೇ ಸರ್ವಮಾನ್ಯರಾಗಿರುವ ಮಹಾವಿಭೂತಿಗಳು. ವಾದಿಜಯ, ಪಾಠಪ್ರವಚನ, ತೀರ್ಥಸಂಚಾರ, ತಪಃಶಕ್ತಿ ಮತ್ತು ಅಪೂರ್ವಗ್ರಂಥ ರಚನೆಗಳಿಂದಾಗಿ ಅವರನ್ನು 'ಸರ್ವಜ್ಞಕಲಪ'ರೆಂದೇ ಪರಂಪರೆಯು ಗೌರವಿಸಿದೆ. ಇವರು ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳಲ್ಲಿ ಒಟ್ಟು ೧೮ ಗ್ರಂಥಗಳಿಗೆ (ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ನ್ಯಾಯವಿವರಣ, ಗೀತಾಭಾಷ್ಯ, ಗೀತಾತಾತ್ಪರ್ಯ,ಋಗ್ಭಾಷ್ಯ, ದಶಪ್ರಕರಣಗಳು, ಈಶಾವಾಸ್ಯಭಾಷ್ಯ ಮತ್ತು ಷಟ್ಪ್ರಶ್ನಭಾಷ್ಯಗಳಿಗೆ) ಟೀಕೆಗಳನ್ನೂ, ಪ್ರಮಾಣಪದ್ಧತಿ, ವಾದಾವಲೀ ಮತ್ತು [1]ಪದ್ಯಮಾಲಾ ಎಂಬ ಮೂರು ಸ್ವತಂತ್ರಗ್ರಂಥಗಳನ್ನು ರಚಿಸಿರುವರು. ಇವರ ಮೂಲಬೃಂದಾವನವು ಗುಲ್ಬರ್ಗಾ ಜಿಲ್ಲೆಯ ಮಳಖೇಡದಲ್ಲಿದೆ.

೩. ಮನೆಗೆ ಆಗಮಿಸಿದ ಯೋಗ್ಯವರಗಳ ಮನೋಗತವನ್ನು ತಿಳಿದು ಅವರಿಗೆ ತನ್ನಲ್ಲಿನ ಕನ್ಯೆಯರನ್ನು ಸಾಲಂಕೃತರನ್ನಾಗಿ ಧಾರೆ ಎರೆದು ಸೇವಕಜನರನ್ನು ಒದಗಿಸಿ ಮನೆಯನ್ನೂ ನೀಡಿ, ಜೀವನೋಪಾಯವನ್ನೂ ಕಲ್ಪಿಸಿ, ಬಾರಿಬಾರಿಗೂ ಅವರ ಅನ್ಯೋನ್ಯ ದಾಂಪತ್ಯವನ್ನು ನೋಡಿ

---

೧. 'ಪದ್ಯಮಾಲೆ'ಯನ್ನು ಅನುವಾದ ಮತ್ತು ವಿವರಣೆಗಳೊಂದಿಗೆ ನಮ್ಮ ಪ್ರಕಾಶನವು ಪ್ರಕಟಿಸಿದೆ. (೨೦೧೧)

ಧನ್ಯತೆಯಿಂದ ಸುಖಿಸುವುದು ಒಬ್ಬ ಆದರ್ಶ ಕನ್ಯಾಪಿತೃವಿನ ಲಕ್ಷಣ. ಶ್ರೀಜಯತೀರ್ಥರು ಇಂತಹ ಒಬ್ಬ ಆದರ್ಶ ಮಹನೀಯರು ಎಂದು ಶ್ರೀವಾದಿರಾಜರು ಇಲ್ಲಿ ವರ್ಣಿಸಿರುವರು[೧].

೪. ಇಲ್ಲಿ ಶ್ರೀಮಧ್ವಾಚಾರ್ಯರ ಗ್ರಂಥಗಳೇ [೨]ವರಗಳು; ಶ್ರೀಜಯತೀರ್ಥರ ಟೀಕೆಗಳೇ ಕನ್ಯೆಯರು; ಆದರಪೂರ್ಣ ಮನಸ್ಸಿನಿಂದ ಮಾಡುವ ಮೂಲಗ್ರಂಥಗಳ ವಿಚಾರವೇ ವರಗಳ ಆಲಿಂಗನ; [೩]ಓಜಃ ಪ್ರಸಾದ ಮಾಧುರ್ಯಾದಿ ಗುಣಗಳು, ವೃತ್ತ್ಯನುಪ್ರಾಸಾದಿ ಶಬ್ದಾಲಂಕಾರಗಳೇ ಭೂಷಣಗಳು; ಮೂಲಗ್ರಂಥಗಳೊಂದಿಗೆ ಟೀಕೋಕ್ತಿಗಳ ಸಂಗಮಕಾರ್ಯವೇ ವಿವಾಹಕಾರ್ಯ; 'ಅನ್ಯೇ', 'ಅಪರೇ','ಏಕೇ' ಎಂದು ಉದ್ಧರಿಸಲ್ಪಡುವ ಇತರ ವಾದಿಗಳ ಮಾತುಗಳೇ ದಾಸಿಯರು; ಪಂಡಿತರ ಹೃದಯವೇ ಮನೆ; ಪ್ರೌಢವೃತ್ತಿಗಳೇ[೪] ಜೀವನೋಪಾಯಗಳು; ಮೂಲ ಮತ್ತು ಟೀಕೆಗಳಲ್ಲಿನ ಸಂಪೂರ್ಣ ಸಾಮರಸ್ಯವೇ ಮಧುರದಾಂಪತ್ಯ; ಇಂತಹ ಅಪೂರ್ವ ಕಲ್ಯಾಣವನ್ನು ಮಾಡಿರುವ ಶ್ರೀಜಯತೀರ್ಥರು ಕೃತಕೃತ್ಯರು ಎಂದು ಭಾವ.

೫. ಇಲ್ಲಿ ಶ್ರೀಮದಾಚಾರ್ಯರ ಗ್ರಂಥಗಳು ವರಸ್ಥಾನೀಯವೆಂಬುದನ್ನು ಪುಲ್ಲಿಂಗದ 'ಗ್ರಂಥ' ಶಬ್ದದಿಂದಲೂ, ಶ್ರೀಟೀಕಾಚಾರ್ಯರ ಗ್ರಂಥಗಳು ಕನ್ಯಾಸ್ಥಾನೀಯವೆಂಬುದನ್ನು ಸ್ತ್ರೀಲಿಂಗದ 'ವಾಕ್' ಶಬ್ದದಿಂದಲೂ ವಧೂವರ ರೂಪರಾದ ಮೂಲಟೀಕಾಗ್ರಂಥಗಳ ಸಂಖ್ಯೆಯು ಬಹಳ ಎಂಬುದನ್ನು 'ಗ್ರಂಥಾನ್' 'ವಾಗ್ಭಿಃ' ಎಂದು ಬಹುವಚನದಿಂದಲೂ ಸಹ ಸೂಚಿಸಿರುವರು.[೫]

೬. ಇದು ಪೂರ್ವಪ್ರಬಂಧದ ೧೮ ನೇ ಶ್ಲೋಕವಾಗಿರುವದು, ಒಂದುರೀತಿಯಲ್ಲಿ ಶ್ರೀಜಯತೀರ್ಥರು ರಚಿಸಿರುವ ಒಟ್ಟು ಟೀಕಾಗ್ರಂಥಗಳ ಸಂಖ್ಯೆಯು ೧೮ ಎಂಬುದನ್ನು ಸಹ ಸೂಚಿಸುವಂತಿದೆ.

---

೧. ಯಥಾ ಗೃಹಸ್ಥಃ ಸ್ವಗೃಹಾಗತಜ್ಞಾತಿಪುರುಷಾಣಾಮುದ್ವಾಹಾಪೇಕ್ಷಾರೂಪಮನೋಭಾವಂ ಜ್ಞಾತ್ವಾ ಸಂಬಂಧಯೋಗ್ಯಸ್ವಸಹೋದರಪುತ್ರೀರೇವ ವಿವಾಹ್ಯ ತಾಸಾಂ ದಾಸೀಗೃಹಕ್ಷೇತ್ರಾದಿಕಂ ದತ್ವಾ ವಧೂವರಾಣಾಮನ್ಯೋನ್ಯಪ್ರೇಮಪೂರ್ವಕಸಂಸಾರಂ ದೃಷ್ಟ್ವಾವ ಸುಖೀಭವತಿ ತದ್ವದಿತಿ ಭಾವಃ।
- ವ್ಯಾಖ್ಯಾನ

೨. ಸ್ವಗೃಹಾಗತಾನ್ ಸ್ವಜ್ಞಾತೀನಿವ ಗ್ರಂಥಾನಾಮಾಚಾರ್ಯಮುಖಕಮಲೋದ್ಭೂತತ್ವಾತ್ ಸ್ವಪರಮಗುರೂಣಾಮಾಚಾರ್ಯಕರಕಮಲೋದ್ಭೂತತ್ವಾಚ್ಚ ಉಭಯೇಷಾಮೇಕಕುಲೋದ್ಭೂತತ್ವೇನ ಸ್ವಬಂಧುಮಿತಿ ಭಾವಃ। -ವ್ಯಾಖ್ಯಾನ

೩. ಓಜಃಪ್ರಸಾದಮಾಧುರ್ಯಾದಿಗುಣೈರ್ವೃತ್ತ್ಯನುಪ್ರಾಸಾದಿಶಬ್ದಾಲಂಕಾರೈರ್ಭೂಷಿತಾಭಿ। -ವ್ಯಾಖ್ಯಾನ

೪. ಜಯಮುನಿಕೃತಟೀಕಾಂ ಸದಾ ಪರಿಶೀಲಯಂತೀತಿ ಭಾವಃ। -ವ್ಯಾಖ್ಯಾನ

೫. ದಶಪ್ರಕರಣಭಾಷ್ಯಾದಿಮೂಲಗ್ರಂಥಾನಾಮಪಿ ಬಹುತ್ವಾತ್ ತಟ್ಟೀಕಾನಾಮಪಿ ಬಹುತ್ವಾದುಭಯತ್ರಾಪಿ ಬಹುವಚನಮ್। ಬಹೂನಾಂ ವರಾಣಾಂ ಅನೇಕಕನ್ಯಾಪ್ರದಾತೃಪುರುಷವತ್ ಬಹುಗ್ರಂಥಟೀಕಾಕರಣೇನ ಟೀಕಾಕಾರಾಣಾಂ ಮಹಾಸಾಹಸಿಕತ್ವಪ್ರದರ್ಶನಾರ್ಥಂ ವಧೂವರತ್ವಘಟನಾರ್ಥಮೇವ ಸ್ವಗ್ರಂಥಾನಾಮೇವಂ ಸ್ತ್ರೀಲಿಂಗಪದೇನೋಕ್ತಿಃ। ಆಚಾರ್ಯಕೃತಗ್ರಂಥಾನಾಂ ಪುಲ್ಲಿಂಗಪದೇನೋಕ್ತಿರಿತ್ಯಪಿ ದ್ರಷ್ಟವ್ಯಮ್।
-ವ್ಯಾಖ್ಯಾನ

೭. ಶ್ರೀಜಯತೀರ್ಥರ ಮೂಲವೃಂದಾವನಸ್ಥಳವು ಮಳಖೇಡ ಎಂಬುದು ನಿರವಕಾಶವಾದ ಬಹುಪ್ರಮಾಣಗಳಿಂದ ಸಿದ್ಧವಾಗಿರುವ ವಿಚಾರ; ಆದ್ದರಿಂದ ಶ್ರೀವಾದಿರಾಜರು ಆನೆಗೊಂದಿ-ಯಿಂದ [1]ಮಳಖೇಡಕ್ಕೆ ಹೋಗಿ ಶ್ರೀಟೀಕಾಚಾರ್ಯರನ್ನು ಸ್ತುತಿಸಿ ಅಲ್ಲಿಂದ ತಿರುಪತಿಯತ್ತ ಯಾತ್ರೆಯನ್ನು ಮುಂದುವರೆಸಿರುವರು ಎಂದು ಭಾವಿಸಬಹುದು.

೮. ಮೊದಲ (ಪಶ್ಚಿಮ) ಪ್ರಬಂಧದಲ್ಲಿ ರಜತಪೀಠದ ಪಕ್ಕದಲ್ಲೇ ಇರುವ ಸುವರ್ಣಾ-ನದಿಯನ್ನು, ಪಯಸ್ವಿನೀ ನದಿಯವರೆಗಿನ ವರ್ಣನೆಯ ಅನಂತರ ವರ್ಣಿಸಿರುವಂತೆ ಆನೆಗೊಂದಿಯ ಅನಂತರ ಮಳಖೇಡವನ್ನು ವರ್ಣಿಸಿ ಅನಂತರ ತಿರುಪತಿಯನ್ನು ವರ್ಣಿಸಿರುವರು ಎಂದು ಭಾವಿಸಿದರೆ ಕ್ರಮಭಂಗದ ಪ್ರಸಕ್ತಿಯೂ ಇರುವುದಿಲ್ಲ. ಅಥವಾ ಹಿಂದೆ ಹೇಳಿದಂತೆ ಆನೆಗೊಂದಿಯಲ್ಲಿನ ಶ್ರೀಜಯತೀರ್ಥರ ಮೃತ್ತಿಕಾ ಬೃಂದಾವನವನ್ನು ನೋಡಿ, ಮಳಖೇಡದಲ್ಲಿನ ಮೂಲಬೃಂದಾವನವನ್ನು ಸ್ಮರಣೆಗೆ ತಂದುಕೊಂಡು ವರ್ಣಿಸಿರಬಹುದು ಅಥವಾ ಹಿಂದಿನ ಶ್ಲೋಕದಲ್ಲಿ 'ಮಾಧ್ವಸಿದ್ಧಾಂತ'ವನ್ನು ಉಲ್ಲೇಖಿಸಿ ಪ್ರಾಸಂಗಿಕವಾಗಿ ಅದರ ಟೀಕಾಕಾರರೆಂಬ ಗೌರವದಿಂದ ಇಲ್ಲಿಯೇ ಅವರನ್ನು ವರ್ಣಿಸಿರಬಹುದು. ಅಂತು ಇದು ಶ್ರೀಜಯತೀರ್ಥರ ಮೂಲಬೃಂದಾವನಸ್ಥಳವು ಮಳಖೇಡ ಎಂಬುದಕ್ಕೆ ಯಾವುದೇ ರೀತಿಯಲ್ಲೂ ಬಾಧಕವಾಗಲಾರದು.

## ಶ್ರೀವೇಂಕಟೇಶ (ತಿರುಪತಿ)

**ಶ್ರೀವೇಂಕಟಲಸಚ್ಛೈಲವಾಸೀ ದಾಸೀಕೃತಾಮರಃ ।**
**ಛಾಯಯಾ ಪಾತು ಮಾಂ ನಿತ್ಯಂ ಶ್ರೀನಿವಾಸಸುರದ್ರುಮಃ[2] ॥ ೧೯ ॥**

ಅ: ಶ್ರೀವೇಂಕಟಲಸಚ್ಛೈಲವಾಸೀ[3] = 'ಶ್ರೀವೇಂಕಟ'ವೆಂಬ ಶೋಭಾಯಮಾನವಾದ ಪರ್ವತದಲ್ಲಿ ನೆಲೆಸಿರುವ; ದಾಸೀಕೃತಾಮರಃ = ದೇವತೆಗಳನ್ನು ದಾಸರನ್ನಾಗಿ ಹೊಂದಿರುವ; ಶ್ರೀನಿವಾಸಸುರದ್ರುಮಃ = 'ಶ್ರೀನಿವಾಸ'ನೆಂಬ ಕಲ್ಪವೃಕ್ಷವು; **ಛಾಯಯಾ** = ತನ್ನ ಕಾಂತಿ(ನೆರಳಿ)ಯಿಂದ; ನಿತ್ಯಂ = ಸದಾಕಾಲವೂ; **ಮಾಂ** = ನನ್ನನ್ನು; **ಪಾತು** = ಪಾಲಿಸಲಿ.

'ಶ್ರೀವೇಂಕಟ'ವೆಂಬ ಉಜ್ಜ್ವಲಪರ್ವತದಲ್ಲಿ ನೆಲೆಸಿರುವ, ದೇವತೆಗಳನ್ನು ದಾಸರನ್ನಾಗಿ ಹೊಂದಿರುವ, 'ಶ್ರೀನಿವಾಸ'ನೆಂಬ ಕಲ್ಪವೃಕ್ಷವು ತನ್ನ ನೆರಳಿನಿಂದ ಸದಾಕಾಲವೂ ನನ್ನನ್ನು ಸಲಹಲಿ.

---

೧. ಶ್ರೀಜಯತೀರ್ಥರ ಮೂಲಬೃಂದಾವನ ಸ್ಥಳವು 'ಮಳಖೇಡ' ಎಂದು ನಿರೂಪಿಸುವ ಅನೇಕ ಆಧಾರಗಳನ್ನು ಐತರೇಯ ಪ್ರಕಾಶನದ 'ಪದ್ಯಮಾಲಾ' (ಅನುವಾದ ಸಮೇತ)ದಲ್ಲೂ; ಶ್ರೀಮಾಧ್ವ ರಾದ್ಧಾಂತಸಂವರ್ಧಕಸಭಾ, ಉಡುಪಿ–ಇದರಪ್ರಕಾಶನದಸಂಸ್ಕೃತತೀರ್ಥಪ್ರಬಂಧ(ಸವ್ಯಾಖ್ಯಾನ)ದ ಮುನ್ನುಡಿಯಲ್ಲೂ ಸಂಗ್ರಹಿಸಿಕೊಡಲಾಗಿದೆ.

೨. ಸುರದ್ರುಮೋಽಪಿ ಮೇರುಪರ್ವತವಾಸೀ । ಅಭೀಷ್ಟದಾನೇನ ದಾಸೀಕೃತಾಮರಃ । -ವ್ಯಾ

೩. ಸರ್ವಪಾಪಾನಿ ವೇಂ ಪ್ರಾಹುಃ ಕಟಸ್ತದ್ದಾಹ ಉಚ್ಯತೇ ।
ತಸ್ಮಾದ್ವೇಂಕಟಶೈಲೇತಿ ಲೋಕೇ ಖ್ಯಾತೋ ಭವಿಷ್ಯತಿ ॥ -ಭವಿಷ್ಯೋತ್ತರ ಪುರಾಣ

ವಿ: ಮೇರುಪರ್ವತದಲ್ಲಿರುವ ಕಲ್ಪವೃಕ್ಷದಂತೆ, ವೇಂಕಟಪರ್ವತದ ಮೇಲೆ ನೆಲೆಸಿರುವ ದೇವತೆಗಳನ್ನೆಲ್ಲ ಕಿಂಕರನ್ನಾಗಿ ಮಾಡಿಕೊಂಡಿರುವ 'ಶ್ರೀನಿವಾಸ'ನೆಂಬ ಕಲ್ಪವೃಕ್ಷವು ನನ್ನ ಸಕಲಾಭೀಷ್ಟಗಳನ್ನು ಪೂರೈಸಿ ಪಾಲಿಸಲಿ. ಶ್ರೀನಿವಾಸನು ಅನಿಷ್ಟಪರಿಹಾರಕನೂ, ಸಕಲೇಷ್ಟಪ್ರದನೂ ಆದ ಸರ್ವೋತ್ತಮ ದೇವತೆ ಎಂದರ್ಥ.

**ದೃಷ್ಟ್ವಾ ದಿಶಿ ದಿಶಿ ಸ್ವೀಯಾನ್ ದಯಯಾ ಪಾಲಯನ್ನಿವ ।**
**ವರ್ತತೇ [1] ವಿಶ್ವತಶ್ಚಕ್ಷುರ್ವೇಂಕಟೇ ವೇಂಕಟೇಶ್ವರಃ ॥ ೨೦ ॥**

ಅ: **ವೇಂಕಟೇಶ್ವರಃ** = ವೇಂಕಟಪರ್ವತಕ್ಕೆ ಸ್ವಾಮಿಯಾದ ಶ್ರೀನಿವಾಸನು; **ದಿಶಿ ದಿಶಿ (ಸ್ಥಿತಾನ್)** = ದಿಕ್ಕು ದಿಕ್ಕಿನಲ್ಲಿರುವ (ಸಕಲದಿಕ್ಕುಗಳಲ್ಲಿರುವ); **ಸ್ವೀಯಾನ್** = ತನ್ನ ಭಕ್ತರನ್ನು; **ದೃಷ್ಟ್ವಾ** = ನೋಡಿ; **ದಯಯಾ** = ದಯೆಯಿಂದ; **ಪಾಲಯನ್ ಇವ** = ಪಾಲಿಸಲೋ ಎಂಬಂತೆ; **ವಿಶ್ವತಶ್ಚಕ್ಷುಃ ಸನ್** = ವಿಶ್ವತಶ್ಚಕ್ಷುವಾದ; **ವೇಂಕಟೇ** = ವೇಂಕಟಪರ್ವತದ ಮೇಲೆ; **ವರ್ತತೇ** = ನೆಲೆಸಿರುವನು. **(ಉತ್ಪ್ರೇಕ್ಷಾಲಂಕಾರ)**

**ವೇಂಕಟಪರ್ವತಕ್ಕೆ ಸ್ವಾಮಿಯಾದ ವಿಶ್ವತಶ್ಚಕ್ಷುವಾದ ಶ್ರೀನಿವಾಸನು ದಿಕ್ಕು ದಿಕ್ಕಿನಲ್ಲಿರುವ ತನ್ನ ಭಕ್ತರನ್ನು ನೋಡಿ ದಯೆಯಿಂದ ಪಾಲಿಸಲೋ ಎಂಬಂತೆ ವೇಂಕಟಪರ್ವತದ ಮೇಲೆ ನೆಲೆಸಿರುವನು.**

ವಿ: ೧. ತನಗೆ ಬೇಕಾದ ದೂರದ ಜನರನ್ನು ನೋಡಲೆಂದು ಒಬ್ಬನು ಉನ್ನತ ಪ್ರದೇಶದಲ್ಲಿ ನಿಲ್ಲುವುದು ಲೋಕದಲ್ಲಿ ಕಂಡಿದೆ; ಶ್ರೀನಿವಾಸನು ಸಕಲ ದಿಕ್ಕುಗಳಲ್ಲಿರುವ ತನ್ನ ಭಕ್ತರನ್ನು ನೋಡಿ, ಅವರನ್ನೆಲ್ಲ ಕರುಣೆಯಿಂದ ಸಲಹಲೋ ಎಂಬಂತೆ ಉನ್ನತವಾದ ವೇಂಕಟಪರ್ವತದ ಮೇಲೆ ನಿಂತಿರುವನು ಎಂದು ಉತ್ಪ್ರೇಕ್ಷಿಸಿರುವರು.

೨. 'ವಿಶ್ವತಚಕ್ಷುಃ' ಎಂಬ ಪದದಿಂದಲೇ (ಸರ್ವತ್ರ ವ್ಯಾಪ್ತನಾದ) ಅವನಿಗೆ ಹೀಗೆ ದೂರದ ಭಕ್ತರನ್ನು ಕಾಣಲೆಂದು ಎತ್ತರದ ಮೇಲೆ ನಿಲ್ಲುವ ಅವಶ್ಯಕತೆ ಇಲ್ಲ ಎಂಬ ತತ್ತ್ವವನ್ನೂ ಸೂಚಿಸಿರುವರು.

**ಯೇ [3] ಶಂಖಚಕ್ರೋಜ್ಜ್ವಲಬಾಹುಯುಗ್ಮಾಃ**
**ಸ್ವಾಂಘ್ರಿಂ ಭಜಂತೇ ಭವಸಿಂಧುರೇಷಃ ।**
**ಕಟಿಪ್ರಮಾಣಸ್ತ್ವಿತಿ ವೇಂಕಟೇಶಃ**
**ಸ್ಫುಟೀಕರೋತ್ಯಾತ್ಮಕರಾಂಬುಜಾತೈಃ ॥ ೨೧ ॥**

---

೧. ಯಥಾ ಕಶ್ಚಿದುಚ್ಚಸ್ಥಲೇ ಸ್ಥಿತ್ವಾ ದೂರಸ್ಥಿತಾನ್ ಪಶ್ಯತಿ ತದ್ವದಿತಿ ಭಾವಃ । -ವ್ಯಾ

೨. ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಸ್ಪಾತ್ । -ಮನ್ಯುಸೂಕ್ತ

೩. ಶಂಖಚಕ್ರಯುಕ್ತಕರಾಭ್ಯಾಂ ಶಂಖಚಕ್ರೋಜ್ಜ್ವಲಬಾಹುಯುಗ್ಮಾ ಇತ್ಯರ್ಥಃ । ವಾಮ-ಕಟಿಸ್ಥವಾಮಕರೇಣ ಭವಸಿಂಧುಃ ಕಟಿಪ್ರಮಾಣ ಇತ್ಯರ್ಥಃ । ದಕ್ಷಿಣಕಟಿಸ್ಥ ಅಧೋಮುಖ-ದಕ್ಷಿಣಹಸ್ತೇನ ಸ್ವಾಂಘ್ರಿಂ ಭಜಂತೇ ಇತ್ಯರ್ಥಃ ಸ್ಪಷ್ಟೋ ಭವತೀತಿ ಬೋದ್ಧವ್ಯಂ । -ವ್ಯಾ

ಅ: ವೇಂಕಟೇಶಃ = ವೇಂಕಟೇಶನು; ಯೇ = ಯಾವ ಜನರು; ಶಂಖ-ಚಕ್ರೋಜ್ಜ್ವಲಬಾಹುಯುಗ್ಮಾಃ = ಶಂಖಚಕ್ರಗಳಿಂದ ಶೋಭಿಸುವ ಎರಡು ಬಾಹು-ಗಳುಳ್ಳವರಾಗಿ; ಸ್ವಾಂಘ್ರಿಂ = ತನ್ನ ಪಾದವನ್ನು; ಭಜಂತೇ = ಭಜಿಸುವರೋ; ಏಷಾಷಂ= ಅಂತಹವರಿಗೆ; ಏಷಃ = ಈ; ಭವಸಿಂಧುಃ = ಭವಸಾಗರವು; ಕಟಿಪ್ರಮಾಣಃ ತು = ಸೊಂಟದಷ್ಟು ಮಾತ್ರವೇ; (ಆಗುವುದು); ಇತಿ = ಎಂಬುದಾಗಿ; ಆತ್ಮಕರಾಂಬುಜಾತ್ಯೈಃ = ತನ್ನ ಕರಕಮಲಗಳಿಂದ[1]; ಸ್ಫುಟೀಕರೋತಿ = ಸ್ಪಷ್ಟಪಡಿಸುತ್ತಿರುವನು.

ಯಾರು ಹೊಳೆಯುವ ಶಂಖಚಕ್ರಗಳನ್ನು ತೋಳುಗಳ ಮೇಲೆ ಧರಿಸಿ ತನ್ನ ಪಾದವನ್ನು ಭಜಿಸುವರೋ ಅಂತಹವರಿಗೆ ಈ ಭವಸಾಗರವು ಸೊಂಟದಷ್ಟು ಮಾತ್ರವೇ ಆಗುವುದು ಎಂಬುದಾಗಿ ತನ್ನ ಕರಕಮಲಗಳಿಂದ ಶ್ರೀವೇಂಕಟೇಶನು ಸ್ಪಷ್ಟವಾಗಿ ತಿಳಿಸುತ್ತಿರುವನು.

ವಿ: ೧. ಶ್ರೀನಿವಾಸನು ತನ್ನ ಮೇಲಿನ ಎರಡು ಕೈಗಳಲ್ಲಿ ಚಕ್ರ ಮತ್ತು ಶಂಖಗಳನ್ನು ಧರಿಸಿರುವನು; ಎಡ ಸೊಂಟದ ಮೇಲೆ ಕೆಳ ಎಡಗೈಯನ್ನಿರಿಸಿಕೊಂಡಿರುವನು; ಕೆಳಬಲಗೈಯನ್ನು ಕೆಳಮುಖವಾಗಿ ಹಿಡಿದಿರುವನು; ಶ್ರೀನಿವಾಸನ ಇಂತಹ ಕರವಿಲಾಸವನ್ನು ಶ್ರೀವಾದಿರಾಜರು ಅದೆಷ್ಟು ಉದ್ಬೋಧಕ ಎಂದು ಇಲ್ಲಿ ನಿರೂಪಿಸಿರುವರು;

೨. ಕೈಗಳಲ್ಲಿರುವ ಶಂಖಚಕ್ರಗಳಿಂದ ಗೋಪೀಚಂದನ, (ತಪ್ತ)ಮುದ್ರಾಧಾರಣೆಗಳು ಅವಶ್ಯ ಕರ್ತವ್ಯವೆಂದೂ, ಕೆಳಮುಖವಾದ ಕೆಳಬಲಗೈಯಿಂದ ತನ್ನ ಪಾದವನ್ನು ಭಜಿಸಬೇಕೆಂದೂ, ಸೊಂಟದ ಮೇಲಿನ ಕೆಳ ಎಡಗೈಯಿಂದ ಹೀಗೆ ತನ್ನನ್ನು ಭಜಿಸುವವರಿಗೆ ಸಂಸಾರ-ಸಮುದ್ರವು ಸೊಂಟದಷ್ಟು ಮಾತ್ರವೇ ಆಗುವುದರಿಂದ, ಅವರಿಗೆ ಸಂಸಾರದ ಭಯವಿಲ್ಲವೆಂದೂ ಸೂಚಿಸುತ್ತಿರುವನು. ತಪ್ತಮುದ್ರಾಧಾರಣ, ಹರಿಪಾದ ಭಜನೆಗಳು ಭವಸಮುದ್ರವನ್ನು ದಾಟಿಸುವ ಉಪಾಯಗಳೆಂದರ್ಥ.

**ಪ್ರಾಯೋಽನ್ಯತ್ರ ಗತಾಂ ಶ್ರಿಯಂ ನಿಜವಶಾಂ ಕರ್ತುಂ ಮುಹುಃ ಕಾಂಕ್ಷಿತಂ**
**ಭಕ್ತಾನಾಂ ಪ್ರದಿಶನ್ ಧನಂ ಪ್ರತಿದಿನಂ ಸಂಸಾಧ್ಯ ಸಾಧ್ಯಪ್ರಿಯಃ ।**
**ತತ್ ತತ್ರೈವ ಪುನಃ ಸಹಸ್ರಗುಣಿತಂ ಪಶ್ಯನ್ ಘನಶ್ಯಾಮಲಃ**
**ತೇಷಾಂ ವೇಶ್ಮಸು ವಿಸ್ಮಿತೋ ನಿವಸತಿ ಶ್ರೀವೇಂಕಟೇಶೋಽನಿಶಮ್ ॥ ೨೨ ॥**

ಅ: ಘನಶ್ಯಾಮಲಃ = ಮೇಘಶ್ಯಾಮನಾದ; [2]ಸಾಧ್ಯಪ್ರಿಯಃ = ಬ್ರಹ್ಮಾದಿ ದೇವತೆಗಳಿಗೆ ಪ್ರಿಯನಾದ; ಶ್ರೀವೇಂಕಟೇಶಃ = ಶ್ರೀವೇಂಕಟೇಶನು; ಪ್ರಾಯಃ = ಬಹಳವಾಗಿ; ಅನ್ಯತ್ರ=

---

೧. ಯಥಾ ಕರಪಲ್ಲವಕೌಶಲಾಭಿಜ್ಞಃ ಪುರುಷಃ ವಿವಕ್ಷಿತಾರ್ಥಂ ಕರಚೇಷ್ಟಯಾ ದರ್ಶಯತಿ ತದ್ವದಿತಿ ಭಾವಃ । -ವ್ಯಾ

೨. ಋಜವೋ ಬ್ರಹ್ಮಮುಖ್ಯಾ ಹಿ ಸುಪರ್ಣಃ ಶೇಷ ಏವ ಚ ।
ಸರಸ್ವತೀ ಸುಪರ್ಣೀ ಚ ವಾರುಣೀ ಸಾಧ್ಯನಾಮಕಾಃ ॥ -ಛಾಂದೋಗ್ಯಭಾಷ್ಯ

ತನ್ನ ಭಕ್ತರ ಮನೆಯಲ್ಲಿ; ಗತಾಂ = ನೆಲೆಸಿರುವ; ಶ್ರಿಯಂ = ಲಕ್ಷ್ಮಿ(ಸಂಪತ್ತು)ಯನ್ನು; ನಿಜವಶಾಂ ಕರ್ತುಂ = ತನ್ನ ವಶಕ್ಕೆ ತಂದುಕೊಳ್ಳಲೆಂದು; ಭಕ್ತಾನಾಂ =ಭಕ್ತರಿಗೆ; ಮುಹುಃ = ಮತ್ತೆ ಮತ್ತೆ; ಕಾಂಕ್ಷಿತಂ = ಅಭೀಷ್ಟವನ್ನು; ಪ್ರದಿಶನ್ = ಕೊಡುವವನಾಗಿ; (ತೇಭ್ಯಃ = ಅವರಿಂದ); ಪ್ರತಿದಿನಂ = ಪ್ರತಿದಿನವೂ; ಧನಂ = ಧನವನ್ನು; ಸಂಪಾದ್ಯ=[೧]ಪಡೆದುಕೊಂಡು; ತತ್ = ಆ ಹಣವನ್ನು; ತತ್ರೈವ = ಭಕ್ತರ ಮನೆಗಳಲ್ಲೆ; ಪುನಃ = ಮತ್ತೆ; ಸಹಸ್ರಗುಣಿತಂ = ಸಾವಿರಪಟ್ಟು ಹೆಚ್ಚುವುದನ್ನಾಗಿ[೨]; ಪಶ್ಯನ್ = ಕಾಣುತ್ತ; ವಿಸ್ಮಿತಃ = ಆಶ್ಚರ್ಯಪಡುತ್ತ; ತೇಷಾಂ ವೇಶ್ಮಸು = ಅವರ ಗೃಹಗಳಲ್ಲಿ; ಅನಿಶಂ = ನಿರಂತರವೂ; ನಿವಸತಿ = ನೆಲೆಸಿಬಿಟ್ಟಿರುವನು.[೩]

ತನ್ನ ಭಕ್ತರ ಮನೆಯಲ್ಲಿ ಬಹಳವಾಗಿ ನೆಲೆಸಿರುವ ಸಂಪತ್ತನ್ನು(ಮಹಾಲಕ್ಷ್ಮಿಯನ್ನು) ತನ್ನ ವಶಕ್ಕೆ ತೆಗೆದುಕೊಳ್ಳಲೆಂದು ಅವರ ಕಾಣಿಕೆಗೆ ಪ್ರತಿಯಾಗಿ ಭಕ್ತರಿಗೆ ಮತ್ತೆ ಮತ್ತೆ ಅಭೀಷ್ಟವನ್ನು ನೀಡತೊಡಗಿದ ಮೇಘಶ್ಯಾಮನಾದ, ದೇವಪ್ರಿಯನಾದ ಶ್ರೀವೇಂಕಟೇಶನು ಆ ಸಂಪತ್ತು ಭಕ್ತರ ಮನೆಗಳಲ್ಲಿ ಮತ್ತೆ ಸಾವಿರಪಟ್ಟು ಹೆಚ್ಚಿದ್ದನ್ನು ಕಂಡು ವಿಸ್ಮಯಪಡುತ್ತಾ ಅವರ ಗೃಹಗಳಲ್ಲೇ ತಾನು ಸ್ವತಃ ನಿರಂತರ ನೆಲೆಸಿಬಿಟ್ಟಿರುವನು.

ವಿ: ೧. ಶ್ರೀಹರಿಭಕ್ತರು ಸಾಮಾನ್ಯವಾಗಿ ಶ್ರೀಮಂತರಾಗಿರುವರು; ಅವರಲ್ಲಿನ 'ಶ್ರೀ' -ಯನ್ನು ತಾನು ಪಡೆಯಲೆಂದು ಶ್ರೀನಿವಾಸನು ಅವರ ಇಷ್ಟಾರ್ಥಗಳನ್ನು ಪೂರೈಸಿಕೊಡುವನು; ತಮ್ಮ ಇಷ್ಟಾರ್ಥ ಈಡೇರಿದ್ದಕ್ಕೆ ಸಂಪತ್ತನ್ನು ಅರ್ಪಿಸಿದ ಅನಂತರವೂ ತನ್ನ ಭಕ್ತರು ಮೊದಲಿಗಿಂತ ಶ್ರೀಮಂತರಾಗಿರುವುದನ್ನು ನೋಡಿ ವಿಸ್ಮಯ ಪಡುತ್ತ ಅವನು ತನ್ನ 'ಶ್ರೀ' ಇದ್ದಲ್ಲಿ ತಾನು ನೆಲೆಸಿಬಿಡುವುದೇ ಉತ್ತಮ ಎಂದು ತಾನೂ ಅವರ ಮನೆಗಳಲ್ಲೇ ನೆಲೆಸಿಬಿಡುವನು.

೨. ಭಗವದ್ಭಕ್ತರು ತಮ್ಮಲ್ಲಿನ ಧನಾದಿಗಳನ್ನು ಶ್ರೀಹರಿಗೆ ಸಮರ್ಪಿಸಿದಂತೆ,ಅವರ ಸಂಪತ್ತು ಅಪಾರವಾಗಿ ಹೆಚ್ಚುವುದು; ಅಂತಹ ಸಾತ್ವಿಕ ಸಂಪತ್ತಿನ ಜನರಲ್ಲಿ ಹರಿಭಕ್ತಿ ಮೊದಲಾದ ಸದ್ಗುಣಗಳು ಸದಾ ನೆಲೆಸಿರುವವು ಎಂದು ಭಾವ.

**ಆರೂಢಗರುಡಸ್ಕಂಧಮಾಲಿಂಗಿತರಮಾಧರಮ್ ।**
**ಆನಮಜ್ಜನಸರ್ವಸ್ವಮಾಶ್ರಯೇ ವೇಂಕಟೇಶ್ವರಮ್ ॥ ೨೩ ॥**

---

೧. ಭಕ್ತಾಃ ವೇಂಕಟಪತಿಪ್ರಾರ್ಥನಯಾ ಸ್ವೇಷ್ಟಲಾಭೇ ಸತಿ ವೇಂಕಟಪತಯೇ ಧನಸಮರ್ಪಣಂ ಕುರ್ವಂತೀತಿ ಭಾವಃ । -ವ್ಯಾ

೨. ವೇಂಕಟಪತಯೇ ಧನಸಮರ್ಪಣೇನ ಸ್ವಸ್ಯಾಧಿಕಧನಾಭಿವೃದ್ಧಿರ್ಭವತೀತಿ ಭಾವಃ । -ವ್ಯಾಖ್ಯಾನ

೩. ಶ್ರಿಯಂ ತ್ಯಕ್ತುಮಸಮರ್ಥಃ ಸನ್ ಏಕೈಕಮೂರ್ತ್ಯಾ ಭಕ್ತಗೃಹೇ ತಿಷ್ಠತೀತ್ಯರ್ಥಃ । ಭಕ್ತಾಃ ವೇಂಕಟಪತಿಕೃಪಯಾ ಧನಸಮೃದ್ಧಿರ್ಜಾಯತೇ ಇತಿ ಕೃತ್ವಾ ಶ್ರೀವೇಂಕಟಪತಿಪ್ರತಿಮಾಂ ಸ್ವಸ್ವಗೃಹೇ ಪೂಜಯಂತೀತಿ ಭಾವಃ । -ವ್ಯಾ

ಅ: ಆರೂಢಗರುಡಸ್ಕಂಧಂ = ಗರುಡನ ಭುಜದ ಮೇಲೆ ಏರಿ ಕುಳಿತಿರುವ; ಆಲಿಂಗಿತರಮಾಧರಂ = ಶ್ರೀದೇವಿ ಮತ್ತು ಭೂದೇವಿಯರನ್ನು ಆಲಂಗಿಸಿಕೊಂಡಿರುವ; ಆನಮಜ್ಜನಸರ್ವಸ್ವಂ = ಪ್ರಣತಜನರಿಗೆ ಸರ್ವಸ್ವನಾಗಿರುವ; ವೇಂಕಟೇಶ್ವರಂ = ಶ್ರೀವೇಂಕಟೇಶ್ವರನನ್ನು; ಆಶ್ರಯೇ = ಆಶ್ರಯಿಸುವೆನು.

ಗರುಡನ ಹೆಗಲೇರಿರುವ, ಶ್ರೀದೇವಿ ಭೂದೇವಿಯರನ್ನು ತಕ್ಕೈಸಿರುವ, ಪ್ರಣತ-ಜನರಿಗೆ ಸರ್ವಸ್ವನಾಗಿರುವ ಶ್ರೀವೇಂಕಟೇಶ್ವರನನ್ನು ಆಶ್ರಯಿಸುವೆನು.

ವಿ: ೧. ಇದು ಗರುಡೋತ್ಸವ ಕಾಲದಲ್ಲಿ ಗರುಡನ ಮೇಲೆ ಕುಳಿತಿರುವ ಶ್ರೀನಿವಾಸನ ವರ್ಣನೆಯಾಗಿದೆ.

೨. ಇಲ್ಲಿ ಪ್ರತಿಪಾದದ ಆದಿಯಲ್ಲಿನ 'ಆ' ಕಾರವೂ, ಅಂತ್ಯದಲ್ಲಿನ ಅನುಸ್ವಾರವೂ ಶ್ರೀವಾದಿರಾಜರ ಕೌಶಲಕ್ಕೆ ನಿದರ್ಶನವಾಗಿದೆ. ಗರುಡೋತ್ಸವವು ಶ್ರೀನಿವಾಸನಿಗೆ ನಡೆಯುವ ಪ್ರಮುಖ ಉತ್ಸವಗಳಲ್ಲೊಂದು.

**ಕಶಿಪೂಕೃತ್ಯ ಯಂ ಶೇತೇ ಗಿರೀಕೃತ್ಯಾಧಿಷ್ಠತಿ ।**
**ಅವತೀರ್ಣೋಽನುಜೀಕೃತ್ಯ ಸ ತದ್ಭಕ್ತಾಗ್ರಣೀಃ ಫಣೀ ॥ ೨೪ ॥**

ಅ: (ಶ್ರೀನಿವಾಸಃ = ಶ್ರೀನಿವಾಸನು); ಯಂ = ಯಾರನ್ನು; ಕಶಿಪೂಕೃತ್ಯ = ಶೇಷರೂಪದಿಂದ ಹಾಸಿಗೆಯನ್ನಾಗಿಸಿಕೊಂಡು; ಶೇತೇ = (ಶೇಷಶಾಯಿಯಗಿ) ಮಲಗಿರುವನೋ; ಗಿರೀಕೃತ್ಯ = ಪರ್ವತವನ್ನಾಗಿ ಮಾಡಿಕೊಂಡು; ಅಧಿತಿಷ್ಠತಿ = (ಶ್ರೀನಿವಾಸನಾಗಿ) ಮೇಲೆ ನಿಂತಿರುವನೋ; ಅನುಜೀಕೃತ್ಯ = ತಮ್ಮನಾಗಿ; ಅವತೀರ್ಣಃ = ಅವತರಿಸಿದನೋ; ಸಃ ಫಣೀ = ಅಂತಹ ಶೇಷನು; ತದ್ಭಕ್ತಾಗ್ರಣೀಃ = ಅವನ ಭಕ್ತರಲ್ಲಿ ಅಗ್ರೇಸರನಾಗಿರುವನು.

ಶ್ರೀನಿವಾಸ ಹಾಸಿಗೆಯನ್ನಾಗಿ ಮಾಡಿ ಮಲಗಿಕೊಂಡ, ಬೆಟ್ಟವನ್ನಾಗಿ ಮಾಡಿ ಮೇಲೆ ನಿಂತ, ತಮ್ಮನಾಗಿ ತಾನು ಕೃಷ್ಣರೂಪದಿಂದ ಅವತರಿಸಿದ, ಆದಿಶೇಷ ಅವನ ಭಕ್ತಾಗ್ರೇಸರನೇ ಆಗಿರುವನು.

ವಿ: ಶ್ರೀಹರಿಯು ಶೇಷನ ಮೇಲೆ ಶೇಷಶಾಯಿಯಾಗಿ ಮಲಗಿರುವನು; ಶ್ರೀನಿವಾಸರೂಪದಿಂದ ವೇಂಕಟಪರ್ವತರೂಪದ ಅವನ ಮೇಲೆ ನಿಂತಿರುವನು; ಶ್ರೀರಾಮ-ರೂಪದಿಂದ ಲಕ್ಷ್ಮಣರೂಪದ ಅವನನ್ನು ತಮ್ಮನನ್ನಾಗಿ ಮಾಡಿಕೊಂಡಿರುವನು; ಹೀಗೆ ಮಲಗು-ವಾಗ, ನಿಂತಾಗ ಮತ್ತು ಅವತರಿಸುವಾಗ ಶ್ರೀಹರಿಯಿಂದ ಅನುಗೃಹೀತನಾಗಿರುವ ಶೇಷದೇವರು ಅವನ ಭಕ್ತಾಗ್ರೇಸರರು ಎಂಬುದು ನಿಶ್ಚಿತ ಎಂದು ಭಾವ. ಶ್ರೀವೇಂಕಟಪರ್ವತವು ಶೇಷಾತ್ಮಕ ಎಂದು ತಾತ್ಪರ್ಯ.

**ಶಂಕರರವಿಶಶಿಮುಖ್ಯಾಃ ಕಿಂಕರಪದವೀಮುಪಾಶ್ರಿತಾ ಯಸ್ಯ ।**
**ವೇಂಕಟಗಿರಿನಾಥೋಽಸೌ ಪಂಕಜನಯನಃ ಪರಾತ್ಪರೋ ಜಯತಿ ॥ ೨೫ ॥**

ಅ: ಶಂಕರರವಿಶಶಿಮುಖ್ಯಾಃ = ಶಿವ, ಸೂರ್ಯ ಮತ್ತು ಚಂದ್ರರೇ ಮೊದಲಾದ ದೇವತೆಗಳು; ಯಸ್ಯ= ಯಾರ; ಕಿಂಕರಪದವೀಂ = ಭೃತ್ಯತ್ವವನ್ನು; ಉಪಾಶ್ರಿತಾಃ = ಹೊಂದಿರುವರೋ; (ಅಂತಹ) ಪರಾತ್ = ಉತ್ತಮವಾದ ಬ್ರಹ್ಮಾದಿ ಜಗತ್ತಿಗಿಂತಲೂ; ಪರಃ = ಮಿಗಿಲಾದ; ಪಂಕಜನಯನಃ = ಪುಂಡರೀಕಾಕ್ಷನಾದ; ಅಸೌ = ಈ; ವೇಂಕಟಗಿರಿ-ನಾಥಃ = ವೇಂಕಟಪರ್ವತದ ಸ್ವಾಮಿಯಾದ ಶ್ರೀನಿವಾಸನು; ಜಯತಿ = ಸರ್ವೋತ್ಕೃಷ್ಟ-ನಾಗಿರುವನು.

ಶಿವ ಸೂರ್ಯ ಚಂದ್ರ ಮೊದಲಾದವರು ಕಿಂಕರಪದವಿಯನ್ನು ಸದಾ ಹೊಂದಿರುವ; ವೇಂಕಟಗಿರಿಯನಾಥನಾದ; ಪುಂಡರೀಕಾಕ್ಷನಾದ ಇವನು ಸರ್ವೋತ್ಕೃಷ್ಟ-ನಾಗಿರುವನು.

ವಿ: ೧. ಲೋಕನಾಥರೆನ್ನಿಸಿದ ರುದ್ರಾದಿ ದೇವತೆಗಳೂ ಶ್ರೀವೇಂಕಟೇಶನ ಕಿಂಕರ-ರಾಗಿರುವರು[೧]; ಅಂತಹ ಶ್ರೀನಿವಾಸನು ಪುಂಡರೀಕಾಕ್ಷನೂ, ಬ್ರಹ್ಮಾದಿ ಸಕಲಜಗತ್ತಿಗೆ ಮಿಗಿಲಾದವನೂ[೨] ಆಗಿರುವನು;

೨. ವೇಂಕಟೇಶಕಲ್ಯಾಣ ಸಮಯದಲ್ಲಿ ಬ್ರಹ್ಮರುದ್ರಾದಿ ಸಕಲ ದೇವತೆಗಳೂ, ಶ್ರೀನಿವಾಸನ ಕಿಂಕರರಾಗಿ ಸೇವೆ ಸಲ್ಲಿಸಿದ ವಿವರವು ಭವಿಷ್ಯೋತ್ತರಪುರಾಣದಲ್ಲಿ ಬಂದಿದೆ.

**ಶ್ರೀವೇಂಕಟಗಿರಿದ್ರೋಣೀ ಕ್ಷೋಣೀ ಯಸ್ಯಾನಣೀಯಸೀ ।**
**ತಂ ವರೇಣ್ಯಂ ಸುರಾಗ್ರಣ್ಯಂ ವೇದಗಮ್ಯಂ ಭಜಾಮಹೇ ॥ ೨೬ ॥**

ಅ: ಯಸ್ಯ = ಯಾರಿಗೆ, ಅನಣೀಯಸೀ = ತುಂಬಾ ಉನ್ನತವಾದ; ಶ್ರೀವೇಂಕಟ-ಗಿರಿದ್ರೋಣೀ = ಸಂಪದ್ಯುಕ್ತವಾದ ಶ್ರೀವೇಂಕಟಪರ್ವತದ ತಪ್ಪಲು ಪ್ರದೇಶವು; ಕ್ಷೋಣೀ = ವಾಸಸ್ಥಾನವಾಗಿರುವುದೋ ಅಂತಹ; ವರೇಣ್ಯಂ = ಶ್ರೇಷ್ಠನಾಗಿರುವ; ಸುರಾಗ್ರಣ್ಯಂ = ದೇವಸೇನೆಯ ಮಹಾನಾಯಕನಾಗಿರುವ; ವೇದಗಮ್ಯಂ = ವೇದವೇದ್ಯನಾಗಿರುವ; ತಂ = ಆ; ವೇಂಕಟಪತಿಂ = ಶ್ರೀವೇಂಕಟೇಶನನ್ನು; ಭಜಾಮಹೇ = ಸೇವಿಸುವೆವು (ಅನುಪ್ರಾಸಾಲಂಕಾರ).

ಉನ್ನತವಾದ ಶ್ರೀವೇಂಕಟಪರ್ವತದ ತಪ್ಪಲು ಪ್ರದೇಶವೇ ವಾಸಭೂಮಿಯಾಗಿರುವ, ಸುರಶ್ರೇಷ್ಠನಾದ, ಭಜನೀಯನಾದ, ವೇದವೇದ್ಯನಾದ ಶ್ರೀವೇಂಕಟೇಶನನ್ನು ಸೇವಿಸುವೆವು.

---

೧. ಕಲತ್ರಂ ಕಮಲಾ ಯಸ್ಯ ಪುತ್ರಃ ಕಮಲಸಂಭವಃ ।
ಶಿವಾದ್ಯಾಃ ಸೇವಕಾಸ್ತಸ್ಮೈ ನಮೋ ವಿಶ್ವಕುಟುಂಬಿನೇ ॥
- ಎಂಬ ವಿಷ್ಣುತತ್ತ್ವನಿರ್ಣಯ ಟೀಕೆಯ ಮಾತೂ ಇಲ್ಲಿ ಗಮನಾರ್ಹ.

೨. ವೇಂಕಟೇಶಸಮೋ ದೇವೋ ನ ಭೂತೋ ನ ಭವಿಷ್ಯತಿ ॥ -ಬ್ರಹ್ಮಾಂಡಪುರಾಣ

**ಶ್ರೀವೇಂಕಟಪತೇ ದೀನಗತೇ ರಮ್ಯಾಕೃತೇ ಕ್ಷಿತೌ ।**
**ಸಮಃ ಸಮಸ್ತಮರ್ತ್ಯಾರ್ತಿಪ್ರಮರ್ದನ ಕಿಮಸ್ತಿ ತೇ ॥ ೨೭ ॥**

ಅ: ದೀನಗತೇ ! = ದೀನರಿಗೆ ಆಸರೆಯಾದ; ರಮ್ಯಾಕೃತೇ ! = ಮನೋಹರ ಆಕೃತಿಯುಳ್ಳ; ಸಮಸ್ತಮರ್ತ್ಯಾರ್ತಿಪ್ರಮರ್ದನ ! = ಸಮಸ್ತಜನರ ಸಂಕಟ ನಿವಾರಕನಾದ; (ಹೇ) ಶ್ರೀವೇಂಕಟಪತೇ ! = ಶ್ರೀವೇಂಕಟೇಶನೇ !; ತೇ = ನಿನಗೆ; ಕ್ಷಿತೌ = ಭೂಮಿಯ ಮೇಲೆ; ಸಮಃ = ಸಮನಾದವನು; ಅಸ್ತಿ ಕಿಂ? = ಇರುವನೇನು?

ದೀನರಿಗೆ ಆಸರೆಯಾದವನೇ ! ರಮ್ಯ ಸ್ವರೂಪನೇ ! ಸಮಸ್ತ ಮಾನವರ ನೋವನ್ನು ಕಳೆಯುವವನೇ ! ಶ್ರೀವೇಂಕಟಪತಿಯೇ ! ಈ ಭೂಮಿಯಲ್ಲಿ ನಿನಗೆ ಸಮನಾದವನು ಇರುವನೇ?

ವಿ: ೧. ಶ್ರೀವೇಂಕಟೇಶನ ಮನೋಹರವಾದ ಆಕೃತಿ, ಅವನು ಆರ್ತರಿಗೆ ನೀಡುವ ಆಸರೆ, ಸಮಸ್ತ ಜನಗಳ ಸಂಕಟವನ್ನು ಪರಿಹರಿಸುವ ಹಿರಿಮೆ ಮೊದಲಾದ ಪ್ರತಿಯೊಂದು ಗುಣವೂ ಅವನ ಸರ್ವೋತ್ತಮತ್ವವನ್ನು ಸಾರುತ್ತವೆ ಎಂದು ಭಾವ.

೨. ಈ ಶ್ಲೋಕದ ಪೂರ್ವಾರ್ಧದಲ್ಲಿ ಲಲಿತವಾದ ವೈದರ್ಭಿ ರೀತಿಯೂ[೧], ಉತ್ತರಾರ್ಧದಲ್ಲಿ ಗಡುಸಾದ [೨]ಗೌಡೀರೀತಿಯೂ ಇವೆ.[೩]

**ಸಮಸ್ತಸುಜನಾಧಾರಂ ದೋಷದೂರಂ ಗುಣಾಕರಮ್ ।**
**ಶ್ರೀವೇಂಕಟಾಚಲಾವಾಸಂ ಶ್ರೀನಿವಾಸಂ ಭಜೇಽನಿಶಮ್ ॥ ೨೮ ॥**

ಅ: ಸಮಸ್ತಸುಜನಾಧಾರಂ = ಸಕಲಸಜ್ಜನರಿಗೆ ಆಧಾರಭೂತನೂ, ದೋಷದೂರಂ = ನಿರ್ದೋಷನೂ, ಗುಣಾಕಾರಂ = ಗುಣಪೂರ್ಣನೂ; ಶ್ರೀವೇಂಕಟಾಚಲಾವಾಸಂ = ಶ್ರೀವೇಂಕಟಗಿರಿನಿಲಯನೂ, (ಆದ) ಶ್ರೀನಿವಾಸಂ = ಶ್ರೀನಿವಾಸನನ್ನು; ಅನಿಶಂ = ಅನವರತವೂ; ಭಜೇ = ಸೇವಿಸುವೆನು.

ಸಕಲಸಜ್ಜನರಿಗೆ ನೆಲೆಯಾದ, ದೋಷರಹಿತನಾದ, ಗುಣಪೂರ್ಣನಾದ ಶ್ರೀವೇಂಕಟಗಿರಿನಿಲಯನಾದ, ಶ್ರೀನಿವಾಸನನ್ನು ಅನವರತವೂ ಸೇವಿಸುವೆನು.

ವಿ: ಶ್ರೀನಿವಾಸನನ್ನು ದೋಷದೂರ, ಗುಣಾಕರ ಎಂದು ವರ್ಣಿಸುವ ಮೂಲಕ ಅವನು ಬ್ರಹ್ಮಸೂತ್ರ ಪ್ರತಿಪಾದ್ಯನಾದ ಪರಬ್ರಹ್ಮನಾದ ಶ್ರೀ ಹರಿ ಎಂದು ತಿಳಿಸಿರುವರು. ಶ್ರೀನಿವಾಸ ಎಂಬ ಪದದಲ್ಲಿ ಅವನು ದೋಷದೂರ, ಗುಣಾಕರ ಎಂಬ ಅರ್ಥವು ಸೂಚಿತವಾಗಿದೆ.

---

೧. ಮಾಧುರ್ಯವ್ಯಂಜಕೈರ್ವರ್ಣೈ ರಚನಾ ಲಲಿತಾತ್ಮಿಕಾ ।
ಅವೃತ್ತಿರಲ್ಪವೃತ್ತಿರ್ವಾ ವೈದರ್ಭೀರೀತಿರಿಷ್ಯತೇ ॥ -ಸಾಹಿತ್ಯದರ್ಪಣ

೨. ಓಜಃಪ್ರಕಾಶಕೈರ್ವರ್ಣೈರ್ಬಂಧ ಆಡಂಬರಃ ಪುನಃ ।
ಸಮಾಸಬಹುಲಾ ಗೌಡೀ... ॥ -ಸಾಹಿತ್ಯದರ್ಪಣ

೩. ಪೂರ್ವಾರ್ಧೇ ವೈದರ್ಭೀರೀತಿಃ ಉತ್ತರಾರ್ಧೇ ಗೌಡೀ ರೀತಿಃ । ವ್ಯಾಖ್ಯಾನ

ಆನಂದತೀರ್ಥವರದೇ[1] ದಾನವಾರಣ್ಯಪಾವಕೇ ।
ಜ್ಞಾನದಾಯಿನಿ ಸರ್ವೇಶೇ ಶ್ರೀನಿವಾಸೇಽಸ್ತು ಮೇ ಮನಃ ॥ ೨೯ ॥

ಅ: ಆನಂದತೀರ್ಥವರದೇ = ಶ್ರೀಮಧ್ವಾಚಾರ್ಯರಿಗೆ ವರಪ್ರದನೂ; ದಾನವಾರಣ್ಯಪಾವಕೇ = ದಾನವಾರಣ್ಯಕ್ಕೆ ಅಗ್ನಿಯಂತೆ ನಾಶಕನೂ; ಜ್ಞಾನದಾಯಿನಿ = ಜ್ಞಾನಪ್ರದನೂ; ಸರ್ವೇಶೇ = ಸಕಲರಿಗೆ ಸ್ವಾಮಿಯೂ; (ಆದ); ಶ್ರೀನಿವಾಸೇ = ಶ್ರೀನಿವಾಸನಲ್ಲಿ; ಮೇ = ನನ್ನ; ಮನಃ = ಮನಸ್ಸು; ಅಸ್ತು = ನೆಲೆಸಲಿ.

ಆನಂದತೀರ್ಥರಿಗೆ ವರಪ್ರದನಾದ, ದಾನವರೆಂಬ ಅರಣ್ಯಕ್ಕೆ ಅಗ್ನಿಯಾದ, ಜ್ಞಾನಪ್ರದನಾದ, ಸರ್ವಸ್ವಾಮಿಯಾದ ಶ್ರೀನಿವಾಸನಲ್ಲಿ ನನ್ನ ಮನಸ್ಸು ನೆಲೆಸಲಿ.

ವಿ: ೧. ಶ್ರೀನಿವಾಸನು ಸರ್ವಸ್ವಾಮಿಯು; ಅವನ ಸೇವನೆಯಿಂದ ಶ್ರೀಮಧ್ವಶಾಸ್ತ್ರವೆಂಬ ವರವು[2] ಲಭಿಸುತ್ತದೆ. ದಾನವರ ಪೀಡೆಯು ಪರಿಹಾರವಾಗುತ್ತದೆ; ತತ್ತ್ವಜ್ಞಾನವು ಲಭಿಸುತ್ತದೆ; ಆದ್ದರಿಂದಲೇ ಸದಾ ಅವನಲ್ಲೇ ಮನಸ್ಸನ್ನು ನೆಲೆಗೊಳಿಸಬೇಕು ಎಂದು ಭಾವ.

೨. ಶ್ರೀಮದಾಚಾರ್ಯರು ವೇಂಕಟಪರ್ವತದ ಬಳಿಯ ಸ್ವರ್ಣಮುಖೀನದೀ ತೀರದ ಬ್ರಹ್ಮಶಿಲೆ ಎಂಬಲ್ಲಿ ಚಾತುರ್ಮಾಸ್ಯಕ್ಕೆ ಕುಳಿತಿದ್ದ ವಿವರವು ಬ್ರಹ್ಮಪುರಾಣದಲ್ಲಿದೆ[3].

೩. ತಿರುಪತಿಯು ಎಂಟು ಸ್ವಯಂವ್ಯಕ್ತ ಮಹಾಕ್ಷೇತ್ರಗಳಲ್ಲಿ ಒಂದಾಗಿದೆ. ವೃಷಭಾದ್ರಿ (ಕೃತಯುಗ), ಅಂಜನಾದ್ರಿ (ತ್ರೇತಾಯುಗ), ಶೇಷಾದ್ರಿ (ದ್ವಾಪರಯುಗ) ಮತ್ತು ವೇಂಕಟಾದ್ರಿ (ಕಲಿಯುಗ) ಎಂದು ಚತುರ್ಯುಗಗಳಲ್ಲೂ ಖ್ಯಾತವಾದ ಪರ್ವತ ಎಂಬುದು ಇದರ ಹಿರಿಮೆ.

---

೧. ಆನಂದತೀರ್ಥಪರಾನಂದವರದ ॥ -ದ್ವಾದಶಸ್ತೋತ್ರ

೨. ಆನಂದತೀರ್ಥಾಖ್ಯಂ ಮಧ್ವಶಾಸ್ತ್ರರೂಪಂ ವರಂ ದದಾತೀತಿ ಆನಂದತೀರ್ಥವರದಃ । ತಸ್ಯ ಸಂಬುದ್ಧಿಃ - ಎಂದು ವಿಗ್ರಹ ಮಾಡಿದಾಗ ಈ ಅರ್ಥವು ಬರುತ್ತದೆ.

೩. ತ್ವಂ ಚಾಪಿ ಗಚ್ಛ ಶೈಲೇಂದ್ರಂ ಪೂರ್ವಂ ಸ್ವರ್ಣಮುಖೀತಟೇ ।
ಯತ್ರ ಬ್ರಹ್ಮಶಿಲಾ ನಾಮ ಸರಿನ್ಮಧ್ಯೇ ಚ ವರ್ತತೇ ॥
ಅಗಸ್ತ್ಯತಪಸಾ ಪಶ್ಚಾತ್ ಗಯಾಸಾನ್ನಿಧ್ಯಮತ್ರ ವೈ ।
ಪಾದಾ ಈಶಾನವಿಷ್ಣ್ವಾದಿದೇವಾನಾಂ ತತ್ರ ಸಂತಿ ಹಿ ॥

ಯತಿರೂಪೋ ಮಾತರಿಶ್ವಾಽಷ್ಟಾವಿಂಶತಿಮೇ ಕಲೌ ।
ಅವತೀರ್ಯ ವಸತ್ಯತ್ರ ಮಧ್ವನಾಮಾ ವರಂ ವಿಭೋಃ ॥
ಅವಾಪ ತಪಸಾ ಪುಣ್ಯಾಃ ಪ್ರೀತ್ಯಾ ಚಾಗಸ್ತ್ಯಯೋಗಿನಃ ।
ತತ್ಸ್ಥಾಪಿತಾಲಯೇ ಪುಣ್ಯೇ ಚಾತುರ್ಮಾಸ್ಯಂ ಕರಿಷ್ಯತಿ ।
ಶುಕಃ ಶ್ರೋಷ್ಯತಿ ಸಚ್ಛಾಸ್ತ್ರಂ ಪದ್ಮತೀರ್ಥಾದಿಹಾಗತಃ ॥

- ಇವೆಲ್ಲ ಬ್ರಹ್ಮಪುರಾಣದವಚನಗಳು(ಕ್ಷೇತ್ರಕಾಂಡ ವೇಂಕಟಗಿರಿ ಮಾಹಾತ್ಮ್ಯ ತೃತೀಯಾಧ್ಯಾಯದಲ್ಲಿನ ಶಂಖಲಿಖಿತಸಂವಾದ) ಎಂಬುದಾಗಿ, ಶ್ರೀವಿಜಯೀಂದ್ರ ಸ್ವಾಮಿಗಳ ಮಧ್ವಾಧ್ವಕಂಟಕೋದ್ಧಾರದಲ್ಲಿ ಉದ್ಧೃತವಾಗಿವೆ.

ವರಾಹ ಮೊದಲಾದ ೧೨ ಪುರಾಣಗಳಲ್ಲೂ ಪಂಚರಾತ್ರದಲ್ಲೂ[3] ವೇದಗಳಲ್ಲೂ ಇದರ ಮಹತ್ತ್ವವು ಬಂದಿದೆ. ಭವಿಷ್ಯೋತ್ತರಪುರಾಣದ ವೇಂಕಟೇಶಮಾಹಾತ್ಮ್ಯವು ವಿಶೇಷವಾಗಿ ಪ್ರಚಾರದಲ್ಲಿದೆ.

೪. ಶ್ರೀಮಹಾಲಕ್ಷ್ಮಿಯು ಭೃಗುಮಹರ್ಷಿಗಳ ಹರಿಸರ್ವೋತ್ತಮತ್ವ ಸ್ಥಾಪನೆಯ ಪ್ರಸಂಗದಲ್ಲಿ ಒಂದು ರೂಪದಿಂದ ಭೂಲೋಕದ 'ಕರವೀರ' (ಕೊಲ್ಹಾಪುರ) ಕ್ಕೆ ನಡೆದಾಗ, ಶ್ರೀಹರಿಯು ವೇಂಕಟಾದ್ರಿಯ ಸ್ವಾಮಿಪುಷ್ಕರಣೀತೀರದಲ್ಲಿ ನೆಲೆಸುವನು. ಇಲ್ಲಿಯ ಶ್ರೀಹರಿಸನ್ನಿಧಾನವನ್ನು 'ಶಿಲಾವದ್ದೃಶ್ಯತೇ ಹರಿಃ' ಎಂದು ಪುರಾಣಗಳು ವರ್ಣಿಸಿವೆ. ಇಂತಹ ಸನ್ನಿಧಾನ ವಿಶೇಷದಿಂದಾಗಿ ಇದಕ್ಕೆ 'ಭೂವೈಕುಂಠ' ಎಂದೇ ಪ್ರಸಿದ್ಧಿಯುಂಟಾಗಿದೆ.

೫. ವೇಂಕಟಪರ್ವತದಲ್ಲಿ ನೂರಾರು ತೀರ್ಥಗಳಿದ್ದು, ಅವುಗಳಲ್ಲಿ ಸ್ವಾಮಿಪುಷ್ಕರಣಿಯು ಪ್ರಧಾನವೆನ್ನಿಸಿದೆ; ಈ ತೀರ್ಥಕ್ಕೆ ಸರಸ್ವತೀದೇವಿಯೇ ಅಭಿಮಾನಿ ದೇವತೆ. ಧನುರ್ಮಾಸದ ಶುಕ್ಲಪಕ್ಷದ ದ್ವಾದಶೀ (ಮುಕ್ಕೋಟಿದ್ವಾದಶೀ) ಅರುಣೋದಯದಲ್ಲಿ ಇದರಲ್ಲಿ ಗಂಗಾದಿಗಳ ಸಕಲತೀರ್ಥಗಳ ಅಭಿಮಾನಿದೇವತೆಗಳು ಸನ್ನಿಹಿತರಾಗಿರುವರು ಎಂದು ಪುರಾಣಗಳು ಸಾರಿವೆ.[2]

೬. ವರಾಹಪುರಾಣ(ಪ್ರಥಮಭಾಗ ಅ. ೩೩ ರಿಂದ೬೨ - ಒಟ್ಟು ೩೦ ಅಧ್ಯಾಯಗಳು ಮತ್ತು ದ್ವಿತೀಯಭಾಗ ೧ ರಿಂದ ೧೦ - ಒಟ್ಟು೧೦ ಅಧ್ಯಾಯಗಳಲ್ಲಿ), ಪದ್ಮಪುರಾಣ(ಅ.೨೪ ರಿಂದ ೩೪ ರವರೆಗೆ ಒಟ್ಟು ೧೧ ಅಧ್ಯಾಯಗಳು), ಗರುಡಪುರಾಣ(ಅ.೬೩), ಹರಿವಂಶ(ಶೇಷಧರ್ಮ ಅ.೪೮), ಬ್ರಹ್ಮಪುರಾಣ(ಅ. ೧ರಿಂದ ೧೧). ಮಾರ್ಕಂಡೇಯ ಪುರಾಣ(ಅ.೧ ರಿಂದ ೫), ವಾಮನಪುರಾಣ(೨೦ ರಿಂದ ೪೪ರ ವರೆಗೆ) ಒಟ್ಟು ೨೫ ಅಧ್ಯಾಯಗಳು, ಬ್ರಹ್ಮೋತ್ತರ ಖಂಡ(ಅ. ೫೦ ರಿಂದ ೫೧), ಸ್ಕಂದಪುರಾಣ (ಅ. ೧ ರಿಂದ ೧೭, ಅ,೩೭, ಅ ೧ರಿಂದ ೧೦ ಮತ್ತು೧, ೨), ಆದಿತ್ಯಪುರಾಣ(೧ ರಿಂದ ೫), ಭವಿಷ್ಯೋತ್ತರಪುರಾಣ (೧ ರಿಂದ ೧೪ ಮತ್ತು ೧೫); - ಬ್ರಹ್ಮಾಂಡಪುರಾಣ ಇವುಗಳಲ್ಲಿ ವೇಂಕಟೇಶ ಮಾಹಾತ್ಮ್ಯವು ಬಂದಿದೆ. ಇವುಗಳನ್ನೆಲ್ಲ ಒಂದೆಡೆ ಸಂಗ್ರಹಿಸಿ 'ಶ್ರೀವೇಂಕಟಾಚಲಮಾಹಾತ್ಮ್ಯ' ಎಂಬ ಹೆಸರಿನಲ್ಲಿ ಎರಡು ಭಾಗಗಳಲ್ಲಿ ತಿರುಮಲ - ತಿರುಪತಿ ದೇವಸ್ಥಾನದವರು ಪ್ರಕಟಿಸಿರುವರು(೧೯೫೯)[3];

೭. ತಿರುಪತಿಯಲ್ಲಿ ಒಟ್ಟು ೬೬ ಕೋಟಿ ತೀರ್ಥಗಳಿದ್ದು, ಅವುಗಳಲ್ಲೂ ೧೦೦೮, ಅವುಗಳಲ್ಲೂ ೧೦೮, ಅವುಗಳಲ್ಲೂ ೬೦, ಅವುಗಳಲ್ಲೂ [4]ಸ್ವಾಮಿಪುಷ್ಕರಣೀ, ಆಕಾಶಗಂಗಾ,

---

೧. ಅರಾಯಿಕಾಣೇ ವಿಕಟೇ ಗಿರಿಂ ಗಚ್ಛ ಸದಾನ್ವೇ ।
ಶಿರಿಂಬಿಠಸ್ಯ ಸತ್ವಭಿಸ್ತೇಭಿಷ್ಟ್ವಾ ಜಾತಯಾಮಸಿ ॥ -ಋಗ್ವೇದ(೧೦/೧೫೫/೧)

೨. ಧನುರ್ಮಾಸೇ ಸಿತೇ ಪಕ್ಷೇ ದ್ವಾದಶ್ಯಾಮರುಣೋದಯೇ।
ಆಯಾಂತಿ ಸರ್ವತೀರ್ಥಾನಿ ಸ್ವಾಮಿಪುಷ್ಕರಣೀ ಜಲೇ ॥ -ಭವಿಷ್ಯೋತ್ತರಪುರಾಣ

೩. ಪಂಚರಾತ್ರದಲ್ಲೂ ಶ್ರೀವೇಂಕಟಾಚಲ ಮಾಹಾತ್ಮ್ಯವು ಬಂದಿದ್ದು ಅದು ನನ್ನ ಸಂಗ್ರಹ (ಶ್ರೀಜಯತೀರ್ಥಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ, ವ್ಯಾಸನಕೆರೆ) ದಲ್ಲಿದೆ.

೪. ಸ್ವಾಮಿಪುಷ್ಕರಣ್ಯರ್ಘ್ಯಮಂತ್ರ: -

ಪಾಪವಿನಾಶ, ಪಾಂಡು, ಕುಮಾರಧಾರಿಕಾ ಎಂಬ ಆರು ತೀರ್ಥಗಳು ತುಂಬಾ ಶ್ರೇಷ್ಠವೆಂಬುದಾಗಿ ಸ್ಕಂದಪುರಾಣದಲ್ಲಿದೆ.(೧೭/೪-೭)

೮. ಪದ್ಮತೀರ್ಥ ಮತ್ತು ಕಪಿಲತೀರ್ಥಗಳು ಬೆಟ್ಟದ ಕೆಳಗಿನ ಮುಖ್ಯತೀರ್ಥಗಳು, ಪದ್ಮತೀರ್ಥ(ಸರೋವರ)ದ ತೀರದಲ್ಲಿ ಶ್ರೀಪದ್ಮಾವತೀ ದೇವಸ್ಥಾನವಿದೆ. ಶ್ರೀಶುಕಾಚಾರ್ಯರ ಕ್ಷೇತ್ರವಾದ ಇದು 'ತಿರುಚಾನೂರು' ಶ್ರೀಶುಕಾಚಾರ್ಯರ ಊರು' ಎಂದೇ ಪ್ರಸಿದ್ಧವಾಗಿದೆ. ಕಪಿಲತೀರ್ಥವು ಬೆಟ್ಟದ ಬುಡದಲ್ಲೇ ಇದ್ದು ಇದರಲ್ಲಿ ಮಿಂದೇ ಬೆಟ್ಟವನ್ನು ಹತ್ತುವುದು ಸತ್ಸಂಪ್ರದಾಯವಾಗಿದೆ.

೯. ಅರ್ಜುನನು ಸುಭದ್ರಾಕಲ್ಯಾಣದ ಹಿನ್ನೆಲೆಯ ತೀರ್ಥಯಾತ್ರಾ ಪ್ರಸಂಗದಲ್ಲೂ , ಭೀಮಸೇನಾದಿ ಇತರ ಪಾಂಡವರು ವನವಾಸಕಾಲದಲ್ಲೂ , ಈ ಕ್ಷೇತ್ರವನ್ನು ಸಂದರ್ಶಿಸಿದ್ದ ಉಲ್ಲೇಖ ಉಂಟು. ಶ್ರೀಮದಾಚಾರ್ಯರ ಪರಂಪರೆಯ ಶ್ರೀವ್ಯಾಸರಾಜರು, ಶ್ರೀವಾದಿರಾಜರು ಮೊದಲಾದ ಸಕಲವ್ಯಾಸಸಾಹಿತ್ಯ ಧುರೀಣರೂ, ಶ್ರೀಪುರಂದರದಾಸಾದಿ ಸಕಲಹರಿದಾಸರೂ ಇದನ್ನು ಅನೇಕ ಸಲ ಸಂದರ್ಶಿಸಿದ್ದ ವಿವರಗಳಿವೆ. ಶ್ರೀಹರಿದಾಸ ಸಾಹಿತ್ಯದ ಸ್ತೋತ್ರಭಾಗದ ಒಂದಂಶ ಶ್ರೀವೇಂಕಟೇಶನ ಸ್ತೋತ್ರವೇ ಆಗಿದೆ.

೧೦. ಶ್ರೀವಾದಿರಾಜರು ಶ್ರೀನಿವಾಸನನ್ನು ಕುರಿತು ಕನ್ನಡದಲ್ಲಿ ಅನೇಕ ಕೀರ್ತನೆಗಳನ್ನು ಸಹ ರಚಿಸಿರುವರು; ಅವರಿಗೆ ಬೆಟ್ಟವೆಲ್ಲ ಸಾಲಿಗ್ರಾಮಮಯವಾಗಿ ಕಂಡಾಗ ಅವರು ಅದಕ್ಕೆ ಪಾದಸ್ಪರ್ಶವಾಗಕೂಡದೆಂದು, ಮೊಳಕಾಲುಗಳಿಂದಲೇ ಹತ್ತಿ ತಮ್ಮ ವಿಶಿಷ್ಟ ಕಾಣಿಕೆಯಾಗಿ ಒಂದು ಸಾಲಿಗ್ರಾಮಸರವನ್ನೇ ಶ್ರೀನಿವಾಸನಿಗೆ ಸಮರ್ಪಿಸಿದರೆಂಬ ಐತಿಹ್ಯ ಇಲ್ಲಿ ಸ್ಮರಣೀಯ.

೧೧. ಶ್ರೀವ್ಯಾಸರಾಜರು ಒಮ್ಮೆ ಕಾರಣಾಂತರದಿಂದ ಇಲ್ಲಿ ಪೂಜೆಗೆ ವಿಚ್ಛೇದನವೊದಗಿದ ಸಂದರ್ಭದಲ್ಲಿ ಆ ಕಾಲದ ರಾಜರುಗಳ ಪ್ರಾರ್ಥನೆಯಂತೆ ಹನ್ನೆರಡು ವರ್ಷಗಳ ಕಾಲ ಶ್ರೀನಿವಾಸನನ್ನು ಪೂಜಿಸಿದರು ಎಂದೂ ದಾಖಲೆಗಳಿಂದ ತಿಳಿಯುತ್ತದೆ; ಸ್ವಾಮಿಪುಷ್ಕರಿಣೀತೀರದಲ್ಲಿ ಶ್ರೀವ್ಯಾಸರಾಜರ ಆಹ್ನಿಕಮಂಟಪವೂ, ದೇವಸ್ಥಾನದಲ್ಲಿ ಅವರ ಧ್ಯಾನಸ್ಥಳವೂ ಇಂದೂ ಸುರಕ್ಷಿತವಾಗಿವೆ. ಜಗತ್ಪತಿಯ ನಿತ್ಯಸನ್ನಿಧಿಯಿಂದಾಗಿ ತಿರರುಪತಿಯು ಪರಮಪಾವನವಾದ ಕ್ಷೇತ್ರವೆನ್ನಿಸಿದೆ.[೧]

೧೨. ಇಲ್ಲಿ ಒಟ್ಟು ಹನ್ನೊಂದು ಶ್ಲೋಕಗಳಲ್ಲಿ ಶ್ರೀವೇಂಕಟೇಶನನ್ನು ಶ್ರೀವಾದಿರಾಜರು ವರ್ಣಿಸಿರುವರು; ತೀರ್ಥಪ್ರಬಂಧದಲ್ಲಿ ಒಂದೇ ಕ್ಷೇತ್ರದ ವರ್ಣನೆಗೆ ರಚಿತವಾದ ಅತಿ ಹೆಚ್ಚು ಸಂಖ್ಯೆಯ ಶ್ಲೋಕಗಳು ಇವೇ ಆಗಿವೆ.

---

ವೇಂಕಟಾಚಲಸಂಭೂತೇ ಸರ್ವತೀರ್ಥಸಮನ್ವಿತೇ ।
ಸ್ವಾಮಿಪುಷ್ಕರಣಿ ಖ್ಯಾತೇ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

೧. ಹನುಮಂತನ ಅವತಾರವಾದ ಈ ವೇಂಕಟಪರ್ವತವನ್ನು ಶ್ರೀಭೀಮಸೇನ ಮತ್ತು ಶ್ರೀಮಧ್ವಾಚಾರ್ಯರು ಸಂದರ್ಶಿಸಿದ್ದ ವಿವರ ಪುರಾಣಗಳಲ್ಲಿದೆ. ಹೀಗೆ ಶ್ರೀ ವಾಯುದೇವರ ಅವತಾರತ್ರಯಸಂಬಂಧವನ್ನು ಹೊಂದಿರುವ ಈ ಕ್ಷೇತ್ರಕ್ಕೆ ವೈಷ್ಣವೇತಿಹಾಸದಲ್ಲಿ ಇರುವ ಮನ್ನಣೆ ಅಪಾರವಾದುದು..

೧೩. ಶ್ರೀವಾದಿರಾಜರು ಶ್ರೀನಿವಾಸನು ಸಾಕ್ಷಾತ್ ಶ್ರೀಹರಿ; ಭಕ್ತರ ಪಾಲಿಗೆ ಕಲ್ಪವೃಕ್ಷ; ತಪ್ತಮುದ್ರಾಧಾರಣ, ಊರ್ಧ್ವಪುಂಡ್ರಧಾರಣ, ಶಂಖಚಕ್ರಾದಿಲಾಂಛನಧಾರಣ ಮೊದಲಾದ ವೈಷ್ಣವದೀಕ್ಷೆಗಳಿಂದ ಕೂಡಿದವರನ್ನು ಸದಾ ಪೊರೆಯುವವನು; ಭಕ್ತರಿಗೆ ಸಂಪತ್ತಿನೊಂದಿಗೆ ಆಸ್ತಿಕ್ಯ ಬುದ್ಧಿಯನ್ನೂ ಕರುಣಿಸುವವನು, ಶೇಷನು ತನ್ನ ಭಕ್ತನೆಂಬುದನ್ನೂ ಬ್ರಹ್ಮರುದ್ರಾದಿದೇವತೆಗಳು ತನ್ನ ಕಿಂಕರರೆಂಬುದನ್ನೂ, ಸೂಚಿಸುತ್ತ ವೇಂಕಟಪರ್ವತದ ಮೇಲೆ ನೆಲೆಸಿರುವವನು. ಸಮಸ್ತ-ಗುಣಪೂರ್ಣನೂ, ಅಶೇಷದೋಷದೂರನೂ ಆದ ಇವನು ಶ್ರೀಮದಾನಂದತೀರ್ಥರಿಗೆ ವಿಶೇಷಾನುಗ್ರಹ ಮಾಡುತ್ತ ಅವರ ಜೀವೋತ್ತಮತ್ವವನ್ನು ತಿಳಿಸುತ್ತಿರುವವನು. ತತ್ತ್ವಜ್ಞಾನವನ್ನು ಕರುಣಿಸಿ ಪಾಲಿಸ್ಸುವ ಇವನಲ್ಲಿ ಭಕ್ತರ ಮನಸ್ಸು ಸದಾ ನೆಲೆಗೊಳ್ಳಬೇಕು ಎಂಬುದಾಗಿ ಇಲ್ಲಿ ವರ್ಣಿಸಿರುವರು.

## [2]ಸುವರ್ಣಮುಖೀ (ನದೀ)

**ಸುವರ್ಣಮುಖಿ ಸಂಸೇವೇ ಸುವರ್ಣಾಭಂ ಪಯಸ್ತವ ।**
**ಸುವರ್ಣಶೋಭಿವದನಂ ಕುರು ಮಾಮಂಬ ನಿರ್ಮಲಮ್ ॥ ೩೦ ॥**

ಅ: **ಸುವರ್ಣಮುಖಿ !** = ಎಲೈ ಸುವರ್ಣಮುಖೀ(ನದಿ)ಯೇ !; **ತವ** = ನಿನ್ನ; **ಸುವರ್ಣಾಭಂ** = ಚಿನ್ನದ ಕಾಂತಿಯುಳ್ಳ; **ಪಯಃ** = ಜಲವನ್ನು; **ಸಂಸೇವೇ** = ಚೆನ್ನಾಗಿ ಸೇವಿಸುವೆನು; **ಅಂಬ !** = ಅಮ್ಮಾ!; **ಮಾಂ** = ನನ್ನನ್ನು; **ಸುವರ್ಣಶೋಭಿವದನಂ** = ಕೃಷ್ಣ ರಾಮ ಮೊದಲಾದ ಶ್ರೀಹರಿಯ ನಾಮಾಕ್ಷರಗಳಿಂದ ಕಂಗೊಳಿಸುವ ಮುಖವುಳ್ಳವನನ್ನಾಗಿಯೂ; (ಅಂತೆಯೇ); **ನಿರ್ಮಲಂ** = ಶುದ್ಧಾಂತಃಕರಣನನ್ನಾಗಿಯೂ, **ಕುರು** = ಮಾಡು.

---

೧. ಅಂಜನಾದ್ರಿಃ ವೃಷಾದ್ರಿಶ್ಚ ಶೇಷಾದ್ರಿರ್ಗರುಡಾಚಲಃ ।
ತೀರ್ಥಾದ್ರಿಃ ಶ್ರೀನಿವಾಸಾದ್ರಿಃ ಚಿಂತಾಮಣಿಗಿರಿಸ್ತಥಾ ॥
ವೃಷಭಾದ್ರಿರ್ವರಾಹಾದ್ರಿರ್ಜ್ಞಾನಾದ್ರಿಃ ಕನಕಾಚಲಃ ।
ಆನಂದಾದ್ರಿಶ್ಚ ನೀಲಾದ್ರಿಃ ಸುಮೇರುಶಿಖರಾಚಲಃ ॥
ವೈಕುಂಠಾದ್ರಿಃ ಪುಷ್ಕರಾದ್ರಿಃ ಇತಿ ನಾಮಾನಿ ವಿಂಶತಿಃ ॥
-ಬ್ರಹ್ಮಾಂಡಪುರಾಣ ತೀರ್ಥಖಂಡ(೧/೨೧ -೨೩)
ವೇಂಕಟಾದ್ರಿಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ ॥ -ಬ್ರಹ್ಮಾಂಡಪುರಾಣ (೧/೨೪)

೨. ಸುವರ್ಣಮಿವ ಲೋಕಾನಾಂ ಭಾಗಧೇಯಾದಿಯಂ ನದೀ ।
ನೀತಾ ಭುವಮಗಸ್ತ್ಯೇನ ಮುಖರೀಕೃತದಿಙ್ಮುಖಾ ॥
ತಸ್ಮಾದ್ಯಾಸ್ಯತಿ ವಿಖ್ಯಾತಿಂ ಸರ್ವಲೋಕಾಭಿವಂದಿತಾ ।
ಸುವರ್ಣಮುಖರೀ ನಾಮ್ನಾ ಧಾಮ್ನಾ ಕೈವಲ್ಯಸಂಪದಃ ॥
ಏಷಾ ಸುವರ್ಣಮುಖರೀ ಸರಿತ್ಸು ಸಕಲಾಸ್ವಪಿ ।
ವಿಶಿಷ್ಟಾ ಸೇವನೀಯಾ ಚ ಬ್ರಹ್ಮಣೋ ವಚನಂ ತ್ವಿದಮ್ ॥ -ಸ್ಕಂದಪುರಾಣ (೩/೩೬-೮)

ಎಲೈ ಸುವರ್ಣಮುಖಿಯೇ ! ನಿನ್ನ ಚಿನ್ನದ ಕಾಂತಿಯ ಜಲವನ್ನು ಭಕ್ತಿಯಿಂದ ಸೇವಿಸುವೆನು. ಅಮ್ಮ ! ನನ್ನನ್ನು ಶ್ರೀಹರಿಯ ಮಂಗಳನಾಮಗಳಿಂದ ಕಂಗೊಳಿಸುವ ಮುಖವುಳ್ಳವನನ್ನಾಗಿ, ಶುದ್ಧಾಂತಃಕರಣನನ್ನಾಗಿ, ಮಾಡು.

ವಿ: ೧. ಸುವರ್ಣಮುಖಿಯು ತಿರುಪತಿಯ ಬಳಿ ಹರಿಯುವ ಒಂದು ನದಿ; ಮುಂದೆ ಇದರ ತೀರದಲ್ಲೇ ಕಾಳಹಸ್ತಿ ಎಂಬ ಪ್ರಸಿದ್ಧಕ್ಷೇತ್ರವಿದೆ.

೨. ಹೊಂಬಣ್ಣದ ಜಲವನ್ನು ಹೊಂದಿರುವ ಈ ಸುವರ್ಣಮುಖಿಯು ಅದನ್ನು ಸೇವಿಸುವ ನನ್ನನ್ನೂ 'ಸುವರ್ಣಮುಖಿ' (ಹರಿನಾಮೋಚ್ಚಾರಣೆ ಮಾಡುವ ಅಥವಾ ನಿರ್ದೋಷವಾದ ವಚನಗಳಿಂದ ಕೂಡಿದ ಸಚ್ಛಾಸ್ತ್ರಗಳ ಪಾಠಪ್ರವಚನ ಮಾಡುವ ಮುಖವುಳ್ಳವ)ನನ್ನಾಗಿ ಮಾಡಲಿ ಎಂದು ಭಾವ.

## ವರದರಾಜ (ಕಂಚೀಕ್ಷೇತ್ರ)

**ರಮ್ಯೋ ವರದರಾಜೋಽಯಂ ರಸಿಕಾಗ್ರೇಸರೋ ಧ್ರುವಮ್ ।**
**ಕಥಮಾತ್ಮವಧೂಶ್ಲಾಘ್ಯಕಾಂಚೀದೇಶೇ ನ ಚೇದ್ವಸೇತ್ ॥ ೩೧ ॥**

ಅ: ರಮ್ಯಃ = ಮನೋಹರನಾದ; ಅಯಂ = ಈ; ವರದರಾಜಃ = ವರದರಾಜನು; ರಸಿಕಾಗ್ರೇಸರಃ = ರಸಿಕರಲ್ಲಿ ಅಗ್ರೇಸರನಾಗಿರುವನು; ಧ್ರುವಂ = ಇದು ನಿಶ್ಚಯ !; ನ ಚೇತ್ = ಇಲ್ಲವಾಗಿದಲ್ಲಿ; ಆತ್ಮವಧೂಶ್ಲಾಘ್ಯಕಾಂಚೀದೇಶೇ = ತನ್ನ ಪತ್ನಿಯಾದ ಭೂಮಿಯ ಕಾಂಚೀ(ನಿತಂಬ) ಸ್ಥಾನದಲ್ಲಿ;ಕಥಂ ವಸೇತ್=ಏತಕ್ಕೆ ವಾಸಿಸುತ್ತಿದ್ದನು ! (ಉತ್ಪ್ರೇಕ್ಷಾಲಂಕಾರ)

ಮನೋಹರನಾದ ವರದರಾಜನು ರಸಿಕಾಗ್ರೇಸರನೇ ಸರಿ ! ಇಲ್ಲವಾದಲ್ಲಿ ತನ್ನ ಪತ್ನಿಯಾದ ಭೂಮಿಯ ಕಾಂಚೀ(ನಿತಂಬ) ಸ್ಥಾನದಲ್ಲೇಕೆ ನೆಲೆಸುತ್ತಿದ್ದ !

ವಿ: ೧. [೧]ವರಪ್ರದರಲ್ಲಿ ತುಂಬಾ ಶ್ರೇಷ್ಠನಾದ್ದರಿಂದಲೇ ಶ್ರೀಹರಿಗೆ 'ವರದರಾಜ' ಎಂದು ಹೆಸರು. ಭೂಮಿಯಲ್ಲಿನ ಕಂಚೀದೇಶವನ್ನು, ಭೂದೇವಿಯ ನಿತಂಬವೆಂದು ಕರೆದು, ಇಲ್ಲಿ ವಾಸಿಸುವ ಶ್ರೀಹರಿಯನ್ನು ರಸಿಕಾಗ್ರೇಸರನೆಂದು ನಿಶ್ಚಯಿಸಿರುವರು. ಪತ್ನೀ ಸಮೀಪದಲ್ಲಿ ವಾಸಿಸುವನೇ ರಸಿಕ ಎನ್ನಿಸುವಾಗ ಪತ್ನಿಯ ಕಾಂಚೀ (ನಿತಂಬ) ಯ ಬಳಿ ವಾಸಿಸುವ ಇವನು ರಸಿಕಶಿರೋಮಣಿ ಎನ್ನಿಸುವುದರಲ್ಲಿ [೨]ಆಶ್ಚರ್ಯವೇನು ! ಎಂದು ಭಾವ.

೨. ಬ್ರಹ್ಮಾದಿವರಪ್ರದದೇವತೆಗಳಿಗೂವರಪ್ರದನಾಗಿರುವಇವನುಸರ್ವೋತ್ತಮನೆಂಬುದು ನಿಶ್ಚಯ ಎಂಬ ಭಾವವೂ ಇಲ್ಲಿದೆ.

---

೧. 'ವರಂ ದದತೀತಿ ವರದಾಃ ಬ್ರಹ್ಮಾದಿದೇವಾಃ ತೇಷಾಂ ರಾಜಾ ಪ್ರಭುಃ। -ವ್ಯಾ

೨. ವಧ್ವಾಃ ಸಮೀಪೇ ವಾಸ್ಯಪಿ 'ರಸಿಕ ಇತ್ಯುಚ್ಯತೇ' ಅಯಂತು ವಧೂ ಕಾಂಚೀದೇಶವಾಸಿತ್ವಾದ್ರಸಿಕಾಗ್ರೇಸರಃ ಇತಿ ಭಾವಃ। - ವ್ಯಾ

**ಯಾಚೇ ವರದರಾಜ ತ್ವಾಂ ಕಾಂಚೀಶೇಹ ನ ಕಿಂಚನ I**
**ಚೇತನಾಚೇತನಜಗದ್ವರಂ ತ್ವಾಮೇವ ದೇಹಿ ಮೇ II ೩೨ II**

ಅ: (ಹೇ) ಕಾಂಚೀಶ ! ವರದರಾಜ ! = ಕಂಚೀಕ್ಷೇತ್ರಕ್ಕೆ ಒಡೆಯನಾದ ವರದರಾಜನೇ; ಇಹ = ಸಂಸಾರದಲ್ಲಿ; ಕಿಂಚನ = ಧನ ಮುಂತಾದ ಯಾವುದನ್ನೂ; ತ್ವಾಂ = ನಿನ್ನನ್ನು (ಕುರಿತು); ನ ಯಾಚೇ = ನಾನು ಬೇಡುವುದಿಲ್ಲ; ಚೇತನಾಚೇತನಜಗದ್ವರಂ = (ಸಕಲ) ಚೇತನಾಚೇತನಾತ್ಮಕ ಜಗತ್ತಿಗೆ ಮಿಗಿಲಾದ; ತ್ವಾಂ ಏವ = ನಿನ್ನನ್ನೇ; ಮೇ = ನನಗೆ; ದೇಹಿ = ಕೊಡು.(ಶ್ಲಿಷ್ಟಗರ್ಭಿತವಿಭಾವನಾಲಂಕಾರಃ)

ಕಂಚೀಕ್ಷೇತ್ರಕ್ಕೆ ಒಡೆಯನಾದ ವರದರಾಜನೇ ! ನಾನು ನಿನ್ನಲ್ಲಿ ಬೇರೆ ಏನನ್ನೂ ಬೇಡೆನು; ಚೇತನಾಚೇತನಾತ್ಮಕ ಜಗತ್ತಿಗೆ ಮಿಗಿಲಾದ ನಿನ್ನನ್ನೇ ನನಗೆ ನೀಡು.

ವಿ: ೧. ಶ್ರೀವರದರಾಜನಲ್ಲಿ ಶ್ರೀವಾದಿರಾಜರು ನಾನು ಧನಾದಿ ಲೌಕಿಕ ಸಂಪತ್ತನ್ನು ಬೇಡುತ್ತಿಲ್ಲ, ಆದರೆ ಸರ್ವೋತ್ತಮನಾದ ನಿನ್ನನ್ನೇ ನನಗೆ ಕೊಡು ಎಂಬುದಾಗಿ ಕೇಳಿಕೊಂಡಿರುವರು.

೨. ಪುರುಷಾರ್ಥವಾಗಿ ಏನನ್ನೂ ಬಯಸದೆ ಶ್ರೀಹರಿಯನ್ನೇ ಬಯಸುವುದು ಏಕಾಂತ-ಭಕ್ತರ [೧] ಲಕ್ಷಣ; ಇದರಿಂದ ಶ್ರೀವಾದಿರಾಜರು ಇಂತಹ ಏಕಾಂತಭಕ್ತರಲ್ಲೊಬ್ಬರು ಎಂದು ಭಾವ.

**ದ್ವಿಜೇಷ್ಟದಾತೃತ್ವಮಜಾರ್ಚಿತತ್ವಮಜನ್ಮತಾಂ ಸ್ವಾಂ ಮಖಭೋಕ್ತೃತಾಂ ಚ I**
**ವ್ಯನಕ್ತ್ಯಯಂ ಶ್ರೀಪತಿರಗ್ರಹಾರಪರೀತಧಾತೃಕ್ರತುವೇದಿಜಾತಃ II ೩೩ II**

ಅ: ದ್ವಿಜೇಷ್ಟದಾತೃತ್ವಂ = ತಾನು 'ಬ್ರಾಹ್ಮಣರಿಗೆ ಇಷ್ಟಾರ್ಥಪ್ರದ'ನೆಂಬುದನ್ನೂ; ಅಜಾರ್ಚಿತತ್ವಂ = ತನ್ನ ಬ್ರಹ್ಮಾದಿದೇವತಾ ವಂದ್ಯತ್ವವನ್ನೂ; ಅಜನ್ಮತಾಂ = ತನಗೆ ಹುಟ್ಟಿಲ್ಲವೆಂಬುದನ್ನೂ; ಸ್ವಾಂ = ತನ್ನ; ಮಖಭೋಕ್ತೃತಾಂ ಚ = ಯಜ್ಞಭೋಕ್ತೃತ್ವವನ್ನೂ; ಅಗ್ರಹಾರಪರೀತಧಾತೃಕ್ರತುವೇದಿಜಾತಃ = ಸುತ್ತಲೂ ಅಗ್ರಹಾರಗಳೆಂಬ ಬ್ರಾಹ್ಮಣ-ಗ್ರಾಮಗಳಿಂದ ಕೂಡಿದ ಬ್ರಹ್ಮದೇವರ ಯಜ್ಞವೇದಿಕೆಯಲ್ಲಿ ಪ್ರಾದುರ್ಭವಿಸಿದ; ಅಯಂ = ಈ; ಶ್ರೀಪತಿಃ = ಲಕ್ಷ್ಮೀಪತಿಯಾದ ವರದರಾಜನು; ವ್ಯನಕ್ತಿ = ತಿಳಿಸಿಕೊಡುತ್ತಿರುವನು.

ತಾನು ಬ್ರಾಹ್ಮಣರಿಗೆ ಇಷ್ಟಾರ್ಥಪ್ರದ; ಬ್ರಹ್ಮಾದಿದೇವತೆಗಳಿಂದ ಪೂಜಿತ; ಹುಟ್ಟಿಲ್ಲದವನು; ಯಜ್ಞಭೋಕ್ತೃವಾದವನು ಎಂಬುದನ್ನು ಸುತ್ತಲೂ ಅಗ್ರಹಾರಗಳಿಂದ ಕೂಡಿದ ಬ್ರಹ್ಮದೇವರ ಯಜ್ಞವೇದಿಕೆಯಲ್ಲಿ ಪ್ರಾದುರ್ಭವಿಸಿದ ಈ ಲಕ್ಷ್ಮೀಪತಿಯಾದ ವರದರಾಜನು ತಿಳಿಸಿಕೊಡುತ್ತಿರುವನು.

ವಿ: ೧. ವರದರಾಜನು ಅಗ್ರಹಾರಗಳಿಂದ ಸುತ್ತುವರೆಯಲ್ಪಟ್ಟ ಬ್ರಹ್ಮದೇವರ ಯಜ್ಞ-ಭೂಮಿಯಲ್ಲಿ ಪ್ರಾದುರ್ಭವಿಸಿದ ಮೂರ್ತಿ ಎಂಬುದಾಗಿ ಸ್ಥಳಪುರಾಣವು ವರ್ಣಿಸಿದೆ.

೧. ಏಕಾಂತಾನಾಂ ನ ಕಸ್ಯಚಿತ್ I ಅರ್ಥೋ ನಾರಾಯಣೋ ದೇವಃ - ಗೀತಾತಾತ್ಪರ್ಯನಿರ್ಣಯ(೭/೨೯)

ಅಗ್ರಹಾರಗಳಿಂದ ತುಂಬಿದ ಭೂಮಿಯಲ್ಲಿ ಪ್ರಾದುರ್ಭವಿಸಿದ್ದರಿಂದ ಇವನು ಬ್ರಾಹ್ಮಣರಿಗೆ ಇಷ್ಟಪ್ರದನೆಂಬುದೂ, ಬ್ರಹ್ಮದೇವರ ಯಜ್ಞಭೂಮಿಯಲ್ಲಿ ಪ್ರಾದುರ್ಭವಿಸಿದ್ದರಿಂದ ಬ್ರಹ್ಮವಂದ್ಯತ್ವವೂ, ಯಜ್ಞಭೋಕ್ತೃತ್ವವೂ, ವೇದಿಜಾತತ್ವದಿಂದ ಜನ್ಮರಾಹಿತ್ಯವೂ ಸೂಚಿತವಾಗಿವೆ ಎಂದು ಭಾವ.[೧]

೨. ಕಾಂಚೀಕ್ಷೇತ್ರವು ಮೋಕ್ಷದಾಯಕವಾದ ಸಪ್ತಮಹಾಕ್ಷೇತ್ರಗಳಲ್ಲಿ ಒಂದು. ಈ ಕ್ಷೇತ್ರವು ವಿಷ್ಣುಕಂಚೀ, ಶಿವಕಂಚೀ ಎಂಬುದಾಗಿ ಎರಡು ಭಾಗಗಳನ್ನು ಹೊಂದಿದ್ದು, ವಿಷ್ಣುಕಂಚಿಯಲ್ಲಿ ಶ್ರೀವರದರಾಜಮೂರ್ತಿಯು ಕಂಗೊಳಿಸುತ್ತಿದೆ. ಬ್ರಹ್ಮದೇವರ ಯಜ್ಞವೊಂದರಲ್ಲಿ ಪ್ರಾದುರ್ಭವಿಸಿದ ಮೂರ್ತಿ ಎಂಬುದು ಇದರ ವೈಶಿಷ್ಟ್ಯ.

೩. ವರದರಾಜನು ಮಂದಹಾಸಯುಕ್ತವಾದ[೨] ಅತಿಸುಂದರಮೂರ್ತಿ. ಮುನಿತ್ರಯರಲ್ಲೊಬ್ಬರಾದ ಶ್ರೀವ್ಯಾಸರಾಜರು ಅನೇಕ ವರ್ಷ ಈ ಕಂಚಿಯಲ್ಲಿ ತಂಗಿದ್ದು, ವಾದಿಗಳನ್ನು ಜಯಿಸಿದ ಸಂಗತಿ ಸುಪ್ರಸಿದ್ಧ.

## ಏಕಾಮ್ರೇಶ್ವರ (ಶಿವಕಂಚೀ)

**ಕಂತುರಮ್ಯಶರಾಕ್ರಾಂತಸ್ವಾಂತಂ ಮತ್ವೇವ ಪಾರ್ವತೀ ।**
**ಆಮ್ರಮೂಲೇ ಸ್ಥಿತಂ ಶಂಭುಮಾಲಿಂಗ್ಯಾಸ್ತೇ ಶುಚಿಸ್ಮಿತಾ ॥ ೩೪ ॥**

ಅ: **ಶುಚಿಸ್ಮಿತಾ** = ಮನೋಹರವಾದ ಮಂದಹಾಸವುಳ್ಳ; **ಪಾರ್ವತೀ** = ಪಾರ್ವತಿಯು; **ಆಮ್ರಮೂಲೇ** = ಮಾವಿನಮರದ ಬುಡದಲ್ಲಿ; **ಸ್ಥಿತಂ** = ಇರುವ; **ಶಂಭುಂ** = ತನ್ನ ಪತಿಯಾದ ಶಿವನನ್ನು; **ಕಂತುರಮ್ಯಶರಾಕ್ರಾಂತಸ್ವಾಂತಂ** = ಮನ್ಮಥನ ಮನೋಹರವಾದ ಚೂತಶರದಿಂದ ಆಕ್ರಮಿಸಲ್ಪಟ್ಟ ಮನಸ್ಸಿನವನು; (ಇತಿ) **ಮತ್ವಾ ಇವ** = ಎಂದು ಭಾವಿಸಿಯೋ ಎಂಬಂತೆ; **ಆಲಿಂಗ್ಯ** = ಆಲಿಂಗಿಸಿಕೊಂಡವಳಾಗಿ; **ಆಸ್ತೇ** = ಇರುವಳು. **(ಉತ್ಪ್ರೇಕ್ಷಾಲಂಕಾರ)**

ಮನ್ಮಥನ ರಮ್ಯಬಾಣದಿಂದ ಪೀಡಿತ ಮನಸ್ಸಿನವನು ಎಂದು ಬಗೆದೋ ಎಂಬಂತೆ ನಿರ್ಮಲ ಮಂದಹಾಸದ ಪಾರ್ವತಿಯು ಮಾವಿನಮರದ ಬುಡದಲ್ಲಿ ನೆಲೆಸಿರುವ ಶಿವನನ್ನು ಆಲಿಂಗಿಸಿಕೊಂಡಿರುವಳು.

ವಿ: ೧. ಶಿವಕ್ಷೇತ್ರವೆಂದು ಪ್ರಸಿದ್ಧವಾಗಿರುವ ಶಿವಕಾಂಚಿಯಲ್ಲಿನ ಅತ್ಯಂತ ಪ್ರಧಾನ ದೇವಸ್ಥಾನ – ಏಕಾಮ್ರೇಶ್ವರದೇವಸ್ಥಾನ. ಇಲ್ಲಿಯ ಶಿವಲಿಂಗ ಭೂ (ತತ್ತ್ವ)ಲಿಂಗವೆಂದು

---

೧. ಅಗ್ರಹಾರಪರೀತೇತ್ಯನೇನ ದ್ವಿಜೇಷ್ಟದಾತೃತ್ವಂ ಧಾತೃಕ್ರತ್ವಿತ್ಯನೇನ ಅಜಾರ್ಚಿತತ್ವಂ ಮುಖಭೋಕ್ತೃತ್ವಂ ಚ ವೇದಿಜಾತ ಇತ್ಯನೇನ ಜನ್ಮರಾಹಿತ್ಯಂ ಚ ಅಭಿವ್ಯಜ್ಯತ ಇತಿ ಬೋದ್ಧವ್ಯಮ್ । -ವ್ಯಾ

೨. ವಂದೇ ವಂದ್ಯಂ ಸದಾನಂದಂ ವಾಸುದೇವಂ ನಿರಂಜನಮ್ ।
ಇಂದಿರಾಪತಿಮಾದ್ಯಾದಿವರದೇಶವರಪ್ರದಮ್ ॥ -ದ್ವಾದಶಸ್ತೋತ್ರ(೧/೧)
- ಎಂಬ ಭಾವೀ ಅಜರಾದ ಶ್ರೀಮದಾಚಾರ್ಯರ ಮಾತು ಒಂದು ರೀತಿಯಲ್ಲಿ ಈ ವರದರಾಜ ಸ್ತೋತ್ರವೂ ಆಗಿದೆ.

ಪ್ರಸಿದ್ಧವಾಗಿದೆ. ಇಲ್ಲಿಯ ದೇವಸ್ಥಾನದ ಅಂಗಳದಲ್ಲಿ ಒಂದು ಪ್ರಾಚೀನವಾದ ಮಾವಿನಮರವೂ ಇದ್ದು, ಅದರ ಕಟ್ಟೆಯ ಮೇಲೆ ಇರುವ ಒಂದು ಚಿಕ್ಕ ಗುಡಿಯಲ್ಲಿ ಪಾರ್ವತಿಯಿಂದ ಆಲಿಂಗಿತನಾದ ಶಿವಲಿಂಗವೊಂದಿದೆ; ಇದೇ ಏಕಾಮ್ರೇಶ್ವರ.

೨. ಪಾರ್ವತಿಯು ಶಿವಲಿಂಗವನ್ನು ಆಲಂಗಿಸಿಕೊಂಡಿರುವ ರೀತಿಯು, ಕಾಮಬಾಣ-ದಿಂದ[೧] ಆತನ ಮನಸ್ಸಿಗಾಗಿರುವ ವ್ಯಥೆಯನ್ನು ಹೋಗಲಾಡಿಸಲೋ ಎಂಬಂತೆ ಇದೆ ಎಂದು[೨] ಉತ್ಪ್ರೇಕ್ಷಿಸಿರುವರು; ಪಾರ್ವತಿಯ ಆಲಿಂಗನದ ಗಾಢತೆಯನ್ನು ಸೂಚಿಸಲೋ ಎಂಬಂತೆ ಲಿಂಗದ ಮಧ್ಯಭಾಗವು ಸ್ವಲ್ಪ ತೆಳ್ಳಗಿರುವುದೂ ಗಮನಾರ್ಹ. ಲಿಂಗದ ಹಿಂದೆ ಚೂತವೃಕ್ಷವಿರುವುದು ಸಹ ಇದಕ್ಕೆ ಗಮಕವಾಗಿದೆ.

## ಕಾಮಾಕ್ಷೀ (ಕಂಚೀ)

**ಪ್ರಪದ್ಯೇ ತವ ಕಾಮಾಕ್ಷಿ ಚರಣೌ ಶರಣಂ ಸದಾ ।**
**ಯತ್ಸೌಂದರ್ಯಾಂಬುಧಿಂ ದ್ರಷ್ಟುಂ ತ್ರಿನೇತ್ರೋऽಭೂನ್ಮಹೇಶ್ವರಃ ॥ ೩೫ ॥**

ಅ: **(ಹೇ) ಕಾಮಾಕ್ಷಿ!** = ಎಲೈ ಕಾಮಾಕ್ಷಿಯೇ; **ಯತ್ಸೌಂದರ್ಯಾಂಬುಧಿಂ** = ಯಾವ ನಿನ್ನ ಸೌಂದರ್ಯಸಾಗರವನ್ನು; **ದ್ರಷ್ಟುಂ** = ನೋಡಲೆಂದು; **ಮಹೇಶ್ವರಃ** = ಶಿವನು; **ತ್ರಿನೇತ್ರಃ** = ಮುಕ್ಕಣ್ಣನಾಗಿ; **ಅಭೂತ್** = ಆದನೋ; ಅಂತಹ; **ತವ** = ನಿನ್ನ; **ಚರಣೌ** = ಎರಡು ಪಾದಗಳನ್ನು; **ಸದಾ** = ಸರ್ವದಾ; **ಶರಣಂ ಪ್ರಪದ್ಯೇ** = ಶರಣು ಹೊಂದುವೆನು. **(ಉತ್ಪ್ರೇಕ್ಷಾಲಂಕಾರ)**[೩]

**ಕಾಮಾಕ್ಷಿಯೇ ! ಯಾವ ನಿನ್ನ ಸೌಂದರ್ಯಸಾಗರವನ್ನು ಸವಿಯಲೆಂದೇ ಶಿವನು ಮುಕ್ಕಣ್ಣನಾದನೋ, ಅಂತಹ ನಿನ್ನ ಎರಡು ಪಾದಗಳನ್ನು ಸರ್ವದಾ ನಾನು ಶರಣು ಹೊಂದುವೆನು.**

ವಿ: ೧. ಕಂಚಿಯ ಕಾಮಾಕ್ಷಿಯ ವಿಗ್ರಹವು ತುಂಬಾ ಸುಂದರವಾದುದು ಎಂಬುದನ್ನು ಶ್ರೀವಾದಿರಾಜರು ಇಲ್ಲಿ ಅಪೂರ್ವರೀತಿಯಲ್ಲಿ ವರ್ಣಿಸಿರುವರು;

---

೧. ಅರವಿಂದಮಶೋಕಂ ಚ ಚೂತಂ ಚ ನವಮಲ್ಲಿಕಾ । -ಅಮರಕೋಶ
- ಪಂಚಶರನೆಂದು ಖ್ಯಾತನಾದ ಮನ್ಮಥನ ಬಾಣಗಳಲ್ಲಿ 'ಚೂತ'ವೂ ಒಂದಾಗಿದೆ.

೨. ಅಂಗನಾಲಿಂಗನೇನ ಅನಂಗಜಬಾಧಾನಿವೃತ್ತಿರ್ಭವತೀತಿ ಭಾವಃ । ಶಿವಕಾಂಚೀಲಿಂಗಸ್ಯ ಮಧ್ಯಂ ಪಾರ್ವತ್ಯಾಲಿಂಗನವಶಾತ್ ಈಷತ್‌ಸೂಕ್ಷ್ಮಮಿತಿ ಪ್ರಥಾ । ಲಿಂಗಸ್ಯ ಪೃಷ್ಠಭಾಗೇ ದೈವಿಕಃ ಚೂತವೃಕ್ಷೋऽಪಿ ತಿಷ್ಠತಿ । ತಸ್ಮಾದತ್ರೈವಾಲಿಂಗನೇ ಕಾರಣೋತ್ಪ್ರೇಕ್ಷೇಯಮ್॥ ವ್ಯಾ

೩. ಸೌಂದರ್ಯಂ ದ್ರಷ್ಟುಂ ಲೋಚನದ್ವಯಂ ನಾಲಮಿತಿ ತ್ರಿನೇತ್ರೋऽಭವದಿತಿ ಭಾವಃ । ತಾದೃಶಸೌಂದರ್ಯವತೀ ಕಾಮಾಕ್ಷೀತಿ ತಾತ್ಪರ್ಯಂ । ಉತ್ಪ್ರೇಕ್ಷಾಲಂಕಾರಃ । ವ್ಯಂಜಕಾಭಾವೇऽಪಿ ಉತ್ಪ್ರೇಕ್ಷಾ ಗಮ್ಯತೇ । -ವ್ಯಾ

೨. ಕಾಮಾಕ್ಷಿಯ ಅಪಾರಸೌಂದರ್ಯವನ್ನು ಕಾಣಲು ಎರಡು ಕಣ್ಣುಗಳು ಸಾಲವೋ ಎಂಬಂತೆ ಶಿವನು ಮುಕ್ಕಣ್ಣನಾಗಿ ಬಿಟ್ಟಿರುವನು ಎಂಬ ಇಲ್ಲಿಯ ಉತ್ಪ್ರೇಕ್ಷೆ ತುಂಬಾ ಮನೋಹವಾಗಿದೆ.

**ಉತ್ಪಾದಯಂಸ್ತ್ವಯಿ ಸುತೌ ಗಿರಿಜೇ ಗಿರೀಶಃ**
**ಸೌಂದರ್ಯಭಂಗಜಭಿಯೇವ ಭವೋ ಭವತ್ಯಾಃ ।**
**ಕಾಮಾಕ್ಷಿ ವಿಘ್ನಹರಮೇಕಮಸಾವಕಾರ್ಷೀತ್**
**ಷಾಣ್ಮಾತುರಂ ತ್ವಪರಮಂಗಜಭಂಜಕೋಽಪಿ ॥ ೩೬ ॥**

ಅ: (ಹೇ) ಗಿರಿಜೇ ! = ಎಲೈ ಹಿಮವತ್ಪರ್ವತಪುತ್ರಿಯಾದ; **ಕಾಮಾಕ್ಷಿ** = ಕಾಮಾಕ್ಷಿಯೇ !; ಗಿರೀಶಃ = ಕೈಲಾಸಪರ್ವತಕ್ಕೆ ಒಡೆಯನಾಗಿರುವ; **ಅಸೌ** = ಈ; **ಭವಃ** = ಶಿವನು; **ಅಂಗಜಭಂಜಕಃ ಅಪಿ** = ಕಾಮಹರನಾದರೂ ಸಹ; **ತ್ವಯಿ** = ನಿನ್ನಲ್ಲಿ; **ಸುತೌ** = ಇಬ್ಬರು ಪುತ್ರರನ್ನು; **ಉತ್ಪಾದಯನ್** = ಪಡೆಯುವವನಾಗಿ; **ಭವತ್ಯಾಃ** = ನಿನ್ನ; **ಸೌಂದರ್ಯಭಂಗಜಭಿಯಾ ಇವ** = ಲಾವಣ್ಯವು ಕೆಟ್ಟೀತು ಎಂಬ ಭಯದಿಂದಲೋ ಎಂಬಂತೆ; **ಏಕಂ** =ಒಬ್ಬ(ಮಗ)ನನ್ನು; **ವಿಘ್ನಹರಂ** = ವಿಘ್ನಹರನಾದ ಗಣೇಶನನ್ನಾಗಿಯೂ; **ಅಪರಂ** = ಇನ್ನೊಬ್ಬನನ್ನು; **ಷಾಣ್ಮಾತುರಂ** = ಆರು ಜನ ತಾಯಂದಿರನ್ನು ಹೊಂದಿದವನನ್ನಾಗಿಯೂ; **ಅಕಾರ್ಷೀತ್** = ಮಾಡಿದನು.(ಅತಿಶಯೋಕ್ತಿ)

ಪಾರ್ವತಿಯಾದ ಕಾಮಾಕ್ಷಿಯೇ ! ಕಾಮಹರನಾದರೂ, ನಿನ್ನಲ್ಲಿ ಇಬ್ಬರು ಪುತ್ರರನ್ನು ಪಡೆದರೂ, ಶಿವನು ನಿನ್ನ ಲಾವಣ್ಯ ಕೆಟ್ಟೀತು ಎಂಬ ಭಯದಿಂದಲೋ ಎಂಬಂತೆ ಒಬ್ಬನನ್ನು ವಿಘ್ನಹರನಾದ ಗಣೇಶನನ್ನಾಗಿಸಿದ; ಇನ್ನೊಬ್ಬನನ್ನು ಆರು ಜನ ತಾಯಂದಿರನ್ನು ಹೊಂದಿದ ಷಣ್ಮುಖನನ್ನಾಗಿ ಮಾಡಿದ.

ವಿ: ೧. ಪಾರ್ವತಿಯ ಸೌಂದರ್ಯವು ಅಪಾರ ಎಂಬುದನ್ನು ಪ್ರಕಾರಾಂತರದಿಂದ ಈ ಶ್ಲೋಕದಲ್ಲಿ ವರ್ಣಿಸಿರುವರು.

೨. ಕಾಮಹರನಾದ ಶಿವನು ಪಾರ್ವತಿಯಲ್ಲಿ ಇಬ್ಬರು ಪುತ್ರರನ್ನು ಪಡೆದಿರುವನು; ಅವರಲ್ಲಿ ಒಬ್ಬನು ವಿಘ್ನಹರ; ಇನ್ನೊಬ್ಬನು ಷಣ್ಮುಖ; ಪಾರ್ವತಿಯಲ್ಲಿ [೧]ಸಾಕ್ಷಾತ್ತಾಗಿ ಜನಿಸಿದಲ್ಲಿ ಅವಳ ಸೌಂದರ್ಯಕ್ಕೆ ಕುಂದುಂಟಾದೀತೆಂದು ಅವರಲ್ಲಿ ಗಣೇಶನನ್ನು ವಿಘ್ನಹರನನ್ನಾಗಿ (ಪಾರ್ವತಿಯ ಮೈಯ ಮಣ್ಣಿನಿಂದ ನಿರ್ಮಿತ ಶರೀರನನ್ನಾಗಿ) ಸೃಷ್ಟಿಸಿದನು. ಇತರರ ವಿಘ್ನವನ್ನೂ ಪರಿಹರಿಸುವ ಅವನು ತನ್ನ ತಾಯಿಯ ಯೌವನಕ್ಕೆ ವಿಘ್ನಹರನಾಗದಿರುವನೇ?[೨] ಮತ್ತೊಬ್ಬನಾದ ಷಣ್ಮುಖನಿಗೆ ಆರುಜನ ತಾಯಂದಿರು ಪಾರ್ವತಿಯು ಒಬ್ಬಳೇ ತಾಯಿಯಾಗಿದ್ದಲ್ಲಿ ಸ್ತನ್ಯಪ್ರಾಶನದಿಂದ

---

೧. 'ಪ್ರಸವಾಂತಂ ಹಿ ಯೌವನಂ' ಇತಿ ನ್ಯಾಯಾತ್ । -ವ್ಯಾ

೨. ಸರ್ವಸ್ಯ ವಿಘ್ನಹರ್ತಾ ಸ್ವಮಾತೃಯೌವನಸ್ಯ ವಿಘ್ನಂ ಪರಿಹರಿಷ್ಯತೀತಿ ಬುದ್ಧ್ಯಾ ವಿಘ್ನಹರನಾಮಾನಮಕರೋದಿತಿ ಭಾವ । -ವ್ಯಾ

ಸೌಂದರ್ಯವು[1] ಕೆಟ್ಟೀತೆಂಬ ಭಯದಿಂದಲೇ ಇರಬೇಕು ಆತನು ಷಾಣ್ಮಾತೃರನಾದದ್ದು (ಆರುಜನ ಕೃತ್ತಿಕಾದೇವತೆಗಳು ಷಣ್ಮುಖನಿಗೆ ಸ್ತನ್ಯಪ್ರಾಶನ ಮಾಡಿಸಿದ ಪ್ರಸಂಗವು ಮಹಾಭಾರತ ಮತ್ತು ಪುರಾಣದಲ್ಲಿದೆ.)

೩. ಪರಮವಿರಕ್ತನಾದ ಶಿವನಿಗೂ ಹೀಗೆ ಅನುರಾಗ ಹುಟ್ಟಿಸುವ ಪಾರ್ವತಿಯ ಸೌಂದರ್ಯವು ವರ್ಣನಾತೀತ ಎಂದು ಭಾವ.[2]

## ಅರುಣಾಚಲೇಶ್ವರ (ತಿರುವಣ್ಣಾಮಲೈ)

ಫಣಿಗಣವರಭೂಷಃ ಪಾರ್ವತೀಶ್ಲಾಘ್ಯವೇಷಃ
ಖಲಜನಕೃತರೋಷಃ ಖಂಡಿತಾತ್ಮೀಯದೋಷಃ ।
ಸದರುಣಗಿರಿವಾಸಃ ಶಕ್ರಸೂರ್ಯಾದ್ಯಧೀಶಃ
ಪರಿಹೃತಭವಪಾಶಃ ಪಾತು ಮಾಂ ಪಾರ್ವತೀಶಃ ॥ ೩೭ ॥

ಅ: ಫಣಿಗಣವರಭೂಷಃ = ಸರ್ಪಗಳ ಗುಂಪನ್ನೇ ಉತ್ತಮ ಆಭರಣವನ್ನಾಗಿ ಹೊಂದಿರುವ (ನಾಗಭೂಷಣನಾದ); ಪಾರ್ವತೀಶ್ಲಾಘ್ಯವೇಷಃ = ಪಾರ್ವತಿಯು ಮೆಚ್ಚುವ ಆಕೃತಿವುಳ್ಳ; ಖಲಜನಕೃತರೋಷಃ = ದುಷ್ಟಜನರಲ್ಲಿ ಕೋಪತಾಳುವ; ಖಂಡಿತಾತ್ಮೀಯದೋಷಃ = ತನ್ನವರ ದೋಷಗಳನ್ನು ಪರಿಹರಿಸುವ; ಶಕ್ರಸೂರ್ಯಾದ್ಯ-ಧೀಶಃ = ಇಂದ್ರ, ಸೂರ್ಯ ಮೊದಲಾದ (ದೇವತೆಗಳಿಗೆ) ಸ್ವಾಮಿಯಾದ; ಪರಿಹೃತಭವಪಾಶಃ = ಸಂಸಾರಬಂಧವನ್ನು (ಜ್ಞಾನೋಪದೇಶಕನಾಗಿ) ಪರಿಹರಿಸುವ, ಸದರುಣಗಿರಿವಾಸಃ = ಉತ್ತಮವಾದ 'ಅರುಣಾಚಲ'ದಲ್ಲಿ ನೆಲೆಸಿರುವ; ಪಾರ್ವತೀಶಃ = ಉಮಾಪತಿಯಾದ ಶಿವನು; ಮಾಂ = ನನ್ನನ್ನು; ಪಾತು = ರಕ್ಷಿಸಲಿ.

ಸರ್ಪಗಳ ಗುಂಪುಗಳೇ ಉತ್ತಮ ಆಭರಣ, ಪಾರ್ವತಿಯು ಮೆಚ್ಚುವಂತಹ ಆಕೃತಿ, ದುಷ್ಟಜನರ ಮೇಲೆ ಅಪಾರ ಕೋಪ, ನಂಬಿದವರ ದೋಷಗಳನ್ನು ಪರಿಹರಿಸುವ ಪಾವಿತ್ರ್ಯ, ಇಂದ್ರ ಸೂರ್ಯಾದಿದೇವತೆಗಳ ಮೇಲೆ ಒಡೆತನ, ಪಾರ್ವತಿಯ ಮನದನ್ನ, ಸಂಸಾರಬಂಧನವನ್ನು ಬಿಡಿಸುವ ಹಿರಿಮೆ - ಇಂತಹ ಉತ್ತಮವಾದ 'ಅರುಣಾಚಲ'ದಲ್ಲಿ ನೆಲೆಸಿರುವ ಶಿವನು ನನ್ನನ್ನು ಪಾಲಿಸಲಿ.

ವಿ: ೧. 'ತಿರುವಣ್ಣಾಮಲೈ' ಎಂದು ಪ್ರಸಿದ್ಧವಾಗಿರುವ 'ಅರುಣಾಚಲ' ಕ್ಷೇತ್ರದಲ್ಲಿನ ಈಶ್ವರನನ್ನು ಶ್ರೀವಾದಿರಾಜರು ಈ ಶ್ಲೋಕದಲ್ಲಿ ಸುತ್ತಿಸಿರುವರು. ಈಶ್ವರನ ತೇಜೋಲಿಂಗ-

---

೧. ಸ್ತನಪಾನೇನ ಸ್ತನಶೈಥಿಲ್ಯೇ ಸೌಂದರ್ಯಹಾನಿರ್ಭವತೀತಿ ಭಿಯೇವ ತಸ್ಯೋಪಮ್ಯಾಃ ಪ್ರಕಲ್ಪ್ಯ ಷಾಣ್ಮಾತುರಮಕರೋದಿತಿ ಭಾವಃ । -ವ್ಯಾ

೨. ವಿರಕ್ತಸ್ಯಾಪಿ ಶಿವಸ್ಯ ರಾಗಜನಯಿತ್ರ್ಯಾಃ ಕಾಮಾಕ್ಷ್ಯಾಃ ಸೌಂದರ್ಯಾತಿಶಯಃ ಕಥಂ ಕಥನೀಯ ಇತಿ ಭಾವಃ । -ವ್ಯಾ

ಗಳಲ್ಲಿ ಒಂದಾಗಿರುವ ಈ ಅರುಣಾಚಲದಲ್ಲಿ ಕಾರ್ತಿಕಮಾಸದ ಹುಣ್ಣಿಮೆ ದಿನ ಅರುಣಾಚಲ ಶಿಖರದ ಮೇಲೆ ಒಂದು ಜ್ಯೋತಿಯನ್ನು ಬೆಳಗಿಸುವರು; ಅದೇ ಶಿವನ 'ಅಗ್ನಿತತ್ತ್ವಲಿಂಗ'ವೆಂದು ಪ್ರಸಿದ್ಧಿ.

೨. ಅರುಣಾಚಲೇಶ್ವರನಾದ ಶಿವನು ಪಾರ್ವತೀಪತಿ, ನಾಗಭೂಷಣ, ಖಲಜನ-ವಿರೋಧಿ, ಭಕ್ತಜನದೋಷನಾಶಕ, ಇಂದ್ರಸೂರ್ಯಾದಿಗಳ ಅಧಿಪತಿ, ಭವಹರವಾದ ಸುಜ್ಞಾನದಾಯಕ ಎಂದು ಭಾವ. ತತ್ತ್ವಜ್ಞಾನದ ಅರುಣೋದಯಕ್ಕೆ ಮನೋನಿಯಾಮಕರಾದ ಅರುಣಾಚಲೇಶ್ವರ ಭಜನೆ ಅತ್ಯವಶ್ಯ.

## ತ್ರಿವಿಕ್ರಮ (ತಿರುಕೋಯಿಲೂರು)

**ತ್ರಿವಿಕ್ರಮ[1] ನ ವಿಕ್ರಮಂ ಗಣಯಿತುಂ ಫಣೀ ಶಕ್ನುತೇ**
**ತವೇಶ ನತವೇಪಥುಪ್ರಶಮನಂ ಪರೇ ಕಿಂ ಪುನಃ[2] ।**
**ಅಜಾಂಡಘನಭಾಂಡಖಂಡನಪಟೀಯಸೀ ಯನ್ಮೃದು-**
**ಪ್ರದೀಪ್ತನಿಗಮೋಕ್ತಪನ್ನಖಶಿಖಾ ಜಗದ್ವ್ಯಾಪಿನೀ ॥ ೩೮ ॥**

ಅ: (ಹೇ) ಈಶ ! = ಎಲೈ ಸ್ವಾಮಿಯಾದ; ತ್ರಿವಿಕ್ರಮ = ತ್ರಿವಿಕ್ರಮನೇ !; ನತವೇಪಥುಪ್ರಶಮನಂ = ಶರಣಾಗತರ ನಡುಕವನ್ನು ಪರಿಹರಿಸುವ; ತವ = ನಿನ್ನ; ವಿಕ್ರಮಂ = ಪರಾಕ್ರಮವನ್ನು; ಗಣಯಿತುಂ = ಎಣಿಕೆಮಾಡಲು; ಫಣೀ = (ಸಾವಿರಮುಖದ) ಶೇಷನು (ಸಹ); ನ ಶಕ್ನುತೇ = ಶಕ್ತನಾಗುವುದಿಲ್ಲ; ಪರೇ = ಇತರರು; (ಸಮರ್ಥರಾಗುವುದಿಲ್ಲ ಎಂದು); ಪುನಃ ಕಿಂ (ವ್ಯಕ್ತವ್ಯಂ) = ಮತ್ತೆ ಹೇಳಬೇಕಾಗಿದೆಯೇ? ಜಗದ್ವ್ಯಾಪಿನೀ =

---

೧. ವೇದಾನ್ ಕಾಲಾನ್ ಗುಣಾನ್ ಲೋಕಾನ್ ದೇವಮಾನುಷದಾನವಾನ್ ।
ಚೇತನಾಚೇತನಾನ್ ಮಿಶ್ರಾನ್ ತ್ರೀಣಿ ಪದಾ ವಿಚಕ್ರಮೇ ॥
ರಕ್ಷಕತ್ವೇನ ಸರ್ವಾಣಿ ಸ್ರಷ್ಟೃಭರ್ತೃತ್ವತಸ್ತಥಾ ।
ಮೋಕ್ಷದತ್ವೇನ ಚ ವಿಭುಃ ಸ್ತಂಭನೀಯೋ ನ ಕೇನಚಿತ್ ।
ಧಾರಕಾಂಶ್ಚೈವ ವಾಯ್ವಾದೀನ್ ಧಾರಯನ್ ವರ್ತತೇ ತತಃ ॥ – ಋಗ್ಭಾಷ್ಯ (೨/೩೫-೩೭)

೨. ವಿಷ್ಣೋರ್ನು ಕಂ ವೀರ್ಯಾಣಿ ಪ್ರ ವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ ।
ಯೋ ಅಸ್ಕಭಾಯದುತ್ತರಂ ಸಧಸ್ಥಂ ವಿಚಕ್ರಮಾಣಸ್ತ್ರೇಧೋರುಗಾಯಃ ॥ -ಋಗ್ವೇದ (೧/೧೫೪)
ಬ್ರಹ್ಮೇಶಾನಾದಿಭಿರ್ದೇವೈಃ ಸಮೇತ್ಯೈರ್ಯದ್ಗುಣಾಂಶಕಃ ।
ನಾವಸಾಯಯಿತುಂ ಶಕ್ಯೋ ವ್ಯಾಚಕ್ಷಾಣೈಶ್ಚ ಸರ್ವದಾ ॥ -ಮ.ಭಾ.ತಾ.ನಿ. ೨/೧೧೮)
ನೈವೋದಾಪುರ್ಗ್ಣಂತೋಽನ್ತಂ ಯದ್ಗುಣಾನಾಮಜಾದಯಃ ॥ - ದ್ವಾದಶಸ್ತೋತ್ರ (೧/೧೨)
ಗಾಯನ್ ಗುಣಾನ್ ದಶಶತಾನನ ಆದಿದೇವಃ ।
ಶೇಷೋಽಧುನಾಽಪಿ ಸಮವಸ್ಯತಿ ನಾಸ್ಯ ಪಾರಮ್ ॥ -ಭಾಗವತ
ಪ್ರತ್ಯೇಕಶೋ ಗುಣಾನಾಂ ತು ನಿಃಸೀಮತ್ವಮುದೀರ್ಯತೇ ।
ತದಾನಂತ್ಯಂ ಹಿ ಗುಣತಸ್ತೇ ಚಾನಂತಾ ಹಿ ಸಂಖ್ಯಯಾ ॥ -ಭಾಗವತತಾತ್ಪರ್ಯ

ಬ್ರಹ್ಮಾಂಡವನ್ನು ವ್ಯಾಪಿಸಿರುವ; ಯನ್ಮೃದುಪ್ರದೀಪ್ತನಿಗಮೋಕ್ತಪನಖಶಿಖಾ = ಯಾವ ನಿನ್ನ ಕೋಮಲವೂ, ಪ್ರಖರಕಾಂತಿಯುಕ್ತವೂ, ವೇದೋಕ್ತವೂ ಆದ ಪಾದದ ಉಗುರಿನ ತುದಿಯು; ಅಜಾಂಡಘನಭಾಂಡಖಂಡನಪಟೀಯಸೀ = ಬ್ರಹ್ಮಾಂಡವೆಂಬ ಘಟ್ಟಿಯಾದ ಮೃಣ್ಮಯಪಾತ್ರೆಯನ್ನು ಭೇದಿಸುವ ವಿಷಯದಲ್ಲಿ ಅತ್ಯಂತ ಸಮರ್ಥವಾದುದಾಗಿದೆ.

ಸ್ವಾಮಿ ತ್ರಿವಿಕ್ರಮ ! ಶರಣಾಗತರ ನಡುಕವನ್ನು ಪರಿಹರಿಸುವ ನಿನ್ನ ಪರಾಕ್ರಮವನ್ನು ಎಣಿಕೆಮಾಡಲು ಸಾವಿರಮುಖದ ಶೇಷನೂ ಸಹ ಶಕ್ತನಲ್ಲ; ಇನ್ನು ಇತರರಿಗೆಂತು ಸಾಧ್ಯವಾದೀತು? ಜಗತ್ತನ್ನೇ ವ್ಯಾಪಿಸಿರುವ ನಿನ್ನ ಕೋಮಲವೂ, ಪ್ರಖರ-ಕಾಂತಿಯುಕ್ತವೂ, ವೇದೋಕ್ತವೂ ಆದ ಉತ್ತಮವಾದ ಪಾದದ ಉಗುರಿನ ತುದಿಯು ಬ್ರಹ್ಮಾಂಡವೆಂಬ ಗಟ್ಟಿಯಾದ ಮೃಣ್ಮಯಪಾತ್ರೆಯನ್ನು ಭೇದಿಸಲು ಅತ್ಯಂತ ಸಮರ್ಥವಾಗಿದೆ.

ವಿ: ೧. ತಿರುಕ್ಕೋಯಿಲೂರು ಕ್ಷೇತ್ರವು ಇಂದಿನ ತಮಿಳುನಾಡಿನಲ್ಲಿ ಅರುಣಾಚಲದಿಂದ ಸುಮಾರು ೪೦ ಕಿ.ಮೀ. ದೂರದಲ್ಲಿರುವ ಪ್ರಸಿದ್ಧ ವೈಷ್ಣವ ಕ್ಷೇತ್ರ. ತ್ರಿವಿಕ್ರಮಾವತಾರವನ್ನು ಮಹಾವಿಷ್ಣುವು ತೋರಿ ಬಲಿಚಕ್ರವರ್ತಿಯನ್ನು ದಮನ ಮಾಡಿದ ಸ್ಥಳ ಎಂದು ಸ್ಥಳಪುರಾಣವು ಇದನ್ನುವರ್ಣಿಸಿದೆ. ಇಲ್ಲಿತ್ರಿವಿಕ್ರಮ ಮೂರ್ತಿಯು೧೦ ಅಡಿ ಎತ್ತರದ ಭವ್ಯ ಮೂರ್ತಿಯಾಗಿದ್ದು ವಕ್ಷಃಸ್ಥಲದಲ್ಲಿ ಶ್ರೀವತ್ಸ, ತೋಳುಗಳಲ್ಲಿ ಶಂಖಚಕ್ರಗಳನ್ನೂ ಹೊಂದಿದೆ. ಬ್ರಹ್ಮದೇವರು ಮೇಲ್ಗಡೆಯಲ್ಲಿದ್ದು ಸತ್ತಲೂ ಶುಕ್ರಾಚಾರ್ಯ ಮೊದಲಾದವರ ವಿಗ್ರಹಗಳಿವೆ. ದಕ್ಷಿಣಪಿನಾಕಿನೀ ತೀರದ ಈ ಕ್ಷೇತ್ರದಲ್ಲಿ ನದಿಯ ಮತ್ತೊಂದು ತೀರದಲ್ಲಿ ಪ್ರಸಿದ್ಧ ವೈಷ್ಣವ ಯತಿಗಳಾದ ಶ್ರೀಮದುತ್ತರಾದಿಮಠದ ಶ್ರೀರಘೂತ್ತಮತೀರ್ಥರ (೧೫೫೭-೧೫೯೫) ಮೂಲಬೃಂದಾವನವು ಇದೆ. 1517-1595

೨. ತ್ರಿವಿಕ್ರಮರೂಪಿಯಾದ ಶ್ರೀಹರಿಯ ಕೋಮಲವಾದ ಪಾದದ ಉಗುರಿನ ತುದಿಯು ಬ್ರಹ್ಮಾಂಡಕಟಾಹವನ್ನೇ ಸೀಳಿ ಹಾಕಿತು. ಇಂತಹ ತ್ರಿವಿಕ್ರಮನ ವಿಕ್ರಮವನ್ನು ಸಾವಿರ ಮುಖದ ಶೇಷನೂ ವರ್ಣಿಸಲಾರ ! ಎಂದ ಮೇಲೆ ಇತರರ [೧]ಪಾಡೇನು? ಶ್ರೀಹರಿಯು ಅನಂತಗುಣಪೂರ್ಣನು; ಮಾತ್ರವಲ್ಲದೆ ಅವನ ವಿಕ್ರಮಾದಿ ಪ್ರತಿಯೊಂದು ಗುಣವೂ ಸಹ ಪ್ರತ್ಯೇಕವಾಗಿಯೇ 'ಅನಂತ' ಎಂದು ಭಾವ.

೩. ತ್ರಿವಿಕ್ರಮನ ಸೇವೆಯು ಶ್ರವಣಾದಿಸಾಧನತ್ರಯಕ್ಕೂ, ಜ್ಞಾನಭಕ್ತ್ಯಾದಿ ಸಾಧನತ್ರಯಕ್ಕೂ ಅಪೂರ್ವ ಸಾಧನ.

## ವೃದ್ಧಾಚಲೇಶ್ವರ(ಕ್ಷೇತ್ರ)

ವೃದ್ಧಾಚಲಕೃತಾವಾಸಃ ಸದ್ಯೋಜಾತಸ್ತ್ರಿಲೋಚನಃ ।
ಅದ್ಯೈವ ಜ್ಞಾನನಯನಂ ವರ್ಧಯತ್ವಚಲಂ ಮಯಿ ॥ ೩೯ ॥

---

೧. ಅತಃ ತ್ರಿವಿಕ್ರಮಸ್ಯ ವಿಕ್ರಮಂ ವಕ್ತುಂ ನ ಸಮರ್ಥಃ ಇತ್ಯರ್ಥಃ । - ವ್ಯಾ

ಅ: ವೃದ್ಧಾಚಲಕೃತಾವಾಸಃ = ವೃದ್ಧಾಚಲದಲ್ಲಿ ನೆಲೆಸಿರುವ; ಸದ್ಯೋಜಾತಃ = ಸದ್ಯೋಜಾತನೆಂಬ; ತ್ರಿಲೋಚನಃ = ಮುಕ್ಕಣ್ಣನಾದ ಶಿವನು; ಅದ್ಯ ಏವ = ಈಗಲೇ; ಮಯಿ = ನನ್ನಲ್ಲಿ; ಅಚಲಂ = ಸ್ಥಿರವಾಗಿ; ಜ್ಞಾನನಯನಂ = ಜ್ಞಾನದೃಷ್ಟಿಯನ್ನು; ವರ್ಧಯತು= ವೃದ್ಧಿಗೊಳಿಸಲಿ.

ವೃದ್ಧಾಚಲದಲ್ಲಿ ನೆಲೆಸಿರುವ ಸದ್ಯೋಜಾತನೆಂಬ ಮುಕ್ಕಣ್ಣನಾದ ಶಿವನು ಈಗಲೇ ನನ್ನಲ್ಲಿ ಸ್ಥಿರವಾಗಿ ಜ್ಞಾನದೃಷ್ಟಿಯನ್ನು ಹೆಚ್ಚಿಸಲಿ.

ವಿ: ಸದ್ಯೋಜಾತನೂ, ತ್ರಿಲೋಚನನೂ, ಆದ ವೃದ್ಧಾಚಲೇಶ್ವರನು ನನಗೆ ಸದಯವೇ ಅಚಲವಾದ ಜ್ಞಾನದೃಷ್ಟಿಯನ್ನು ವೃದ್ಧಿಗೊಳಿಸಲಿ ಎಂದು ಭಾವ. ಈ ಶ್ಲೋಕದ ಪೂರ್ವಾರ್ಧದಲ್ಲಿನ 'ಸದ್ಯ', 'ಅಚಲ', 'ಲೋಚನ' ಮತ್ತು 'ವೃದ್ಧ' ಎಂಬ ಶಿವನ ಹೆಸರಲ್ಲಿನ ಪದಗಳು ಉತ್ತರಾರ್ಧದಲ್ಲಿ 'ಅದ್ಯೈವ', 'ಅಚಲಂ', 'ಜ್ಞಾನನಯನಂ' ಮತ್ತು 'ವರ್ಧಯತು' ಎಂಬ ಪದಗಳಿಗೆ ಗಮಕವಾಗಿದೆ ಎಂಬುದು ಗಮನಾರ್ಹ.

**ಹರಾಯ ಭಜಕಾನಿಷ್ಟಹರಾಯ ಪುರವೈರಿಣೇ ।**
**ಭವಾಯ ಭವತೇ ಭೂಯಾಚ್ಛಿವಾಯ ಶಿರಸಾ ನಮಃ ॥ ೪೦ ॥**

ಅ: **ಹರಾಯ** = ದುಷ್ಟಜನರ ಇಷ್ಟವನ್ನು ನಾಶಪಡಿಸುವ; **ಭಜಕಾನಿಷ್ಟಹರಾಯ** = ತನ್ನ ಸೇವಕರ ಅನಿಷ್ಟವನ್ನು ಪರಿಹರಿಸುವ; **ಪುರವೈರಿಣೇ** = ತ್ರಿಪುರಾಸುರ ಸಂಹಾರಕನಾದ; **ಶಿವಾಯ** = ಮಂಗಲಕರನಾದ; **ಭವಾಯ** = ಶ್ರೀಮಹಾದೇವನಾದ; **ಭವತೇ** =ನಿನಗೆ; **ಶಿರಸಾ** = ಶಿರಸಾ; **ನಮಃ** = ನಮಸ್ಕಾರವು; **ಭೂಯಾತ್** = ಆಗಲಿ.

ತನ್ನ ಸೇವಕರ ಅನಿಷ್ಟವನ್ನು ಪರಿಹರಿಸುವ, ತ್ರಿಪುರವೈರಿಯಾದ, ಮಂಗಲಕರನಾದ ಶ್ರೀಮಹಾದೇವನಾದ, ಹರನಿಗೆ ಶಿರಸಾ ನಮಸ್ಕಾರವು.

ವಿ: ೧. ಹರನು ದುಷ್ಟಜನರ ಇಷ್ಟಹರ; ಸಜ್ಜನರ ಅನಿಷ್ಟಹರ; ತ್ರಿಪುರಾಸುರನಿಗೆ ವೈರಿ; ಸ್ವರೂಪತಃ ಶಿವ; ಯೋಗ್ಯತೆಯಲ್ಲಿ ಮಹಾದೇವ, ಇಂತಹ ರುದ್ರದೇವರಿಗೆ ಶಿರಸಾ ನಮಃ ಎಂದು ಭಾವ. ತಂತ್ರಸಾರೋಕ್ತ 'ನಮಃ ಶಿವಾಯ' ಎಂಬ ಶಿವಪಂಚಾಕ್ಷರ ಮಂತ್ರವನ್ನು ಹೀಗೆ ಶ್ಲೋಕಬದ್ಧವಾಗಿಸಿರುವ ಶ್ರೀವಾದಿರಾಜರ ಕೌಶಲ ಅರ್ಥಪೂರ್ಣವಾದುದು.

೨. ಈ ಎರಡೂ ಶ್ಲೋಕಗಳಲ್ಲಿ 'ವೃದ್ಧಾಚಲ' ವೆಂಬ ಸ್ಥಳದಲ್ಲಿರುವ ವೃದ್ಧಾಚಲೇಶ್ವರನೆಂಬ ಶಿವನ ಪ್ರಾರ್ಥನೆಯಿದೆ. ವೃದ್ಧಾಚಲವು ತಮಿಳುನಾಡಿನ ಒಂದು ಪ್ರಸಿದ್ಧ ಯಾತ್ರಾಸ್ಥಳ. ವಿಭೀಷಿತನೆಂಬ ಋಷಿಯ ತಪಸ್ಸಿಗೆ ಮೆಚ್ಚಿ ಶಿವನು ಇಲ್ಲಿ ಪ್ರತ್ಯಕ್ಷನಾದನೆಂದು ಸ್ಥಳಪುರಾಣದಲ್ಲಿದೆ. ತಿರುಕೋಯಿಲೂರಿನಿಂದ ೬೦.ಕಿ.ಮೀ. ಉತ್ತರಕ್ಕೆ ಈ ಕ್ಷೇತ್ರವಿದೆ.

---

೧. ಪೂರ್ವಾರ್ಧೋಕ್ತಪದಚತುಷ್ಟಯೇನ ಉತ್ತರಾರ್ಧೋಕ್ತಪದಾರ್ಥಚತುಷ್ಟಯಸೂಚನಂಯಥಾ-ಯೋಗ್ಯಂ ದ್ರಷ್ಟವ್ಯಂ। -ವ್ಯಾ

೩. ಶ್ರೀರುದ್ರದೇವರು ತಾವು ಮಾಡಿದ ಪಾಷಂಡಶಾಸ್ತ್ರನಿರ್ಮಾಣರೂಪ ದೋಷ-ಪರಿಹಾರಕ್ಕಾಗಿ ಶ್ರೀಮಹಾವಿಷ್ಣುವಿನ ಆಜ್ಞೆಯಂತೆ ಕಾಶಿಗಿಂತ ಮಿಗಿಲಾದ ಈ ವೃದ್ಧಾಚಲಕ್ಷೇತ್ರದಲ್ಲಿ ಕುಳಿತು, ಶ್ರೀಮುಷ್ಣಕ್ಷೇತ್ರವನ್ನು ಸದಾ ನೋಡುತ್ತಾ ತಮ್ಮ ದೋಷವನ್ನು ಕಳೆದುಕೊಳ್ಳುತ್ತಿರುವರು ಎಂದು ವರಾಹಪುರಾಣದ ಶ್ರೀಮುಷ್ಣಮಾಹಾತ್ಮ್ಯದಲ್ಲಿ ಉಕ್ತವಾಗಿದೆ.(ಶ್ರೀಮುಷ್ಣಕ್ಷೇತ್ರದ ದರ್ಶನವೂ ಸಕಲಪಾಪಪರಿಹಾರಕ ಎಂದರ್ಥ):

ಪಾಷಂಡಶಾಸ್ತ್ರಕೃದ್ದೋಷಪರಿಹಾರಾಯ ಧೂರ್ಜಟಿಃ।
ಕ್ಷೇತ್ರಾದಸ್ಮಾನ್ಮಹಾಪುಣ್ಯಂ ಕಿಂಚಿದ್ವಾಯವ್ಯಕೋಣಕೇ।
ವೃದ್ಧಾಚಲಮಿತಿ ಖ್ಯಾತಂ ಕಾಶ್ಯಾ ಅಪ್ಯಧಿಕಂ ಮಹತ್।
ವಸ ತತ್ರ ಸದಾ ಪಶ್ಯನ್ ಶ್ರೀಮುಷ್ಣಂ ಕ್ಷೇತ್ರಮುತ್ತಮಮ್।
ತಪಶ್ಚರ ಮಹಾಭಾಗ ಹೃದಿ ಮಾಮೇವ ಭಾವಯನ್॥

(ಶ್ರೀರುದ್ರಪ್ರಣೀತವಾದ ಪಾಶುಮತಶಾಸ್ತ್ರದ ಅಪ್ರಮಾಣ್ಯಕ್ಕೂ ಶ್ರೀವಿಷ್ಣುಸರ್ವೋ-ತ್ತಮತ್ತ್ವದ ಉಪಾದೇಯತ್ವಕ್ಕೂ ಸಹ ಈ ವಾಕ್ಯಗಳು ನಿದರ್ಶನವಾಗಿವೆ.)

## ಶ್ರೀಭೂವರಾಹ (ಶ್ರೀಮುಷ್ಣಕ್ಷೇತ್ರ)

**ವರಾಹ ವರದಂಷ್ಟ್ರಯಾ ಕುಟಿಲಯಾ ಕಠೋರಂ ರಿಪುಂ**
**ವಿದಾರ್ಯ ಸುರಧುರ್ಯ ಗಾಂ ನಿಜಪದಾರವಿಂದಾನುಗಾಮ್।**
**ಉಪೇತ್ಯ ಸುಖಚಿತ್ತನುಃ ಸರಸಲೀಲಯಾಽಽಲಿಂಗ್ಯ ತಾಂ**
**ಸಿತಾಂಗ ಜಗತಾಂ ಗತೇ ವಿಹರಸೀಹ ಪುಣ್ಯಸ್ಥಲೇ॥ ೪೧॥**

ಅ: ಸಿತಾಂಗ = ಶುಭ್ರಶರೀರವುಳ್ಳ; ಜಗತಾಂ = ಲೋಕಗಳಿಗೆ; ಗತೇ = ನೆಲೆಯಾದ; ಸುರಧುರ್ಯ = ಸುರಶ್ರೇಷ್ಠನಾದ; (ಹೇ)ವರಾಹ! = ಎಲೈ ವರಾಹರೂಪಿ ಶ್ರೀಹರಿಯೇ!; ಕುಟಿಲಯಾ = ವಕ್ರವಾದ; ವರದಂಷ್ಟ್ರಯಾ = ಉತ್ತಮವಾದ ನಿನ್ನ ಕೋರೆದಾಡೆಯಿಂದ; ಕಠೋರಂ = ತೀಕ್ಷ್ಣನಾದ; ರಿಪುಂ = ಶತ್ರುಹಿರಣ್ಯಾಕ್ಷನನ್ನು; ವಿದಾರ್ಯ = ಚೆನ್ನಾಗಿ ಸೀಳಿ; ಸುಖಚಿತ್ತನುಃ = ಆನಂದಜ್ಞಾನದೇಹನಾದ; (ತ್ವಂ = ನೀನು); ನಿಜಪದಾರವಿಂದಾನುಗಾಂ = ನಿನ್ನ ಚರಣಕಮಲಸೇವಕಳಾದ; ಗಾಂ = ಭೂಮಿ(ದೇವಿ)ಯನ್ನು; ಉಪೇತ್ಯ = ಬಳಿಸಾರಿ; ಸರಸಲೀಲಯಾ = ವಿಲಾಸಯುಕ್ತವಾದ ಲೀಲೆಯಿಂದ; ತಾಂ = ಅವಳನ್ನು; ಆಲಿಂಗ್ಯ = ಆಲಂಗಿಸಿ; ಇಹ = ಈ; ಪುಣ್ಯಸ್ಥಲೇ = ಪುಣ್ಯಕ್ಷೇತ್ರದಲ್ಲಿ; ವಿಹರಸಿ = ಕ್ರೀಡಿಸುತ್ತಿರುವಿ.

ಶುಭ್ರಶರೀರದ, ಲೋಕಗಳಿಗೆ ನೆಲೆಯಾದ, ಸುರಶ್ರೇಷ್ಠನಾದ, ಎಲೈ ವರಾಹರೂಪಿ ಶ್ರೀಹರಿಯೇ! ವಕ್ರವಾದ ನಿನ್ನ ಉತ್ತಮ ಕೋರೆದಾಡೆಯಿಂದ ಕ್ರೂರಶತ್ರುವಾದ ಹಿರಣ್ಯಾಕ್ಷನನ್ನು ಸೀಳಿಹಾಕಿದ ಆನಂದಜ್ಞಾನದೇಹನಾದ ನೀನು ನಿನ್ನ ಚರಣಕಮಲ-ಸೇವಕಳಾದ ಭೂದೇವಿಯನ್ನು ಬಳಿಸಾರಿ ವಿಲಾಸಯುಕ್ತವಾದ ಲೀಲೆಯಿಂದ ಅವಳನ್ನು ಆಲಂಗಿಸಿ ಈ ಪುಣ್ಯಕ್ಷೇತ್ರದಲ್ಲಿ ವಿಹರಿಸುತ್ತಿರುವಿ.

ವಿ: ೧. ಇದು ಎಂಟು ಸ್ವಯಂವ್ಯಕ್ತಕ್ಷೇತ್ರಗಳಲ್ಲಿ ಒಂದಾಗಿರುವ ಶ್ರೀಮುಷ್ಣವರಾಹದೇವರ ಸ್ತೋತ್ರ. ಶ್ರೀಮುಷ್ಣವು ತಿರುಕೋಯಿಲೂರಿನಿಂದ ೬೦ ಕಿ.ಮೀ. ಗಳಷ್ಟು ದೂರದಲ್ಲಿದೆ. ವರಾಹಾವತಾರದ ಸ್ಥಳವೆಂದು ಇದರ ಬಗ್ಗೆ ಸ್ಥಳಪುರಾಣದಲ್ಲಿದೆ.

೨. ಶ್ರೀಮಧ್ವಾಚಾರ್ಯರು ಈ ಕ್ಷೇತ್ರದಲ್ಲೇ ಚಾತುರ್ಮಾಸ್ಯಕ್ಕೆ ಕುಳಿತಿದ್ದ ಉಲ್ಲೇಖವು ಪದ್ಮಪುರಾಣದ ಶ್ರೀಮುಷ್ಣಮಾಹಾತ್ಮ್ಯದಲ್ಲಿದೆ. ಆಗ ತುಂಬುಗರ್ಭಿಣಿಯೊಬ್ಬಳ ಸಂಕಷ್ಟವನ್ನು ಪರಿಹರಿಸಲೆಂದು ಅವರು ತಮ್ಮ ದಂಡದಿಂದ ತತ್‌ಕ್ಷಣವೇ ನಿರ್ಮಿಸಿದ ತೀರ್ಥವು 'ದಂಡತೀರ್ಥ' ವೆಂದೇ ಪ್ರಸಿದ್ಧಿಯಾಗಿದೆ. (ಶ್ರೀಮಧ್ವಾಚಾರ್ಯರು ಪೂರ್ವಾಶ್ರಮದಲ್ಲಿ ಗುರುಕುಲವಾಸದಲ್ಲಿದ್ದಾಗ ನಿರ್ಮಿಸಿದ ಮತ್ತೊಂದು ದಂಡತೀರ್ಥವು ಉಡುಪಿ - ಮಂಗಳೂರು ಹೆದ್ದಾರಿಯಲ್ಲಿ ಉಡುಪಿಯಿಂದ ೧೨ ಕಿ.ಮೀ. ದೂರದಲ್ಲಿರುವ 'ಕಾಪು' ಎಂಬಲ್ಲಿದೆ. ಅಲ್ಲದೆ ಅವರು ಬಾಲ್ಯದಲ್ಲಿ ಪಾಜಕಕ್ಷೇತ್ರದಲ್ಲಿ ನಿರ್ಮಿಸಿದ 'ವಾಸುದೇವತೀರ್ಥ'ವು ಸಹ ಒಂದು ದಂಡತೀರ್ಥವೇ ಆಗಿದೆ.)

೩. ಶ್ರೀಮುಷ್ಣಮಾಹಾತ್ಮ್ಯವು ವರಾಹಪುರಾಣ ಮತ್ತು ನಾರದ ಪುರಾಣಗಳಲ್ಲಿ ವಿಸ್ತಾರವಾಗಿ ಬಂದಿದ್ದು ಅದರಲ್ಲಿ ಶ್ರೀಮಧ್ವಾಚಾರ್ಯರ ವಾಯ್ವವತಾರತ್ವವೂ ನಿರೂಪಿತವಾಗಿದೆ:

ತ್ರಿಪುರೇ ಚ ಹತಾ ದೈತ್ಯಾ ಯೇ ಚ ಸೌಗಂಧಿಕೇ ಹತಾಃ ।
ವಿಪ್ರಾವಯಂತಿ ತೇ ಜಾತಾ ಧರಾಯಾಂ ವೈಷ್ಣವಂ ಪದಮ್ ॥
ಮಾತರಿಶ್ವಾ ತತೋ ಜಾತೋ ನಿರಾಕೃತ್ಯ ಚ ದುಷ್ಪಥಮ್ ।
ಸ್ಥಾಪಯಿಷ್ಯತಿ ಸನ್ಮಾರ್ಗಮೇತೇ ಧರ್ಮಪ್ರವರ್ತಕಾಃ ॥

೪. 'ಶ್ರೀಮುಷ್ಣ' ಎಂಬ ಹೆಸರಿಗೆ ವರಾಹಪುರಾಣದ ಶ್ರೀಮುಷ್ಣಮಾಹಾತ್ಮ್ಯದಲ್ಲಿ ಹೇಳಿರುವ ವ್ಯುತ್ಪತ್ತಿಯು ಹೀಗಿದೆ(೩/೧೨):

ದುಷ್ಪಶ್ರಿಯಾಯುಃಕೀರ್ತ್ಯಾದೇರ್ಮೋಕ್ಷಣಾಮತ್ರ ವೈ ಭುವಿ ।
ಶ್ರೀಮುಷ್ಣಮಿತಿ ಚಾಖ್ಯಾ ಹಿ ಕ್ಷೇತ್ರಸ್ಯಾಸ್ಯ ಭವಿಷ್ಯತಿ ॥

೫. ಹೀಗೆ ಸರ್ವೋತ್ತಮನಾದ ಶ್ರೀಹರಿ ಮತ್ತು ಜೀವೋತ್ತಮರಾದ ಶ್ರೀವಾಯು ಈ ಇಬ್ಬರ ವಿಶೇಷ ಸನ್ನಿಧಾನದಿಂದಾಗಿ ಶ್ರೀಮುಷ್ಣವೂ ಭರತಖಂಡದ ಮಹಾಕ್ಷೇತ್ರಗಳಲ್ಲಿ ಒಂದೆನ್ನಿಸಿದೆ. ಇಲ್ಲಿಯ ಶ್ರೀವರಾಹದೇವಸ್ಥಾನದ ಒಂದು ಸ್ತಂಭದಲ್ಲಿ ಶ್ರೀಮಧ್ವಾಚಾರ್ಯರ ಒಂದು ವಿಗ್ರಹವೂ ಇದೆ. ಶ್ರೀ ಉತ್ತರಾದಿಮಠಾಧೀಶರು ಇಲ್ಲಿಗೆ ಆಗಮಿಸಿದಾಗ ಇಲ್ಲಿಯ ಉತ್ಸವ ಮೂರ್ತಿಗಳನ್ನು ಅವರ ಪೂಜೆಗೆಂದು ಅವರಿದ್ದಷ್ಟು ದಿನ ಅವರ ವಶಕ್ಕೆ ಒಪ್ಪಿಸುವ ಸಂಪ್ರದಾಯ ಈಗಲೂ ಇದೆ. ಇದು ಸಹ ಶ್ರೀಮಧ್ವಾಚಾರ್ಯರು ಈ ಕ್ಷೇತ್ರದಲ್ಲಿ ಬೀರಿದ ಅಪೂರ್ವ ಪ್ರಭಾವಕ್ಕೆ ದ್ಯೋತಕ.

## ಕುಂಭಘೋಣ (ಕ್ಷೇತ್ರ)

**ಕುಂಭಘೋಣೇ ವಸ ಶ್ರೀಶ ಶಾರ್ಙ್ಗಮಾಚ್ಛಾದಯ ಪ್ರಭೋ ।**
**ತಥಾಽಪ್ಯತುಲಲಾವಣ್ಯೈರ್ಜನಾಸ್ತ್ವಾಂ ಜಾನತೇಽಚ್ಯುತಮ್ ॥ ೪೨ ॥**

ಅ: (ಹೇ) ಪ್ರಭೋ ! = ಎಲೈ ಸರ್ವಸಮರ್ಥನಾದ; ಶ್ರೀಶ = ಲಕ್ಷ್ಮೀಪತಿಯೇ !; (ತ್ವಂ = ನೀನು); ಕುಂಭಘೋಣೇ = ಕುಂಭಕೋಣವೆಂಬ [೧]ಕ್ಷೇತ್ರದಲ್ಲಿ; ವಸ = ನೆಲೆಸು; ಶಾರ್ಙ್ಗಂ = ಶಾರ್ಙ್ಗ ಎಂಬ (ನಿನ್ನ) ಧನುಸ್ಸನ್ನು; ಆಚ್ಛಾದಯ = (ಅದರ ಮೇಲೆ ಮಲಗಿ) ಮರೆಮಾಡಿಕೋ; ತಥಾऽಪಿ = ಆದರೂ; ಜನಾಃ = (ಭಕ್ತ)ಜನರು; ಅತುಲಲಾವಣ್ಯೈಃ = ನಿನ್ನ ಅನುಪಮವಾದ ಸೌಂದರ್ಯದಿಂದಾಗಿ; ತ್ವಾಂ = ನಿನ್ನನ್ನು; ಅಚ್ಯುತಂ = ಶ್ರೀನಾರಾಯಣನೆಂದು; ಜಾನತೇ = ತಿಳಿದುಬಿಡುವರು.

ಪ್ರಭುವಾದ ಸಿರಿಯರಸನಾದ ಶಾರ್ಙ್ಗಪಾಣಿಯೇ ! ನೀನು ಕುಂಭಕೋಣದಲ್ಲಿ ನೆಲೆಸು; ಶಾರ್ಙ್ಗವನ್ನು ಮರೆಮಾಡು; ಆದರೂ ನಿನ್ನ ಅನುಪಮವಾದ ಸೌಂದರ್ಯದಿಂದಾಗಿ ಭಕ್ತಜನರು ನಿನ್ನನ್ನು ಅಚ್ಯುತನಾದ ಶ್ರೀಹರಿಯೆಂದು ತಿಳಿದೇ ತಿಳಿಯುವರು.

ವಿ: ೧. ಕುಂಭಕೋಣದಲ್ಲಿರುವ ವಿಷ್ಣುಮೂರ್ತಿಯನ್ನು 'ಶಾರ್ಙ್ಗಪಾಣಿ' ಎಂದು ಕರೆಯುವರು. ಈ ಶಾರ್ಙ್ಗಪಾಣಿಯ ಕೈಯಲ್ಲಿ ಶಾರ್ಙ್ಗಧನುಸ್ಸು ಇಲ್ಲ; ಅದನ್ನು ಆತನು ಬುಡದಲ್ಲಿ ಹಾಕಿಕೊಂಡು ಮಲಗಿರುವವನು ಎಂದು ಸ್ಥಳಪುರಾಣದಲ್ಲಿದೆ; ಹೀಗೆ ಇಲ್ಲಿಯ ಶ್ರೀನಾರಾಯಣನು ಕುಂಭಘೋಣ (ಕುಂಭದ ಒಳಗಿನ ಪ್ರದೇಶದಲ್ಲಿ ಅಡಗಿದವನಾಗಿ ಇದ್ದರೂ)ದಲ್ಲಿದ್ದರೂ, ಶಾರ್ಙ್ಗಧನುಸ್ಸನ್ನು ಮರೆಮಾಡಿಕೊಂಡಿದ್ದರೂ ಭಕ್ತಜನರು ಮಾತ್ರ ಅವನನ್ನು ಶಾರ್ಙ್ಗಪಾಣಿಯಾದ ಶ್ರೀಹರಿ ಎಂದು ಗುರುತಿಸಿಯೇ [೨]ಬಿಡುವರು. ಇದಕ್ಕೆ ಅವನಲ್ಲಿರುವ ಅಪಾರ ಲಾವಣ್ಯವೇ ಕಾರಣ, ಶಾರ್ಙ್ಗಧನುಸ್ಸು ಕಾಣದಿದ್ದರೂ ಜನರು ಶಾರ್ಙ್ಗಪಾಣಿ ಎಂದು ಕರೆಯುವುದು ಅವರು ಈತನನ್ನು ಶ್ರೀಹರಿ ಎಂದು ಗುರುತಿಸಿರುವುದಕ್ಕೆ ದ್ಯೋತಕ ಎಂದೂ, ಇಲ್ಲಿಯ ವಿಗ್ರಹವು ಅತ್ಯಂತ ಸುಂದರವಾದುದೂ ಎಂದೂ ಭಾವ.

೨. **ಕುಂಭಕೋಣ:** ಕುಂಭಕೋಣದಲ್ಲಿ ಭಾಷ್ಯದೀಪಿಕಾಕಾರರೆಂದು ಪ್ರಸಿದ್ಧವಾಗಿರುವ ಶ್ರೀವ್ಯಾಸರಾಜ ಮಠದ ಶ್ರೀಜಗನ್ನಾಥತೀರ್ಥರ ಮೂಲಬೃಂದಾವನವೂ ಮತ್ತು ಅನಂತರ ಆ ಪೀಠದಲ್ಲಿ ಬಂದ ಶ್ರೀವಿದ್ಯಾನಾಥತೀರ್ಥರ, ಶ್ರೀವಿದ್ಯಾಪತಿತೀರ್ಥರ ಮೂಲ ಬೃಂದಾವನಗಳೂ ಸಹ ಇವೆ.

೩. ಅತುಲಲಾವಣ್ಯವು ಶ್ರೀಹರಿಯ ಅಸಾಮಾನ್ಯ ಲಕ್ಷಣಗಳಲ್ಲೊಂದು ಎಂಬುದಾಗಿ ಭಾಗವತಾದಿಗಳಲ್ಲಿ[೩] ಉಕ್ತವಾಗಿರುವುದನ್ನು ಇಲ್ಲಿ ಗಮನಿಸಬೇಕು. ಶಾರ್ಙ್ಗಪಾಣಿತ್ವಾದಿ ಲಕ್ಷಣಗಳಂತೆ ಅತುಲಲಾವಣ್ಯವೂ ಶ್ರೀಹರಿತ್ವ ನಿಶ್ಚಾಯಕವಾದ ಮುಖ್ಯ ಲಕ್ಷಣ ಎಂದೂ ಅದು ಅಡಗಿಸಿಕೊಳ್ಳಲಿಕ್ಕೆ ಸಾಧ್ಯವಾಗದಷ್ಟು ಅಪಾರ ಎಂದೂ ಭಾವ.

---

೧. ರೂಪಮಾಚ್ಛಾದಯಿತುಂ ಘಟಾಂತಃಪ್ರದೇಶೇ ಪ್ರವಿಷ್ಟ ಇತಿ ಧ್ವನಿಃ । -ವ್ಯಾಖ್ಯಾನ

೨. ಅಸದೃಶಲಾವಣ್ಯಸ್ಯ ಅಸಾಧಾರಣತ್ವಾತ್ ತದಾಚ್ಛಾದನಸ್ಯ ಕರ್ತುಮಶಕ್ಯತ್ವಾದಿತಿ ಭಾವಃ । ಅತಿಸುಂದರಃ ಶ್ರೀಶಾರ್ಙ್ಗಪಾಣಿರಿತಿ ತಾತ್ಪರ್ಯಾರ್ಥಃ ॥ -ವ್ಯಾಖ್ಯಾನ

೩. ಸಾಕ್ಷಾನ್ಮನ್ಮಥಮನ್ಮಥಃ । – ಭಾಗವತ (ಗೋಪೀಗೀತಾ)

ಹೃತಭೂಭಾರದೈತೇಯ ಕೃತವಿಶ್ವಜನಾವನ ।
ಶಾರ್ಙ್ಗಪಾಣೇ ಶರಾಣಾಂ ತೇ ಲಕ್ಷ್ಯಂ ಪಾಪಾನಿ ಮೇಽಧುನಾ ॥ ೪೩ ॥

॥ ಇತಿ ಶ್ರೀಮದ್ವಾದಿರಾಜತೀರ್ಥಚರಣಕೃತತೀರ್ಥಪ್ರಬಂಧೇ ಪೂರ್ವಪ್ರಬಂಧಃ ॥ ೩ ॥

ಅ: ಹೃತಭೂಭಾರದೈತೇಯ[೧] = ಭೂಮಿಗೆ ಭಾರವಾಗಿದ್ದ ದೈತ್ಯರನ್ನು ಸಂಹರಿಸಿದ; ಕೃತವಿಶ್ವಜನಾವನ = ಸಕಲ ಭಕ್ತರ ಪಾಲನೆಯನ್ನು ಮಾಡಿರುವ; (ಹೇ) ಶಾರ್ಙ್ಗಪಾಣೇ = ಎಲೈ ಶಾರ್ಙ್ಗಪಾಣಿಯಾದ ಶ್ರೀಹರಿಯೇ; ಅಧುನಾ = ಈಗ; ತೇ = ನಿನ್ನ; ಶರಾಣಾಂ = ಬಾಣಗಳಿಗೆ; ಲಕ್ಷ್ಯಂ = ಗುರಿ; ಮೇ = ನನ್ನ; ಪಾಪಾನಿ = ಪಾಪಗಳೇ ಆಗಿವೆ.

ಭೂಮಿಗೆ ಭಾರಭೂತರಾದ ದೈತ್ಯರನ್ನು ಸಂಹರಿಸಿದವನೇ ! ಸಕಲಭಕ್ತಜನರನ್ನು ಪೊರೆದವನೇ ! ಎಲೈ ಶಾರ್ಙ್ಗಪಾಣಿಯಾದ ಶ್ರೀಹರಿಯೇ ! ಈಗ ನಿನ್ನ ಬಾಣಗಳಿಗೆ ಗುರಿ ನನ್ನ ಪಾಪಗಳೇ ಆಗಿವೆ.

ವಿ: ೧. ಭೂಮಿಗೆ ಭಾರಭೂತರಾದ ದೈತ್ಯರನ್ನು ಸಂಹರಿಸಿ ಸಕಲಸಜ್ಜನರನ್ನು ಶಾರ್ಙ್ಗಪಾಣಿಯಾದ ನೀನು ಸಲಹಿರುವಿ; ಆದರೆ ನೀನು ಇನ್ನು ಮುಂದೆ ನಿನ್ನ ಶಾರ್ಙ್ಗಧನುಸ್ಸಿಗೆ ಕೆಲಸವಿಲ್ಲವೆಂದೇನೂ ಭಾವಿಸಬೇಕಾಗಿಲ್ಲ; ಏಕೆಂದರೆ ನನ್ನ ಬಹು ಪಾಪಗಳು ಅದಕ್ಕೆ ಗುರಿಯಾಗಿ ಇವೆಯಲ್ಲವೆ ! ಹೊರಗಿನಿಂದ ಬಾಧಿಸುವ ದೈತ್ಯರನ್ನೆಲ್ಲ ನೀನು ಸಂಹರಿಸಿದಂತೆ ಒಳಗಿನಿಂದ ಹಿಂಸಿಸುವ ನನ್ನ ಪಾಪಗಳನ್ನು (ಅದರ ಅಭಿಮಾನಿ ದೈತ್ಯರನ್ನು) ಸಂಹರಿಸಿ ನನ್ನನ್ನು ಪಾಲಿಸು ಎಂದು [೨]ಭಾವ.

೨. ಶ್ರೀಹರಿಯು ಶಾರ್ಙ್ಗಪಾಣಿಯಾದರೂ ಕುಂಭಘೋಣದಲ್ಲಿ ಅದನ್ನು ಕೈಯಲ್ಲಿ ಹಿಡಿದಿಲ್ಲ ಎಂಬ ಹಿನ್ನೆಲೆಯಲ್ಲಿ ಇಲ್ಲಿಯ ಪ್ರಾರ್ಥನೆಯು ಅರ್ಥವತ್ತಾಗಿದೆ.

೩. ಪಾಪಾನಿ ಎಂಬ ಬಹುವಚನದಿಂದಲೇ ನಮ್ಮ ಪಾಪಗಳ ಸಂಖ್ಯೆ ಅಪಾರ ಎಂಬುದನ್ನು ಸೂಚಿಸಿರುವರು.

೪. ಕುಂಭಘೋಣದಲ್ಲಿರುವ ಶಾರ್ಙ್ಗಪಾಣಿಯ ವಿಗ್ರಹವು ಶೇಷಶಾಯಿಯಾಗಿರುವ ಚತುರ್ಭುಜವಿಗ್ರಹ, ಶ್ರೀದೇವಿ, ಭೂದೇವಿಯರು ಪಾದಗಳನ್ನು ಸೇವಿಸುತ್ತಿರುವರು, ಇಲ್ಲಿಗೆ ಶ್ರೀಹರಿಯು ರಥಾರೂಢನಾಗಿಯೇ ವೈಕುಂಠದಿಂದ ಆಗಮಿಸಿದನು ಎಂದು ಪ್ರತೀತಿ. ಗರ್ಭಗೃಹವು ರಥದ ಆಕೃತಿಯಲ್ಲಿದ್ದು ಅದರಲ್ಲಿ ಆನೆ ಕುದುರೆಗಳು ಸಹಾ ಕೆತ್ತಲ್ಪಟ್ಟಿರುವುದು ಇದಕ್ಕೆ ದ್ಯೋತಕವಾಗಿದೆ[೩].

---

೧. 'ಕೃತಾಯುಧಪ್ರಯೋಜನೇ'ತಿ ಭಾವಃ । - ವ್ಯಾಖ್ಯಾನ

೨. ಶರವ್ಯಭೂತದೈತ್ಯಹನನಸ್ಯ ಪ್ರಾಗೇವ ಜಾತತ್ವಾತ್ ಶರವ್ಯಾಂತರಾಭಾವಾತ್ ಮತ್ಪಾಪೇಷ್ವೇವ ಶರಂ ಮುಂಚೇತಿ ಭಾವಃ । ಪಾಪಪರಿಹಾರಂ ಕುರ್ವಿತಿ ತಾತ್ಪರ್ಯಮ್ । -ವ್ಯಾ

೩. ದ್ವೈತವೇದಾಂತಗ್ರಂಥಗಳನ್ನು ಪ್ರಥಮಬಾರಿಗೆ ವ್ಯಾಪಕವಾಗಿ ಮುದ್ರಣ ಮಾಡಿಸಿದ್ದು ಇಲ್ಲಿಯ ಶ್ರೀಮಧ್ವವಿಲಾಸ ಬುಕ್ ಡಿಪೋ ಎಂಬ ಸಂಸ್ಥೆ ಎಂಬುದೂ ಗಮನಾರ್ಹ.

೫. ಕುಂಭಘೋಣವು ದಕ್ಷಿಣಭಾರತದ ಪ್ರಸಿದ್ಧ ಯಾತ್ರಾಸ್ಥಳಗಳಲ್ಲೊಂದು; 'ಕಾಮ-ಕೋಷ್ಣೀಪುರೀ' ಎಂದೂ ಇದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. 'ದೇವಾಲಯಗಳ ಬೀಡು' ಎಂದೇ ಪ್ರಸಿದ್ಧವಾಗಿರುವ ಈ ಕ್ಷೇತ್ರದಲ್ಲಿ ದೇವಾಲಯವಿಲ್ಲದ ಬೀದಿಯೇ ಇಲ್ಲವೆನ್ನಬಹುದು. ಬ್ರಹ್ಮದೇವರು ಇರಿಸಿದ ಅಮೃತ ಪೂರ್ಣವಾದ ಕುಂಭದ ಕಂಠದ ಬಳಿಯ ರಂಧ್ರದಿಂದ ಸುರಿದ ಅಮೃತವು ಪಸರಿಸಿದ [೧]ಕ್ಷೇತ್ರ ಎಂಬುದು ಇದರ ಹೆಸರಿನ ಹಿನ್ನೆಲೆಯಾಗಿದೆ. ಶಾರ್ಙ್ಗಪಾಣಿ, ಕುಂಭೇಶ್ವರ, ವಾಗೀಶ್ವರ, ರಾಮಸ್ವಾಮಿ ಮತ್ತು ಚಕ್ರಪಾಣಿ ಎಂಬ ಇಲ್ಲಿಯ ಐದು ಪ್ರಸಿದ್ಧ ದೇವಾಲಯಗಳಲ್ಲಿ ಕುಂಭೇಶ್ವರ ಮತ್ತು ಶಾರ್ಙ್ಗಪಾಣಿ ದೇವಾಲಯಗಳು ತುಂಬಾ ಮುಖ್ಯವಾಗಿದೆ.

೬. ಕಾವೇರೀತೀರದ ಈ ಕ್ಷೇತ್ರವು ಶ್ರೀರಾಘವೇಂದ್ರಸ್ವಾಮಿಗಳ ಪರಮಗುರುಗಳಾದ ಶ್ರೀವಿಜಯೀಂದ್ರರಂತಹ ಮಹಾಮಹಿಮರ ಮುಖ್ಯಕಾರ್ಯಕ್ಷೇತ್ರವಾಗಿತ್ತು. ಅವರ ಮೂಲ-ಬೃಂದಾವನದ ಸ್ಥಳವೂ ಆಗಿರುವ ಇದು ಐತಿಹಾಸಿಕವಾಗಿ ಒಂದು ಪ್ರಮುಖ ವೈಷ್ಣವ ಕೇಂದ್ರ.



---

೧. ಕುಂಭಸ್ಯ ಘೋಣತೋ ಯಸ್ಮಾತ್ ಸುಧಾಪೂರಂ ವಿನಿಃಸ್ಸೃತಮ್ ।
ತಸ್ಮಾತ್ತು ತತ್ಪದಂ ಲೋಕೇ ಕುಂಭಘೋಣಂ ವದಂತಿ ಹ ॥ -ಪುರಾಣವಾಕ್ಯ

# ದಕ್ಷಿಣ ಪ್ರಬಂಧಃ

[ರಂಗನಾಥ (ಶ್ರೀರಂಗಕ್ಷೇತ್ರ) - ಚಂದ್ರಪುಷ್ಕರಿಣೀ (ತೀರ್ಥ) - ಕಾವೇರಿ (ನದೀ) - ವೃಷಭಾಚಲದ ಶ್ರೀಹರಿ - ನೂಪುರಗಂಗಾ(ತೀರ್ಥ) - ದರ್ಭಶಯನ (ಕ್ಷೇತ್ರ) - ರಾಮಸೇತು - ಶ್ರೀರಾಮ-ದೇವರು - ರಾಮೇಶ್ವರ (ಕ್ಷೇತ್ರ) - ಶ್ರೀರಾಮೇಶ್ವರದ ಹಿನ್ನೆಲೆ - ಧನುಷ್ಕೋಟಿ - ಶ್ರೀರಾಮಪಾದಃ - ತಾಮ್ರಪರ್ಣಿ(ನದಿ) - ಮಹೇಂದ್ರ ಪರ್ವತ - ಕನ್ಯಾಕುಮಾರಿಯ ಮಹಾ- ಲಕ್ಷ್ಮಿ - ಅಗಸ್ತ್ಯಮುನಿಃ - ಶುಚೀಂದ್ರ (ಕ್ಷೇತ್ರ) - ಆದ್ಯನಂತಶಯನಃ (ಆದಿಕೇಶವಕ್ಷೇತ್ರ) - ಘೃತಮಾಲಾ (ನದೀ) - ತಿರುವನಂತಪುರ (ಕ್ಷೇತ್ರ)]

## ರಂಗನಾಥ (ಶ್ರೀರಂಗಕ್ಷೇತ್ರ)

**ಕಾವೇರೀಹೃದಯೇ ವಸನ್ ಕಮಲಭೂತಾತಃ ಕೃಪಾವೀಕ್ಷಣೈ-**
**ರ್ಜೀವಾಂಹಃ ಶಮಯನ್ ಶ್ರಿಯಾ ಚ ಧರಯಾ ಸೇವ್ಯೋಽತಿಭವ್ಯೋ ವಿಭುಃ ।**
**ದೇವೈರಾವರಣಸ್ಥಿತೈಃ ಕೃತನತಿಃ ಶೇಷಾಂಗಶಾಯೀ ಸದಾ**
**ಭಾವೇ ಮೇ ವಿಧುಪುಷ್ಕರಿಣ್ಯಧಿಪತಿಃ ಶ್ರೀರಂಗನಾಥೋಽಸ್ತ್ವಯಮ್ ॥ ೧ ॥**

ಅ: ಕಾವೇರೀಹೃದಯೇ = ಕಾವೇರಿಯ ಹೃದಯದಲ್ಲಿ (ಕಾವೇರೀ ನದಿಯ ಎರಡು ಕವಲುಗಳ ಮಧ್ಯಭಾಗದಲ್ಲಿ); ವಸನ್ = ನೆಲೆಸಿರುವ; ಕಮಲಭೂತಾತಃ = ಬ್ರಹ್ಮದೇವರ ಜನಕನಾದ; ಕೃಪಾವೀಕ್ಷಣೈಃ = ತನ್ನ ಕೃಪಾಪೂರ್ಣ ನೋಟಗಳಿಂದ; ಜೀವಾಂಹಃ = (ಯೋಗ್ಯ) ಜೀವರುಗಳ ಪಾಪವನ್ನು; ಶಮಯನ್ = ಶಮನಗೊಳಿಸುತ್ತಿರುವ; ಶ್ರಿಯಾ = ಶ್ರೀದೇವಿಯಿಂದಲೂ, ಚ = ಮತ್ತು; ಧರಯಾ = ಭೂದೇವಿಯಿಂದಲೂ; ಸೇವ್ಯಃ = ಸೇವ್ಯನಾಗಿರುವ; ಅತಿಭವ್ಯಃ = ಅತ್ಯಂತ ಮಂಗಲಮಯನಾದ; ಅತ್ಯಂತ ಮನೋಹರ-ನಾಗಿರುವ; ವಿಭುಃ = ಸಮರ್ಥನಾದ; ಆವರಣಸ್ಥಿತೈಃ = ಸುತ್ತಲೂ ಪರಿವಾರಭೂತರಾಗಿರುವ; ದೇವೈಃ = (ಬ್ರಹ್ಮಾದಿ) ದೇವತೆಗಳಿಂದ; ಕೃತನತಿಃ = ನಮಸ್ಕರಿಸಲ್ಪಡುತ್ತಿರುವ; ಶೇಷಾಂಗಶಾಯೀ = ಶೇಷನ ಶರೀರದ ಮೇಲೆ ಮಲಗಿರುವ; ವಿಧುಪುಷ್ಕರಿಣ್ಯಧಿಪತಿಃ = ಚಂದ್ರಪುಷ್ಕರಿಣೀ ಎಂಬ ಪವಿತ್ರ ತೀರ್ಥಕ್ಕೆ ಸ್ವಾಮಿಯಾಗಿರುವ; ಅಯಂ = ಈ; ಶ್ರೀರಂಗನಾಥಃ = ಶ್ರೀರಂಗಕ್ಷೇತ್ರಕ್ಕೆ ಸ್ವಾಮಿಯಾದ ಶ್ರೀಹರಿಯು[೧]; ಮೇ = ನನ್ನ; ಭಾವೇ = ಮನಸ್ಸಿನಲ್ಲಿ; ಸದಾ = ಯಾವಾಗಲೂ; ಅಸ್ತು = ಇರಲಿ.[೨]

ಶ್ರೀರಂಗನಾಥನು ಬ್ರಹ್ಮದೇವರಿಗೆ ಜನಕನು; ಕಾವೇರಿಯ ಹೃದಯದಲ್ಲಿ ನೆಲೆಸಿರುವವನು; ತನ್ನ ಕೃಪಾಪೂರ್ಣ ನೋಟದಿಂದ ಜೀವರ ಪಾಪವನ್ನು ಪರಿಹರಿಸುವವನು; ಶ್ರೀದೇವಿ ಭೂದೇವಿಯರಿಂದ ಸೇವಿತನಾದವನು; ಮಂಗಲಮಯ-ನಾದವನು; ಅತ್ಯಂತ ಮನೋಹರನು; ಸರ್ವಸಮರ್ಥನು. ಇವನ ಸುತ್ತ ಪರಿ-ವಾರಭೂತರಾಗಿ ದೇವತೆಗಳು ವಂದಿಸುತ್ತಿರುವರು; 'ಚಂದ್ರಪುಷ್ಕರಿಣೀ' ಎಂಬ ತೀರ್ಥಕ್ಕೆ ಇವನು ಒಡೆಯ. ಇವನು ಸದಾ ನನ್ನ ಮನಸ್ಸಿನಲ್ಲಿ ನೆಲೆಸಲಿ.

---

೧. ಶ್ರೀರಂಗಕ್ಷೇತ್ರಾಧಿಪತಿರ್ಹರಿಃ । -ವ್ಯಾ

೨. ಸರ್ವದಾ ಮದ್ಧ್ಯಾನಗೋಚರೋ ಭವತ್ವಿತ್ಯರ್ಥಃ । -ವ್ಯಾ

ವಿ: ೧. ಶೇಷಶಾಯಿಯಾದ ಶ್ರೀರಂಗನಾಥನು ಕಾವೇರೀ ಹೃದಯ (ಮಧ್ಯ) ದಲ್ಲಿರುವನು; ತನ್ನ ನಾಭಿಕಮಲದಲ್ಲಿ ಚತುರ್ಮುಖ ಬ್ರಹ್ಮದೇವರು ಕುಳಿತಿರುವರು; ಅವನ ಕೃಪಾಪೂರ್ಣ ನೋಟವು ಭಕ್ತರ ಪಾಪವನ್ನು ಪರಿಹರಿಸುತ್ತಿರುವುದು, ಶ್ರೀದೇವಿ ಭೂದೇವಿಯರು ಆತನನ್ನು ಸೇವಿಸುತ್ತಿರುವರು, ಸುತ್ತಲೂ ಬ್ರಹ್ಮಾದಿದೇವತೆಗಳು ಕಿಂಕರರಾಗಿ ನಿಂತಿರುವರು, ಶೇಷಶಾಯಿ-ಯಾಗಿರುವ ಈತನ ಆಕೃತಿ ಅತ್ಯಂತ ಮನೋಹರವಾಗಿದ್ದು, ಸಮೀಪದಲ್ಲೇ ಚಂದ್ರಪುಷ್ಕರಿಣೀ ಎಂಬ ಸರೋವರವೂ ಇದೆ; ಹೀಗಿರುವ ಶ್ರೀರಂಗನಾಥನು ಸದಾ ನನಗೆ ಧ್ಯಾನವಿಷಯನಾಗಲಿ ಎಂದು ಪ್ರಾರ್ಥಿಸಬೇಕು ಎಂದು ಭಾವ. ಶ್ರೀರಂಗನಾಥನ ವಿಗ್ರಹವನ್ನು ಅದು ಇರುವ ರೀತಿಯಲ್ಲೇ ಇಲ್ಲಿ ವರ್ಣಿಸಲಾಗಿದೆ.

೨. ಕಾವೇರೀನದಿಯ ಹೃದಯರಂಗದಲ್ಲಿ ನೆಲೆಸಿರುವ ಶ್ರೀರಂಗನಾಥನು ನಮ್ಮ ಹೃದಯರಂಗದಲ್ಲಿ ಸದಾ ಗೋಚರನಾಗಲಿ ಎಂದು ಭಾವ.

**ಶ್ರುತಿಶತಪರಿಗೀತಃ ಶುದ್ಧಭಾವೈರ್ಗೃಹೀತಃ**
**ಕಮಲನಿಲಯತಾತಃ ಕಂಜನೇತ್ರಃ ಪ್ರತೀತಃ ।**
**ಸಕಲಜಗದತೀತಃ ಸರ್ವಸಂಪತ್ಸಮೇತಃ**
**ಪ್ರವಿಶತು ಮಮ ಚೇತಃ ಪ್ರತ್ಯಹಂ ರಂಗನಾಥಃ ॥ ೨ ॥**

ಅ: **ಶ್ರುತಿಶತಪರಿಗೀತಃ** = ಅನಂತವೇದಗಳಿಂದ ವಿಶೇಷವಾಗಿ ಸ್ತುತಿಸಲ್ಪಡುವ; **ಶುದ್ಧಭಾವೈಃ** = ಪರಿಶುದ್ಧಮನಸ್ಸಿನವರಿಂದ; **ಗೃಹೀತಃ** = ವಶೀಕೃತನಾಗಿರುವ; **ಕಮಲನಿಲಯತಾತಃ** = ಚತುರ್ಮುಖ ಬ್ರಹ್ಮದೇವರ ತಂದೆಯಾದ; **ಕಂಜನೇತ್ರಃ** = ಪುಂಡರೀಕಾಕ್ಷನಾದ[1]; **ಪ್ರತೀತಃ** =(ಶಾಸ್ತ್ರ)ಪ್ರಸಿದ್ಧನಾದ; **ಸಕಲಜಗದತೀತಃ** = ಸಕಲ ಜಗತ್ತಿಗೂ ಮಿಗಿಲಾದ; **ಸರ್ವಸಂಪತ್ಸಮೇತಃ** = ಸಕಲಸಂಪತ್ತನ್ನೂ ಹೊಂದಿರುವ; **ರಂಗನಾಥಃ** = ಶ್ರೀರಂಗನಾಥನಾದ ಶ್ರೀಹರಿಯು; **ಪ್ರತ್ಯಹಂ** = ಪ್ರತಿದಿನವೂ; **ಮಮ** = ನನ್ನ; **ಚೇತಃ** = ಹೃದಯವನ್ನು; **ಪ್ರವಿಶತು** = ಪ್ರವೇಶಿಸಲಿ.

ಶ್ರೀರಂಗನಾಥನು ಅನಂತವೇದಗಳಿಂದ ವಿಶೇಷವಾಗಿ ಸ್ತುತ್ಯನು; ಪರಿಶುದ್ಧಮನಸ್ಸಿನ ಭಕ್ತರಿಂದ ಸೇವಿತನು; ಚತುರ್ಮುಖ ಬ್ರಹ್ಮದೇವರಿಗೆ ಜನಕನು; 'ಪುಂಡರೀಕಾಕ್ಷ'-ನೆಂದು ಶಾಸ್ತ್ರಪ್ರತಿಪಾದ್ಯನು; ಸಕಲಸಂಪದ್ಭರಿತನು; ಇವನು ನನ್ನ ಹೃದಯದಲ್ಲಿ ಪ್ರವೇಶಿಸಲಿ.

---

೧. ಆದ್ಯಂ ಸ್ವಯಂವ್ಯಕ್ತಮಿದಂ ವಿಮಾನಂ ರಂಗಸಂಜ್ಞಿತಮ್ ।
ಶ್ರೀಮುಷ್ಣಂ ವೇಂಕಟಾದ್ರಿಶ್ಚ ಶಾಲಗ್ರಾಮಶ್ಚ ನೈಮಿಷಮ್॥
ತೋತಾದ್ರಿಃ ಪುಷ್ಕರಂ ಚೈವ ನರನಾರಾಯಣಾಶ್ರಮಮ್ ।
ಅಷ್ಟೌ ಮೇ ಮೂರ್ತಯಃ ಸಂತಿ ಸ್ವಯಂವ್ಯಕ್ತಾ ಮಹೀತಲೇ ॥
-ವಿಷ್ಣುತತ್ತ್ವವಿನಿರ್ಣಯ

೨. ಸಮತೀತಕ್ಷರಾಕ್ಷರಂ ಏವ

ವಿ: ೧. ಶ್ರೀರಂಗನಾಥನನ್ನು ತ, ಜ, ಲ, ಅಕ್ಷರಗಳ ಅನುಪ್ರಾಸಾಲಂಕಾರಭರಿತವಾದ ಈ ಶ್ಲೋಕದಿಂದ ಶ್ರೀವಾದಿರಾಜರು 'ಧ್ಯಾನವಿಷಯನಾಗು' ಎಂದು [1]ಪುನಃ ಪ್ರಾರ್ಥಿಸಿರುವರು.

೨. ಇದು ಒಂದು ರೀತಿಯಲ್ಲಿ 'ತಜ್ಜಲಾನಿತಿ ಶಾಂತ ಉಪಸೀತ' ಎಂಬ ಉಪನಿಷದ್ವಾಕ್ಯಕ್ಕೆ ವಿವರಣೆಯಂತಿದೆ.

ಶ್ರೀರಂಗನಾಥಃ ಸುರಸಿದ್ಧಗೀತಃ
ಕಾರುಣ್ಯಸಿಂಧುಃ ಕವಿವರ್ಗಬಂಧುಃ ।
ಸ್ಮೇರಾಸ್ಯಚಂದ್ರಃ ಸ್ಮರತಾಂ ಮಹೇಂದ್ರ-
ಕ್ಷ್ಮಾರುಟ್ ಪ್ರಸನ್ನಃ ಕ್ಷಪಯತ್ವಘಂ ನಃ ॥೩॥

ಅ: ಸುರಸಿದ್ಧಗೀತಃ = ದೇವತೆಗಳಿಂದಲೂ, ಸಿದ್ಧರಿಂದಲೂ (ಋಷಿಗಳಿಂದಲೂ) ಸ್ತುತ್ಯನಾದ; ಕಾರುಣ್ಯಸಿಂಧುಃ = ಕೃಪಾಸಮುದ್ರನಾದ; ಕವಿವರ್ಗಬಂಧುಃ = ಜ್ಞಾನಿಸಮೂಹಕ್ಕೆ ಬಂಧುವಾದ; ಸ್ಮೇರಾಸ್ಯಚಂದ್ರಃ = ಮಂದಹಾಸಯುಕ್ತವಾದ ಮುಖಚಂದ್ರನನ್ನುಳ್ಳ; ಸ್ಮರತಾಂ = ಸ್ಮರಿಸುವವರಿಗೆ; ಮಹೇಂದ್ರಕ್ಷ್ಮಾರುಟ್ = ಮಹೇಂದ್ರವೃಕ್ಷ(ಕಲ್ಪವೃಕ್ಷ)ವಾಗಿರುವ; ಶ್ರೀರಂಗನಾಥಃ = ಶ್ರೀರಂಗನಾಥನು; ಪ್ರಸನ್ನಃ =ಪ್ರಸನ್ನನಾಗಿ; ನಃ = ನಮ್ಮ; ಅಘಂ = ಪಾಪವನ್ನು; ಕ್ಷಪಯತು = ಪರಿಹರಿಸಲಿ.

ಶ್ರೀರಂಗನಾಥನು ದೇವತೆಗಳಿಂದ, ಸಿದ್ಧರಿಂದ ಸ್ತುತ್ಯನು; ಕರುಣೆಯ ಸಾಗರನು; ಜ್ಞಾನಿವೃಂದದ ಬಂಧುವು; ಕಿರುನಗೆ ಸೂಸುವ ಚಂದ್ರನಂತಹ ಮುಖದವನು; ಸ್ಮರಿಸುವವನಿಗೆ ಕಲ್ಪವೃಕ್ಷನು; ಇವನು ಪ್ರಸನ್ನನಾಗಿ ನನ್ನ ಪಾಪವನ್ನು ಪರಿಹರಿಸಲಿ.

ವಿ: ಶ್ರೀರಂಗನಾಥನು ಸುರರಿಂದಲೂ, ಸಿದ್ಧರಿಂದಲೂ ಸ್ತುತ್ಯನು, ಕರುಣಾಸಮುದ್ರನು, ಜ್ಞಾನಿಸಮೂಹಕ್ಕೆ ಬಂಧುವೂ, ಮಂದಹಾಸಯುಕ್ತಮುಖಚಂದ್ರನನ್ನುಳ್ಳವನೂ, ಸ್ಮರಿಸುವ ಭಕ್ತಜನರ ಪಾಲಿಗೆ ಕಲ್ಪವೃಕ್ಷವೂ ಆಗಿರುವನು. ಇಂತಹ ಆ ರಂಗನಾಥನು ನಮ್ಮ ಸಕಲ ಅನಿಷ್ಟಗಳನ್ನು ಪರಿಹರಿಸಲಿ ಎಂದು ತಾತ್ಪರ್ಯ.

ಲಯೇ ಶಯಾನೋಽಪ್ಯುದರಸ್ಥ-
ಲೋಕಭರೇಣ ಲಕ್ಷ್ಮೀಕರವಿಭ್ರಮೈಶ್ಚ ।
ಅನಿದ್ರಿತೋಽದ್ಯಾಂಘ್ರಿನಿಷೇವಣೇ
ತಾಂ ನಿಯುಜ್ಯ ನಿದ್ರಾಸಿ ಕಿಮಂಬುಜಾಕ್ಷ ॥೪॥

ಅ: (ಹೇ) ಅಂಬುಜಾಕ್ಷ ! = ಎಲೈ ಪುಂಡರೀಕಾಕ್ಷನಾದ ರಂಗನಾಥನೇ !; ಲಯೇ = ಮಹಾಪ್ರಲಯದಲ್ಲಿ; ಶಯಾನಃ ಅಪಿ =(ಸೃಷ್ಟ್ಯಾದಿ ವ್ಯಾಪಾರಗಳನ್ನು ತೊರೆದು) ಶೇಷಶಾಯಿಯಾಗಿ ಮಲಗಿದವನಾದರೂ ಸಹ; ಉದರಸ್ಥಲೋಕಭರೇಣ = ಉದರದಲ್ಲಿನ

---

೧. ಕಾವ್ಯಸ್ತವಪದ್ಯಾನಾಮೀದೃಕ್ತ್ವಾವನ್ನ ಪೌನರುಕ್ತ್ಯಾದಿಶಂಕಾವಕಾಶಃ । -ವ್ಯಾ

ಲೋಕಗಳ ಭಾರದಿಂದಾಗಿಯೂ; ಲಕ್ಷ್ಮೀಕರವಿಭ್ರಮೈಶ್ಚ = ಮಹಾಲಕ್ಷ್ಮಿಯ ಕರವಿಲಾಸಗಳಿಂದಲೂ; ಅನಿದ್ರಿತಃ (ತ್ವಂ) = ನಿದ್ರೆಬಾರದವನಾಗಿದ್ದ (ನೀನು); ಅದ್ಯ = ಈಗ (ಲೋಕಗಳನ್ನು ಉದರದಿಂದ ಹೊರಗೆ ಹಾಕಿ); ತಾಂ = ಆ ಮಹಾಲಕ್ಷ್ಮಿಯನ್ನು; ಅಂಘ್ರಿನಿಷೇವಣೇ = ಪಾದಸೇವೆಯಲ್ಲಿ; ನಿಯುಜ್ಯ = ತೊಡಗಿಸಿ; ನಿದ್ರಾಸಿ ಕಿಂ = ನಿದ್ರಿಸುತ್ತಿರುವೆಯೇನು? (ಉತ್ಪ್ರೇಕ್ಷಾಲಂಕಾರ)

ಎಲೈ ಪುಂಡರೀಕಾಕ್ಷನಾದ ರಂಗನಾಥನೇ ! ಮಹಾಪ್ರಲಯದಲ್ಲಿ ಮಲಗಿದಾಗ ಉದರದಲ್ಲಿನ ಲೋಕಗಳ ಭಾರದಿಂದಾಗಿ, ಮಹಾಲಕ್ಷ್ಮಿಯ ಕರವಿಲಾಸಗಳಿಂದಾಗಿ, ನಿದ್ರಿಸದಿದ್ದ ನೀನು ಈಗ ಮಹಾಲಕ್ಷ್ಮಿಯನ್ನು ಪಾದಸೇವೆಯಲ್ಲಿ ತೊಡಗಿಸಿ ನಿದ್ರಿಸ ತೊಡಗಿರುವೆಯೇನು?

ವಿ: ೧. ಕೆಲವು ಕಾರಣಗಳಿಂದ ರಾತ್ರಿ ನಿದ್ರಿಸದವನು ಹಗಲು ನಿದ್ರಿಸುವಂತೆ ಪ್ರಳಯಕಾಲದಲ್ಲಿ ಒಂದೆಡೆ ಉದರದಲ್ಲಿದ್ದ ಲೋಕಗಳ ಭಾರ, ಇನ್ನೊಂದೆಡೆ ತನ್ನನ್ನು ಆಲಂಗಿಸಿಕೊಂಡಿದ್ದ ಮಹಾಲಕ್ಷ್ಮಿಯ ಕರವಿಲಾಸ ಇವುಗಳಿಂದಾಗಿ ನಿದ್ರಿಸದ ಶ್ರೀಹರಿಯು ಈಗ ಸೃಷ್ಟಿ ಮಾಡುವ ಮೂಲಕ ಲೋಕಗಳನ್ನು ಉದರದಿಂದ ಹೊರಕ್ಕೆ ಹಾಕಿ, ತನ್ನ ಪಾದಸೇವನೆಯಲ್ಲಿ (ಪಾಕಾದಿಗಳಲ್ಲೂ)[೧] ಮಹಾಲಕ್ಷ್ಮಿಯನ್ನು ತೊಡಗಿಸುವ ಮೂಲಕ ಆಕೆಯ ಕರವಿಲಾಸಗಳನ್ನು ಪರಿಹರಿಸಿಕೊಂಡು ನಿದ್ರಿಸುತ್ತಿರುವನೇನು? ಎಂದು ಶ್ರೀವಾದಿರಾಜರು ಉತ್ಪ್ರೇಕ್ಷಿಸಿರುವರು.[೨]

೨. ಮಹಾವಿಷ್ಣುವು ಪ್ರಳಯಕಾಲದಲ್ಲಿ ಸಕಲಲೋಕಗಳನ್ನು ತನ್ನ ಉದರದಲ್ಲಿರಿಸಿ-ಕೊಳ್ಳುವ ಮೂಲಕ ತಾನು ಲಯರಹಿತನು ಮತ್ತು ಸ್ವತಃ ಲಯಕರ್ತನು ಎಂಬುದನ್ನೂ, ಮಹಾಲಕ್ಷ್ಮಿಯಿಂದ ಆಲಿಂಗಿತನಾಗುವ ಮೂಲಕ ತಾನು ಲಕ್ಷ್ಮೀಪತಿ ಮತ್ತು ಸ್ವರತ ಎಂಬುದನ್ನೂ, ಎಂದೂ ನಿದ್ರಾದಿದೋಷರಹಿತನು ಎಂಬುದನ್ನು ಸೂಚಿಸಿರುವನು ಎಂಬ ಇಲ್ಲಿಯ ಧ್ವನಿ ಶ್ರೀಹರಿಯ ಸರ್ವೋತ್ತಮತ್ವವನ್ನು ಪ್ರತಿಪಾದಿಸುತ್ತದೆ;

೩. ಎಲ್ಲರೂ ನಿದ್ರಿಸುವ ಪ್ರಲಯಕಾಲದಲ್ಲೇ ನಿದ್ರಿಸದ ಶ್ರೀಹರಿಗೆ ಈಗೆಲ್ಲಿಯ ನಿದ್ರೆ ಎಂಬುದು ಕೈಮುತ್ಯಸಿದ್ಧ. ಶ್ರೀರಂಗನಾಥನು ನಿದ್ರಾಭಂಗಿಯಲ್ಲಿರುವನೇ ಹೊರತು ನಿದ್ರಿಸುತ್ತಿಲ್ಲ ಎಂದು ಭಾವ. ಅವನ ನಿದ್ರಾಭಂಗಿಯೂ ಸಹ ಆನಂದಪೂರ್ಣತ್ವ ದ್ಯೋತಕವೇ ಹೊರತು ಶ್ರಮಾದಿಮೂಲಕವಾದುದಲ್ಲ ಎಂಬುದೂ ಗಮನಾರ್ಹ.

ನಿಜಾಂಘ್ರಿಸೇವಾನಿರತಾನ್ ಮನುಷ್ಯಾನ್
ವಿಧೂತನಿದ್ರಾನ್ ವಿದಧಾಸಿ ಯಸ್ತ್ವಮ್।
ತವೇಶ ತಸ್ಯಾಮಲಬೋಧಮೂರ್ತೇಃ
ಸಹಾಮಹೇ ಸಂಪ್ರತಿ ನೈವ ನಿದ್ರಾಮ್ ॥ ೫ ॥

---

೧. ಪಾಕಾದೌ ಚೇತ್ಯಪಿ ದ್ರಷ್ಟವ್ಯಮ್ ॥ -ವ್ಯಾಖ್ಯಾನ
೨. ಶ್ರೀರಂಗನಾಥಸ್ಯ ಶೇಷಶಾಯಿತ್ವಾದಿಯಮುತ್ಪ್ರೇಕ್ಷಾ। -ವ್ಯಾಖ್ಯಾನ

ಅ: (ಹೇ) ಈಶ ! = ಎಲೈ ಸ್ವಾಮಿಯಾದ ರಂಗನಾಥನೇ !; ಯಃ ತ್ವಂ = ಯಾವ ನೀನು; ನಿಜಾಂಘ್ರಿಸೇವಾನಿರತಾನ್ = ನಿನ್ನ ಪಾದಸೇವೆಯಲ್ಲಿ ತೊಡಗುವ; ಮನುಷ್ಯಾನ್ = ಮನುಷ್ಯರನ್ನು; ವಿಧೂತನಿದ್ರಾನ್ = ನಿದ್ರಾರಹಿತರನ್ನಾಗಿ; ([1]ನಿದ್ರೆ ಪ್ರಮಾದ, ಅಜ್ಞಾನ ಮೊದಲಾದ ದೋಷಗಳನ್ನು ಹೊಂದದವರನ್ನಾಗಿ); ವಿದಧಾಸಿ = ಮಾಡುವಿ; ತಸ್ಯ = ಅಂತಹ; ಅಮಲಬೋಧಮೂರ್ತೇಃ =ನಿರ್ಮಲಜ್ಞಾನರೂಪನಾದ; ತವ = ನಿನಗೆ; ಸಂಪ್ರತಿ = ಈಗ; ನಿದ್ರಾಂ = ನಿದ್ರೆಯನ್ನು; ನ ಸಹಾಮಹೇ ಏವ = ನಾವು ಸರ್ವಥಾ ಒಪ್ಪಲಾರೆವು.

ನಿನ್ನ ಪಾದಸೇವೆಯಲ್ಲಿ ತೊಡಗುವ ಮನುಷ್ಯರನ್ನು ನಿದ್ರಾರಹಿತರನ್ನಾಗಿ ಮಾಡುವ ನಿರ್ಮಲಜ್ಞಾನಸ್ವರೂಪನಾದ ನಿನಗೆ ನಿದ್ರೆಯನ್ನೀಗ ನಾವು ಸರ್ವಥಾ ಒಪ್ಪಲಾರೆವು.

ವಿ: ೧. ಶ್ರೀಹರಿಯು ತನ್ನ ಭಕ್ತಜನರನ್ನು ನಿದ್ರಾದಿ ಸಕಲದೋಷಗಳನ್ನು ಪರಿಹರಿಸಿ ಪಾಲಿಸುವ ಗುಣನಿಧಿ, ಹೀಗೆ ಭಕ್ತರ ನಿದ್ರೆಯನ್ನೇ ಪರಿಹರಿಸುವ ನಿರ್ಮಲ ಜ್ಞಾನಸ್ವರೂಪವಾದ ಅವನಿಗೆ ನಿದ್ರೆ ಎಲ್ಲಿಯದು? [2]ಶ್ರೀಹರಿಯದು ಯೋಗನಿದ್ರೆಯೇ ಹೊರತು ನಿದ್ರೆಯಲ್ಲ; ಸ್ವಾತಂತ್ರ್ಯೇಣ ಎಂದೂ ನಿದ್ರಿಸದ ಅವನೇ ಸರ್ವೋತ್ತಮ ಎಂದು ಭಾವ.

೨. ಶೇಷಶಾಯಿಯಾಗಿರುವ ಶ್ರೀಹರಿಯು ಅಶೇಷದೋಷದೂರನೂ, ಅಶೇಷಪಾಪಪರಿಹಾರಕನೂ ಆಗಿರುವನು ಎಂದರ್ಥ.

**ನವಾಂಭೋದನೀಲಃ ಸ್ಫುರದ್ಧೇಮಜಾಲಃ**
**ಸ್ಮರಚ್ಚಿತ್ತಲೋಲಃ ಸುರಶ್ರೇಣಿಪಾಲಃ ।**
**ಶ್ರಿಯೇ [3]ರಂಗಧಾಮಾಽಸ್ತ್ವಯಂ ಪುಣ್ಯನಾಮಾ**
**ಮಹೈಶ್ವರ್ಯಸೀಮಾ ಗುಣಸ್ತೋಮಭೂಮಾ ॥ ೬ ॥**

ಅ: ನವಾಂಭೋದನೀಲಃ = ಮಳೆಗಾಲದ ಮೋಡದಂತಹ ಶ್ಯಾಮಲವರ್ಣವುಳ್ಳ; ಸ್ಫುರದ್ಧೇಮಜಾಲಃ = ಹೊಳೆಯುವಂತಹ ಚಿನ್ನದ ಆಭರಣಗಳ ಸಮುದಾಯವುಳ್ಳ; ಸ್ಮರಚ್ಚಿತ್ತಲೋಲಃ = ಸ್ಮರಿಸುವವರ ಚಿತ್ತದಲ್ಲಿ ನೆಲೆಸಿರುವಂತಹ; ಸುರಶ್ರೇಣಿಪಾಲಃ = ದೇವತಾ ಸಮೂಹವನ್ನು ಪಾಲಿಸುವ; ಪುಣ್ಯನಾಮಾ = ಪವಿತ್ರವಾದ ಹೆಸರುಳ್ಳ; ಮಹೈಶ್ವರ್ಯಸೀಮಾ = ಉತ್ತಮ ಸಂಪತ್ತಿಗೆ ಎಲ್ಲೆಯಾಗಿರುವ; ಗುಣಸ್ತೋಮಭೂಮಾ =

---

೧. ನಿದ್ರಾಪ್ರಮಾದಾಜ್ಞಾನಾದಿದೋಷಾಃ ತದ್ರಹಿತಾನಿತ್ಯರ್ಥಃ। -ವ್ಯಾಖ್ಯಾನ
೨. ಸ್ವಸೇವಕಾನಾಮಪಿ ನಿದ್ರಾದೋಷಹರ್ತುರ್ನಿರ್ದೋಷಸ್ಯ ರಂಗನಾಥಸ್ಯ ನಿದ್ರಾಲಕ್ಷಣದೋಷಾಂಗೀಕಾರೋ ನ ಯುಕ್ತ ಇತಿ ಭಾವಃ। -ವ್ಯಾಖ್ಯಾನ
೩. ರಂಗಂ ಶ್ರೀರಂಗಾಖ್ಯಕ್ಷೇತ್ರಂ ರಂಗಾಖ್ಯವಿಮಾನಂ ವಾ ತದೇವ ಧಾಮ ಆಲಯೋ ಯಸ್ಯ ಸ ತಥೋಕ್ತಃ ರಂಗನಾಥಃ। -ವ್ಯಾಖ್ಯಾನ

(ಜ್ಞಾನಾದಿ)ಗುಣಗಳಿಂದ ಪೂರ್ಣನಾದ; ಅಯಂ = ಈ; ರಂಗಧಾಮಾ = ರಂಗ-ನಿಲಯನಾದ ಶ್ರೀಹರಿಯು; ಶ್ರಿಯೇ= (ನಮ್ಮ) ಸಂಪತ್ತಿಗೆ; ಅಸ್ತು = ಕಾರಣನಾಗಲಿ.

ಶ್ರೀರಂಗನಾಥನು ನೀಲಮೇಘದಂತಹ ಶ್ಯಾಮಲವರ್ಣನು; ಹೊಳೆಯುವ ಚಿನ್ನದ ಆಭರಣಗಳನ್ನು ಧರಿಸಿದವನು; ನೆನೆಯುವವರ ಮನಸ್ಸಿನಲ್ಲಿ ನೆಲೆಸುವವನು; ಸುರಶ್ರೇಣಿಯನ್ನು ರಕ್ಷಿಸುವವನು; ಪುಣ್ಯಕರವಾದ ಹೆಸರಿನವನು; ಉತ್ತಮ ಸಂಪತ್ತಿಗೆ ಎಲ್ಲೆಯಾದವನು; ಜ್ಞಾನಾದಿಗುಣರಾಶಿಯಿಂದ ಪರಿಪೂರ್ಣನಾದವನು; ಇವನು ನಮ್ಮ ಸಂಪತ್ತಿಗೆ ಕಾರಣನಾಗಲಿ.

ವಿ: ೧. ಶ್ರೀರಂಗನಾಥನು ಮಳೆಗಾಲದ ಮೇಘದಂತೆ ಶ್ಯಾಮಲವರ್ಣನೂ, ಹೊಳೆ-ಯುವ ಚಿನ್ನದ ಆಭರಣಗಳಿಂದ [೧]ಭೂಷಿತನೂ, ಸ್ಮರಿಸುವವರ ಚಿತ್ತದಲ್ಲಿ ಪ್ರೀತಿಯಿಂದ ನೆಲೆಸುವವನೂ[೨], ದೇವತಾಸಮೂಹವನ್ನು ಪಾಲಿಸುವವನೂ; ಪಾವನ ಮಾಡುವ ಹೆಸರುಗಳುಳ್ಳವನೂ, ನಿರವಧಿಕ ಐಶ್ವರ್ಯಕ್ಕೆ ನೆಲೆಯಾದವನೂ, ಅನಂತಗುಣಗಳಿಂದ ಪೂರ್ಣನೂ ಆಗಿರುವನು, ಇವನು ನಮ್ಮ ಸಂಪತ್ತಿಗೆ ಕಾರಣನಾಗಲಿ.

೨. ಭುಜಂಗಪ್ರಯಾತ ವೃತ್ತದ ಈ ಶ್ಲೋಕವು ತನ್ನ ಅಪೂರ್ವಭಾವದಿಂದಾಗಿ ಮಾತ್ರವಲ್ಲದೆ, ಪೂರ್ವಾರ್ಧದಲ್ಲಿನ 'ಲ'ಕಾರ ಮತ್ತು ಉತ್ತರಾರ್ಧದಲ್ಲಿನ 'ಮ'ಕಾರ ಪ್ರಾಸದಿಂದಾಗಿಯೂ ಗಮನ ಸೆಳೆಯುತ್ತದೆ.

**ಸಹಸ್ರವದನಃ ಶೇಷಃ ಪಂಚವೇದಾನ್ ಪಠಂಸ್ತವ ।**
**ಪಂಚಾಸ್ಯೋಽಭೂದ್ದ್ವಿಜಿಹ್ವಶ್ಚ ತ್ವಾಂ ಕ್ಷೇತ್ರೇಣ ಸಮಂ ಸ್ತುವನ್ ॥ ೭ ॥**

ಅ: (ಎಲೈ ರಂಗನಾಥನೇ !) ತವ = ನಿನ್ನ (ಶಯ್ಯಾಭೂತನಾದ); **ಶೇಷಃ** = ಶೇಷನು; **ಸಹಸ್ರವದನಃ** (ಅಪಿ) = (ಮೂಲತಃ) ಸಾವಿರಮುಖಗಳನ್ನು ಹೊಂದಿದವನಾದರೂ; **ಪಂಚವೇದಾನ್** = [೩]ಋಗಾದಿ(ನಾಲ್ಕು) ಮತ್ತು ಭಾರತ ಎಂಬ ಐದು [೪]ವೇದಗಳನ್ನು; **ಪಠನ್** = ಪಠಿಸುತ್ತ; **ಪಂಚಾಸ್ಯಃ ಅಭೂತ್** = ಪಂಚಮುಖನಾಗಿರುವನು; **ಚ** = ಮತ್ತು ; **ತ್ವಾಂ** = ನಿನ್ನನ್ನು; **ಕ್ಷೇತ್ರೇಣ ಸಮಂ** = ಶ್ರೀರಂಗಕ್ಷೇತ್ರದೊಂದಿಗೆ; **ಸ್ತುವನ್** (ಸನ್) ಸ್ತುತಿಸಲೆಂದು; **ದ್ವಿಜಿಹ್ವಃ** = ಎರಡು ನಾಲಿಗೆಯುಳ್ಳವನಾಗಿ; **ಅಭೂತ್** = ಆಗಿರುವನು.

ನಿನ್ನ ಹಾಸಿಗೆಯಾದ ಸಾವಿರಮುಖದ ಶೇಷನು ಐದು ವೇದಗಳನ್ನು ಪಠಿಸುತ್ತ ಪಂಚಮುಖನಾದ; ನಿನ್ನನ್ನು ಶ್ರೀರಂಗಕ್ಷೇತ್ರದೊಂದಿಗೆ ಸ್ತುತಿಸಲೆಂದು ಎರಡು ನಾಲಿಗೆ ಹೊಂದಿದ.

---

೧. ಸುವರ್ಣಾಭರಣಭೂಷಿತ ಇತ್ಯರ್ಥಃ। -ವ್ಯಾಖ್ಯಾನ
೨. ಸ್ಮರಚ್ಚಿತ್ತೇ ವಿದ್ಯಮಾನ ಇತ್ಯರ್ಥಃ। -ವ್ಯಾಖ್ಯಾನ
೩. ಭಾರತಂ ಪಂಚಮೋ ವೇದಃ। -ವ್ಯಾಖ್ಯಾನ
೪. ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ।ಎಂದೂ ಪ್ರಮಾಣವಿರುವುದರಿಂದ ಋಗಾದಿ-ವೇದಗಳನ್ನೂ, ಇತಿಹಾಸಪುರಾಣಗಳನ್ನೂ ಎಂಬುದಾಗಿಯೂ ಸಹ ಅರ್ಥಮಾಡಬಹುದು.

ವಿ: ೧. ಮಹಾವಿಷ್ಣುವಿಗೆ ಶಯನನಾಗಿರುವ ಶೇಷನಿಗೆ ಸಾವಿರಮುಖಗಳು ಮತ್ತು ಎರಡುಸಾವಿರ ನಾಲಿಗೆಗಳೂ ಇರುವವು, ಆದರೆ ಶ್ರೀರಂಗಕ್ಷೇತ್ರದಲ್ಲಿನ ಶೇಷನಿಗೆ ಐದು ಮುಖಗಳು ಮತ್ತು ಎರಡು ನಾಲಿಗೆಗಳು ಮಾತ್ರ ಇವೆ. ಇದಕ್ಕೆ ಕಾರಣವನ್ನು ಶ್ರೀವಾದಿರಾಜರು ಹೀಗೆ ಉತ್ಪ್ರೇಕ್ಷಿಸಿರುವರು.[೧]

೨. ಶೇಷನು ಸಾವಿರಮುಖಗಳುಳ್ಳವನಾದರೂ ಇಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಮತ್ತು ಮಹಾಭಾರತ ಎಂಬ ಐದು [೨]ವೇದಗಳನ್ನು ಪಠಿಸುವ ಸಲುವಾಗಿ ಪಂಚಮುಖನಾಗಿರುವನು. ಮೂಲತಃ ದ್ವಿಸಹಸ್ರಜಿಹ್ವನಾದರೂ ಶ್ರೀರಂಗನಾಥನನ್ನೂ ಅವನಿರುವ ಈ ರಂಗಕ್ಷೇತ್ರವನ್ನೂ ಸ್ತುತಿಸುವ ಸಲುವಾಗಿ ಎರಡು ನಾಲಿಗೆಗಳನ್ನು ಹೊಂದಿರುವವನಾಗಿರುವನು.

೩. ವೇದಪಠನವಾದಾಗ ಮುಖಗಳು ಸಾರ್ಥಕ, ಹರಿಸ್ತೋತ್ರ ಮಾಡಿದಾಗ ನಾಲಿಗೆ [೩]ಸಾರ್ಥಕ, ಎಂಬ ತತ್ತ್ವವನ್ನು ತೋರಿಸಲೆಂದು ಶೇಷದೇವರು ಹೀಗೆ ಪಂಚಮುಖರೂ, ದ್ವಿಜಿಹ್ವರೂ ಆಗಿರುವರು ಎಂದು ಭಾವ. ವೇದಾದಿಗಳನ್ನು ಪಠಿಸದ ಮುಖಗಳೂ, ಹರಿಸ್ತೋತ್ರವನ್ನು ಮಾಡದ ನಾಲಿಗೆಯೂ ವ್ಯರ್ಥವೆಂಬ [೪]ಸೂಚನೆಯೂ ಇಲ್ಲಿಯ ಉತ್ಪ್ರೇಕ್ಷೆಯಲ್ಲಿದೆ.

೪. ವಿಷ್ಣು ಪ್ರತಿಪಾದಕವಾದ ಶಾಸ್ತ್ರಗಳ ಅಧ್ಯಯನ ಮತ್ತು ವಿಷ್ಣುವೈಷ್ಣವರ ಸ್ತೋತ್ರ ಸದಾ ಕರ್ತವ್ಯ ಎಂದು ತಾತ್ಪರ್ಯ.

೫. ಶೇಷ ಹಿಂದೆ ಪಂಚಮುಖದ ಶಿವ. ಹೀಗೆ ಪುನಃ ಪಂಚಮುಖನಾಗುವ ಮೂಲಕ ತನ್ನ ಹಿಂದಿನ ರೂಪವನ್ನು ಸ್ಮರಣೆಗೆ ತರುವಂತಿರುವನು. ಹಾಗೂ ಆಗಲೂ ಹೀಗೆ ಪಂಚವೇದ ಗಳನ್ನು ಶ್ರೀಹರಿಪರವೆಂದು ಪಠಿಸುತ್ತಿದ್ದನು ಎಂಬ ಧ್ವನಿಯನ್ನು ಇಲ್ಲಿ ಗುರುತಿಸಬಹುದು.

**ಯಥಾ ಶ್ರಿಯಾ ತ್ವಂ ಸತತಂ ರಂಗಕ್ಷೇತ್ರೇ ವ್ಯರೂರುಚಃ ।**
**ತಥಾ ಹರೇ ಮೇಽಂತರಂಗೇ ರಂಗನಾಥ ವಿರೋಚಯ ॥ ೮ ॥**

ಅ: (ಹೇ) ಹರೇ ರಂಗನಾಥ = ಎಲೈ ಶ್ರೀಹರಿಯಾದ ರಂಗನಾಥನೇ !; ತ್ವಂ = ನೀನು; ಶ್ರಿಯಾ(ಸಹ) = ಮಹಾಲಕ್ಷ್ಮಿಯೊಂದಿಗೆ; ರಂಗಕ್ಷೇತ್ರೇ = ಶ್ರೀರಂಗಕ್ಷೇತ್ರದಲ್ಲಿ;

---

೧. ಶ್ರೀರಂಗನಾಥಶಯ್ಯಾಭೂತಸ್ಯ ಶೇಷಸ್ಯ ಪಂಚಮುಖತ್ವಾದಿಯಮುತ್ಪ್ರೇಕ್ಷಾ । -ವ್ಯಾ

೨. ಪಾಠ್ಯಾನಾಂ ಋಗಾದಿಪಂಚವೇದಾನಾಂ ಪಂಚಸಂಖ್ಯಾಕತ್ವಾತ್ । ಸ್ತವ್ಯಯೋಃ ರಂಗಕ್ಷೇತ್ರ ಶ್ರೀರಂಗನಾಥಯೋರ್ದ್ವಿಸಂಖ್ಯಾಕತ್ವಾತ್ ಪಾಠ್ಯಸ್ತವ್ಯಸಮಸಂಖ್ಯಾಕಮುಖಜಿಹ್ವಾವಾನಭೂದಿತಿ ಭಾವಃ । -ವ್ಯಾ

೩. ಹರಿಸ್ತವಾನುಪಯೋಗಿಭಿರನ್ಯೈರ್ಮುಖೈಃ ಕಿಂ ಪ್ರಯೋಜನಮಿತಿ ಭಾವೇನ ಪಂಚವದನೋಽಭವದಿತಿ ಭಾವಃ । -ವ್ಯಾಖ್ಯಾನ

೪. ರೋಗೋ ನಾಮ ನ ಸಾ ಜಿಹ್ವಾ ಯಯಾ ನ ಸ್ತೂಯತೇ ಹರಿಃ ।
ರೋಗೋ ನಾಮ ನ ಸಾ ಜಿಹ್ವಾ ಯಾ ನ ವಕ್ತಿ ಹರೇರ್ಗುಣಾನ್ ॥ - ಕೃಷ್ಣಾಮೃತಮಹಾರ್ಣವ ೭,೭೮

ಸತತಂ = ಸರ್ವದಾ; ಶಯಾನಃ = ಮಲಗಿರುವವನಾಗಿ; ಯಥಾ = ಹೇಗೆ; ವ್ಯರೂರುಚಃ = ಶೋಭಿಸುವೆಯೋ; ತಥಾ = ಹಾಗೆಯೇ; ಮೇ = ನನ್ನ; ಅಂತರಂಗೇ = ಹೃದಯದಲ್ಲಿ; ವಿರೋಚಯ =(ಸದಾ) ಶೋಭಿಸುತ್ತಿರು.

ಎಲೈ ರಂಗನಾಥ, ಶ್ರೀಹರಿ ! ನೀನು ಮಹಾಲಕ್ಷ್ಮಿಯೊಂದಿಗೆ ಶ್ರೀರಂಗಕ್ಷೇತ್ರದಲ್ಲಿ ಶೋಭಿಸುತ್ತಿರುವಂತೆ ನನ್ನ ಹೃದಯದಲ್ಲೂ ಸದಾ ಶೋಭಿಸುತ್ತಿರು.

ವಿ: ೧. ಶ್ರೀರಂಗಕ್ಷೇತ್ರದಲ್ಲಿ ಶ್ರೀಸಮೇತನಾಗಿ ಶೋಭಿಸುವ ಶ್ರೀರಂಗನಾಥನು ನಮ್ಮ ಅಂತರಂಗದಲ್ಲೂ ಸದಾಕಾಲದಲ್ಲೂ ನೆಲೆಸಿ ಶೋಭಿಸುತ್ತಿರಲಿ ಎಂದು ಭಕ್ತಜನರು ಪ್ರಾರ್ಥಿಸಿಕೊಳ್ಳಬೇಕು ಎಂದು ಭಾವ.

೨. ಶ್ರೀರಂಗಕ್ಷೇತ್ರವು ಎಂಟು ಸ್ವಯಂವ್ಯಕ್ತಸ್ಥಳಗಳಲ್ಲಿ ಒಂದಾದ ಪುಣ್ಯ ಕ್ಷೇತ್ರ. ಆದಿರಂಗ, ಮಧ್ಯರಂಗ ಮತ್ತು ಅಂತ್ಯರಂಗ ಎಂಬ ಮೂರು ರಂಗಕ್ಷೇತ್ರಗಳಲ್ಲಿನ 'ಅಂತ್ಯರಂಗ' ಕ್ಷೇತ್ರವೆಂಬುದು ಸಹ ಇದೇ ಆಗಿದೆ, ಈ ಮೂರು ಕ್ಷೇತ್ರಗಳಲ್ಲೂ ಶ್ರೀರಂಗನಾಥಮೂರ್ತಿಯು ಇರುವುದು. ಈ ಕ್ಷೇತ್ರವನ್ನು ಶ್ರೀಮಧ್ವಾಚಾರ್ಯರು ತಮ್ಮ ದಕ್ಷಿಣ ದಿಗ್ವಿಜಯ ಕಾಲದಲ್ಲಿ ಸಂದರ್ಶಿಸಿದ್ದ ಉಲ್ಲೇಖ [೧]ಸುಮಧ್ವವಿಜಯದಲ್ಲಿದೆ (೫/೪೭)

೩. ಕಾವೇರಿನದಿಯು ಎರಡು ಕವಲುಗಳಾಗಿ ಹರಿಯುವ ೨೭ ಕಿ. ಮೀ. ಉದ್ದ ಮತ್ತು ೫ ಕಿ.ಮೀ. ಅಗಲದ ರಮ್ಯದ್ವೀಪವೇ ಈ ಶ್ರೀರಂಗಕ್ಷೇತ್ರ. ಏಳು ಪ್ರಾಕಾರಗಳನ್ನು ಹೊಂದಿರುವ ಇಲ್ಲಿಯ ಶ್ರೀರಂಗನಾಥದೇವಾಲಯವು ಭರತಖಂಡದಲ್ಲೇ ಅತ್ಯಂತ ವಿಶಾಲವಾದ ದೇವಾಲಯ; ಶ್ರೀರಂಗದ ಊರಿನ ಬಹುಭಾಗವು ಈ ದೇವಸ್ಥಾನದ ಹೊರಪ್ರಾಕಾರಗಳಲ್ಲೇ ಇದೆ. ತಮಿಳುನಾಡಿನ ಪ್ರಸಿದ್ಧನಗರವಾದ ತಿರುಚಿರಾಪಳ್ಳಿಯಿಂದ ಶ್ರೀರಂಗನಾಥ ದೇವಾಲಯವು ಸುಮಾರು ೫ ಕಿ. ಮೀ. ದೂರದಲ್ಲಿದೆ.

೪. ಇಲ್ಲಿಯ ಶ್ರೀರಂಗನಾಥ ವಿಗ್ರಹವು ಮೂಲತಃ ಇಕ್ಷ್ವಾಕುರಾಜನಿಗೆ ಶ್ರೀಚತುರ್ಮುಖ ಬ್ರಹ್ಮದೇವರಿಂದ ಅನುಗ್ರಹಿಸಲ್ಪಟ್ಟು, ಶ್ರೀರಾಮದೇವರವರೆಗೂ ಅದೇ ವಂಶದಲ್ಲಿಯೇ ಪೂಜಿತವಾಗಿದ್ದ ಸ್ವಯಂವ್ಯಕ್ತಮೂರ್ತಿ, ಬ್ರಹ್ಮದೇವರಿಗೆ ಶ್ರೀನಾರಾಯಣ ದೇವರಿಂದಲೇ ಕೊಡಲ್ಪಟ್ಟಿತ್ತು. ಶ್ರೀರಾಮದೇವರು ತಮ್ಮ ಪರಂಧಾಮಗಮನಕಾಲದಲ್ಲಿ ಇದನ್ನು ವಿಭೀಷಣನಿಗೆ ಅವನ ಪ್ರಾರ್ಥನೆಯಂತೆ ಅನುಗ್ರಹಿಸಿದರೆಂದೂ, ಅದನ್ನು ಲಂಕೆಗೆ ತೆಗೆದುಕೊಂಡು ಹೋಗುವಾಗ ಈ ಶ್ರೀರಂಗಕ್ಷೇತ್ರದಲ್ಲಿ ಚಂದ್ರಪುಷ್ಕರಿಣೀ ತೀರದಲ್ಲಿ ಆಹ್ನೀಕಕ್ಕೆಂದು ಕೆಳಕ್ಕಿಳಿಸಿದಾಗ ಅಲ್ಲಿಯೇ ಸ್ಥಿರವಾಯಿತೆಂದೂ ಸ್ಥಳಪುರಾಣದಲ್ಲಿದೆ. ಹೀಗೆ ಅದು ನೆಲೆಗೊಳ್ಳಲು ಚೋಳರಾಜನಾದ ಧರ್ಮವರ್ಮನೆಂಬವನ ತಪಸ್ಸೂ ಒಂದು ಕಾರಣವಾಗಿದ್ದಿತಂತೆ.

೫. ಲಂಕೆಯತ್ತ ಮುಖ ಮಾಡಿರುವ ಈ ವಿಗ್ರಹವನ್ನು ವಿಭೀಷಣನು ಅಂದಿನಿಂದ ಇಲ್ಲಿಗೆ ಪ್ರತಿನಿತ್ಯ ರಹಸ್ಯದಲ್ಲಿ ಬಂದು ಪೂಜಿಸಿ ಹೋಗುತ್ತಿರುವನು ಎಂದೂ ಪ್ರತೀತಿ.

---

೧. ಶೃಂಗಾರಸಿಂಧುಂ ಸ ಭುಜಂಗಶಾಯಿನಂ ಶ್ರೀರಂಗವಾಸಂ ಕೃತಮಂಗಲಂ ಸತಾಂ।
ಅಮಂದಧೀರ್ದೇವಮವಂದತಾಗತಃ ಕವೇರಕನ್ಯಾಹಿಮವಾಯುಸೇವಿತಮ್ ॥

೬. ಶ್ರೀರಂಗನಾಥಮೂರ್ತಿಯು ಶೇಷಶಾಯಿಯಾಗಿರುವ ವಿಷ್ಣುಮೂರ್ತಿ. ಚತುರ್ಭುಜ-ಯುಕ್ತವಾದ ಈ ಮೂರ್ತಿಯು ಪವಡಿಸಿರುವ ಶೇಷನಿಗೆ ಐದು ಹೆಡೆಗಳಿವೆ; ಮೂರ್ತಿಯ ಪಾದದ ಬಳಿ ಶ್ರೀದೇವಿ, ಭೂದೇವಿಯರೂ, ವಿಭೀಷಣನೂ ಕುಳಿತಿರುವರು. ಬ್ರಹ್ಮರುದ್ರಾದಿ ಯಾವ ದೇವತೆಗಳಿಗೂ ಈ ರೀತಿ ಶಯನಭಂಗಿಯ ವಿಗ್ರಹಗಳಿಲ್ಲ ಎಂಬುದು ಗಮನಾರ್ಹ; ಇದು ಶ್ರೀಹರಿಯ ಆನಂದಾದಿಸಕಲಗುಣಪೂರ್ಣತ್ವಕ್ಕೂ ಕರ್ತವ್ಯಕರ್ಮದ ಅಭಾವಕ್ಕೂ ದ್ಯೋತಕವಾಗಿದೆ.

೭. ವೈಷ್ಣವಮುನಿತ್ರಯರಲ್ಲಿ ದ್ವಿತೀಯರೆಂದು ಖ್ಯಾತರಾದ ಶ್ರೀಜಯತೀರ್ಥರು (ಶ್ರೀಟೀಕಾಚಾರ್ಯರು) ಈ ಶ್ರೀರಂಗಕ್ಷೇತ್ರದಲ್ಲಿ ಕೆಲವು ಕಾಲ ತಂಗಿದ್ದರೆಂದೂ, ಆಗ ವಾದಕ್ಕೆ ಬಂದ ಪ್ರಬಲ ಶಾಕ್ತೇಯ ತಂಡವೊಂದನ್ನು ಸೋಲಿಸಿ ವಿಷ್ಣುಸರ್ವೋತ್ತಮತ್ವವನ್ನು ಸ್ಥಾಪಿಸಿದರೆಂದೂ 'ಜಯೀಂದ್ರೋದಯ' ವೆಂಬ ಗ್ರಂಥದಲ್ಲಿ ಉಕ್ತವಾಗಿದೆ.

೮. ಶ್ರೀವ್ಯಾಸರಾಜರು ಸಹ ಈ ಕ್ಷೇತ್ರದಲ್ಲಿ ಬಹುಕಾಲ ನೆಲೆಸಿ ವೈಷ್ಣವಮತವನ್ನು ಪ್ರಸಾರಮಾಡಿದ ಉಲ್ಲೇಖ ಉಂಟು. ಶ್ರೀವ್ಯಾಸರಾಜರ ವಿದ್ಯಾಗುರುಗಳಾದ ಶ್ರೀಶ್ರೀಪಾದರಾಜರು ಮೂಲತಃ ಶ್ರೀರಂಗಕ್ಷೇತ್ರದವರು ಎಂದು ಪ್ರತೀತಿ ಉಂಟು. ಇಲ್ಲಿ ಅವರ ಗುರುಗಳಾದ ಶ್ರೀಸ್ವರ್ಣವರ್ಣತೀರ್ಥರ ಮೂಲಬೃಂದಾವನ ಉಂಟು.

೯. ಶ್ರೀರಾಘವೇಂದ್ರಸ್ವಾಮಿಗಳ ಸಾಕ್ಷಾತ್ ಶಿಷ್ಯರಾದ ಶ್ರೀಯೋಗೀಂದ್ರತೀರ್ಥರ ಮತ್ತು ಆ ಮಠದಲ್ಲಿ ಬಂದ ಶ್ರೀ ಉಪೇಂದ್ರತೀರ್ಥರ ಮತ್ತು ಶ್ರೀಸುಮತೀಂದ್ರತೀರ್ಥರ ಮೂಲಬೃಂದಾವನಗಳು ಸಹ ಈ ಶ್ರೀರಂಗದಲ್ಲಿವೆ. ಶ್ರೀಮುನೀಂದ್ರತೀರ್ಥರೆಂಬ ಶ್ರೀರಾಘವೇಂದ್ರಮಠದ ಚಿಕ್ಕಪಟ್ಟದ ಒಬ್ಬ ಸ್ವಾಮಿಗಳ ಬೃಂದಾವನವೂ ಇಲ್ಲಿಯೇ ಇದೆ. ಶ್ರೀವ್ಯಾಸರಾಜಮಠದ ಶ್ರೀಲಕ್ಷ್ಮೀನಾಥತೀರ್ಥರು, ಶ್ರೀಲಕ್ಷ್ಮೀಪತಿತೀರ್ಥರು, ಶ್ರೀವಿದ್ಯಾ-ಶ್ರೀಧರತೀರ್ಥರು ಮತ್ತು ಶ್ರೀವಿದ್ಯಾವಾರಿಧಿತೀರ್ಥರ ಮೂಲಬೃಂದಾವನಗಳೂ ಇಲ್ಲಿವೆ.

೧೦. ಶ್ರೀರಂಗನಾಥನನ್ನು ಕುರಿತ 'ಕಂಗಳಿದ್ಯಾತಕೋ ಕಾವೇರಿ ರಂಗನ ನೋಡದ' ಎಂಬ ಹರಿದಾಸಸಾಹಿತ್ಯದ ಸುಪ್ರಸಿದ್ಧ ಕೃತಿ ಈ ಶ್ರೀಶ್ರೀಪಾದರಾಜರ ರಚನೆಯಾಗಿದೆ.

೧೧. ಶ್ರೀರುದ್ರದೇವರ 'ಜಲಲಿಂಗ' ವೆಂದು ಪ್ರಸಿದ್ಧವಾಗಿರುವ ಜಂಬುಕೇಶ್ವರವು ಸಹ ಶ್ರೀರಂಗದಲ್ಲಿದ್ದು, ಇದು ಶೈವರಿಗೂ ಒಂದು ಪ್ರಸಿದ್ಧ ಕ್ಷೇತ್ರವಾಗಿದೆ. ವೈಕುಂಠ ಏಕಾದಶಿಯಂದು ಶ್ರೀರಂಗನಾಥನ ಬಳಿಯ ಉತ್ಸವ ಅಲ್ಲಿಯ ಅತ್ಯಂತ ಮಹತ್ತ್ವದ ಉತ್ಸವವಾಗಿದೆ.

## ಚಂದ್ರಪುಷ್ಕರಿಣೀ (ತೀರ್ಥ)

**ಹಿತ್ವಾ ಹರಜಟಾಗಂಗಾಂ ಯತ್ರೇಂದುರತಪತ್ ತಪಃ ।**
**ಚಂದ್ರಪುಷ್ಕರಿಣೀ ಸೇಯಂ ಮಂದಭಾಗ್ಯೈರ್ನ ಸೇವ್ಯತೇ ॥೯॥**

ಅ: ಇಂದುಃ = ಚಂದ್ರನು; ಹರಜಟಾಗಂಗಾಂ = ಹರನ ಜಟೆಯಲ್ಲಿ ನೆಲೆಸಿರುವ ಗಂಗೆಯನ್ನು; ಹಿತ್ವಾ = ತೊರೆದು; ಯತ್ರ = ಎಲ್ಲಿ; ತಪಃ = ತಪಸ್ಸನ್ನು; ಅತಪತ್-=

(ಬಹುಕಾಲ) ಆಚರಿಸಿದನೋ; ಸಾ ಇಯಂ = ಅಂತಹ ಈ; ಚಂದ್ರಪುಷ್ಕರಿಣೀ = ಚಂದ್ರಪುಷ್ಕರಿಣಿಯು; ಮಂದಭಾಗ್ಯೈಃ = ಮಂದಭಾಗ್ಯರಿಂದ; ನ ಸೇವ್ಯತೇ = ಸೇವಿಸಲ್ಪಡಲಾರದು.

ಹರನ ಜಟೆಯಲ್ಲಿನ ಗಂಗೆಯನ್ನು ತೊರೆದು ಚಂದ್ರನು ತಪಸ್ಸನ್ನಾಚರಿಸಿದ ಈ ಚಂದ್ರಪುಷ್ಕರಿಣಿಯ ಸೇವೆ ಮಂದಭಾಗ್ಯರಿಗೆ ಲಭಿಸದು.

ವಿ: ೧. ಚಂದ್ರನು ತಾನು ಸ್ವತಃ ನೆಲೆಸಿರುವ ಶ್ರೀರುದ್ರದೇವರ ಜಟೆಯಲ್ಲೇ ಗಂಗೆಯು ಇದ್ದರೂ, ಅದನ್ನು ಬಿಟ್ಟು ಈ 'ಚಂದ್ರಪುಷ್ಕರಿಣೀ' ಯ ಬಳಿ ತಪಸ್ಸು ಮಾಡಿರುವನು[೧] ಎಂದ ಮೇಲೆ ಇದರಲ್ಲಿರುವ ಸನ್ನಿಧಾನವು ಅಪಾರವಾದುದು; ಚಂದ್ರನಿಂದ ಸೇವಿತವಾದ ಈ ಚಂದ್ರಪುಷ್ಕರಿಣೀಯನ್ನು ಸೇವಿಸದವನು ಮಂದಭಾಗ್ಯನೇ ಸರಿ; ಚಂದ್ರಪುಷ್ಕರಿಣಿಯನ್ನು[೨] ಸೇವಿಸುವ ಭಾಗ್ಯವು ಪುಣ್ಯಹೀನರಿಗೆ ಎಂದೂ ದೊರೆಯದು ಎಂದು ಭಾವ.[೩]

೨. ಶ್ರೀರಂಗನಾಥ ದೇವಾಲಯದ ಐದನೆಯ ಪ್ರಾಕಾರದಲ್ಲಿರುವ 'ಚಂದ್ರನು ತಪಸ್ಸು ಮಾಡಿದ ಸ್ಥಳ' ಎಂದು ಸುಪ್ರಸಿದ್ಧವಾಗಿರುವ 'ಚಂದ್ರಪುಷ್ಕರಣೀ' ತೀರ್ಥವನ್ನು ಶ್ರೀವಾದಿರಾಜರು ಈ ಶ್ಲೋಕದಲ್ಲಿ ವರ್ಣಿಸಿರುವರು. ಚಂದ್ರಪುಷ್ಕರಣಿಯು ಒಂದು ಗೋಲಾಕಾರದ ಸರೋವರವಾಗಿದ್ದು, ಅದರಲ್ಲಿ ಸ್ನಾನ ಮಾಡುವಾಗ ಕೊಡಬೇಕಾದ ಅರ್ಘ್ಯದ ಮಂತ್ರ ಹೀಗಿದೆ:

ರಂಗಪಾದೋದ್ಭವೇ ದೇವಿ ಪುನ್ನಾಗೋತ್ಸಂಗಗಾಮಿನಿ ।
ಚಂದ್ರಪುಷ್ಕರಣಿ ಖ್ಯಾತೇ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

೩. ಶ್ರೀರಂಗಕ್ಷೇತ್ರದಲ್ಲಿನ ಈ ಚಂದ್ರಪುಷ್ಕರಿಣೀ ಸರೋವರವು ಚಂದ್ರಮಂಡಲದಂತೆ ಗೋಲಾಕಾರದ ಸರೋವರವಾಗಿರುವುದರಿಂದಲೂ ಸಹ ಇದಕ್ಕೆ ಚಂದ್ರಪುಷ್ಕರಿಣೀ ಎಂಬ ಹೆಸರು ಸಾರ್ಥಕವಾಗಿದೆ.

## ಕಾವೇರೀ (ನದೀ)

**ಕಾವೇರಿ ಕಮನೀಯಾಂಗಂ ರಂಗನಾಥಂ ಸದಾ ಹೃದಿ ।**
**ಧತ್ಸೇ ತ್ವತ್ಸೇವಯಾ ದೇವಿ ಕೋ ನು ಕುರ್ಯಾನ್ನ ತಂ ಹೃದಿ ॥ ೧೦ ॥**

ಅ: ಕಾವೇರಿ ! = (ಎಲೈ) ಕಾವೇರಿ ನದಿಯೇ ! (ನೀನು); ಕಮನೀಯಾಂಗಂ = ಮನೋಹರಶರೀರವುಳ್ಳ; ರಂಗನಾಥಂ = ಶ್ರೀರಂಗನಾಥನನ್ನು; ಸದಾ = ಯಾವಾಗಲೂ; ಹೃದಿ = ಹೃದಯದಲ್ಲಿ; ಧತ್ಸೇ = ಧರಿಸಿರುವಿ; ದೇವಿ = ಅಮ್ಮಾ ! ಕಾವೇರಿ !; ತ್ವತ್ಸೇವಯಾ = ನಿನ್ನನ್ನು ಸೇವಿಸುವುದರಿಂದ; ಕಃ ನು = ಯಾವನು ತಾನೇ; ತಂ = ಆ ರಂಗನಾಥನನ್ನು; ಹೃದಿ = (ತನ್ನ) ಹೃದಯದಲ್ಲಿ; ನ ಕುರ್ಯಾತ್ = ಹೊಂದಲಾರನು.

---

೧. ಅನೇನ ಸ್ವಾಭಾವ್ಯೋಚ್ಚತ್ವಂ ಸ್ಥಲಕೃತೋಚ್ಚತ್ವಂ ಚ ಗಮ್ಯತೇ । -ವ್ಯಾ

೨. ಚಂದ್ರಪುಷ್ಕರಿಣೀಸೇವಾ ಪುಣ್ಯವತಾಮೇವ ಸಂಘಟತೇ ನಾಪುಣ್ಯವತಾಮಿತಿ ಭಾವಃ । -ವ್ಯಾ

೩. ಸ್ವಾಮಿಪುಷ್ಕರಿಣಿಯಲ್ಲಿ ಅಧೋಕ್ಷಜನನ್ನೂ, ಚಂದ್ರಪುಷ್ಕರಿಣಿಯಲ್ಲಿ ವಾಮನನನ್ನೂ ಸ್ಮರಿಸಬೇಕು.

ಎಲೈ ಕಾವೇರಿಯೇ ! ನೀನು ಮನೋಹರರೂಪದ ಶ್ರೀರಂಗನಾಥನನ್ನು ಸದಾ ಹೃದಯದಲ್ಲಿ ಧರಿಸಿರುವಿ; ದೇವಿ ! ನಿನ್ನನ್ನು ಸೇವಿಸುವ ಯಾರು ತಾನೇ ಆ ರಂಗನಾಥನನ್ನು ತನ್ನ ಹೃದಯದಲ್ಲಿ ಹೊಂದಲಾರರು?

ವಿ: ೧. ಕಾವೇರಿ ನದಿಯು ಎರಡು ಕವಲಾಗಿ ಹರಿಯುವ [೧]ದ್ವೀಪವೊಂದರಲ್ಲಿ ಶ್ರೀರಂಗನಾಥನು ನೆಲೆಸಿರುವನು, ಹೀಗೆ ತನ್ನ ಹೃದಯದಲ್ಲಿ ಶ್ರೀರಂಗನಾಥನನ್ನು ಸದಾ ಹೊಂದಿರುವ ಕಾವೇರಿಯನ್ನು (ಹಿಂದೆ ಹೇಳಿದಂತೆ ಇಂತಹ ದ್ವೀಪಗಳು ಮೂರು) ಭಕ್ತಿಯಿಂದ ಸೇವಿಸುವವರ ಹೃದಯರಂಗದಲ್ಲೂ ಶ್ರೀರಂಗನಾಥನು ನೆಲೆಸಿ ಬಿಡುವನು ಎಂದು ಭಾವ. ಕಾವೇರಿಯ ಜಲವು ನಮ್ಮ ಹೃದಯವನ್ನು ಪ್ರವೇಶಿಸುತ್ತಿದ್ದಂತೆ, ಅದರ ಹೃದಯದಲ್ಲಿರುವ ಶ್ರೀರಂಗನಾಥನೂ ನಮ್ಮ ಅಂತರಂಗವನ್ನು [೨]ಪ್ರವೇಶಿಸಿಬಿಡುವನು. ಕಾವೇರಿ ನದಿಯ ಸ್ನಾನ ಪಾನಾದಿಗಳಿಂದ ಜ್ಞಾನ, ಭಕ್ತಿ ಮೊದಲಾದ ಶ್ರೀಹರಿಪ್ರೀತಿಕರವಾದ ಸದ್ಗುಣಗಳು ಲಭಿಸುವವು ಎಂದು ತಾತ್ಪರ್ಯ.

೨. 'ಕಾವೇರಿ'ಯು ಇಲ್ಲಿ ಮಾತ್ರವಲ್ಲದೆ ಆದಿರಂಗ (ಶ್ರೀರಂಗಪಟ್ಟಣ) ಮಧ್ಯರಂಗ (ಶಿವನಸಮುದ್ರ) ಎಂಬ ಇನ್ನೆರಡು ಸ್ಥಳಗಳಲ್ಲೂ ತನ್ನ ದ್ವೀಪಗಳಲ್ಲಿ ಶ್ರೀರಂಗನಾಥನನ್ನು ಹೊಂದಿರುವಳು. ಇದೇ ರೀತಿ ಕಾವೇರಿ ನದಿಯ ಜಲದಲ್ಲಿ ಸರ್ವತ್ರ ಶ್ರೀಹರಿಯು ನೆಲೆಸಿರುವನು ಎಂಬುದು ಸಿದ್ಧವಾಗುತ್ತದೆ.

೩. ಕಾವೇರಿ ಜಲವು ವಿಷ್ಣುಭಕ್ತಿಪ್ರದವಾದ ಅಪೂರ್ವಜಲಗಳಲ್ಲೊಂದು ಎಂಬುದಾಗಿ [೩]ಭಾಗವತದಲ್ಲಿ ಉಕ್ತವಾಗಿರುವುದು ಯುಕ್ತಿಯುಕ್ತವೂ ಆಗಿದೆ ಎಂದು ಸಿದ್ಧಿಸುತ್ತದೆ.

೪. ಕಾವೇರಿಯು ಸಹ್ಯಪರ್ವತಗಳಲ್ಲಿ ಹುಟ್ಟಿ ತಂಜಾವೂರಿನ ಬಳಿ ಬಂಗಾಲಕೊಲ್ಲಿಯನ್ನು ಸೇರುವ ಮಹಾನದಿ; ಪ್ರತಿನಿತ್ಯ ಸ್ಮರಿಸಬೇಕಾದ ಭರತಖಂಡದ ಸಪ್ತಮಹಾನದಿಗಳಲ್ಲಿ ಒಂದು ಎಂಬುದು ಇದರ [೪]ಹಿರಿಮೆ;

---

೧. ಉಭಯಕಾವೇರೀಮಧ್ಯೇ ವಿದ್ಯಮಾನತ್ವಾತ್ ಇತಿ ಭಾವಃ। -ವ್ಯಾಖ್ಯಾನ

೨. ಶ್ರೀರಂಗನಾಥಸ್ಯ ಕಾವೇರಿಹೃದಯಗತತ್ವೇನ ತತ್ಪಾನೇನ ತಸ್ಯಾಃ ಹೃದಯಾಂತರ್ಗತತ್ವೇ ರಂಗನಾಥಸ್ಯಾಪಿ ಹೃದಯಾಂತರ್ಗಮನಂ ಯುಕ್ತಮಿತಿ ಭಾವಃ । 'ಏಕತ್ರ ನಿರ್ಣೀತಃ ಶಾಸ್ತ್ರಾರ್ಥೋಽಪರತ್ರಾಪಿ' ಇತಿ ನ್ಯಾಯೇನ ಸರ್ವಸ್ಮಿನ್ನಪಿ ಕಾವೇರೀಜಲೇ ಏವಮೇವ ರಂಗನಾಥಸ್ತಿಷ್ಠತೀತಿ ಸಿದ್ಧಮ್। ಏವಂ ಚ ತಜ್ಜಲಸ್ಯ ಪಾನೇನ ಹೃದಯಾಂತರ್ಗಮನೇ ತಸ್ಯಾಪಿ ಹೃದಾಯಂತರ್ಗಮನಂ ಯುಕ್ತಿಯುಕ್ತಂ । ಅತಃ ಶ್ರೀಭಾಗವತೋಕ್ತಂ ಕಾವೇರೀಜಲಸ್ಯ ವಿಷ್ಣುಭಕ್ತಿದತ್ವಂ ನ ಕೇವಲಮಾಗಮೇನೈವ ಸಿದ್ಧಂ । ಕಿಂತು ಯುಕ್ತಿತೋಽಪಿ ನಿಶ್ಚಿತೋಽಭೂದಿತಿ ಭಾವಃ। -ವ್ಯಾಖ್ಯಾನ

೩. ತಾಮ್ರಪರ್ಣೀ ನದೀ ಯತ್ರ ಕೃತಮಾಲಾ ಪಯಸ್ವಿನೀ।
ಕಾವೇರೀ ಚ ಮಹಾಪುಣ್ಯಾ ಪ್ರತೀಚೀ ಚ ಮಹಾನದೀ ॥
ಯೇ ಪಿಬಂತಿ ಜಲಂ ತಾಸಾಂ ಮನುಜಾ ಮನುಜೇಶ್ವರ।
ಪ್ರಾಯೋ ಭಕ್ತಾ ಭಗವತಿ ವಾಸುದೇವೇಽಮಲಾಶಯಾಃ ॥ -ಭಾಗವತ(೧೧/೫/೩೯-೪೦)

೪. ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥

೫. ಋಗ್ವೇದದಲ್ಲಿ[1] ಬಂದಿರುವ 'ಮರುದ್ವೃಧಾ' ನದಿಯು ಇದೇ ಎಂದು[2] ಹೇಳುವರು. [3]ಮಹಾಭಾರತ, ಭಾಗವತ ಮೊದಲಾದ ಇತಿಹಾಸಪುರಾಣಗಳಲ್ಲಿ ಇದರ ಮಹಿಮೆಯು ಉಕ್ತವಾಗಿದೆ.

೬. 'ತಲಕಾವೇರೀ' ಎಂಬಲ್ಲಿ ಇದರ ಉಗಮಸ್ಥಾನವಿದೆ.ಇದರ ಉದ್ದ ಸುಮಾರು ೭೦೦ ಕಿ.ಮೀ.ಗಳು. ತುಲಾಮಾಸದಲ್ಲಿ ಇದರಲ್ಲಿ ಪೂರ್ಣಗಂಗಾಸನ್ನಿಧಾನವಿರುವುದೆಂದು ಪ್ರಸಿದ್ಧಿ.

೭. 'ಕವೇರ' ಎಂಬ ಮುನಿಯ ಪುತ್ರಿಯಾಗಿ ಅವತರಿಸಿದ್ದರಿಂದ 'ಕಾವೇರಿ' ಎಂಬ ಹೆಸರನ್ನು ಹೊಂದಿರುವ ಈ ನದಿಯನ್ನು ಶ್ರೀವಾದಿರಾಜರು ಇಲ್ಲಿ ಎರಡು ಶ್ಲೋಕಗಳಲ್ಲಿ ವರ್ಣಿಸಿರುವರು.

೮. ಕೊಡಗು ಜಿಲ್ಲೆಯ ಮಡಿಕೇರಿ ಬಳಿಯಿರುವ 'ಬ್ರಹ್ಮಗಿರಿ' ಯು 'ತಲಕಾವೇರಿ' ಎಂದು ಪ್ರಸಿದ್ಧವಾಗಿದೆ. ಅಗ್ನಿಪುರಾಣ ಮತ್ತು ಸ್ಕಂದಪುರಾಣಗಳಲ್ಲಿ ಕಾವೇರೀಮಾಹಾತ್ಮ್ಯವು ಬಂದಿದೆ. ಅಗಸ್ತ್ಯರ ಪತ್ನಿಯಾದ ಲೋಪಾಮುದ್ರೆಯ ರೂಪಾಂತರವೇ ಈ ಕಾವೇರಿ ನದಿ ಎಂಬುದಾಗಿ ಅವುಗಳಲ್ಲಿದೆ.

**ಮೋಕ್ಷದಾನಕ್ಷಮಾಃ ಸಂತಿ ಸರಿತಸ್ತತ್ರ ತತ್ರ ಹಿ ।**
**ಕಾವೇರೀ ಚೋಲಭೂಮಾತಾ ಭುಕ್ತಿಮುಕ್ತಿಕರೀ ಸರಿತ್ ॥ ೧೧ ॥**

**ಅ: ಮೋಕ್ಷದಾನಕ್ಷಮಾಃ** = ಮುಕ್ತಿಯನ್ನು ಕೊಡಲು ಸಮರ್ಥವಾದ; **ಸರಿತಃ** = ನದಿಗಳು; **ತತ್ರ ತತ್ರ** = ಅಲ್ಲಲ್ಲಿ; **ಸಂತಿ ಹಿ** = ಇವೆ ಎಂಬುದೇನೋ ನಿಜ;(ಆದರೆ) **ಚೋಲಭೂಮಾತಾ** = ಚೋಲದೇಶದ ಜನರಿಗೆ ತಾಯಿಯಾಗಿರುವ; **ಕಾವೇರೀ ಸರಿತ್** = (ಈ ಕಾವೇರಿ ನದಿಯು); **ಭುಕ್ತಿಮುಕ್ತಿಕರೀ ಸರಿತ್** = ಭುಕ್ತಿ (ಅನ್ನ) ಮತ್ತು ಮುಕ್ತಿ ಎರಡನ್ನೂ ಕೊಡುವ ಅಪೂರ್ವ ನದಿಯಾಗಿದೆ.[4]

**ಮುಕ್ತಿ ನೀಡುವ ಶಕ್ತಿಯ ನದಿಗಳೇನೋ ಅಲ್ಲಲ್ಲಿ ಇರುವವು; ಆದರೆ ಚೋಲದೇಶದ ಜನನಿಯಾದ ಈ ಕಾವೇರಿನದಿಯು ಭುಕ್ತಿ(ಅನ್ನ), ಮುಕ್ತಿ ಎರಡನ್ನೂ ನೀಡುವ ಅಪೂರ್ವ ನದಿ.**

---

೧. ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾ -(ಋಗ್ವೇದ)
೨. ಕಾವೇರ್ಯರ್ಘ್ಯಮಂತ್ರ:
ನಮಸ್ತೇ ಕರಾಲವದನೇ ನಮಸ್ತೇ ಕಲಿನಾಶಿನಿ ।
ನಮಸ್ತೇ ದೇವಿ ಕಾವೇರಿ ಗೃಹಾಣಾರ್ಘ್ಯಂ ನಮೋಽಸ್ತು ತೇ ॥
೩. ತತೋ ಗಚ್ಛೇತ ಕಾವೇರೀಂ ವೃತಾಮಪ್ಸರಸಾಂ ಗಣೈಃ ।
ತತ್ರ ಸ್ನಾತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥ -(ಮಹಾಭಾರತ)
೪. ಐಹಿಕಾಮುಷ್ಮಿಕಪುರುಷಾರ್ಥಕರೀ । ಚೋಲಭೂಮಿಸ್ಥಕ್ಷೇತ್ರಾಣಾಂ ನದೀಮಾತೃಕತಯಾ ಕಾವೇರಿಜಲೇನೈವ ಸಸ್ಯೋತ್ಪತ್ತಿರಿತೀಯಮುಕ್ತಿಃ । -ವ್ಯಾ

ವಿ: ೧. ನದಿಗಳು ಜ್ಞಾನದ್ವಾರಾ ಮೋಕ್ಷಸಾಧನವಾಗಿದೆ ಎಂಬುದು ಪ್ರಸಿದ್ಧ; ಇಂತಹ ನದಿಗಳು ಅಲ್ಲಲ್ಲಿ ಇವೆಯಾದರೂ ಈ ಕಾವೇರಿ ನದಿ ಮಾತ್ರ ಅನ್ನ ಮತ್ತು ಮೋಕ್ಷ ಎರಡನ್ನೂ ಕೊಡುವ ವಿಶಿಷ್ಟನದಿಯಾಗಿದೆ;

೨. ಉಪಲಕ್ಷಣಯಾ ಗಂಗಾದಿ ಇತರ ಮಹಾನದಿಗಳೂ ಸಹ ಹೀಗೆ 'ಭುಕ್ತಿಮುಕ್ತಿಕರಿ'-ಗಳಾದ ನದಿಗಳಾಗಿವೆ ಎಂದೂ ತಿಳಿಯಬೇಕು.

೩. ಕಾವೇರೀ ನದಿಗೆ ಕಟ್ಟಲಾಗಿರುವ ಕೃಷ್ಣರಾಜಸಾಗರ ಮೊದಲಾದ ಅನೇಕ ಅಣೆಕಟ್ಟುಗಳು ಇಂದು ಅದರ ವ್ಯವಸಾಯೋಪಯೋಗಿತ್ವಕ್ಕೆ ಸಾಧಕವಾಗಿವೆ. ಈಗ ಮಾತ್ರವಲ್ಲದೆ ಹಿಂದಿನಿಂದಲೂ ಕಾವೇರೀ ನದಿಯು ವ್ಯವಸಾಯಕ್ಕೆ ಅತ್ಯುಪಯುಕ್ತವಾಗಿದ್ದ ನದಿ ಎಂಬುದು ಶ್ರೀವಾದಿರಾಜರ ಮಾತಿನಿಂದ ತಿಳಿಯುತ್ತದೆ.

೪. ಕಾವೇರಿ ನದಿಯು ಸ್ನಾನಪಾನಾದಿಗಳಿಗೆ ಮಾತ್ರವಲ್ಲದೆ ವ್ಯವಸಾಯಕ್ಕೂ ಅತ್ಯುಪ-ಯುಕ್ತವಾದ ನದಿಯಾಗಿದೆ ಎಂದು ಭಾವ. ಇದು ಆ ನದಿಯು ಐಹಿಕ ಮತ್ತು ಆಮುಷ್ಮಿಕ ಎಂಬ ಉಭಯವಿಧ ಫಲಕ್ಕೂ ಸಾಧನವಾಗಿದೆ ಎಂದು ತಾತ್ಪರ್ಯ.

## ವೃಷಭಾಚಲದ ಶ್ರೀಹರಿ

**ಯಸ್ಯಾಂತಕೋऽಪಿ ಶಿರಸಾ ದಾಸ್ಯಂ ಧತ್ತೇ ತಪಸ್ತಪನ್ ।**
**ಸ ಸ್ಯಾದ್ ವೃಷಭಶೈಲೇಂದುರಸ್ಮಾಕಂ ಶ್ರೇಯಸೇ ಹರಿಃ ॥೧೨॥**

**ಅ:** ಅಂತಕಃ ಅಪಿ = ಯಮನೂ ಸಹ; ತಪಃ = ತಪಸ್ಸನ್ನು; ತಪನ್ = ಆಚರಿಸುತ್ತ; ಯಸ್ಯ = ಯಾವ ವೃಷಭಾಚಲದಲ್ಲಿರುವ ಶ್ರೀಹರಿಯ; ದಾಸ್ಯಂ = ದಾಸತ್ವವನ್ನು; ಶಿರಸಾ = ಶಿರಸ್ಸಿನಿಂದ ; ಧತ್ತೇ = ವಹಿಸಿರುವನೋ ; ಸಃ = ಅಂತಹ; ವೃಷಭಶೈ-ಲೇಂದುಃ = ವೃಷಭಾಚಲಕ್ಕೆ ಚಂದ್ರನಂತಿರುವ; ಹರಿಃ = ಶ್ರೀಹರಿಯು; ಅಸ್ಮಾಕಂ = ನಮಗೆ; ಶ್ರೇಯಸೇ ಸ್ಯಾತ್ = ಮೋಕ್ಷಕ್ಕೆ ಕಾರಣನಾಗಲಿ.

ಯಮನೂ ಸಹ ವೃಷಭಾಚಲದಲ್ಲಿರುವ ಶ್ರೀಹರಿಯ ದಾಸತ್ವವನ್ನು ಶಿರಸಾ ವಹಿಸಿರುವನು; ಅಂತಹ ವೃಷಭಾಚಲಕ್ಕೆ ಚಂದ್ರನಂತಿರುವ ಶ್ರೀಹರಿಯು ನಮಗೆ ಶ್ರೇಯಸ್ಸನ್ನು ನೀಡಲಿ.

ವಿ: ೧. ಮೃತ್ಯುವೆಂದು ಪ್ರಸಿದ್ಧನಾಗಿರುವ ಯಮದೇವರೇ ವೃಷಭರೂಪದಿಂದ ಶ್ರೀಹರಿಯ ಸ್ವಾಮಿತ್ವವನ್ನು ನಿರೂಪಿಸಿದ ಸ್ಥಳ ಎಂಬುದು ಈ ಸ್ಥಳದ ಹಿರಿಮೆ; ಹೀಗೆ ಯಮದೇವರನ್ನೇ ದಾಸರನ್ನಾಗಿ ಹೊಂದಿರುವ ಶ್ರೀಹರಿಯು ನಮಗೆ ಮೋಕ್ಷವನ್ನು ಕರುಣಿಸಲಿ. ಸಂಸಾರಮೃತ್ಯುವಿನಿಂದ ಪಾರಾಗಿ ಶಾಶ್ವತ ಶ್ರೇಯಸ್ಸಾದ ಮೋಕ್ಷವನ್ನು ಹೊಂದಲು ಈ ವೃಷಭಾಚಲಕ್ಕೆ ಚಂದ್ರನಂತಿರುವ (ಆಹ್ಲಾದನಾಗಿರುವ) ಶ್ರೀಹರಿಯ ಸೇವೆಯು ಸಾಧನವಾಗಿದೆ ಎಂದು ಭಾವ.

೨. ಮಧುರೆಯಿಂದ ಉತ್ತರಕ್ಕೆ ಸುಮಾರು ೨೦ ಕಿ.ಮೀ. ದೂರದಲ್ಲಿರುವ ವೃಷಭಾಚಲ (ಅಳಗರ್‌ಕೋಯಿಲ್)ವೆಂಬ ಕ್ಷೇತ್ರದಲ್ಲಿರುವ ಶ್ರೀಹರಿಯನ್ನು ಈ ಶ್ಲೋಕದಲ್ಲಿ ಪ್ರಾರ್ಥಿಸಿರುವರು. ವರಾಹಪುರಾಣ, ವಾಮನಪುರಾಣ ಅಗ್ನಿಪುರಾಣ ಮತ್ತು ಬ್ರಹ್ಮಾಂಡ ಪುರಾಣಗಳಲ್ಲಿ ಈ ವೃಷಭಾಚಲ ಕ್ಷೇತ್ರದ ವರ್ಣನೆ ಬಂದಿದ್ದು ಅದರಂತೆ ಇದು ವೃಷಭ ರೂಪದಿಂದ ಯಮಧರ್ಮನು ಮಾಡಿದ ತಪಸ್ಸಿಗೆ ಶ್ರೀನಾರಾಯಣನು ಪ್ರತ್ಯಕ್ಷನಾದ ಸ್ಥಳ. ಇಲ್ಲಿರುವ ಹರಿಮೂರ್ತಿಗೆ 'ಸುಂದರರಾಜ' ಎಂದು ಹೆಸರು. ಮೂರ್ತಿಯ ಉಭಯ ಪಾರ್ಶ್ವಗಳಲ್ಲಿ ಶ್ರೀದೇವಿ ಭೂದೇವಿಯರ ವಿಗ್ರಹಗಳೂ ಇವೆ. ಇಲ್ಲಿ ನೂಪುರಗಂಗಾ ಎಂಬ ತೀರ್ಥವೂ ಇದೆ. ವೃಷಭರೂಪಿಯಾದ ಯಮನ ತಪಸ್ಸಿಗೆ ಮೆಚ್ಚಿ ವೃಷಭಾಚಲದಲ್ಲಿ ಪ್ರತ್ಯಕ್ಷನಾದ ಶ್ರೀಹರಿಯ ಕಾಲ್ಗೆಜ್ಜೆಯಿಂದ ಜನಿಸಿದ ತೀರ್ಥವೇ ಈ 'ನೂಪುರಗಂಗಾ' ಎಂಬುದು ಪೌರಾಣಿಕ ಹಿನ್ನೆಲೆ.

೩. ವೃಷಭವು ಧರ್ಮದ ಸಂಕೇತ ಎಂಬ ವಿಷಯ ಭಾಗವತಪುರಾಣದಲ್ಲಿ ಬಂದಿದೆ(ಧರ್ಮೋಽಸಿ ವೃಷರೂಪಧೃಕ್ - ೧/೧೭/೨೧).

## ನೂಪುರಗಂಗಾ(ತೀರ್ಥ)

**ಹರಿನೂಪುರಜಾತೇಽಲಂಕುರು ಗಂಗೇ ಮನೋ ಮಮ ।**
**ಪರಿಹೃತ್ಯ ಘನೀಭೂತದುರಿತಸ್ತೋಮಕರ್ದಮಮ್ ॥ ೧೩॥**

ಅ: **ಹರಿನೂಪುರಜಾತೇ** = ಶ್ರೀಹರಿಯ ನೂಪುರ (ಕಾಲ್ಗೆಜ್ಜೆ) ಗಳಿಂದ ಜನಿಸಿದ; (ಹೇ) **ಗಂಗೇ !** = ಎಲೈ (ನೂಪುರ)ಗಂಗೆಯೇ !; **ಮಮ** = ನನ್ನ; **ಘನೀಭೂತ-ದುರಿತಸ್ತೋಮಕರ್ದಮಂ** = ಗಟ್ಟಿಗೊಂಡಿರುವ ಪಾಪಸಮೂಹವೆಂಬ ಕೆಸರನ್ನು; **ಪರಿಹೃತ್ಯ** = ಪರಿಹರಿಸಿ; **ಮನಃ** = ಮನಸ್ಸನ್ನು; **ಅಲಂಕುರು** = ಅಲಂಕರಿಸು.

ಶ್ರೀಹರಿಯ ಕಾಲ್ಗೆಜ್ಜೆಗಳಿಂದ ಜನಿಸಿದ ಎಲೈ ನೂಪುರಗಂಗೆಯೇ ! ನನ್ನ ಗಟ್ಟಿ-ಗೊಂಡಿರುವ ಪಾಪಸಮೂಹವೆಂಬ ಕೆಸರನ್ನು ಪರಿಹರಿಸಿ ಮನಸ್ಸನ್ನು ಅಲಂಕರಿಸು.

ವಿ: ನೂಪುರಗಂಗೆಯು ಜಲರೂಪಳಾದ್ದರಿಂದ 'ಪಾಪವೆಂಬ ಕೆಸರನ್ನು ತೊಳೆಯಲಿ' ಎಂದೂ, ಅಲಂಕಾರಭೂತವಾದ ನೂಪುರದಿಂದ ಜನಿಸಿದವಳಾದ್ದರಿಂದ 'ಮನಸ್ಸನ್ನು ಅಲಂಕರಿಸಲಿ' ಎಂದೂ ಪ್ರಾರ್ಥಿಸಿರುವರು. ಪಾಪವನ್ನು ಪರಿಹರಿಸಿ ಮನಃಶುದ್ಧಿಯನ್ನು ಕರುಣಿಸು ಎಂದು ಭಾವ.[೧]

---

೧. ನೂಪುರಲಕ್ಷಣಾಲಂಕಾರಾಜ್ಜಾತಾಯಾಸ್ತವ ಮನೋಽಲಂಕರಣಂ ಯುಕ್ತಂ ।
ಜಲಪ್ರವಾಹರೂಪಯಾಸ್ತವ ಪಾಪಪಂಕಪ್ರಕ್ಷಾಲನಮಪಿ ಯುಕ್ತಮಿತಿ ದ್ವೇಧಾಽಪಿ ವರ್ಣನಂ ।
ಪಾಪಂ ಪರಿಹೃತ್ಯ ಮನಃಶುದ್ಧಿಂ ಕುರ್ವಿತಿ ತಾತ್ಪರ್ಯಾರ್ಥಃ ॥ -ವ್ಯಾ

## ದರ್ಭಶಯನ (ಕ್ಷೇತ್ರ)

**ಯತ್ ಪ್ರಾಗ್ಜಘಾನ ತೃಣಮಪ್ಯಸ್ತ್ರೀಭೂಯಾಪರಾಧಿನಮ್ ।**
**ದಯಾಲುರಬ್ಧೌ ತೇನಾಭೂದ್ದರ್ಭಶಾಯೀಹ ರಾಘವಃ ॥ ೧೪ ॥**

ಅ: ಪ್ರಾಕ್ = ಹಿಂದೆ; ಅಪರಾಧಿನಂ = (ಸೀತೆಗೆ) ಅಪರಾಧವೆಸಗಿದ (ಕುರಂಗನೆಂಬ ಅಸುರನನ್ನು); ತೃಣಂ ಅಪಿ = (ಶ್ರೀರಾಮಚಂದ್ರನು ಪ್ರಯೋಗಿಸಿದ) ಹುಲ್ಲು ಕಡ್ಡಿಯೂ ಸಹ; ಅಸ್ತ್ರೀಭೂಯ = ಅಸ್ತ್ರವಾಗಿ; ಜಘಾನ = ಸಂಹರಿಸಿತು; ಯತ್ ತೇನ= ಆ ಕಾರಣದಿಂದಾಗಿ; ಅಬ್ಧೌ = ಸಮುದ್ರರಾಜನ ವಿಷಯದಲ್ಲಿ; ದಯಾಲುಃ = ಕೃಪಾಲುವಾದ; ರಾಘವಃ = ಶ್ರೀರಾಮನು; ಇಹ = ಇಲ್ಲಿ; ದರ್ಭಶಾಯೀ = ದರ್ಭಶಯನನಾಗಿ; ಅಭೂತ್ = ಆದನು.(ಉತ್ಪ್ರೇಕ್ಷಾಲಂಕಾರಃ)

**ಹಿಂದೆ, ಅಪಚಾರವೆಸಗಿದ ಅಸುರನನ್ನು ಶ್ರೀರಾಮಚಂದ್ರನು ಪ್ರಯೋಗಿಸಿದ ಹುಲ್ಲುಕಡ್ಡಿಯೂ ಸಹ ಅಸ್ತ್ರವಾಗಿ ಸಂಹರಿಸಿತು; ಅದಕ್ಕಾಗಿ ಸಮುದ್ರದಮೇಲೆ ಕರುಣೆ ತೋರಿದ ಅವನು ಇಲ್ಲಿ ದರ್ಭಶಯನನಾಗಿರುವನು.**

ವಿ: ೧. ಶ್ರೀರಾಮದೇವರು ಸೀತಾಲಕ್ಷ್ಮಣಸಮೇತರಾಗಿ ವನವಾಸಕಾಲದಲ್ಲಿ ಚಿತ್ರಕೂಟ-ದಲ್ಲಿದ್ದಾಗ 'ಜಯಂತ' ವಾಯಸದಲ್ಲಿ ಆವಿಷ್ಟನಾಗಿ ಸೀತಾದೇವಿಯನ್ನು ಕೆಣಕಲು ಬಂದ 'ಕುರಂಗ'ನೆಂಬ ಅಸುರನನ್ನು ಒಂದು ಹುಲ್ಲುಕಡ್ಡಿಯನ್ನು ಪ್ರಯೋಗಿಸಿ ಸಂಹರಿಸಿದ ಕಥೆ ರಾಮಾಯಣ ಸುಂದರಕಾಂಡದಲ್ಲೂ ಮಹಾಭಾರತತಾತ್ಪರ್ಯನಿರ್ಣಯದ ಐದನೇ ಅಧ್ಯಾಯದಲ್ಲೂ (೫/೯-೧೬) [1]ಬಂದಿದೆ. ಈಗಲೂ ದಾರಿ ಕೊಡದೆ ಶ್ರೀರಾಮದೇವರಿಗೆ ಅಪರಾಧಿಯಾಗಿರುವ ಸಮುದ್ರವನ್ನು ಶಿಕ್ಷಿಸಲು ಹಿಂದಿನ ಪ್ರಸಂಗದ ಸ್ಫೂರ್ತಿಯಿಂದ ಅಲ್ಲಿದ್ದ ತೃಣರಾಜವಾದ ದರ್ಭೆಗಳು ತಾವಾಗಿಯೇ ನಿಗ್ರಹಿಸಲು ಹೊರಡಬಹುದು ಎಂಬ ಯೋಚನೆಯಿಂದಲೋ ಎಂಬಂತೆ ಶ್ರೀರಾಮದೇವರು ಅವುಗಳ ಮೇಲೆ ಮಲಗಿಬಿಟ್ಟಿರುವರು ಎಂದು ಶ್ರೀವಾದಿರಾಜರು [2]ಉತ್ಪ್ರೇಕ್ಷಿಸಿರುವರು.

---

೧. ಸಂಪ್ರಾಪ್ಯ ದಕ್ಷಿಣಮಪಾಂನಿಧಿಮತ್ರ ದೇವಃ
ಶಿಶ್ಯೇ ಜಗದ್ಗುರುತಮೋಽಪ್ಯವಿಷಹ್ಯಶಕ್ತಿಃ ।
ಅಗ್ರೇ ಹಿ ಮಾರ್ದವಮನುಪ್ರಥಯನ್ ಸ ಧರ್ಮಂ
ಪಂಥಾನಮರ್ಥಿತುಮಪಾಂಪತಿತಃ ಪ್ರತೀತಃ ॥ -ಮ.ಭಾ.ತಾ.ನಿ.(೮/೨)

೨. ರಾಘವೋ ಮಾರ್ಗಪ್ರದಾನಾಯ ಸಮುದ್ರಮುದ್ದಿಶ್ಯ ತಪಃಕರ್ತುಂ ದರ್ಭಶಯನೋ ಜಾತ ಇತಿ ನ । ಪ್ರಮಾಣವಿರುದ್ಧತ್ವಾತ್ । ಕಿಂತು ಪ್ರಾಕ್ ತೃಣಮಪಿ ಅಸ್ತ್ರೀಭೂಯ ಕಾಕಾಸುರಂ ಜಘಾನ । ತಥಾ ತೃಣರಾಜತ್ವಾದಿಮೇ ದರ್ಭಾಃ ಸಕೃತ್ ಸ್ವಜಾತಾವಜ್ಞಾಯಾ ಜಾತತ್ವಾತ್ ಪುನರಾಜ್ಞಾಮನಾಕಾಂಕ್ಷಮಾಣಾಃ ಸ್ವಯಮೇವ ಗತ್ವಾ ಮಾರ್ಗಾಪ್ರದಾನಲಕ್ಷಣಾಪರಾಧಿನಂ ಸಮುದ್ರಂ ಹನಿಷ್ಯಂತೀತಿ ಸಮುದ್ರೋಪರಿ ದಯಯಾ ದರ್ಭಾನಾಸ್ತೀರ್ಯ ತದುಪರಿ ಶಯನಂ

೨. ಇಲ್ಲಿಯ ಉತ್ಪ್ರೇಕ್ಷೆಯಲ್ಲಿ ತೃಣಗಳಿಗಿರುವ ಶ್ರೀರಾಮಕಾರ್ಯಸಾಧನಪ್ರಜ್ಞೆ ಮತ್ತು ಶ್ರೀರಾಮದೇವರ ಅಪಾರ ಭಕ್ತವಾತ್ಸಲ್ಯಗಳು ಚಿತ್ರಿತವಾಗಿವೆ. ಶ್ರೀರಾಮದೇವರು ನಿಶ್ಚಿತವಾಗಿಯೂ ಸಮುದ್ರನಿಂದ ದಾರಿ ಕೇಳುವ ತಾತ್ಪರ್ಯ ಹೊಂದಿಲ್ಲ ಎಂಬ ಶಾಸ್ತ್ರತತ್ತ್ವವು ಇಲ್ಲಿಯ ಮುಖ್ಯ ತಾತ್ಪರ್ಯವಾಗಿದೆ.

೩. ತಮಿಳುನಾಡಿನ ರಾಮನಾಡ್ ಎಂಬಲ್ಲಿಂದ ಸುಮಾರು ೧೦ ಕಿ.ಮೀ. ದೂರದಲ್ಲಿ ಈ ದರ್ಭಶಯನ ಕ್ಷೇತ್ರವಿದೆ. ಶ್ರೀರಾಮದೇವರು ಸಮುದ್ರರಾಜನಿಂದ ದಾರಿಯನ್ನು ಕೇಳಲೋ ಎಂಬಂತೆ ಮೂರುದಿನಗಳಕಾಲ ಇಲ್ಲಿ ದರ್ಭಶಯನನಾಗಿ ಮಲಗಿದ್ದರು ಎಂದು ರಾಮಾಯಣ ಕಥೆಯಿದೆ. ವಿಭೀಷಣನು ಶರಣಾಗತಿ ಬಯಸಿ ಇಲ್ಲಿ ಶ್ರೀರಾಮದೇವರ ಬಳಿ ಬಂದಿದ್ದು ಸಹ ಇದೇ ಕ್ಷೇತ್ರದಲ್ಲಿ; ಇಲ್ಲಿ ಶ್ರೀರಾಮದೇವರ ದ್ವಿಭುಜಮೂರ್ತಿ ಉಂಟು; ಆಗ ಸಮುದ್ರತೀರವಾಗಿದ್ದ ಈ ಸ್ಥಳ ಇಂದು ಸಮುದ್ರದಿಂದ ಸುಮಾರು ೫ ಕಿ.ಮೀ. ದೂರದಲ್ಲಿದೆ.

೪. ಈ ರಾಮನಾಥಪುರದ ಮತ್ತೊಂದು ದಿಕ್ಕಿನಲ್ಲಿ ಸುಮಾರು ೨೦ ಕಿ.ಮೀ. ದೂರದಲ್ಲಿ ಶ್ರೀರಾಮದೇವರು ಸೇತುನಿರ್ಮಾಣಕಾಲದಲ್ಲಿ ಲೋಕಶಿಕ್ಷಣಕ್ಕಾಗಿ ಪ್ರತಿಷ್ಠಾಪಿಸಿರುವ ನವಗ್ರಹ ಸ್ತಂಭಗಳಿರುವ 'ನವಪಾಷಾಣ'(ದೇವೀಪಟ್ಟಣ) ಕ್ಷೇತ್ರವಿದೆ. ಇದನ್ನು 'ಸೇತುಮೂಲ' ಎಂದೂ ಕರೆಯುವರು.

## ಶ್ರೀರಾಮಸೇತು

**ಸೀತಾಮಾತ್ಮಸುತಾಂ ಖಲೈರಪಹೃತಾಮಾನೇಷ್ಯತಃ ಸ್ವಾಂ ಪುರೀಂ**
**ಜಾಮಾತುರ್ಹಿತಕಾರಿಣೀವ ಧರಣೀ ವಾರ್ಧ್ಯಂಬುವೃದ್ಧಾಕೃತಿಃ ।**
**ಭೂಭಾರಕ್ಷಪಣೋದ್ಯತಸ್ಯ ಸಚಿವೀಭೂತಾ ಮಹೀಧ್ರಾ ಇವ**
**ಶ್ರೀರಾಮಸ್ಯ ಭಟೈಃ ಕೃತೋ ವಿಜಯತೇ ಸೇತುರ್ವಿಜೇತುರ್ದ್ವಿಷಾಮ್ ॥ ೧೫ ॥**

ಅ: ದ್ವಿಷಾಂ = ಶತ್ರುಗಳನ್ನು; ವಿಜೇತುಃ = ಜಯಿಸುವ ಸ್ವಭಾವದ; ಶ್ರೀರಾಮಸ್ಯ = ಶ್ರೀರಾಮನ; ಭಟೈಃ = (ಭಟರಾದ) ಕಪಿಗಳಿಂದ; ಕೃತಃ = ನಿರ್ಮಿಸಲ್ಪಟ್ಟ; ಸೇತುಃ = ಸೇತುವು; ಖಲೈಃ = (ದುಷ್ಟರಾದ) ರಾಕ್ಷಸರುಗಳಿಂದ; ಅಪಹೃತಾಂ = ಅಪಹೃತಳಾದ; ಆತ್ಮಸುತಾಂ = ತನ್ನ ಮಗಳಾದ; ಸೀತಾಂ = ಸೀತೆಯನ್ನು; ಸ್ವಾಂ = ತನ್ನ; ಪುರೀಂ = ಪಟ್ಟಣಕ್ಕೆ (ಅಯೋಧ್ಯೆಗೆ); ಆನೇಷ್ಯತಃ = ಮರಳಿತರಲಿರುವ; ಜಾಮಾತುಃ = (ತನ್ನ) ಅಳಿಯನಾದ ಶ್ರೀರಾಮನಿಗೆ; ಹಿತಕಾರಿಣೀ = ಹಿತವನ್ನುಂಟುಮಾಡುವವಳಾಗಿ; ವಾರ್ಧ್ಯಂಬುವೃದ್ಧಾಕೃತಿಃ = ಸಮುದ್ರಜಲದಲ್ಲಿ ಬೆಳೆದು ನಿಂತರೂಪದ; ಧರಣೀ ಇವ = ಭೂಮಿಯೋ ಎಂಬಂತೆ; ಭೂಭಾರಕ್ಷಪಣೋದ್ಯತಸ್ಯ = ಭೂಮಿಗೆ ಭಾರಭೂತರಾದ ದೈತ್ಯರನ್ನು ನಾಶಮಾಡಲು

---

ಕೃತವಾನ್ । ಅತ ಏವ ದರ್ಭಶಯನೋ ಜಾತ ಇತಿ ಭಾವಃ । ಉತ್ಪ್ರೇಕ್ಷಾಲಂಕಾರಃ । -ವ್ಯಾ

ಹೊರಟಿರುವ ಶ್ರೀರಾಮನಿಗೆ; ಸಚಿವೀಭೂತಾಃ = ಸಹಾಯಭೂತರಾದ; ಮಹೀಧ್ರಾ ಇವ = ಪರ್ವತಗಳೋ ಎಂಬಂತೆ; ವಿಜಯತೇ = ಕಂಗೊಳಿಸುತ್ತಿದೆ (ಉತ್ಪ್ರೇಕ್ಷಾಲಂಕಾರ).

ದುಷ್ಟನು ಅಪಹರಿಸಿದ ತನ್ನ ಮಗಳಾದ ಸೀತೆಯನ್ನು ತನ್ನ ಪಟ್ಟಣಕ್ಕೆ ಮರಳಿ ತರಹೊರಟ ತನ್ನ ಅಳಿಯ ಶ್ರೀರಾಮನಿಗೆ ಹಿತವನ್ನು ಮಾಡಲೆಂದು ಸಮುದ್ರದ ಮಧ್ಯೆ ಎದ್ದು ಬಂದ ಭೂಮಿಯೋ ಎಂಬಂತೆ, ಭೂಮಿಗೆ ಭಾರಭೂತರಾದ ದೈತ್ಯರನ್ನು ನಾಶಮಾಡಲು ಹೊರಟಿರುವ ಶ್ರೀರಾಮನಿಗೆ ಸಹಾಯವಾಗಲೆಂದು ಮೇಲೆದ್ದು ಬಂದ ಪರ್ವತಗಳೋ ಎಂಬಂತೆ, ಶತ್ರುಜೇತಾರನಾದ ಶ್ರೀರಾಮನ ಭಟರಾದ ಕಪಿಗಳು ನಿರ್ಮಿಸಿದ ಈ ಸೇತು ಕಂಗೊಳಿಸುತ್ತಿದೆ.

ವಿ: ೧. ಶ್ರೀರಾಮಸೇತುವನ್ನು ಶ್ರೀಮಧ್ವಾಚಾರ್ಯರು ಸಂದರ್ಶಿಸಿ ಅಲ್ಲಿ ಸ್ನಾನ ಮಾಡಿದ್ದ ಉಲ್ಲೇಖ ಸುಮಧ್ವವಿಜಯದಲ್ಲಿದೆ (೫/೪೨).

೨. ಶ್ರೀರಾಮಭೃತ್ಯರಾದ ಕಪಿಗಳಿಂದ ನಿರ್ಮಿತವಾದ 'ಶ್ರೀರಾಮಸೇತು'ವು ದುಷ್ಟರಿಂದ ಅಪಹೃತಳಾದ ತನ್ನ ಮಗಳು ಜಾನಕಿಯನ್ನು ಮರಳಿ ತರಲು ಹೊರಟ ಅಳಿಯನಾದ ಶ್ರೀರಾಮನಿಗೆ ನೆರವು ನೀಡಲೆಂದು ಸಮುದ್ರ ಮಧ್ಯೆ ಬೆಳೆದು ನಿಂತ ಭೂಮಿಯೋ ಎಂಬಂತೆಯೂ, ಭೂಭಾರವನ್ನು ಪರಿಹರಿಸಹೊರಟ ಶ್ರೀರಾಮದೇವರಿಗೆ ಸಹಾಯವಾಗಲೆಂದು ಉದ್ಯುಕ್ತ-ವಾಗಿರುವ ಪರ್ವತ (ಭೂಧರ)ಗಳೋ ಎಂಬಂತೆಯೂ ವಿರಾಜಿಸುತ್ತಿದೆ ಎಂದು ಭಾವ.

೩. ಶ್ರೀವಾದಿರಾಜರು ಶ್ರೀರಾಮಸೇತುವನ್ನು ಭೂಮಿಯೆಂದೂ, ಪರ್ವತಗಳೆಂದೂ ಉತ್ಪ್ರೇಕ್ಷಿಸಿರುವರು. ಶ್ರೀಸೀತಾದೇವಿಯರು ಜನಕರಾಜನ ಯಜ್ಞಭೂಮಿಯಲ್ಲಿ ಜನಿಸಿದವ-ರಾದ್ದರಿಂದ 'ಭೂಮಿಜಾ' ಎಂದೂ ಪ್ರಸಿದ್ಧರಾಗಿರುವರು.

೪. ಭೂಮಿಯೆಂದು ಉತ್ಪ್ರೇಕ್ಷಿಸಲು ರಾಮಸೇತುವಿನ ವೈಶಾಲ್ಯವೂ, ಭೂಧರವೆಂದು ಉತ್ಪ್ರೇಕ್ಷಿಸಲು ಅದರ ಎತ್ತರವೂ ಮೂಲವಾಗಿವೆ ಎಂದೂ ತಿಳಿಯಬೇಕು. ತನ್ನ ಅಳಿಯನೆಂಬ ಕಾರಣದಿಂದ ಭೂಮಿಯೂ ತಾವು ಧರಿಸುವ ಭೂಮಿಯ ಭಾರವನ್ನು ಇಳಿಸ ಹೊರಟವನು ಎಂಬ ಕಾರಣದಿಂದ ಭೂಧರವಾದ ಪರ್ವತಗಳೂ ಶ್ರೀರಾಮನಿಗೆ ಸೇವೆ ಸಲ್ಲಿಸುವುದು ಯುಕ್ತವಾಗಿದೆ.

ಪ್ರಗೀತಜಾನಕೀನಾಥಪ್ರತಾಪಸ್ವರ್ಣವೈಭವೇ ।
ಪ್ರತ್ಯಯಾರ್ಥಮಯಂ ಸೇತುರ್ನಿಕಷಾಶ್ಮಾಯತೇ ನೃಣಾಮ್ ॥ ೧೬ ॥

ಅ: ಅಯಂ = ಈ; ಸೇತುಃ = ಸೇತುವು; ಪ್ರಗೀತಜಾನಕೀನಾಥಪ್ರತಾಪಸ್ವರ್ಣ-ವೈಭವೇ = (ಜನರಿಂದ) ಹಾಡಲ್ಪಡುವ ಜಾನಕೀಕಾಂತನಾದ ಶ್ರೀರಾಮನ ಶೌರ್ಯವೆಂಬ ಚಿನ್ನದ ಹಿರಿಮೆಯನ್ನು ಸಾರುವ ವಿಷಯದಲ್ಲಿ; ನೃಣಾಂ = ಮನುಷ್ಯರಿಗೆ; ಪ್ರತ್ಯಯಾರ್ಥಂ = ವಿಶ್ವಾಸ ಹುಟ್ಟಿಸಲೆಂದು (ಇರುವ); [೧]ನಿಕಷಾಶ್ಮಾಯತೇ = ಒರೆಗಲ್ಲಿನಂತಿದೆ.

---

೧. ಸುವರ್ಣವರ್ಣನಿಶ್ಚಾಯಕೋಽಶ್ಮಾ ನಿಕಷಾಶ್ಮೇತ್ಯುಚ್ಯತೇ । ... ಯಥಾ ನಿಕಷಾಶ್ಮಾ ಸುವರ್ಣನಿಶ್ಚಾ-

ಈ ಸೇತುವು ವಿಖ್ಯಾತನಾದ ಜಾನಕೀಪತಿಯಾದ ಶ್ರೀರಾಮನ ಪರಾಕ್ರಮವೆಂಬ ಸುವರ್ಣದ ವೈಭವವನ್ನು ಮನುಷ್ಯರಿಗೆ ದೃಢಪಡಿಸುವ ಒರೆಗಲ್ಲಿನಂತಿದೆ.

ವಿ: ಒರೆಗಲ್ಲಿನಿಂದ ಚಿನ್ನದ ಯೋಗ್ಯತೆಯು ತಿಳಿಯುವಂತೆ, ಈ ಸೇತುವಿನಿಂದ ಶ್ರೀರಾಮನ ಶೌರ್ಯದ ವೈಭವವು ವ್ಯಕ್ತವಾಗುತ್ತದೆ ಎಂದು ಭಾವ.[೧]

**ನ ಮೂರ್ಛತಿ ಶಿಲೋಚ್ಚಯೇ ಪವನವೇಗ ಇತ್ಯಜ್ಞವಾಕ್**
**ಯತೋ ಹನುಮತಾऽऽಹೃತಾಃ ಸುಬಹವೋ ಮರುತ್ಸೂನುನಾ ।**
**ಗಭೀರತರವಾರಿಧಿಸ್ಥಗನಚುಂಚವಃ ಪರ್ವತಾಃ**
**ಜಯಂತಿ ಕೃತಸೇತವಃ ಕ್ಷಪಣಹೇತವೋ ರಕ್ಷಸಾಮ್ ॥ ೧೭ ॥**

ಅ: ಪವನವೇಗಃ = ವಾಯುವಿನ ವೇಗವು; ಶಿಲೋಚ್ಚಯೇ = ಪರ್ವತದಲ್ಲಿ; ನ ಮೂರ್ಛತಿ = ಸಮರ್ಥವಾಗಲಾರದು; ಇತಿ (ಯಾ ವಾಗ್) = ಎಂಬ ಮಾತು; ಅಜ್ಞವಾಕ್= ತಿಳುವಳಿಕೆ ಇಲ್ಲದವರ ಮಾತು; ಯತಃ = ಏಕೆಂದರೆ; ಮರುತ್ಸೂನುನಾ = ವಾಯುಪುತ್ರನಾದ; ಹನುಮತಾ = ಹನುಮಂತನಿಂದ; ಆಹೃತಾಃ =(ಕಿತ್ತು) ತರಲ್ಪಟ್ಟಂತಹ; ಗಭೀರತರವಾರಿಧಿ ಸ್ಥಗನಚುಂಚವಃ = ಅತ್ಯಂತ ಆಳವಾದ ಸಮುದ್ರವನ್ನೂ ಆವರಿಸುವ ಕಾರ್ಯದಲ್ಲಿ ಸಮರ್ಥವಾದವುಗಳೆಂದು ಪ್ರಸಿದ್ಧವಾದ; ಕೃತಸೇತವಃ = ಸೇತುವೆಯಾಗಿ ಮಾಡಲ್ಪಟ್ಟಿರುವ; ರಕ್ಷಸಾಂ = ರಾಕ್ಷಸರುಗಳ; ಕ್ಷಪಣಹೇತವಃ = ನಾಶಕ್ಕೆ ಕಾರಣವಾಗಿರುವ; ಸುಬಹವಃ = ತುಂಬಾ ಹೆಚ್ಚು ಸಂಖ್ಯೆಯಲ್ಲಿರುವ; ಪರ್ವತಾಃ = ಪರ್ವತಗಳು; ಜಯಂತಿ = ಉತ್ಕೃಷ್ಟವಾಗಿವೆ.

'ವಾಯುವಿನ ವೇಗ ಪರ್ವತದಲ್ಲಿ ನಡೆಯದು' ಎಂಬುದು ಅವಿವೇಕಿಗಳ ಮಾತು; ಏಕೆಂದರೆ ವಾಯುಪುತ್ರನಾದ ಹನುಮಂತ ಕಿತ್ತು ತಂದ ಪರ್ವತಗಳು ಅತ್ಯಂತ ಆಳವಾದ ಸಮುದ್ರವನ್ನೂ ಆವರಿಸುವಲ್ಲಿ ಸಮರ್ಥವಾಗಿ, ರಕ್ಕಸರ ವಿನಾಶಕ್ಕೆ ಕಾರಣವಾಗಿ, ಅಪಾರ ಸಂಖ್ಯೆಯಲ್ಲಿ ಕಂಗೊಳಿಸುತ್ತಿವೆ.

ವಿ: ೧. ಕಾಳಿದಾಸನು [೨]ರಘುವಂಶದಲ್ಲಿ ವಾಯುವಿನ ವೇಗವು ಮರಗಳನ್ನು ಬುಡಮೇಲು ಮಾಡುವುದಾದರೂ ಪರ್ವತಗಳ ವಿಷಯದಲ್ಲಿ ಮಾತ್ರ ಸಮರ್ಥವಾಗುವುದಿಲ್ಲ ಎಂಬುದಾಗಿ ಹೇಳಿರುವನು. ಇದನ್ನು ಶ್ರೀವಾದಿರಾಜರು 'ತಿಳಿಯದವರ ಮಾತು' ಎಂಬುದಾಗಿ ಇಲ್ಲಿ

---

ಯಕೋ ಭವತಿ ತಥಾ ಸೇತುಃ ಶ್ರೀರಾಮಪ್ರತಾಪನಿಶ್ಚಾಯಕೋ ಭವತೀತಿ ಭಾವಃ। -ವ್ಯಾಖ್ಯಾನ

೧. ಬಧ್ನೀಹಿ ಸೇತುಮಿಹ ತೇ ಯಶಸೋ ವಿತತ್ಯೈ ।
ಗಾಯಂತಿ ದಿಗ್ವಿಜಯಿನೋ ಯಮುಪೇತ್ಯ ಭೂಪಾಃ ॥ – ಮ.ಭಾ.ತಾ.ನಿ. (೮/೧೨)

೨. ಅಲಂ ಮಹೀಪಾಲ ತವ ಶ್ರಮೇಣ ಪ್ರಯುಕ್ತಮಪ್ಯಸ್ತ್ರಮಿತೋ ವೃಥಾ ಸ್ಯಾತ್ ।
ನ ಪಾದಪೋನ್ಮೂಲನಶಕ್ತಿರಂಹಃ ಶಿಲೋಚ್ಚಯೇ ಮೂರ್ಛತಿ ಮಾರುತಸ್ಯ ॥
– ರಘುವಂಶ(೨/೩೪)

ನಿರಾಕರಿಸಿರುವರು. [೧]ಏಕೆಂದರೆ ವಾಯುಪುತ್ರನಾದ ಹನುಮಂತನಿಂದ ಕಿತ್ತು ತರಲ್ಪಟ್ಟ ಬಹುಸಂಖ್ಯಾತ ಪರ್ವತಗಳೇ ರಾಮಸೇತುವಾಗಿ, ರಾಕ್ಷಸರ ಸಂಹಾರಕ್ಕೆ ಕಾರಣವಾಗಿವೆ. ವಾಯುಪುತ್ರನಾದ ಹನುಮಂತನೇ ಹೀಗೆ ಪರ್ವತಗಳನ್ನು ಕಿತ್ತು ತಂದು ಹಾಕಿರುವಾಗ ಅವರ ತಂದೆಯಾದ ವಾಯುದೇವರಿಗೆ ಪರ್ವತಗಳನ್ನು ಕಿತ್ತು ಹಾಕುವ ಸಾಮರ್ಥ್ಯವು ಎಷ್ಟೂ ಇಲ್ಲ ಎಂಬ ಮಾತು ಹೇಗೆ ತಾನೇ ತಿಳುವಳಿಕೆಯಿಲ್ಲದವರ ಮಾತಾಗಲಾರದು ಎಂದು ಭಾವ.

೨. ವಾಯುಜೀವೋತ್ತಮತ್ವವು ಶ್ರೀಹರಿಸರ್ವೋತ್ತಮತ್ವದಂತೆ ಮುಖ್ಯ ಪ್ರಮೇಯವಾದ್ದರಿಂದ ಅದಕ್ಕೆ ಭಂಗತರುವ ಕಾಳಿದಾಸನ ಮಾತನ್ನು ಶ್ರೀವಾದಿರಾಜರು ಇಲ್ಲಿ 'ಅಜ್ಞವಾಕ್' ಎಂದು ನಿರಾಕರಿಸಿರುವರು.

೩. ನೂರು ಯೋಜನ ಎತ್ತರ ಮತ್ತು ವೈಶಾಲ್ಯದ ಸಂಜೀವನಪರ್ವತವನ್ನು ಸಹ ಐವತ್ತುಸಾವಿರಯೋಜನ ದೂರದಿಂದ ಒಂದೇ ಕೈಯಿಂದ ತಂದ ಹನುಮಂತನ ಪರಾಕ್ರಮವನ್ನು ಸಹ ಈ ಪ್ರಸಂಗದಲ್ಲಿ ಸ್ಮರಿಸಬಹುದು.

**ಪಾರಾವಾರಾಖ್ಯರಮ್ಯೋಪನಿಷದಿ ವಿಲಸತ್ಸೇತವೇ ಸೂತ್ರಮಾತ್ರೇ**
**ರಾಮವ್ಯಾಸೇನ ಸೇನಾನುಗತಿಫಲಕೃತೇ ದರ್ಶಿತೇ ರಾಮಭೃತ್ಯಃ ।**
**ನಾನಾಸ್ಥಾನೋಪನೀತೈರ್ಹನುಮದಭಿನವಶ್ರೀಮದಾನಂದತೀರ್ಥ-**
**ಸ್ತೇನೇಽಮಾನಾದ್ರಿಮಾನೈಸ್ತಮಿಮಮತಿದೃಢಂ ರಮ್ಯಮಾತ್ಮೀಯಗಮ್ಯಮ್॥ ೧೮ ॥**

ಅ: **ಪಾರಾವಾರಾಖ್ಯರಮ್ಯೋಪನಿಷದಿ** = ಸಮುದ್ರವೆಂಬ ರಮ್ಯವಾದ ಉಪನಿಷತ್ತಿನಲ್ಲಿ; **ಸೇನಾನುಗತಿಫಲಕೃತೇ** = ಕಪಿಸೈನ್ಯದ ಗಮನವೆಂಬ ಕಾರ್ಯವನ್ನು ಸಾಧಿಸಲೋಸುಗ;(ವಿಷ್ಣುಭಕ್ತಿಯುಳ್ಳ ಸಜ್ಜನರ ಯಥಾರ್ಥಜ್ಞಾನಕ್ಕೋಸ್ಕರ); **ವಿಲಸತ್ಸೇತವೇ** = ಶೋಭಿಸುವ ಸೇತುವೆಗೋಸ್ಕರ(ಉಪನಿಷತ್ತಿನ ವಾಕ್ಯಕ್ಕೆ ಇದೇ ಅರ್ಥವೆಂಬ ನಿರ್ಣಯಕ್ಕೋಸ್ಕರ); **ರಾಮವ್ಯಾಸೇನ** = ಶ್ರೀರಾಮನೆಂಬ ವೇದವ್ಯಾಸರಿಂದ; **ಸೂತ್ರಮಾತ್ರೇ** = ಬ್ರಹ್ಮಸೂತ್ರಗಳ ನಿರ್ಮಾಣದಂತಹ ಸೂಚನೆಯು ಮಾತ್ರವೇ; **ದರ್ಶಿತೇ (ಸತಿ)** = ತೋರಿಸಲ್ಪಡಲು; **ರಾಮಭೃತ್ಯಃ** = ಶ್ರೀರಾಮಸೇವಕರಾದ; **ಹನುಮದಭಿನವಶ್ರೀಮದಾನಂದತೀರ್ಥಃ** = ಹನುಮಂತದೇವರೆಂಬ ಶ್ರೀಮದಾನಂದತೀರ್ಥರು; **ನಾನಾಸ್ಥಾನೋಪನೀತೈಃ** = ವಿವಿಧಸ್ಥಳಗಳಿಂದ (ಅನೇಕ ಮೂಲಗ್ರಂಥಗಳಿಂದ) ತರಲ್ಪಟ್ಟ; **ಅಮಾನಾದ್ರಿಮಾನೈಃ** = ಅಪರಿಮಿತವಾದ ಪರ್ವತದಂತಹ ಪ್ರಮಾಣಗಳಿಂದ; **ಅತಿದೃಢಂ** = ಯಾರಿಂದಲೂ ದೂಷಿಸಲಾಗದಂತಹ; **ಆತ್ಮೀಯಗಮ್ಯಂ** = ತನ್ನವರಾದ ವೈಷ್ಣವರಿಂದ ಮಾತ್ರವೇ ತಿಳಿಯುವಂತಹ; **ರಮ್ಯಂ** = ಮನೋಹರವಾದ; **ತಮ್ ಇಮಂ** =

---

೧. ಯತೋ ವಾಯುನಾ ಹನೂಮತಾ ಪರ್ವತಾಃ ಉನ್ಮೂಲಿತಾಃ ಕಿಲ । ಕಿಮು ವಕ್ತವ್ಯಂ ತತ್ಪಿತುರ್ಮಾರುತ ಸ್ಯೇತ್ಯತೋ 'ನ ಮೂರ್ಛತಿ' ಶಿಲೋಚ್ಚಯೇ ಪವನವೇಗ ಇತ್ಯುಕ್ತಿರಜ್ಞೋಕ್ತಿರಿತಿ ಭಾವಃ । -ವ್ಯಾ

ಭಾಷ್ಯಾನುವ್ಯಾಖ್ಯಾನಾದಿರೂಪವಾದ ಗ್ರಂಥಸಮೂಹವನ್ನು; ತೇನೇ = ನಿರ್ಮಿಸಿದರು (ರೂಪಕಸಮಾಸೋಕ್ತಿಗಳ ಸಂಕರ ಅಲಂಕಾರ).

ಉಪನಿಷತ್ತುಗಳೇ ರಮ್ಯವಾದ ಸಾಗರಗಳು; ಶ್ರೀರಾಮರೂಪದ ಶ್ರೀಹರಿಯೇ ಶ್ರೀವೇದವ್ಯಾಸರು; ಅವನ ಸೂಚನೆಯೇ ಸೂತ್ರಗಳು; ವೈಷ್ಣವಸೇನೆಯ ಸಂಚಾರವೇ ಇದರ ಗುರಿ; ವಿವಿಧ ಗ್ರಂಥಗಳಿಂದ ಉಲ್ಲೇಖಿಸಲ್ಪಟ್ಟಿರುವ ಪ್ರಮಾಣಗಳೇ ಪರ್ವತಗಳು; ತನ್ನವರಿಗೆ ಮಾತ್ರವೇ ಎಟಕುವ ಸರ್ವಮೂಲ-ರೂಪವಾದ ರಮ್ಯಸೇತುವೆಯನ್ನು ಶ್ರೀರಾಮನ ಸೇವಕನಾದ ಹನುಮಂತನೇ ಆದ ಶ್ರೀಮದಾನಂದತೀರ್ಥರು ನಿರ್ಮಿಸಿದರು.

ವಿ: ೧. ಈ ಶ್ಲೋಕದಲ್ಲಿ ಸುಂದರವಾದ ರೂಪಕ ಮತ್ತು ಸಮಾಸೋಕ್ತಿಗಳೆಂಬ ಅಲಂಕಾರಗಳಿಂದ ಶ್ರೀಹನುಮಂತನು ಮಾಡಿದ ಸೇತುನಿರ್ಮಾಣಕಾರ್ಯವು ಶ್ರೀಮಧ್ವಾ-ಚಾರ್ಯರೂಪದಿಂದ ಅವರೇ ಮಾಡಿದ ಭಾಷ್ಯಾದಿಗ್ರಂಥನಿರ್ಮಾಣಕಾರ್ಯದಂತೆ ಅನುಪಮ-ವಾಗಿತ್ತು ಎಂದು ಶ್ರೀವಾದಿರಾಜರು ವರ್ಣಿಸಿರುವರು.

೨. ಸಮುದ್ರವೇ ಉಪನಿಷತ್ತು; ಶ್ರೀರಾಮಾಜ್ಞೆಯೇ ಶ್ರೀವ್ಯಾಸಸೂತ್ರಗಳು, ಕಪಿಸೇನೆಗಳ ಗಮನವೇ ವೈಷ್ಣವ ಜನರಿಗೆ ದೊರೆಯಬೇಕಾದ ತತ್ತ್ವಜ್ಞಾನ; ವಿವಿಧ ಪ್ರದೇಶಗಳೇ ವಿವಿಧ ಮೂಲ ಆಕರಗ್ರಂಥಗಳು, ಅಸಂಖ್ಯ ಪರ್ವತಗಳೇ ಅಸಂಖ್ಯವಾದ ಪ್ರಮಾಣಗಳು; ಸೇತು-ನಿರ್ಮಾಣವೇ ಗ್ರಂಥರಚನೆ; ಹನುಮಂತನೇ ಶ್ರೀಮಧ್ವಾಚಾರ್ಯರು; ಶ್ರೀಹನುಮನ್ನಿರ್ಮಿತವಾದ ಶ್ರೀರಾಮಸೇತುವಿನ ದರ್ಶನವು ಶ್ರೀಮಧ್ವಾಚಾರ್ಯರ ಸರ್ವಮೂಲಗ್ರಂಥರಚನೆಯನ್ನು ಸ್ಮರಣೆಗೆ ತಂದುಕೊಡುತ್ತದೆ ಎಂಬ ಇಲ್ಲಿಯ ಭಾವ ತುಂಬಾ ರಮಣೀಯವಾಗಿದೆ.

೩. ಶ್ರೀಮಧ್ವಾಚಾರ್ಯರ ಗ್ರಂಥರಚನೆಯ ಸೊಬಗನ್ನು ಸೇತುನಿರ್ಮಾಣಕಾರ್ಯದ ಹಿನ್ನೆಲೆಯಲ್ಲಿ ವರ್ಣಿಸುವ ಇಲ್ಲಿಯ ಕೌಶಲವು ತುಂಬಾ ಅಪೂರ್ವವಾದುದು.

ರಾಮಾಂಘ್ರಿರೇಣುಪ್ರೇಮ್ಣೇವ ಸೇತೋರುಭಯತೋಽಂಬುಧಿಃ ।
ಅಭ್ಯೇತಿ ಪೌನಃಪುನ್ಯೇನ ವರ್ಧಮಾನಃ ಪದೇ ಪದೇ ॥ ೧೯ ॥

ಅ: ಅಂಬುಧಿಃ = ಸಮುದ್ರವು; ರಾಮಾಂಘ್ರಿರೇಣುಪ್ರೇಮ್ಣಾ ಇವ = ಶ್ರೀರಾಮದೇವರ ಎರಡು ಪಾದಗಳಲ್ಲಿರುವ ಧೂಳಿನ ಮೇಲಿನ ಭಕ್ತಿಯಿಂದಲೋ ಎಂಬಂತೆ; ಪದೇ ಪದೇ = ಹೆಜ್ಜೆ ಹೆಜ್ಜೆಗೂ; ವರ್ಧಮಾನಃ = ಉಕ್ಕೇರುತ್ತ; ಸೇತೋಃ = ಸೇತುವಿನ; ಉಭಯತಃ = ಇಕ್ಕೆಲಗಳಲ್ಲೂ; ಪೌನಃಪುನ್ಯೇನ = ಮತ್ತೆ ಮತ್ತೆ; ಅಭ್ಯೇತಿ = ಧಾವಿಸುತ್ತಿದೆ. (ಉತ್ಪ್ರೇಕ್ಷಾಲಂಕಾರ)

ಶ್ರೀರಾಮಪಾದದ ಧೂಳಿನ ಮೇಲಿನ ಭಕ್ತಿಯಿಂದಲೋ ಎಂಬಂತೆ ಇಕ್ಕೆಲ-ಗಳಿಂದಲೂ ಈ ಸಮುದ್ರವು ಸೇತುವೆಯನ್ನು ಮತ್ತೆ ಮತ್ತೆ ಗಾಢವಾಗಿ ಅಪ್ಪಳಿಸುತ್ತಿದೆ.

ವಿ: ೧. ಶ್ರೀರಾಮಸೇತುವಿನ ಇಕ್ಕೆಲಗಳಲ್ಲೂ ನಿರಂತರ ಅಲೆಗಳಿಂದ ಅಪ್ಪಳಿಸುವ ಸಮುದ್ರವನ್ನು, ಅದು ಹಾಗೆ ಮಾಡುವುದು ಶ್ರೀರಾಮದೇವರ ಪಾದಧೂಳಿನ ಮೇಲಿನ ಭಕ್ತಿಯಿಂದಲೋ ಎಂಬಂತಿದೆ ಎಂದು ಶ್ರೀವಾದಿರಾಜರು ಉತ್ಪ್ರೇಕ್ಷಿಸಿರುವರು.

೨. ಶ್ರೀರಾಮದೇವರ ಪಾದಧೂಳಿನಿಂದ ಪವಿತ್ರವಾದ ಸೇತು ಎಂಬ ಕಾರಣಕ್ಕಾಗಿ ಸಮುದ್ರವು ಹೀಗೆ ಅದರಲ್ಲಿ ತುಂಬಾ ಪ್ರೀತಿಯನ್ನು ತೋರಿಸುತ್ತಿದೆ ಎಂದು ಭಾವ.

೩. ಯಾವುದೇ ಒಂದು ವಸ್ತುವು ಪ್ರೀತಿವಿಷಯವಾಗಲು ಅದು ಶ್ರೀಹರಿಪಾದಸಂಗಕ್ಕೆ ಪಾತ್ರವಾಗಿರಬೇಕು ಎಂಬ ಆಧ್ಯಾತ್ಮಿಕ ತತ್ತ್ವವೂ ಇಲ್ಲಿ ಸೂಚಿತವಾಗಿದೆ.[೧]

## ಶ್ರೀರಾಮದೇವರು

**ಸೀತಾಲಕ್ಷ್ಮಣಶೋಭಿಪಾರ್ಶ್ವಯುಗಲಃ ಪ್ರೀತ್ಯಾಽವನಮ್ರಾಕೃತಿಂ**
**ವಕ್ತ್ರಾಂಭೋರುಹಸಕ್ತಹಸ್ತಕಮಲಂ ಭಕ್ತಂ ಭಟಾಗ್ರೇಸರಮ್ ।**
**ಏಕಾಂತೇ ಹನುಮಂತಮುಕ್ತಿಸುಧಯಾ ಸಂತರ್ಪಯನ್ ಸಂತತಂ**
**ರಾಮಃ ಸ್ತಂಭಿತವಾರಿಧಿರ್ವಿಜಯತೇ ಧಾನುಷ್ಕಚೂಡಾಮಣಿಃ ॥ ೨೦ ॥**

ಅ: ಪ್ರೀತ್ಯಾ = ಭಕ್ತಿಯಿಂದ; ಅವನಮ್ರಾಕೃತಿಂ = ಬಾಗಿದ ಶರೀರವುಳ್ಳವನೂ; ವಕ್ತ್ರಾಂಭೋರುಹಸಕ್ತಹಸ್ತಕಮಲಂ = ಕರಕಮಲವನ್ನು ಮುಖಕಮಲದಲ್ಲಿ ಇರಿಸಿಕೊಂಡವನೂ; ಭಕ್ತಂ = ಭಕ್ತನೂ; ಭಟಾಗ್ರೇಸರಂ = ಭೃತ್ಯಶ್ರೇಷ್ಠನೂ, ಆಗಿರುವ; ಹನುಮಂತಂ = ಹನುಮಂತನನ್ನು; ಏಕಾಂತೇ = ಏಕಾಂತದಲ್ಲಿ; ಉಕ್ತಿಸುಧಯಾ = ವಚೋಽಮೃತದಿಂದ; ಸಂತತಂ = ಸದಾಕಾಲವೂ; ಸಂತರ್ಪಯನ್ = ಸಂತೋಷಪಡಿಸುತ್ತಿರುವ; ಸೀತಾಲಕ್ಷ್ಮಣಶೋಭಿಪಾರ್ಶ್ವಯುಗಲಃ = ಎರಡು ಪಾರ್ಶ್ವಗಳಲ್ಲಿ ಕ್ರಮವಾಗಿ ಸೀತೆ ಮತ್ತು ಲಕ್ಷ್ಮಣರಿಂದ ಶೋಭಿಸುತ್ತಿರುವ; ಸ್ತಂಭಿತವಾರಿಧಿಃ = ಸಮುದ್ರವನ್ನು ಸ್ತಂಭನಮಾಡಿರುವ; ಧಾನುಷ್ಕಚೂಡಾಮಣಿಃ = ಧನುರ್ಧಾರಿಗಳಲ್ಲಿ ಅಗ್ರೇಸರನಾಗಿರುವ; ರಾಮಃ = ಶ್ರೀರಾಮನು; ವಿಜಯತೇ = ಸರ್ವೋತ್ಕೃಷ್ಟನಾಗಿರುವನು.

ಇಕ್ಕೆಲಗಳಲ್ಲಿ ಶೋಭಿಸುವ ಸೀತೆ ಲಕ್ಷ್ಮಣರು; ಮುಂದೆ ಮುಖಕಮಲದ ಬಳಿ ಕರಕಮಲ ಇರಿಸಿಕೊಂಡಿರುವ ಹನುಮಂತ; ಧನುರ್ಧಾರಿಗಳಲ್ಲಿ ಶಿರೋಮಣಿ ಎನ್ನಿಸಿದ ಇಂತಹ ಶ್ರೀರಾಮನು ಹನುಮಂತನಿಗೆ ಏಕಾಂತದಲ್ಲಿ ತನ್ನ ವಚನಾಮೃತದಿಂದ ಸಂತೋಷಪಡಿಸುತ್ತಾ ಶೋಭಿಸುತ್ತಿರುವನು.

ವಿ: ೧. ಶ್ರೀರಾಮಸೇತುವರ್ಣನಪ್ರಸಂಗದಲ್ಲಿ ಅದನ್ನು ನಿರ್ಮಾಣಮಾಡಿಸಿದ ಶ್ರೀರಾಮನನ್ನು ಈ ಶ್ಲೋಕದಲ್ಲಿ ಶ್ರೀವಾದಿರಾಜರು ಸ್ತುತಿಸಿರುವರು.

೨. ಶ್ರೀರಾಮದೇವರ ಇಕ್ಕೆಲಗಳಲ್ಲಿ ಶ್ರೀಸೀತಾ ಮತ್ತು ಲಕ್ಷ್ಮಣರು ಶೋಭಿಸುತ್ತಿರುವರು. (ಮುಂಭಾಗದಲ್ಲಿ) ಪರಮಭಕ್ತಿಯಿಂದ ಕೂಡಿದ ಭೃತ್ಯಶ್ರೇಷ್ಠರಾದ ಶ್ರೀಹನುಮಂತದೇವರು

---

೧. ವಿಷ್ಣುಭಕ್ತಿರ್ಹಿ ಸರ್ವೇಷಾಂ ಸದ್ಗುಣಾನಾಂ ಸ್ವಲಕ್ಷಣಂ । – (ಕಥಾಲಕ್ಷಣ)

ತಮ್ಮೆರಡು ಕರಕಮಲಗಳನ್ನು ಮುಖಕಮಲದ ಬಳಿ ಇರಿಸಿಕೊಂಡು ಶಿರಬಾಗಿ ನಿಂತಿರುವರು; ಅಂತಹ ಹನುಮಂತದೇವರನ್ನು ತಮ್ಮ ವಚೋಽಮೃತದಿಂದ ಬಹಳವಾಗಿ ಶ್ರೀರಾಮದೇವರು [೧]ಏಕಾಂತದಲ್ಲಿ ಸತತ ಸಂತೋಷಪಡಿಸುತ್ತಿರುವರು; ಹೀಗೆ ತನ್ನ ಏಕಾಂತದ ಮಾತುಗಳಿಗೆ ಅಡ್ಡಿಯಾಗದಂತೆ ಸಮುದ್ರವನ್ನು ಸ್ತಂಭನ ಮಾಡಿರುವ[೨] ಅಪ್ರತಿಮ ಧನುರ್ಧಾರಿಗಳಾದ ಶ್ರೀರಾಮದೇವರು ಸರ್ವೋತ್ಕೃಷ್ಟರಾಗಿರುವರು.

## ರಾಮೇಶ್ವರ (ಕ್ಷೇತ್ರ)

**ಕಾಮದ್ವಿಷಂ ಕಾಮಿತದಾನದಕ್ಷಂ**
**ಶ್ರೀಮಜ್ಜಟಾಜೂಟವಿಭಾಸಿಗಂಗಮ್ ।**
**ರಾಮೇಶ್ವರಂ ರಾಮಕೃತಪ್ರತಿಷ್ಠಂ**
**ರಾಮಾಗೃಹೀತಾರ್ಧತನುಂ ನತೋಽಸ್ಮಿ ॥೨೧॥**

**ಅ:** **ಕಾಮದ್ವಿಷಂ** = ಕಾಮಹರನಾದ; **ಕಾಮಿತದಾನದಕ್ಷಂ** = ಅಭೀಷ್ಟವನ್ನು ಕೊಡುವಲ್ಲಿ ಸಮರ್ಥನಾದ; **ಶ್ರೀಮಜ್ಜಟಾಜೂಟವಿಭಾಸಿಗಂಗಂ** = ಕಾಂತಿಯುಕ್ತವಾದ ಜಟಾಜೂಟದಲ್ಲಿ ಗಂಗೆಯು ಶೋಭಿಸುತ್ತಿರುವ; **ರಾಮಕೃತಪ್ರತಿಷ್ಠಂ** = ಶ್ರೀರಾಮನಿಂದ ಪ್ರತಿಷ್ಠಾಪಿಸಲ್ಪಟ್ಟಿರುವ; **ರಾಮೇಶ್ವರಂ** = 'ರಾಮೇಶ್ವರ'ನೆಂಬ ಹೆಸರಿನ ಶಿವನನ್ನು; **ನತಃ ಅಸ್ಮಿ** = ನಮಸ್ಕರಿಸಿದವನಾಗಿರುವೆನು.

ಕಾಮಹರನಾದ, ಅಭೀಷ್ಟ ನೀಡುವಲ್ಲಿ ಸಮರ್ಥನಾದ, ಕಾಂತಿಯುಕ್ತವಾದ ಜಟಾಜೂಟದಲ್ಲಿ ಹೊಳೆಯುವ ಗಂಗೆಯಿಂದ ಕೂಡಿರುವ, 'ರಾಮೇಶ್ವರ'ನೆಂಬ ಹೆಸರಿನ ಶ್ರೀರಾಮನಿಂದ ಪ್ರತಿಷ್ಠಾಪಿತನಾದ ಶಿವನನ್ನು ನಮಸ್ಕರಿಸುವೆನು.

ವಿ: ೧. ಶಿವನು ಕಾಮಹರ; ಭಕ್ತರ ಅಭೀಷ್ಟವನ್ನು ನೀಡುವಲ್ಲಿ ನಿಪುಣ; ಜಟಾಜೂಟದಲ್ಲಿ ಗಂಗೆಯಿಂದ ಭೂಷಿತನಾದವನು (ಗಂಗಾಧರ); ಶ್ರೀರಾಮನಿಂದ ಪ್ರತಿಷ್ಠಿತನಾಗಿ, ಪತ್ನಿಯಾದ ಪಾರ್ವತಿಯಿಂದ ತಬ್ಬಲ್ಪಟ್ಟ ಅರ್ಧಶರೀರವುಳ್ಳವನಾಗಿ ಶ್ರೀರಾಮೇಶ್ವರನೆನ್ನಿಸಿಕೊಂಡಿರುವನು.

೨. 'ರಾಮೇಶ್ವರ'ಶಬ್ದಕ್ಕೆ 'ರಾಮಕೃತಪ್ರತಿಷ್ಠಂ', 'ರಾಮಾಗೃಹೀತಾರ್ಧನುತನುಂ' ಎಂಬುದಾಗಿ ಅರ್ಥಗಳನ್ನು ತಿಳಿಸಿರುವುದು ಈ ಶ್ಲೋಕದ ವೈಶಿಷ್ಟ್ಯ; 'ರಾಮಸ್ಯ ಈಶ್ವರಃ' ಎಂದು ಕೆಲವರು ಹೇಳುವ ಅರ್ಥವು ಸರಿಯಲ್ಲ ಎಂದು ಭಾವ. [೩]'ರಾಮಕೃತಪ್ರತಿಷ್ಠಂ' ಎಂಬಲ್ಲಿ 'ರಾಮೇಣ ಪ್ರತಿಷ್ಠಿತಃ ಈಶ್ವರಃ ರಾಮೇಶ್ವರಃ' ಎಂಬ ವಿಗ್ರಹವೂ, 'ರಾಮಾಗೃಹೀತಾರ್ಧತನು'

---

೧. ರಾಜ್ಞಾ ಸಹ ಏಕಾಂತೋಕ್ತಿಸಮಯೇ ತದುಪರಿ ಸ್ವಮುಖಪಿಧಾನಸ್ಯ ಕಾರ್ಯತ್ವಾದಿತಿ ಭಾವಃ ।– ವ್ಯಾ

೨. ಏಕಾಂತವ್ಯವಹಾರಾಯ ನಿವಾರಿತಸಮುದ್ರಘೋಷ ಇತ್ಯರ್ಥಃ । – ವ್ಯಾಖ್ಯಾನ

೩. ರಾಮಕೃತಪ್ರತಿಷ್ಠಂ ರಾಮಾಗೃಹೀತಾರ್ಧತನುಮಿತಿ ವಿಶೇಷಣದ್ವಯೇನ ರಾಮೇಣ ಪ್ರತಿಷ್ಠಿತಃ ಈಶ್ವರಃ ರಾಮೇಶ್ವರಃ । ರಾಮಾಯಾಃ ಪಾರ್ವತ್ಯಾಃ ಈಶ್ವರಃ ಸ್ವಾಮೀ ರಾಮೇಶ್ವರಃ ಇತಿ ವ್ಯುತ್ಪತ್ತಿರುಕ್ತಾ ಭವತಿ । -ವ್ಯಾ

ಎಂಬಲ್ಲಿ 'ರಾಮಾಯಾಃ (ಪಾರ್ವತ್ಯಾಃ) ಈಶ್ವರಃ ಸ್ವಾಮೀ ರಾಮೇಶ್ವರಃ' ಎಂಬ ವಿಗ್ರಹವೂ ಸೂಚಿತವಾಗಿವೆ.

೩. ಶ್ರೀರಾಮನಿಂದ ಪೂಜಿತವೆಂಬ ಕಾರಣದಿಂದ [1]'ರಾಮೇಶ್ವರಃ'(ರಾಮಸ್ಯ ಈಶ್ವರಃ) ಎಂದು ತಿಳಿಯುವುದಾದಲ್ಲಿ ಆ ಶ್ರೀರಾಮನಿಂದಲೇ ಪ್ರತಿಷ್ಠಿತವಾದ ನವಪಾಷಾಣದಲ್ಲಿನ ನವಗ್ರಹಗಳೂ ಸಹ ರಾಮನಿಂದ ಪೂಜಿತವಾದ 'ರಾಮನವಗ್ರಹ'ಗಳಾಗಬೇಕಾಗುತ್ತವೆ ಎಂಬ ಪ್ರಬಲ ಆಕ್ಷೇಪವನ್ನೂ ಇಲ್ಲಿ ಗಮನಿಸಬಹುದು. ರಾವಣವಧೆಗಾಗಿ ಸೇತುವೆಯನ್ನು ಕಟ್ಟುವ ಮುನ್ನವೇ ಶ್ರೀರಾಮನು ಇಲ್ಲಿ ಶಿವನನ್ನು ಪ್ರತಿಷ್ಠಾಪಿಸಿದ ವಿವರ ವಾಲ್ಮೀಕಿ ರಾಮಾಯಣದಲ್ಲಿದೆ(೬/೯/೧೨).

೪. ರಾಮೇಶ್ವರವು ದಕ್ಷಿಣದಿಕ್ಕಿನ ಮಹಾಕ್ಷೇತ್ರವೆನ್ನಿಸಿದೆ. ಉತ್ತರಕ್ಕೆ ಬದರೀ, ಪೂರ್ವಕ್ಕೆ ಜಗನ್ನಾಥಪುರೀ, ಪಶ್ಚಿಮಕ್ಕೆ ದ್ವಾರಕಾ - ಇವು ಇತರ ಮಹಾಕ್ಷೇತ್ರಗಳು. ೧೮ ಕಿ.ಮೀ. ಉದ್ದ ಮತ್ತು ೧೧ಕಿ.ಮೀ. ಅಗಲದ ದ್ವೀಪದಲ್ಲಿ ಈ ರಾಮೇಶ್ವರ ಕ್ಷೇತ್ರವಿದೆ. ಗಂಧಮಾದನ, ದೇವನಗರ ಎಂಬ ನಾಮಾಂತರಗಳೂ ಇದಕ್ಕೆ ಉಂಟು. ಪಾಂಡವರು ವನವಾಸಕಾಲದಲ್ಲೂ, ಬಲರಾಮನು ತೀರ್ಥಯಾತ್ರಾಕಾಲದಲ್ಲೂ ಇದನ್ನು ಸಂದರ್ಶಿಸಿದ್ದರೆಂದು, ಮಹಾಭಾರತ ಮತ್ತು ಭಾಗವತಗಳಲ್ಲಿ ಉಲ್ಲೇಖ ಉಂಟು. ಸ್ಕಂದಪುರಾಣ(ಬ್ರಹ್ಮಖಂಡ)ದಲ್ಲಿನ ಸೇತು ಮಾಹಾತ್ಮ್ಯದಲ್ಲಿ ಇದರ ಮಾಹಾತ್ಮ್ಯವು ವರ್ಣಿತವಾಗಿದೆ. ಶ್ರೀಮಧ್ವಾಚಾರ್ಯರು ತಮ್ಮ ದಕ್ಷಿಣದಿಗ್ವಿಜಯಕ್ಷೇತ್ರಕಾಲದಲ್ಲಿ ಈ ಕ್ಷೇತ್ರವನ್ನು ಸಂದರ್ಶಿಸಿ, ಇಲ್ಲಿಯೇ ಚಾತುರ್ಮಾಸ್ಯಕ್ಕೆ ಕುಳಿತಿದ್ದ ಉಲ್ಲೇಖವೂ, ಆಗ ಕುದಿಪುಸ್ತೂರು ಎಂಬ ಅದ್ವೈತಿಸನ್ಯಾಸಿಯೊಬ್ಬನನ್ನು ಪರಾಭವಗೊಳಿಸಿದ ವಿವರವೂ ಸುಮಧ್ವವಿಜಯದಲ್ಲಿ ಬಂದಿದೆ.(ಸರ್ಗ ೫, ಶ್ಲೋ.೪೨-೪೬)

## ಶ್ರೀರಾಮೇಶ್ವರದ ಹಿನ್ನೆಲೆ

**ಕಲ್ಪಾಂತೇ[2] ಸುರಭೂಸುರಾಸುರಮುನಿಸ್ತೋಮಂ ಹರನ್ ಕಂ ಹರಂ**
**ಪೃಥ್ವ್ಯಾಂ ಪಾತಕಕೋಟಿಪಾಟನಪಟೂ ರಾಮಃ ಸಮಾರಾಧಯತ್ ।**
**ಯತ್ಪಾದಾಬ್ಜರಜೋಽಹರನ್ಮುನಿವಧೂಪಾಪಂ ಶ್ರುತಾ ಯತ್ಕಥಾ**
**ಮುಕ್ತಿಂ ದೋಗ್ಧಿ ಪರೇಶಿತುಃ ಪರಮಿಯಂ ಲೀಲಾ ಖಲಧ್ವಂಸಿನಃ ॥ ೨೨ ॥**

ಅ: ಪಾತಕಕೋಟಿಪಾಟನಪಟುಃ = ಅನೇಕ ಕೋಟಿಸಂಖ್ಯಾಕವಾದ ಪಾಪಗಳನ್ನು ಪರಿಹರಿಸುವಲ್ಲಿ ಸಮರ್ಥನಾದ; ರಾಮಃ =ಶ್ರೀರಾಮನು; ಕಲ್ಪಾಂತೇ = ಪ್ರಳಯಕಾಲದಲ್ಲಿ; ಸುರಭೂಸುರಾಸುರಮುನಿಸ್ತೋಮಂ = ದೇವತೆಗಳು, ಬ್ರಾಹ್ಮಣರು, ಅಸುರರು ಮತ್ತು

---

೧. ಸುಮಧ್ವವಿಜಯಕಾರರಾದ ಶ್ರೀನಾರಾಯಣಪಂಡಿತಾಚಾರ್ಯರು ರಚಿಸಿರುವ 'ಶಿವಸ್ತುತಿ'ಯು ಈ ರಾಮೇಶ್ವರದಲ್ಲಿನ ರುದ್ರದೇವರ ಸ್ತುತಿ ಎಂದು ವ್ಯಾಖ್ಯಾನಕಾರರು ಬರೆದಿರುವರು.

೨. ರಾವಣವಧಜನಿತಬ್ರಹ್ಮಹತ್ಯಾದೋಷಪರಿಹಾರಾಯಶ್ರೀರಾಮೇಣಪ್ರತಿಷ್ಠಾಕೃತೇತ್ಯುಕ್ತಿಮಸಹಮಾನ ಆಹ – ಕಲ್ಪಾಂತ ಇತಿ। -ವ್ಯಾ

ಮುನಿಗಳ ಸಮೂಹವನ್ನು; ಹರನ್ = ಸಂಹರಿಸುವಾಗ; ಪೃಥ್ವ್ಯಾಂ = ಭೂಮಂಡಲದಲ್ಲಿ; ಕಂ= ಯಾವ; ಹರಂ = ಶಿವನನ್ನು; ಸಮಾರಾಧಯತ್ = ಆರಾಧಿಸಿದನು? ಯತ್ಪಾದಾಬ್ಜರಜಃ = ಆ ಯಾರ ಪಾದಧೂಳಿಯು; ಮುನಿವಧೂಪಾಪಂ = ಗೌತಮಮುನಿಯ ಪತ್ನಿಯಾದ ಅಹಲ್ಯೆಯ ಪಾಪವನ್ನು; ಅಹರತ್ = ಪರಿಹರಿಸಿತೋ; ಶ್ರುತಾ = ಕಿವಿಗೆ ಬಿದ್ದ; ಯತ್ಕಥಾ = ಯಾವನ ಕಥೆಯು; ಮುಕ್ತಿಂ = ಮುಕ್ತಿಯನ್ನು; ದೋಗ್ಧಿ = ತಂದುಕೊಡುವುದೋ; ಅಂತಹ; ಪರೇಶಿತುಃ = ರಮಾಬ್ರಹ್ಮಾದಿಗಳಿಗೆ ಸ್ವಾಮಿಯಾದ; ಖಲಧ್ವಂಸಿನಃ = ದುಷ್ಟರಾದ ರಾಕ್ಷಸರನ್ನು ತರಿಯುವಂತಹ ಶ್ರೀರಾಮನಿಗೆ; ಇಯಂ = ಇದು; ಪರಂ ಲೀಲಾ = ಒಂದು ಕೇವಲ ಲೀಲೆಯಾಗಿದೆ.

**ಇವನ ಪಾದಧೂಳಿಯು ಗೌತಮಮುನಿಯ ಪತ್ನಿ ಅಹಲ್ಯೆಯ ಪಾಪವನ್ನು ಪರಿಹರಿಸಿತು; ಕಿವಿಗೆ ಬಿದ್ದ ಇವನ ಕಥೆ ಮುಕ್ತಿಯನ್ನು ನೀಡುವುದು; ಅಂತಹ ಇವನು ಪ್ರಳಯಕಾಲದಲ್ಲಿ ಸುರರು, ಭೂಸುರರು, ಅಸುರರು ಹಾಗೂ ಮುನಿಗಳನ್ನು ಸಂಹರಿಸುವಾಗ ಭೂಮಂಡಲದಲ್ಲಿ ಯಾವ ಶಿವನನ್ನು ಆರಾಧಿಸಿದ? ರಮಾಬ್ರಹ್ಮಾದಿಗಳಿಗೆ ಒಡೆಯನಾದ, ದುಷ್ಟರನ್ನು ತರಿಯುವಂತಹ ಈ ಶ್ರೀರಾಮನಿಗೆ ಇದು ಕೇವಲ ಒಂದು ಲೀಲೆ ಮಾತ್ರ.**

ವಿ: ೧. ಪ್ರಳಯಕಾಲದಲ್ಲಿ ಸುರಾಸುರಾದಿಸಮಸ್ತರನ್ನು ಸಂಹರಿಸುವ ನಾರಾಯಣನೇ ಶ್ರೀರಾಮ; ಅವನು ಅಷ್ಟು ಜನರ ಸಂಹಾರದ ಪಾಪವನ್ನು ಕಳೆದುಕೊಳ್ಳಲು ಆಗ ಯಾವ ಹರನನ್ನು ಪೂಜಿಸಿದ್ದ (ಪ್ರಳಯಕಾಲದಲ್ಲಿ ಹರನೇ ಇಲ್ಲವಾಗಿದ್ದಾಗ, ಅವನನ್ನು ಪೂಜಿಸುವುದಾದರೂ ಎಂತು? ಎಂದು ಭಾವ.) ಅವನ ಪಾದಧೂಳಿಯು ಗೌತಮಪತ್ನಿಯಾದ ಅಹಲ್ಯೆಯ ಪಾಪ ಕಳೆದು, ಪಾವನಗೊಳಿಸಿತು? ಅವನ ಕಥೆಯು ಭಕ್ತರಿಗೆ ಮುಕ್ತಿಯನ್ನೇ ಕರುಣಿಸುವಷ್ಟು ಪವಿತ್ರವಾಗಿದೆ. ಹೀಗೆ ಸ್ವತಃ ಬ್ರಹ್ಮಹತ್ಯಾದಿಸರ್ವ ಪಾಪನಾಶಕನಾದ ಅವನಿಗೆ ಪಾಪವೆಲ್ಲಿಯದು? ಎಂದು ಭಾವ.

೨. ರಾವಣನನ್ನು ಸಂಹರಿಸಿದ್ದರಿಂದ ಒದಗಿದ ಬ್ರಹ್ಮಹತ್ಯಾದೋಷದ ಪರಿಹಾರಕ್ಕಾಗಿ ಶ್ರೀರಾಮನು 'ರಾಮೇಶ್ವರ'ನನ್ನು ಪ್ರತಿಷ್ಠೆ ಮಾಡಿದನು ಎಂದು ಕೆಲವರ ವಾದವನ್ನು ಶ್ರೀವಾದಿರಾಜರು ಈ ಶ್ಲೋಕದಿಂದಾರಂಭಿಸಿ ಖಂಡಿಸುತ್ತಿರುವರು[೧]

**ಯಂ ಧ್ಯಾಯಂಸ್ತಾರಕಬ್ರಹ್ಮಮಂತ್ರಂ ಜಪತಿ ಧೂರ್ಜಟಿಃ ।**
**ಅಘೋತ್ತಾರಾಯ ಕಾಕುತ್ಸ್ಥಃ ಪೂಜಯಾಮಾಸ ತಂ ಕಿಲ ॥ ೨೩ ॥**

ಅ: ಧೂರ್ಜಟಿಃ = ಶಿವನು; ಯಂ = ಯಾರನ್ನು; ಧ್ಯಾಯನ್(ಸನ್) = ಧ್ಯಾನಿಸುತ್ತ; ತಾರಕಬ್ರಹ್ಮಮಂತ್ರಂ = ಸಂಸಾರವನ್ನು ದಾಟಿಸುವ ಮೂಲಕ 'ತಾರಕಬ್ರಹ್ಮ-ಮಂತ್ರ'ವೆನ್ನಿಸಿರುವ ಶ್ರೀರಾಮಮಂತ್ರವನ್ನು; ಜಪತಿ = ಜಪಿಸುತ್ತಿರುವನೋ; (ಅಂತಹ),

---

೧. ಅಜ್ಞಜನಮೋಹಿನೀ ಕ್ರೀಡೈವ । ನ ತು ಪಾಪಪರಿಹಾರಾಯೇತ್ಯರ್ಥಃ । 'ಲೀಲೈಷಾऽ-ಸುರಮೋಹಿನೀ'(ಮ.ಭಾ.ತಾ.ನಿ. ೨/೮೧) ಇತ್ಯಾದಿ ವಚನಮುಕ್ತಾರ್ಥೇ ಮಾನಮ್॥ -ವ್ಯಾ

ತಂ = ಆ ಶಿವನನ್ನು; ಕಾಕುತ್ಸ್ಥಃ = ಶ್ರೀರಾಮನು; ಅಘೋತ್ತಾರಾಯ = [1]ಪಾಪಪರಿಹಾರ-ಕ್ಕೋಸ್ಕರ; ಪೂಜಯಾಮಾಸ ಕಿಲ = ಪೂಜಿಸಿದನೇನು?(ಹಾಗೆ ಪೂಜಿಸಲು ಎಂದಿಗೂ ಸಾಧ್ಯವಿಲ್ಲ ಎಂದು ಭಾವ).

ಪಾಪಪರಿಹರಿಕ್ಕೋಸ್ಕರ ತನ್ನನ್ನು ಧ್ಯಾನಿಸುತ್ತಾ, 'ಶ್ರೀರಾಮ' ತಾರಕಬ್ರಹ್ಮಮಂತ್ರವನ್ನು ಜಪಿಸುತ್ತಿರುವ ಶಿವನನ್ನು ಶ್ರೀರಾಮ ಪಾಪನಿವಾರಣೆಗೆಂದು [2]ಪೂಜಿಸಿದನೇ?

ವಿ: ತಮ್ಮ ಉದ್ಧಾರಕ್ಕೆಂದು ಶ್ರೀರುದ್ರದೇವರು ಶ್ರೀರಾಮಮಂತ್ರವನ್ನು ಸತತ ಜಪಿಸು-ತ್ತಿರುವರು[3]. ಹೀಗೆ ತನ್ನನ್ನು ಆರಾಧಿಸುವ ರುದ್ರದೇವರನ್ನು ಶ್ರೀರಾಮದೇವರು ಪಾಪಪರಿಹಾರಕ್ಕೋಸ್ಕರ ಧ್ಯಾನಿಸಲು ಎಂದಾದರೂ ಸಾಧ್ಯವುಂಟೇ? ಎಂದು ಭಾವ. ತನ್ನ ಪೂಜಕನನ್ನೇ ತಾನು ಪೂಜಿಸುವುದು ಮೋಹನಾರ್ಥ ಎಂದೂ ಅರ್ಥ.[4]

ಬ್ರಹ್ಮಹತ್ಯಾನಿಮಿತ್ತೇನ ಕಪಾಲ್ಯಾಸ್ತೇಽಧುನಾಽಪಿ ಯಃ ।
ಅಂಹಸ್ತದೇವ ಸಂಹರ್ತುಂ ಸ ರಾಮಸ್ಯಾರ್ಚಿತಃ ಕಿಲ ॥ ೨೪ ॥

ಅ: ಯಃ = ಯಾವ ಶಿವನು; ಬ್ರಹ್ಮಹತ್ಯಾನಿಮಿತ್ತೇನ = (ಬ್ರಹ್ಮದೇವರ ಪಂಚಮ ಶಿರಸ್ಸನ್ನು ಛೇಧಿಸಿದ್ದರಿಂದ ಒದಗಿದ) ಬ್ರಹ್ಮಹತ್ಯಾದೋಷದ ಕಾರಣದಿಂದಾಗಿ; ಅಧುನಾ ಅಪಿ = ಈಗಲೂ ಸಹ; ಕಪಾಲೀ = ಬ್ರಹ್ಮಕಪಾಲವು ಕೈಗೆ ಅಂಟಿಕೊಂಡಿರುವವನಾಗಿ;

---

೧. ಶ್ರೀರಾಮದೇವರಿಗೆ ಬ್ರಹ್ಮಹತ್ಯಾದೋಷದ ಪ್ರಸಕ್ತಿಯನ್ನು ಶ್ರೀವಿಜಯೀಂದ್ರಸ್ವಾಮಿಗಳು ತಮ್ಮ 'ಶೈವಸರ್ವಸ್ವಖಂಡನ' ಎಂಬ ಗ್ರಂಥದಲ್ಲಿ ವಿವರವಾಗಿ ಖಂಡಿಸಿರುವರು.

೨. ಕ್ವಚಿಚ್ಛಿವಂ ಕ್ವಚಿದೃಷೀನ್ ಕ್ವಚಿದ್ದೇವಾನ್ ಕ್ವಚಿನ್ನರಾನ್ ।
ನಮತ್ಯರ್ಚಯತಿ ಸ್ತೌತಿ ವರಾನರ್ಥಯತೇಽಪಿ ಚ ॥
ಲಿಂಗಂ ಪ್ರತಿಷ್ಠಾಪಯತಿ ವೃಣೋತ್ಯಸುರತೋ ವರಾನ್ ।
ಸರ್ವೇಶ್ವರಃ ಸ್ವತಂತ್ರೋಽಪಿ ಸರ್ವಶಕ್ತಿಶ್ಚ ಸರ್ವದಾ ॥
ಸರ್ವಜ್ಞೋಽಪಿ ವಿಮೋಹಾಯ ಜನಾನಾಂ ಪುರುಷೋತ್ತಮಃ ॥
-ಮಹಾಭಾರತತಾತ್ಪರ್ಯನಿರ್ಣಯ(೨/೧೩೮-೧೪೦)
ತ್ವಾಮಾರಾಧ್ಯ ವರಂ ಶಂಭೋ ಗೃಹೀಷ್ಯಾಮಿ ವರಂ ಸದಾ ।
ದ್ವಾಪರಾದೌ ಯುಗೇ ಭೂತ್ವಾ ಕಲಯಾ ಮಾನುಷಾದಿಷು ॥
ಸ್ವಾಗಮೈಃ ಕಲ್ಪಿತೈಸ್ತ್ವಂ ಚ ಜನಾನ್ ಮದ್ವಿಮುಖಾನ್ ಕುರು ।
ಮಾಂ ಚ ಗೋಪಯ ಯೇನ ಸ್ಯಾತ್ ಸೃಷ್ಟಿರೇಷೋತ್ತರಾಧರಾ ॥
—ಮಹಾಭಾರತತಾತ್ಪರ್ಯನಿರ್ಣಯ(೧/೧೦೬,೭) ಮತ್ತು(೨೨/೧೯೧,೧೯೨)ದಲ್ಲಿ ಉದ್ಧೃತವಾಗಿರುವ ಪದ್ಮಪುರಾಣವಾಕ್ಯಗಳು.

೩. ಶ್ರೀರುದ್ರದೇವರು ಸತತ ಶ್ರೀರಾಮನನ್ನು ಸ್ತುತಿಸುವ ವಿಚಾರವು ಪದ್ಮಪುರಾಣಉತ್ತರಖಂಡದಲ್ಲಿ ಬಂದಿದೆ:
ರಾಮರಾಮೇತಿ ರಾಮೇತಿ ರಮೇ ರಾಮೇ ಮನೋರಮೇ ।
ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ ॥

೪. ಸ್ವಾರಾಧಕಸ್ಯ ಆರಾಧನಂ ಮೋಹನಾರ್ಥಮಿತಿ ಭಾವಃ ॥ -ವ್ಯಾ

ಆಸ್ತೇ = ಇರುತ್ತಿರುವನೋ; ಸಃ = ಅಂತಹ ಶಿವನು; ತತ್ ಅಂಹಃ ಏವ = ಅಂತಹ ಪಾಪವನ್ನೇ; ಸಂಹರ್ತುಂ = ಪರಿಹರಿಸಲೆಂದು; ರಾಮಸ್ಯ = ಶ್ರೀರಾಮದೇವರಿಂದ; ಅರ್ಚಿತಃ ಕಿಲ = ಪೂಜಿಸಲ್ಪಟ್ಟನೇನು?

ಬ್ರಹ್ಮಹತ್ಯೆಯ ನಿಮಿತ್ತದಿಂದ 'ಕಪಾಲಿ' ಎನ್ನಿಸಿರುವ ಶಿವನನ್ನು ಅದೇ ದೋಷದ ಪರಿಹಾರಕ್ಕಾಗಿ ಶ್ರೀರಾಮ ಪೂಜಿಸಿದನಂತೆ ! ಒಪ್ಪಲಾದೀತೇ?

ವಿ: ಚತುರ್ಮುಖ ಬ್ರಹ್ಮದೇವರಿಂದ ಪಂಚಮಶಿರಸ್ಸನ್ನು ಶ್ರೀರುದ್ರದೇವರು ಕತ್ತರಿಸಿ ಆ ನಿಮಿತ್ತದಿಂದ 'ಕಪಾಲಿ' (ಕಪಾಲವು ಕೈಗೆ ಬಲವಾಗಿ ಅಂಟಿಕೊಂಡವ)ರಾಗಿ ಇದ್ದದ್ದು ಶಾಸ್ತ್ರಗಳಲ್ಲಿ ಸುಪ್ರಸಿದ್ಧವಾದ ವಿಚಾರ. ಅಂತಹ ಸ್ವತಃ ಬ್ರಹ್ಮಹತ್ಯಾದೋಷಗ್ರಸ್ತರಾದ ಶ್ರೀರುದ್ರದೇವರು ಬ್ರಹ್ಮಹತ್ಯಾದೋಷವನ್ನೇ ಹೊಂದಿರದ ಶ್ರೀರಾಮದೇವರಿಂದ ಅದರ ಪರಿಹಾರಕ್ಕೋಸ್ಕರ ಪೂಜಿಸಲ್ಪಡುವುದು ಎಂದೂ ಶಕ್ಯವಿಲ್ಲದ [೧]ವಿಚಾರ ಎಂದು ಭಾವ.[೨]

---

೧. ಸ್ವಯಮನವತೀರ್ಣಃ ಕಃ ಪರಾನ್ ತಾರಯೇದಿತಿ ನ್ಯಾಯಾದಿತಿ ಭಾವಃ । -ವ್ಯಾ

೨. ಶ್ರೀರಾಮದೇವರಿಗೆ ಬ್ರಹ್ಮಹತ್ಯಾದೋಷದ ಪ್ರಸಕ್ತಿಯೇ ಇಲ್ಲ ಎಂಬುದನ್ನು ಶ್ರೀವಾದಿರಾಜರು ಕನ್ನಡದಲ್ಲಿ 'ರಾಗಮಾಲಿಕೆ'ಯಲ್ಲಿ ತುಂಬಾ ವಿವರವಾಗಿ ಸಮರ್ಥಿಸಿದ್ದು ಅದು ತೀರ್ಥಪ್ರಬಂಧದ ಶ್ಲೋಕಗಳ ಕನ್ನಡ ವಿವರಣೆಯಂತಿದೆ :

ಕಾಲು ತೊಳೆದವನೊಬ್ಬ ತೊಳೆಸಿಕೊಂಡವನೊಬ್ಬ
ಮೌಳಿಮೇಲಾಜಲವ ಸತತ ಧರಿಸಿದನೊಬ್ಬ
ಪಾಲಿಸುವ ಪ್ರಭುವೊಬ್ಬ ಕೊಲುವ ತಳವಾರನೊಬ್ಬ
ಆಲೋಚನೆಯ ಬಲ್ಲವಗೆ ಸಂಶಯ ಸಲ್ಲ
ಮಾಲೆಯನು ಮಹಲಕ್ಷುಮಿ ಹಯವದನಗಿತ್ತಳಾಗಿ ॥ ೧ ॥

ರಾವಣನ ಕೊಂದ ಪಾಪವ ಕಳೆಯಬೇಕೆಂದು
ದೇವ ರಘುಪತಿ ಸದಾಶಿವನ ಪೂಜಿಸಿದ ಗಡಾ
ಆ ವಿಧಿಯ ಒಂದು ತಲೆಯನು ಕಡಿದಮಾತ್ರದಿಂದ
ಆವಾಗ ಕರದಲ್ಲಿ ಇಹ ಕಪಾಲವ ಕಾಣನೆ
ದಾವಘದೊಳು ಪೊರಳುವ ದಾವಾತ ಭಜಿಸುವನು
ಜೀವರಿಗೆ ಉಳ್ಳಷ್ಟು ವಿವೇಕ ಹಯವದನಗಿಲ್ಲವೆ ॥ ೨ ॥

ರಾಮಾಯಣದ ಕತೆಯು ಮಹಾ ಪುಣ್ಯಕಥೆಯು ಗಡಾ
ರಾಮ ರಾವಣನ ಕೊಂದದ್ದು ಮಹಾ ಪಾಪ ಗಡಾ
ಆ ಮನುಮುನಿಗಳೆಲ್ಲ ಪಾಪಕಂಗೀಕರಿಸಿದರೆ
ಸ್ವಾಮಿಯು ಲಯದಿ ಬೊಮ್ಮನ ಮೊದಲು ಕೊಲಿಸನೆ
ಧೀಮಂತ ಹಯವದನ ಕೊಂದ ಹಿರಣ್ಯಕ ಮುಖ್ಯ
ತಾಮಸ ದಿತಿಜರು ಕಶ್ಯಪಋಷಿಸುತರಲ್ಲವೆ ॥ ೩ ॥

ಶ್ರುತಿಯಿವ ಕರ್ಮಣಾನೋಕನೀಯ ಎಂದು
ತುತಿಸುತಿರೆ ನಿರ್ಗುಣ ಬೊಮ್ಮಗೆ ಕರ್ಮವುಂಟೆ

## ಯದ್ರಾವಣವಧೇ ಹೇತುಃ ಸೇತುರ್ಜೇತುಂ ಕ್ಷಮಸ್ತಮಃ ।

ಕ್ಷಿತಿಯೊಳಗೆ ರಾವಣನ ವಧೆಯ ಮಾಡಿದ
ಸೇತುಪತಿಯ ಪಾವನನೆನಲು ಅವನ ಕೊಂದವನ
ಪತಿತಪಾವನನೆಂಬುದೆ ಸುಚಿತ್ತಯುಕುತಿಯು
ಸತತ ಹಯವದನನೊಬ್ಬನೆ ಶುದ್ಧ ಕಾಣಿರೊ ॥ ೪ ॥

ಒಂದು ಕಡೆಯಲಿ ವಿಭೀಷಣನ ಪ್ರತಿಷ್ಠಿಸಿದನು ಮ-
ತ್ತೊಂದು ಕಡೆಯಲಿ ಸದಾಶಿವನ ಪೂಜಿಸಿದ ಇಂ-
ತೆಂದು ಪುರಾಣಗಳು ಕೂಗುತಿವೆ ತ್ರಾಸಿನೊಳು
ಹೊಂದಿಸಿ ಸಮನೆಂದು ತೂಗಿ ತೋರು-
ವಂದದಲಿ ಸಂದೇಹ ಸಲ್ಲ ಹಯವದನ ರಘುಪತಿಗಿಬ್ಬರು
ಸಂದ ಭಕುತರೆಂಬುದು ಸಲೆ ಸುಪ್ರಸಿದ್ಧ ॥ ೫ ॥

ಸೇತುವೆಯ ಕಂಡ ನರರಿಗೆ ಬ್ರಹ್ಮಹತ್ಯಾದಿ
ಪಾತಕವು ಬಿಡುವುದೆಂದು ಶ್ರುತಿಯ ಮನ್ನಿಸಲು
ಖ್ಯಾತ ಬೊಮ್ಮನ ತಲೆಯ ಕಡಿಯೆ ಕರದಲಿ ಕೊಟ್ಟ ತಾ-
ಪ ತಪ್ಪಿಸಲು ಸುಕೃತ ಸೇತುಮುಖದಿಂದ
ಸೀತೆಯರಸನು ಶಿವನ ನಿಲ್ಲಿಸಿ
ಪ್ರತಿಷ್ಠಿಸಿದ ಜಗನ್ನಾಥ ಹಯವದನ ಭಕ್ತರ ಬಂಧು ಕಾಣಿರೊ ॥ ೬ ॥

ರಾಮ ಶ್ರೀರಾಮ ರಾಮೇತಿ ರಮೆಯೆಂಬ
ಆ ಮಹಾದೇವ ಭಗವದ್ಭಕ್ತನಲ್ಲವೆ
ಸ್ವಾಮಿ ತನ್ನ ಭಕ್ತರನು ಪ್ರತಿಷ್ಠಿಸಿದ ನಿ-
ಸ್ಸೀಮ ಕರುಣಾಂಬುಧಿ ಮಹಾಮಹಿಮನೆಂಬರು
ಭ್ರಾಮಕದ ನುಡಿಗೆ ಮರುಳಾಗದಿರು ಹಯವದನ
ರಾಮಚಂದ್ರನೆ ಕಾಶಿಯ ತಾರಕಬೊಮ್ಮ ಕಾಣಿರೊ ॥ ೭ ॥

ಕಾಶಿಯಲಿ ರಾಮಮಂತ್ರೋಪದೇಶವ ಮಾಳ್ಪ
ಈಶ ಜಾಣರ ಮತದಿ ಜಗಕೆ ಗುರುವೆಂತೆಂಬ
ಆ ಶಿವನ ಮಂತ್ರದೇವತೆ ತಾರಕಬೊಮ್ಮಯೆನಿಪ
ವಾಸುದೇವನೆ ಜಗಕೆ ಪರದೈವ ಕಾಣಿರೊ
ಈ ಸುತತ್ವವ ಪೇಳ್ವ ಹರಗೆ ನಮ್ಮ ಹಯವದನ
ಏಸು ಮನ್ನಣೆ ಮಾಡಿದರುಚಿತ ಕಾಣಿರೊ ॥ ೮ ॥

ವರವ ಶೋಧಿಪೆನೆಂದು ಕರವ ತನ್ನ
ಶಿರದ ಮೇಲೆ ಇರಿಸಬಂದ ಖಳಗಂಜಿ
ಹರ ಸಕಲ ಸುರೇಶ್ವರರ ಅರಮನೆಗಳಿಗೆ ಪೋಗಿ
ಪರಿಹರವ ಕಾಣದೆ ನಮ್ಮ ಸಿರಿವರನ ಮೊರೆ ಹೋಗಲು
ಪರಿಣಾಮವನು ಪೊರೆದ ಗಡಾ
ಶರಣರಕ್ಷಕನೆಂಬ ಬಿರುದುಳ್ಳ ಹಯವದನ

ತದಘಂ ತದ್ರಿಪೋರಾಸೀದಸಂಗಸ್ಯ ಕಿಲಾದ್ಭುತಮ್ ॥೨೫॥

---

ಹರಿಯಲ್ಲದೆ ಪಿರಿದೊಂದು ಪರದೈವವಿಲ್ಲವಯ್ಯ ॥ ೯ ॥
ರೋಮಕೋಟಿಲಿಂಗನೆನಿಸಿದ ಹನುಮನೊಂದು
ರೋಮಕೆ ಕೋಟಿ ಶಿವರ ಮಾಡುವ ಶಕ್ತ ಕಾಣಿರೊ
ಆ ಮಾಹಾತ್ಮ್ಯವು ತನ್ನ ಆಳುಮಾಡಿ ನಡೆಸಿಕೊಂಡ
ರಾಮಚಂದ್ರನೆ ಜಗಕ್ಕೆ ಪರದೈವ ಕಾಣಿರೊ
ಸ್ವಾಮಿ ಹಯವದನ ವೇದವ ತಂದು ಕಮಲಜನ
ಕಾಮಿತವನಿತ್ತನಾಗಿ ಆವನೆ ಜಗದೊಡೆಯ ॥ ೧೦ ॥

ನೂರು ರುದ್ರರು ಪೇಳೆ ಕಾರ್ಯವಾದರೇನವರು
ಈರೇಳು ಜಗವ ಸಂಹರಿಸಲರಿಯರು ಗಡಾ
ಕಾರ್ಯವಿಲ್ಲದ ಶಿವರ ಪೇಳಲದ್ವೈತಮತ ಹಾರಿಹೋಗದೆ
ಬರಿದೆ ಹಲವು ಹಂಬಲಿಸದೆ
ಶ್ರೀರಮಣ ಹಯವದನನೊಡಂಬಟ್ಟನಿ-
ಬರನು ದೂರ ಕಳಚಿದನೆಂದು ಪೂರ್ವದವರನೆ ನಂಬು ॥ ೧೧ ॥

ಯಾತ್ರೆಯ ಮಾಡಿಸಿಕೊಂಡು ಹರ ಹಿರಿಯ ತಾನಾಗಿ
ಯುಕ್ತಿ ಬಾಧಕವಾಯಿತ್ತು ಹರಿಹರರೊಳೈಕ್ಯ
ಚಿತ್ರ ನಿನ್ನ ಮತಕೆ ನೀನೆ ಶತ್ರುವಾದೆ
ಪ್ರತ್ಯುತ್ತರವ ಪೇಳೆ ಪರಾಜಯ ಬಾರದಿಹುದೆ
ಮತ್ತೆ ನೆನೆಯೊ ಶ್ರೀಹಯವದನಗಿದು ಲೀಲೆಯಾದರೆ
ಸತ್ವ ಹೆಚ್ಚಿತು ಸರ್ವೋತ್ತಮನೆಂಬ ಶ್ರುತಿಗೆ ॥ ೧೨ ॥

ವಂದ್ಯಮಾನಂ ಪಿತಾನಾಂ ಪ್ರತಿ ಪ್ರಮಾಣಂ
ಎಂದು ರುದ್ರನ ಕೂಡೆ ಶ್ರುತಿ ಪೇಳಿತಾಗಿ
ತಂದೆ ಮಕ್ಕಳ ಮನೆಗೆ ಪೋದಂತೆ ಪೋಗಿ ಮು
ಕುಂದ ಮೊಮ್ಮಗನಿಗೆ ಹಿರಿಯತನವ ಕೊಡಲೆಂದು
ಮುಂದೆ ಜನಿಸುವ ಕಿರಿಯ ಕುವರರೊಳು ತನ್ನ
ಕಂದನ ಸೃಜಿಸಿದ ಹಯವದನ ಚತುರನಲ್ಲವೆ ॥ ೧೩ ॥

ಮೂಲರೂಪದಿ ಸುರರು ದ್ವಾರಕಾಪುರಯಾತ್ರೆಯಲಿ
ಪಾಲಸಾಗರಯಾತ್ರೆ ಗರ್ಭಯಾತ್ರೆ ಕಳೆಯೆ
ಶೂಲಧರ ಖಳಗಂಜಿ ಭುವನವೆಲ್ಲವ ಸುತ್ತಿ ಶ್ರೀ-
ಲೋಲನಿಹ ವೈಕುಂಠಯಾತ್ರೆಯಿಂದ ಬದುಕನೆ
ಭೂಲೋಕದಲಿ ಪುಟ್ಟಿ ಹಯವದನ ಕೃಷ್ಣ ಮಾಡಿದ
ಕೈಲಾಸಯಾತ್ರೆ ಕೈವಲ್ಯಪತಿಗೆ ಲೀಲೆ ॥ ೧೪ ॥
ಹರನಾರು ಪುರಾಣಗಳು ವಿರಿಂಚನಾರು ಪುರಾಣಗಳು
ಹರ ವಿರಿಂಚರವಲ್ಲವೆಂದು ಹಿರಿಯರೆ ಮನ್ನಿಸಲಾಗಿ
ಪರಮ ಸಿದ್ಧಾಂತಕೋವಿದರೆನಿಪ ಬುಧರಿಗೆ

ಅ: **ರಾವಣವಧೇ** = ರಾವಣನ ಸಂಹಾರದಲ್ಲಿ; **ಹೇತುಃ** =ಕಾರಣವಾದ; **ಸೇತುಃ**= ಶ್ರೀರಾಮಸೇತುವು; **ಯತ್** =ಯಾವ; **ತಮಃ** = ಪಾಪವನ್ನು; **ಜೇತುಂ** = ಪರಿಹರಿಸಲು; **ಕ್ಷಮಃ** = ಸಮರ್ಥವಾಗಿದೆಯೋ; **ತತ್** = ಅಂತಹ; **ಅಘಂ** = (ಬ್ರಹ್ಮಹತ್ಯಾರೂಪವಾದ) ಪಾಪವು; **ಅಸಂಗಸ್ಯ** = ನಿರಂಜನನಾದ; **ತದ್ರಿಪೋಃ** = ರಾವಣನ ಶತ್ರುವಾದ ಶ್ರೀರಾಮನಿಗೆ; **ಆಸೀತ್ ಕಿಲ**=ಉಂಟಾಯಿತಂತೆ;(ಇತಿ ಯತ್ ತತ್) **ಅದ್ಭುತಂ** =(ಇದೆಂತಹ) ಆಶ್ಚರ್ಯ !

**ರಾವಣನ ಸಂಹಾರಕ್ಕೆ ನಿಮಿತ್ತವಾದ ಆ ಸೇತುವೆಯೇ ಪರಿಹರಿಸಲು ಸಮರ್ಥವಾದ ಬ್ರಹ್ಮಹತ್ಯೆಯು ನಿರಂಜನನಾದ, ರಾವಣನನ್ನು ಸ್ವತಃ ಕೊಂದ ಶ್ರೀರಾಮನಿಗೆ ತಟ್ಟಿ-ತಂತೆ ! ಎಂತಹ ಆಶ್ಚರ್ಯ !**

ವಿ: ೧. ರಾವಣಸಂಹಾರಕಾರ್ಯದಲ್ಲಿ ಪರಂಪರಯಾ ಕಾರಣವೆನ್ನಿಸಿದ ಶ್ರೀರಾಮ-ಸೇತುವು ಸಹ ತನ್ನ ದರ್ಶನದಿಂದ ಬ್ರಹ್ಮಹತ್ಯಾದೋಷವನ್ನು ಪರಿಹರಿಸುವುದು ಎಂದು ಪುರಾಣವಚನವಿದೆ.[೧] ರಾವಣನಂತಹ ಪಾಪಿಯ ಸಂಹಾರಕ್ಕೆ ಪರಂಪರಯಾ ಕಾರಣವಾದ ಸೇತುವಿಗೇ ಹೀಗೆ[೨] ಬ್ರಹ್ಮಹತ್ಯಾದೋಷವನ್ನು ಪರಿಹರಿಸುವ ಸಾಮರ್ಥ್ಯವಿರುವಾಗ, ರಾವಣನನ್ನು ಸಾಕ್ಷಾತ್ ಸಂಹರಿಸಿದ ಶ್ರೀರಾಮದೇವರಿಗೆ ಬ್ರಹ್ಮಹತ್ಯಾದೋಷವು ಒದಗಿತು ಎಂಬುದು ಹಾಸ್ಯಾಸ್ಪದ ವಿಚಾರ ಎಂದು ಭಾವ.

೨. ಒಂದು ವೇಳೆ ಇತರರಿಗೆ ದೋಷವಾಗಿದ್ದರೂ ಅಸಂಗನಾದ ಶ್ರೀರಾಮನಿಗೆ ಅದು ದೋಷವಾಗುತ್ತಿರಲಿಲ್ಲ ಎಂದ ಮೇಲೆ ಸೇತುವಿನಂತಹ ಜಡವಸ್ತುವಿಗೂ ಭೂಷಣವಾದ ಅಂತಹ

---

ಪುರಾಣಗಳ ಮ್ಯಾಲೆ ಮಾಡುವ ಪರಮಾದರ ಸಲ್ಲದಯ್ಯ
ದುರಾಗ್ರಹವ ಮಾಡಬ್ಯಾಡ ಗುರುಮತವ ಬಿಡಬ್ಯಾಡ
ಸಿರಿ ಹಯವದನನಾರುಪುರಾಣಗಳ ನೋಡಿರೊ ॥ ೧೫ ॥
ಒಂದು ಬೊಮ್ಮಚಿತ್ತು ಒಂದು ಜೀವಚಿತ್ತು ಇಂ-
ತೆಂದು ಶ್ರುತಿ ಸ್ಕಂಧ ಚೇತವೆಲ್ಲ ಗ್ರಂಥ (ಆ)ಸ್ಯ
ದಿಂದ (ಒರೆಯೆ) ಹರಿಜಡನೊ ಹರಜಡನೊ
ಮಂದಹಾಸದಿಂದ ಜಡರು ಮನುಮುನಿಗಳೆಲ್ಲ
ಇಂಥ ಶಿವನ ವಹಿಸಿಕೊಂಡು ವಾದಿಸುವರು
ಹಿಂದು ಮುಂದರಿಯರೆಂದು ಹಯವದನ ನಗನೆ ॥ ೧೬ ॥
ಯಂ ಬ್ರಹ್ಮ ವೇದಾಹಂ ಬ್ರಹ್ಮವೇದಶ್ರುತಿಶಬ್ದ ಬ್ರಹ್ಮ-
ವೆಂಬ ವೇದ ಬೋಧಿಸಿತಾಗಿ
ಇಂಥ ಮನುಜರಿಗೆಲ್ಲ ಭಾವಾಭಾವ ಪೇಳ್ವ
ಹೊಂದಿ ಬದುಕು ಹಯವದನನ ಚರಣವ
ಹೊಂದಿ ಬದುಕೊ ಜೀವ ಹರಿಯೆ ನಾನೆನ್ನ ಬ್ಯಾಡ ॥ ೧೭ ॥

೧. ಸೇತುಂ ದೃಷ್ಟ್ವಾ ಸಮುದ್ರಸ್ಯ ಬ್ರಹ್ಮಹತ್ಯಾಂ ವ್ಯಪೋಹತಿ । -ವ್ಯಾಖ್ಯಾನ

೨. ರಾವಣಹನನೇ ಪರಂಪರಾಹೇತೋರಪಿ ಬ್ರಹ್ಮಹತ್ಯಾನಿವರ್ತಕತ್ವಂ ಕಿಲ । ಸಾಕ್ಷಾದ್ರಾವಣಹಂತುಃ ರಾಮಸ್ಯ ಬ್ರಹ್ಮಹತ್ಯಾಖ್ಯಪಾಪಸಂಬಂಧೋ ಜಾತ ಇತ್ಯೇತದಸಂಗತಮಿತಿ ಭಾವಃ । -ವ್ಯಾ

ಕಾರ್ಯವು ಶ್ರೀರಾಮನಿಗೆ ಹೇಗೆ ತಾನೇ ದೋಷವಾದೀತು? ಎಂಬ ಧ್ವನಿ 'ಅಸಂಗಸ್ಯ' ಎಂಬ ಪದದಲ್ಲಿದೆ.

೩. ಸೇತುದರ್ಶನದಿಂದ ಶ್ರೀರುದ್ರದೇವರು ತಮ್ಮ ಬ್ರಹ್ಮಹತ್ಯಾ ದೋಷವನ್ನು ಪರಿಹರಿಸಿಕೊಳ್ಳಲೆಂದೇ ಅಲ್ಲಿ ಶ್ರೀರುದ್ರದೇವರನ್ನು ಶ್ರೀರಾಮದೇವರು ಪ್ರತಿಷ್ಠೆ ಮಾಡಿರುವರು ಎಂಬುದು ರಹಸ್ಯ.

## ಧನುಷ್ಕೋಟಿ

**ಯದ್ಭಾರತಸ್ಥಬಹುತೀರ್ಥನಿಷೇವಣೇನ**
**ಲಭ್ಯಂ ಫಲಂ ದಿಶತಿ ತನ್ಮಮ ಸೇತುಖಂಡಃ।**
**ಇತ್ಥಂ ಧಿಯೇವ ಪರಿವರ್ತಿತಚಾಪಕೋಟ್ಯಾ**
**ಚಿಚ್ಛೇದ ಸೇತುಮಧಿಕಂ ರಘುಪುಂಗವೋಽತ್ರ ॥ ೨೬ ॥**

ಅ: ರಘುಪುಂಗವಃ = ರಘುಶ್ರೇಷ್ಠನಾದ ಶ್ರೀರಾಮನು; ಭಾರತಸ್ಥಬಹುತೀರ್ಥ-ನಿಷೇವಣೇನ = ಭರತಖಂಡದಲ್ಲಿರುವ ಬಹುತೀರ್ಥಗಳ ಸೇವನೆಯಿಂದ; ಯತ್ ಲಭ್ಯಂ ಫಲಂ ತತ್ = ಯಾವ ಪುಣ್ಯವು ಲಭಿಸುವುದೋ ಅಂತಹ ಪುಣ್ಯಫಲವನ್ನು; ಮಮ = ನನ್ನ; ಸೇತುಖಂಡಃ = ಈ ಸೇತುವಿನ ಒಂದು ಭಾಗವು; ದಿಶತಿ = ಕೊಡುವುದು; ಇತ್ಥಂ ಧಿಯಾ ಇವ = ಈ ತೆರನಾದ ವಿಚಾರದಿಂದಲೋ ಎಂಬಂತೆ; ಅತ್ರ = ಈ ಧನುಷ್ಕೋಟಿಯಲ್ಲಿ; ಅಧಿಕಂ = ಹೆಚ್ಚಾಗಿರುವ; ಸೇತುಂ = ಸೇತುವನ್ನು; ಪರಿವರ್ತಿತಚಾಪಕೋಟ್ಯಾ = ತಿರುಗಿಸಲ್ಪಟ್ಟ ಬಿಲ್ಲಿನ ತುದಿಯಿಂದ; ಚಿಚ್ಛೇದ = ಕತ್ತರಿಸಿರುವನು. (ಉತ್ಪ್ರೇಕ್ಷಾಲಂಕಾರ)

'ಭರತಖಂಡದಲ್ಲಿನ ಸಕಲತೀರ್ಥಗಳ ಸೇವನೆಯಿಂದ ಲಭಿಸುವ ಪುಣ್ಯವನ್ನು ನನ್ನ ಈ ಸೇತುವಿನ ಒಂದು ಭಾಗವೇ ನೀಡುವುದು' ಎಂದು ಗಮನಿಸಿಯೋ ಎಂಬಂತೆ ಸೇತುವಿನ ಉಳಿದ ಭಾಗವನ್ನು ರಘುಶ್ರೇಷ್ಠನಾದ ಶ್ರೀರಾಮನು ತನ್ನ ಬಿಲ್ಲಿನ ತುದಿಯನ್ನು ತಿರುಗಿಸಿ ಕತ್ತರಿಸಿದನು.

ವಿ: ೧. ಭರತಖಂಡದ ಸಕಲತೀರ್ಥಗಳ ಸೇವನೆಯಿಂದ ಲಭಿಸುವಷ್ಟು ಪುಣ್ಯವನ್ನು ನಾನು ನಿರ್ಮಿಸಿದ ಸೇತುವಿನ ಒಂದು ಭಾಗವೇ ಕೊಡಬಲ್ಲದು ಎಂದು ಮೇಲೆ ಸೇತುವಿನ ಉಳಿದ ಭಾಗ ಏತಕ್ಕೆ ಬೇಕು? ಎಂಬ ಭಾವನೆಯಿಂದಲೋ ಎಂಬಂತೆ ಶ್ರೀರಾಮದೇವರು ಸೇತುವಿನ ಉಳಿದಭಾಗವನ್ನು ತಮ್ಮ ಧನುಸ್ಸನ್ನು ತಿರುಗಿಸುವ ಮೂಲಕ [1]ತುಂಡರಿಸಿಬಿಟ್ಟರು; ಅಂತಹ ಸ್ಥಳವೇ ಈ ಧನುಷ್ಕೋಟಿ.

೨. ಧನುಷ್ಕೋಟಿಯು ರಾಮೇಶ್ವರದಿಂದ ಸುಮಾರು ೨೦ಕಿ.ಮೀ. ದೂರದಲ್ಲಿ ಇರುವ ಒಂದು ಪುಣ್ಯಕ್ಷೇತ್ರ. ವಿಭೀಷಣನು ಶ್ರೀರಾಮಸೇತುವಿನ ಮೂಲಕ ಬಲಾಢ್ಯರಾದ ರಾಜರುಗಳು

---

೧. ಸಕಲತೀರ್ಥಸೇವಾಲಭ್ಯಪುಣ್ಯಪ್ರದಾನೇ ಏತಾವಾನೇವ ಸೇತುಪ್ರದೇಶೋಽಲಂ, ಉರ್ವರಿತ ಪ್ರದೇಶೋ ಅಧಿಕ ಇತಿ ಬುದ್ಧ್ಯಾ ಇವ। -ವ್ಯಾ

ಲಂಕೆಯನ್ನು ಮುತ್ತಿಯಾರೆಂಬ ಭಯದಿಂದ ಶ್ರೀರಾಮನನ್ನು ಪ್ರಾರ್ಥಿಸಲು, ಅದರಂತೆ ಶ್ರೀರಾಮನು ಸೇತುವಿನ ಸ್ವಲ್ಪ ಭಾಗವನ್ನು ತನ್ನಲ್ಲಿನ ಧನುಸ್ಸನ್ನು ತಿರುಗಿಸಿ ಅದರ ತುದಿಯಿಂದ ನಾಶ ಮಾಡಿದನು ಎಂದು ಸ್ಕಂದಪುರಾಣ ಬ್ರಹ್ಮಖಂಡದಲ್ಲಿ ಉಕ್ತವಾಗಿದೆ[೧]. ಶ್ರೀರಾಮದೇವರು ಹಾಗೆ ತನ್ನ ಧನುಸ್ಸಿನಿಂದ ಸೇತುವನ್ನು ತುಂಡರಿಸಿದ ಸ್ಥಳವೇ ಈ ಧನುಷ್ಕೋಟಿ. ಈ ಸ್ಥಳವು ೧೯೬೪ -೬೫ರಲ್ಲಿಬಂದ ಪ್ರಚಂಡಮಾರುತದ ಹೊಡೆತಕ್ಕೆ ಸಮುದ್ರದಲ್ಲಿ ಮುಳುಗಿಹೋಗಿದ್ದಿತು. ಅದನ್ನು ನೋಡುವ ಭಾಗ್ಯಶಾಲಿಗಳ ಸಂಖ್ಯೆ ಈ ಯುಗದಲ್ಲಿ ಕಡಿಮೆಯಾಗುತ್ತದೆ ಎಂಬುದಕ್ಕೆ ಇದು ಒಂದು ರೀತಿಯಲ್ಲಿ ಸಂಕೇತವೂ ಆಗಿರುವಂತಿದೆ. ಇತ್ತೀಚೆಗೆ ಅದರ ಸ್ವಲ್ಪ ಭಾಗ ಪುನಃ ಕಾಣತೊಡಗಿರುವುದು ಒಂದು ಶುಭ ಸಂಕೇತವಾಗಿದೆ.

೩. ಧನುಷ್ಕೋಟಿಯ ಸೇವೆಯು ಸಕಲತೀರ್ಥಗಳ ಫಲವನ್ನು ಕೊಡುವಂತಹ ಉತ್ತಮಕ್ಷೇತ್ರ ಎಂಬುದು ಇಲ್ಲಿಯ ಮುಖ್ಯ ತಾತ್ಪರ್ಯ.

**ಜನಾ ನಾನಾದಾನಾಧ್ಯಯನಯಜನಾಪೂರ್ತವಿಧಿನಾ**
**ವೃಥಾ ಖಿನ್ನಾ ದೈನ್ಯಂ ಭಜಥ ನಿಜನಿಃಶ್ರೇಯಸಕೃತೇ ।**
**ಸುರಶ್ರೇಣೀಕ್ಷೋಣೀಸಕಲಸುಜನಾಭೀಷ್ಟಫಲದಾ**
**ಧನುಷ್ಕೋಟೀ ಪೇಟೀ ಸುಕೃತಸುಧನಸ್ಯಾಸ್ತಿ ಮಹತೀ[೨] ॥ ೨೭॥**

**ಅ: (ಹೇ) ಜನಾಃ** = ಎಲೈ ಜನರೇ; **(ಯೂಯಂ** = ನೀವು); **ನಿಜನಿಃಶ್ರೇಯಸಕೃತೇ** = ನಿಮ್ಮ ಪರಮಶ್ರೇಯಸ್ಸಿಗಾಗಿ; **ನಾನಾದಾನಾಧ್ಯಯನಯಜನಾಪೂರ್ತವಿಧಿನಾ** = ಅನೇಕತೆರನಾದ ಗೋಭೂ ಹಿರಣ್ಯಾದಿಗಳ ದಾನ, ವೇದಾಧ್ಯಯನ, ಯಾಗ,ತಟಾಕಾದಿಗಳ ನಿರ್ಮಾಣ ಮೊದಲಾದವುಗಳ ಅನುಷ್ಠಾನದಿಂದ; **ಖಿನ್ನಾಃ** = ಬಳಲಿ; **ದೈನ್ಯಂ** = ಕ್ಲೇಶವನ್ನು; **ವೃಥಾ** = ವ್ಯರ್ಥವಾಗಿ; **ಭಜಥ** = ಹೊಂದುತ್ತಿರುವಿರಿ; **ಸುರಶ್ರೇಣೀಕ್ಷೋಣೀ-ಸಕಲಸುಜನಾಭೀಷ್ಟಫಲದಾ** = ದೇವತಾಸಮೂಹಕ್ಕೂ ಮತ್ತು ಭೂಲೋಕದಲ್ಲಿರುವ ಸಕಲಸುಜನರಿಗೂ ಬಯಸಿದ ಫಲವನ್ನು ಕೊಡುವಂತಹ; **ಧನುಷ್ಕೋಟೀ** = 'ಧನುಷ್ಕೋಟಿ'

---

೧. ಸೇತುನಾಽನೇನ ತೇ ರಾಮ ರಾಜಾನಃ ಸರ್ವ ಏವ ಹಿ ।
ಬಲೋದ್ರಿಕ್ತಾಃ ಸಮಭ್ಯೇತ್ಯ ಪೀಡಯೇಯುಃ ಪುರೀಂ ಮಮ ॥
ಅತಃ ಸೇತುಮಿಮಂ ಭಿಂಧಿ ಧನುಷ್ಕೋಟ್ಯಾ ರಘೂದ್ವಹ ।
ಇತಿ ಸಂಪ್ರಾರ್ಥಿತಸ್ತೇನ ಪೌಲಸ್ತ್ಯೇನ ಸ ರಾಘವಃ ॥
ಬಿಭೇದ ಧನುಷಃ ಕೋಟ್ಯಾ ಸ್ವಸೇತುಂ ರಘುನಂದನಃ ।
ಅತೋ ದ್ವಿಜಾಸ್ತತ್ತೀರ್ಥಂ ಧನುಷ್ಕೋಟಿರಿತಿ ಶ್ರುತಮ್ ।
— ಸ್ಕಂದಪುರಾಣ(ಅ. ೩೦ ಶ್ಲೋಕ ೭೨ -೭೫)

೨. ಯಥಾ ಸುರಾಣಾಂ ಸರ್ವೇಷಾಮುತ್ತಮೋ ರಘುನಂದನಃ ।
ತಥೈವ ಚ ಧನುಷ್ಕೋಟಿಃ ಸರ್ವತೀರ್ಥೋತ್ತಮಾ ಮತಾ ॥ –ಸ್ಕಂದಪುರಾಣ ೩೦/೧೪೦

ಎಂಬ; ಸುಕೃತಸುಧನಸ್ಯ = ಪುಣ್ಯವೆಂಬ ಉತ್ತಮ ಧನದ; ಮಹತೀ ಪೇಟೀ = ದೊಡ್ಡದಾದ ಪೆಟ್ಟಿಗೆಯು; ಅಸ್ತಿ = ಇದೆ.

ಎಲೈ ಜನರೇ ! ನೀವು ನಿಮ್ಮ ಒಳಿತಿಗಾಗಿ ಬಹುಬಗೆಯ ದಾನ, ವೇದಾಧ್ಯಯನ, ಯಾಗ, ತಟಾಕಾದಿಗಳ ನಿರ್ಮಾಣ ಮೊದಲಾದವುಗಳನ್ನು ಮಾಡಿ ಏತಕ್ಕೆ ವ್ಯರ್ಥವಾಗಿ ಬಳಲುವಿರಿ? ಸಕಲಸುರರಿಗೂ, ಭೂಮಿಯ ಮೇಲಿನ ಸಕಲಸುಜನರಿಗೂ ಬಯಸಿದ ಫಲವನ್ನು ನೀಡುವಂತಹ 'ಧನುಷ್ಕೋಟಿ' ಎಂಬ ಪುಣ್ಯವೆಂಬ ಮಹಾಧನದ ದೊಡ್ಡ ಪೆಟ್ಟಿಗೆಯೇ ಇದೆಯಲ್ಲವೇ !.

ವಿ: ೧. ಶ್ರೇಯಸ್ಸ(ಪಾರಲೌಕಿಕಸುಖ)ನ್ನು ಬಯಸುವ ಜನರು ದಾನ, ಅಧ್ಯಯನ, ಯಜ್ಞ, ಕೆರೆ ಬಾವಿಗಳ ನಿರ್ಮಾಣ ಮೊದಲಾದ ಅನೇಕ ತೆರನಾದ ಪುಣ್ಯಕಾರ್ಯಗಳಲ್ಲಿ ತೊಡಗುವುದು ಲೋಕದಲ್ಲಿ ಕಂಡಿದೆ; ಆದರೆ ಬಯಸಿದ ಪುಣ್ಯಫಲವನ್ನೆಲ್ಲ ಕೊಡುವ ಪುಣ್ಯಧನದ ದೊಡ್ಡ ಪೆಟ್ಟಿಗೆಯಾಗಿ ಈ ಧನುಷ್ಕೋಟಿ ಕ್ಷೇತ್ರವೇ ಇರುತ್ತಿರುವಾಗ ಅವನ್ನೆಲ್ಲ ಆಚರಿಸಿ ಬಳಲುವುದೇತಕ್ಕೆ? ಈ ಧನುಷ್ಕೋಟಿಯನ್ನು ಶಾಸ್ತ್ರೋಕ್ತರೀತಿಯಲ್ಲಿ ಸೇವಿಸಿ ಸಕಲ ಶ್ರೇಯಸ್ಸನ್ನು ಹೊಂದ-ಬಹುದಲ್ಲ; ಎಂದು ಭಾವ.

೨. ಧನುಷ್ಕೋಟಿಯ ಸೇವನೆಯಿಂದ ದಾನಾದಿಸಕಲಪುಣ್ಯಗಳ ಫಲವು ಅನಾಯಾಸದಿಂದ ಲಭಿಸುತ್ತದೆ. ಆದ್ದರಿಂದ ಧನುಷ್ಕೋಟಿಯಾತ್ರೆಯನ್ನು ತಪ್ಪದೆ ಮಾಡಬೇಕು ಎಂದು ಭಾವ.

೩. ಇದಕ್ಕೆ ಮೂಲವಾಗಿರಬಹುದಾದ ಸ್ಕಂದಪುರಾಣದ ಶ್ಲೋಕವು ಹೀಗಿದೆ:

ಕಾಯಕ್ಲೇಶಹರೈಃ ಪುಂಸಾಂ ಕಿಂ ತಪೋಭಿಃ ಕಿಮಧ್ವರೈಃ ।
ಕಿಂ ವೇದೈಃ ಕಿಮು ವಾ ಶಾಸ್ತ್ರೈರ್ಧನುಷ್ಕೋಟ್ಯವಲೋಕಿನಃ ॥ –(ಬ್ರಹ್ಮಖಂಡ ೩೦/೮೫)

## ಶ್ರೀರಾಮಪಾದ

**ಪಾತಿವ್ರತ್ಯಪರೀಕ್ಷಯಾಖ್ಯಲಲನಾದೋಷಾಂಕುರಚ್ಛೇದನಂ**
**ಪಾಷಾಣೀಕೃತಗೌತಮಾರ್ಯವನಿತಾವಿಜ್ಞಾನದಾನಕ್ಷಮಮ್ ।**
**ಸಾಮ್ರಾಜ್ಯೋಚಿತಭೋಗ್ಯಭೋಗವಿರಸಂ ಶ್ರೀರಾಮ ತೇಽಂಘ್ರಿಂ ಶ್ರಯೇ**
**ನೈರ್ಮಲ್ಯಾಯ ನಿರಂತರಸ್ಮೃತಿಕೃತೇ ವೈರಾಗ್ಯಭಾಗ್ಯಾಯ ಚ ॥ ೨೮ ॥**

ಅ: ಪಾತಿವ್ರತ್ಯಪರೀಕ್ಷಯಾಖ್ಯಲಲನಾದೋಷಾಂಕುರಚ್ಛೇದನಂ = ಪಾತಿವ್ರತ್ಯ ಭ್ರಷ್ಟತೆ ಎಂಬ (ಅಹಲ್ಯೆಯಂತಹ) ಸ್ತ್ರೀಯ ದೋಷದ ಅಂಕುರವನ್ನೇ ಕತ್ತರಿಸಿಹಾಕಿದ; ಪಾಷಾಣೀ-ಕೃತಗೌತಮಾರ್ಯವನಿತಾವಿಜ್ಞಾನದಾನಕ್ಷಮಂ = ಶಿಲೆಯಂತಾಗಿದ್ದ ಗೌತಮ ಪತ್ನಿಯಾದ ಆ ಅಹಲ್ಯೆಗೆ ತತ್ತ್ವಜ್ಞಾನವನ್ನು ಹುಟ್ಟಿಸುವಲ್ಲಿ ಸಮರ್ಥವಾದಂತಹ; ಸಾಮ್ರಾಜ್ಯೋಚಿತ-ಭೋಗ್ಯಭೋಗವಿರಸಂ = ಸಾಮ್ರಾಜ್ಯಕ್ಕೆ ಉಚಿತವಾದ ಭೋಗ್ಯವಸ್ತುಗಳನ್ನು ಅನುಭವಿಸುವ

---

೧. ಬಹುವಿತ್ತವ್ಯಯಾಸಸಾಧ್ಯತ್ವೇನಾಸುಲಭತ್ವಾದಿತಿ ಭಾವಃ । -ವ್ಯಾ
೨. ಅತಃ ನಿಜನಿಃಶ್ರೇಯಸಾರ್ಥಂ ಧನುಷ್ಕೋಟಿಯಾತ್ರೈವ ಕರ್ತವ್ಯಾ ಸುಲಭತ್ವಾದಿತಿ ಭಾವಃ । -ವ್ಯಾ

ಬಯಕೆಯನ್ನು ಹೊಂದಿರದ; ತೇ = ನಿನ್ನ; ಅಂಘ್ರಿಂ = ಪಾದವನ್ನು; (ಹೇ) ಶ್ರೀರಾಮ = ಎಲೈ ಶ್ರೀರಾಮನೇ; ನೈರ್ಮಲ್ಯಾಯ = ನಿರ್ಮಲ ಸ್ವಭಾವಕ್ಕಾಗಿ; ನಿರಂತರಸ್ಮೃತಿಕೃತೇ = ಸಂತತ ಸ್ಮರಣೆಗಾಗಿ; ಚ = ಮತ್ತು; ವೈರಾಗ್ಯಭಾಗ್ಯಾಯ = ವೈರಾಗ್ಯವೆಂಬ ಭಾಗ್ಯಕ್ಕಾಗಿ; ಶ್ರಯೇ = ಆಶ್ರಯಿಸುವೆನು (ಕ್ರಮಾಲಂಕಾರ).

**ಪಾತಿವ್ರತ್ಯಭ್ರಷ್ಟತೆ ಎಂಬ ಅಹಲ್ಯೆಯ ದೋಷದ ಕುಡಿಯನ್ನೇ ಕತ್ತರಿಸಿದ, ಶಿಲೆಯಂತಾಗಿದ್ದ ಆ ಗೌತಮ ಪತ್ನಿಗೆ ತತ್ತ್ವಜ್ಞಾನವನ್ನು ನೀಡಲು ಸಮರ್ಥವಾದ, ಸಾಮ್ರಾಜ್ಯಕ್ಕೆ ಉಚಿತವಾದ ಭೋಗಭಾಗ್ಯಗಳನ್ನು ತೊರೆದ, ನಿನ್ನ ಪಾದವನ್ನು, ಎಲೈ ಶ್ರೀರಾಮನೇ ! ನೈರ್ಮಲ್ಯಕ್ಕಾಗಿ, ಸಂತತ ಸ್ಮರಣೆಗಾಗಿ ಹಾಗೂ ವೈರಾಗ್ಯ-ಭಾಗ್ಯಕ್ಕಾಗಿ ನಾನು ಆಶ್ರಯಿಸುವೆನು.**

ವಿ: ೧. ಶ್ರೀರಾಮನ ಪಾದವು ಅಹಲ್ಯೆಯ ಪಾತಿವ್ರತ್ಯಭ್ರಷ್ಟತೆ ಎಂಬ ಪಾಪದ ಮೊಳಕೆ-ಯನ್ನೇ ಕಿತ್ತು[೧] ಹಾಕಿತು; ಮತ್ತು ಗೌತಮಪತ್ನಿಯಾದ ಆ ಅಹಲ್ಯೆಗೆ ವಿಶೇಷವಾದ ತತ್ತ್ವಜ್ಞಾನವನ್ನು ಕರುಣಿಸಿ ಸಲಹಿತು; ಸಾಮ್ರಾಜ್ಯಕ್ಕೆ ಉಚಿತವಾದ ಭೋಗಗಳನ್ನು ಅನುಭವಿಸುವ ಆಸಕ್ತಿಯನ್ನು ಹೊಂದಲೇ[೨] ಇಲ್ಲ; ತಾನಂತು ಇಂತಹ ಶ್ರೀರಾಮದೇವರ ಪಾದವನ್ನು ನೈರ್ಮಲ್ಯ, ಸಂತತಸ್ಮೃತಿ[೩] ಮತ್ತು ವೈರಾಗ್ಯಭಾಗ್ಯಗಳ ಪ್ರಾಪ್ತಿಗಾಗಿ ಆಶ್ರಯಿಸುವೆನು.[೪]

೨. ಶ್ರೀರಾಮನ ಪಾದವು[೫] ಪಾತಿವ್ರತ್ಯಭ್ರಷ್ಟತೆ ಎಂಬ ಅಹಲ್ಯಾದೋಷವನ್ನು ಪರಿಹರಿಸಿದ್ದು ನೈರ್ಮಲ್ಯಸಾಧನಕ್ಕೂ , ಅವಳಿಗೆ ವಿಜ್ಞಾನ ಕರುಣಿಸಿದ್ದು ನಿರಂತರ ಸ್ಮೃತಿಗೂ, ಸಾಮ್ರಾಜ್ಯದ ಭೋಗಗಳನ್ನು[೬] ತೊರೆದದ್ದು ವೈರಾಗ್ಯಭಾಗ್ಯವನ್ನು ಕರುಣಿಸುವುದಕ್ಕೂ ದ್ಯೋತಕವಾಗಿದೆ; ಆದ್ದರಿಂದ ಶ್ರೀರಾಮಪಾದದ ಆಶ್ರಯದಿಂದ ನೈರ್ಮಲ್ಯ, ವಿಜ್ಞಾನ, ವೈರಾಗ್ಯಗಳು ಕ್ರಮವಾಗಿ ಲಭಿಸುತ್ತವೆ ಎಂದು ಭಾವ.

೩. ಆದ್ದರಿಂದಲೇ ಇಲ್ಲಿರುವ ಅಲಂಕಾರಕ್ಕೆ 'ಕ್ರಮಾಲಂಕಾರ' ಎಂದು ಹೆಸರು.[೭]

---

೧. ಸಂಸ್ಪರ್ಶನಮಾತ್ರೇಣ ಚೈತನ್ಯಪ್ರಾಪ್ತೇರಿತಿ ಭಾವಃ। -ವ್ಯಾಖ್ಯಾನ

೨. ರಾಜ್ಯಂ ತ್ಯಕ್ತ್ವಾ ವನಂ ಗತತ್ವಾದಿತಿ ಭಾವಃ। -ವ್ಯಾಖ್ಯಾನ

೩. ಅನವರತಸ್ಮರಣಾರ್ಥಮಿತಿ ಭಾವಃ। -ವ್ಯಾಖ್ಯಾನ

೪. ಅಂತಃಕರಣಶುದ್ಧಿಜ್ಞಾನವೈರಾಗ್ಯಭಾಗ್ಯಪ್ರದಾನೇ ಕ್ಷಮಂ ಶ್ರೀರಾಮಾಂಘ್ರಿಂ ಭಜೇ ಇತ್ಯರ್ಥಃ।ವ್ಯಾ

೫. ಇದು ಪ್ರಾಯಃ ರಾಮೇಶ್ವರದಿಂದ ಸುಮಾರು ೫ ಕಿ.ಮೀ. ದೂರದಲ್ಲಿನ ಗಂಧಮಾದನ ಎಂಬಲ್ಲಿ ಇರುವ ಶ್ರೀರಾಮಪಾದದ ವರ್ಣನೆ.

೬. ತ್ಯಕ್ತ್ವಾ ಸುರೇಪ್ಸಿತಸುದುಸ್ತ್ಯಜರಾಜ್ಯಲಕ್ಷ್ಮೀಂ
ಧರ್ಮಿಷ್ಠಮಾರ್ಯವಚಸಾ ಯದಗಾದರಣ್ಯಮ್ ।
ಮಾಯಾಮೃಗಂ ದಯಿತಯೇಪ್ಸಿತಮನ್ವಧಾವ -
ದ್ವಂದಾಮಹೇ ಪುರುಷ ತೇ ಚರಣಾರವಿಂದಮ್ ॥ -ಭಾಗವತ(೧೧/೪/೮)

೭. ಈ ಪ್ರಸಂಗದಲ್ಲಿ ಅಹಲ್ಯೆಯ ದೋಷ ಏನೂ ಇರಲಿಲ್ಲ ಎಂಬುದಾಗಿ ಮಹಾಭಾರತನಿರ್ಣಯ ಭಾವ ಪ್ರಕಾಶಿಕೆಯಲ್ಲಿ ಶ್ರೀವಾದಿರಾಜರು ಬರೆದಿರುವರು:

ಕಪಿಕಟಕಧುರೀಣಃ ಕಾರ್ಮುಕನ್ಯಸ್ತಬಾಣಃ
ಕ್ಷಪಿತದಿತಿಜಸೈನ್ಯಃ ಕ್ಷತ್ರಿಯೇಷ್ವಗ್ರಗಣ್ಯಃ ।
ಜಲಧಿರಚಿತಸೇತುರ್ಜಾನಕೀತೋಷಹೇತುಃ
ಪಥಿ ಪಥಿ ಗುಣಸಾಂದ್ರಃ ಪಾತು ಮಾಂ ರಾಮಚಂದ್ರಃ ॥೨೯॥

ಅ: ಕಪಿಕಟಕಧುರೀಣಃ = ಕಪಿಸೇನಾಧುರಂಧರನಾದ; ಕಾರ್ಮುಕನ್ಯಸ್ತಬಾಣಃ = ಬಿಲ್ಲಿನಲ್ಲಿ ಬಾಣವನ್ನು ಹೂಡಿರುವ; ಕ್ಷಪಿತದಿತಿಜಸೈನ್ಯಃ = ದೈತ್ಯಸೈನ್ಯವನ್ನು ನಾಶಗೊಳಿಸಿರುವ; ಕ್ಷತ್ರಿಯೇಷು ಅಗ್ರಗಣ್ಯಃ = ಕ್ಷತ್ರಿಯರಲ್ಲಿ ಅಗ್ರಮಾನ್ಯನಾಗಿರುವ; ಜಲಧಿರಚಿತಸೇತುಃ = ಸಮುದ್ರದಲ್ಲಿ ಸೇತುವನ್ನು ಕಟ್ಟಿರುವ; ಜಾನಕೀತೋಷಹೇತುಃ = ಸೀತೆಯ ಸಂತಸಕ್ಕೆ ಕಾರಣನಾಗಿರುವ; ಗುಣಸಾಂದ್ರಃ = ಗುಣಪೂರ್ಣನಾದ; ರಾಮಚಂದ್ರಃ = ಶ್ರೀರಾಮಚಂದ್ರನು; ಪಥಿ ಪಥಿ = ಪ್ರತಿಮಾರ್ಗದಲ್ಲೂ; ಮಾಂ = ನನ್ನನ್ನು; ಪಾತು = ಪಾಲಿಸಲಿ.

ಕಪಿವೃಂದಕ್ಕೆ ಧುರೀಣನು; ಬಿಲ್ಲಿನಲ್ಲಿ ಬಾಣ ಹೂಡಿರುವವನು; ದೈತ್ಯಸೇನೆಯನ್ನು ಸದೆಬಡಿದವನು; ಕ್ಷತ್ರಿಯರಲ್ಲಿ ಅಗ್ರಗಣ್ಯನು; ಸಮುದ್ರಕ್ಕೆ ಸೇತುವೆ ಕಟ್ಟಿದವನು; ಜಾನಕಿಗೆ ಮುದ ನೀಡಿದವನು; ಇಂತಹ ಗುಣಪೂರ್ಣನಾದ ಶ್ರೀರಾಮಚಂದ್ರನು ನನ್ನನ್ನು ಪ್ರತಿಮಾರ್ಗದಲ್ಲೂ ಪಾಲಿಸಲಿ.

ವಿ: ೧. ಶ್ರೀರಾಮನು 'ಕಪಿಸೇನಾನಾಯಕನೂ', ಬಿಲ್ಲಿನಲ್ಲಿ ಬಾಣವನ್ನು ಹೂಡಿರುವವನೂ, ದೈತ್ಯಸೈನ್ಯವನ್ನು ನಾಶಪಡಿಸಿದವನೂ, ಕ್ಷತ್ರಿಯರಲ್ಲಿ ಅಗ್ರಗಣ್ಯನೂ, ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿದವನೂ, ಗುಣಪೂರ್ಣನೂ ಆಗಿರುವನು; ಇಂತಹ ಶ್ರೀರಾಮನು ಪ್ರತಿಮಾರ್ಗದಲ್ಲೂ ನನ್ನನ್ನು ರಕ್ಷಿಸಲಿ ಎಂದು ತುಂಬು ಭಕ್ತಿಯಿಂದ ಶ್ರೀವಾದಿರಾಜರು ಇಲ್ಲಿರುವ ಶ್ಲೋಕಗಳಲ್ಲಿ ವರ್ಣಿಸಿರುವರು.

೨. ಮಾರ್ಗದಲ್ಲಿ ರಕ್ಷಿಸುವನು ಶ್ರೀರಾಮರೂಪದ ಶ್ರೀಹರಿ ಎಂಬುದು ಭಾಗವತ-ಪುರಾಣದ ನಾರಾಯಣವರ್ಮದಲ್ಲಿ ಉಕ್ತವಾಗಿದೆ[೧].

೩. ವೈಷ್ಣವರು ಮನೆಬಿಟ್ಟು ತೆರಳುವಾಗ, ಸುರಕ್ಷಿತಪ್ರಯಾಣಕ್ಕಾಗಿ ಅವಶ್ಯ ಪಠಿಸಬೇಕಾದ ಸ್ತೋತ್ರವನ್ನಾಗಿಯೂ ಈ ಶ್ಲೋಕವನ್ನು ಉಪಯೋಗಿಸಿಕೊಳ್ಳಬಹುದು;

## ತಾಮ್ರಪರ್ಣೀ(ನದಿ)

ತಾಮ್ರಪರ್ಣೀಸರಿತ್ತೋಯಂ ಸೇವನೀಯಂ ಮುಮುಕ್ಷುಭಿಃ ।
ಮುಕ್ತೀಕರೋತಿ ತತ್ರತ್ಯಾ ಶುಕ್ತಿಶ್ಚ ಪತಿತಂ ಜಲಮ್ ॥ ೩೦ ॥

---

ಅನೇನ ನಾಹಲ್ಯಾಯಾಃ ಅಪರಾಧೋಽಸ್ತೀತಿ ಸೂಚಿತಮ್ । (೪/೧೦)

೧. ೩. ರಾಮೋಽದ್ರಿಕೂಟೇಷ್ವಥ ವಿಪ್ರವಾಸೇ ಸಲಕ್ಷ್ಮಣೋಽವ್ಯಾದ್ಭರತಾಗ್ರಜೋಽಮಾಮ್॥

ಅ: ಮುಮುಕ್ಷುಭಿಃ = ಮೋಕ್ಷೇಚ್ಛುಗಳಿಂದ; ತಾಮ್ರಪರ್ಣೀಸರಿತ್ತೋಯಂ = ತಾಮ್ರಪರ್ಣೀನದಿಯ ಜಲವು; ಸೇವನೀಯಂ = ಅವಶ್ಯ ಸೇವಿಸಲ್ಪಡಬೇಕು; (ಏಕೆಂದರೆ) ತತ್ರತ್ಯಾ = ಆ ತಾಮ್ರಪರ್ಣೀನದಿಯ ನೀರಿನಲ್ಲಿರುವ; ಶುಕ್ತಿಃ ಚ[೧] = ಮುತ್ತಿನ ಚಿಪ್ಪು (ಕಪ್ಪೇಚಿಪ್ಪು) ಸಹ; ಪತಿತಂ[೨] = ತನ್ನಲ್ಲಿ ಬಿದ್ದ (ಪತಿತನನ್ನು); ಜಲಂ[೩] = (ಮಳೆಯ) ನೀರನ್ನು; ಮುಕ್ತೀಕರೋತಿ = ಮುಕ್ತನನ್ನಾಗಿ[೪] ಮಾಡುತ್ತದೆ.

ಎಲ್ಲಿಯ ಕಪ್ಪೆಚಿಪ್ಪು ಸಹ ತನ್ನಲ್ಲಿ ಬೀಳುವ ನೀರನ್ನೂ ಮುತ್ತನ್ನಾಗಿಸುವುದೋ, ಅಂತಹ ತಾಮ್ರಪರ್ಣೀನದಿಯ ಜಲವನ್ನು ಮುಮುಕ್ಷುಗಳು ಸೇವಿಸಬೇಕು.

ವಿ: ೧. 'ತಿರುನೆಲ್ವೇಲಿ'[೫] ಎಂಬ ತಮಿಳುನಾಡಿನ ಪಟ್ಟಣದ ಬಳಿ ಈ 'ತಾಮ್ರಪರ್ಣೀ' ನದಿಯು ಹರಿಯುತ್ತದೆ. ಅಲ್ಲಿಂದ ಸುಮಾರು ೩೭ ಕಿ.ಮೀ. ದೂರದಲ್ಲಿ ಅಂಬಾ ಸಮುದ್ರ ಎಂಬ ಸ್ಥಳದಿಂದ ೯ ಕಿ.ಮೀ. ದೂರದಲ್ಲಿ ಸುಮಾರು ೮೦ ಅಡಿ ಆಳಕ್ಕೆ ತಾಮ್ರಪರ್ಣೀ ನದಿಯು ಧುಮುಕುತ್ತದೆ. ಅದಕ್ಕೆ ಪಾಪನಾಶನತೀರ್ಥ ಎಂದು ಹೆಸರು. ಭಾಗವತ, ಕೂರ್ಮ ಮೊದಲಾದ ಪುರಾಣಗಳಲ್ಲಿ ವರ್ಣಿತವಾಗಿರುವ ಈ ನದಿಯು ತನ್ನ ಜಲಪಾನದಿಂದ ಹರಿಭಕ್ತಿಯನ್ನು ಹುಟ್ಟಿಸುವ ಅಪೂರ್ವನದಿಗಳಲ್ಲಿ ಒಂದು ಎಂಬ ಮಾತು ಭಾಗವತಪುರಾಣದಲ್ಲಿದೆ.[೬]

೨. [೭]ತಾಮ್ರಪರ್ಣೀನದಿಯ ಜಲದಲ್ಲಿರುವ ಮುತ್ತಿನಚಿಪ್ಪು ಸಹ ತನ್ನಲ್ಲಿ ಬಿದ್ದ (ಮಳೆ)ನೀರನ್ನು ಮುತ್ತನ್ನಾಗಿ ಮಾಡುತ್ತದೆ; ಹೀಗೆ ಜಲ(ಡ)ವನ್ನೂ ಮುತ್ತನ್ನಾಗಿಸುವ ತಾಮ್ರಪರ್ಣೀನದಿಯ ಜಲವು ಮುಕ್ತಿಯನ್ನು ಬಯಸುವ ಜನರಿಂದ ಅವಶ್ಯ ಸೇವಿಸಲ್ಪಡಬೇಕು.[೮]

---

೧. ಚ ಶಬ್ದೋಽಪ್ಯರ್ಥಃ। -ವ್ಯಾ

೨. ಸದಾಚಾರಭ್ರಷ್ಟಮಿತಿ ಧ್ವನಿಃ। -ವ್ಯಾ

೩. ಜಡಮಿತಿ ಧ್ವನಿಃ। -ವ್ಯಾ

೪. ಸಂಸಾರಾನ್ಮುಕ್ತಂ ಕರೋತೀತ್ಯರ್ಥಃ। -ವ್ಯಾ

೫. ತಿರುನಲ್ವೇಲಿಯಲ್ಲಿ ಶ್ರೀಶ್ರೀಪಾದರಾಜರ ವಿದ್ಯಾಗುರುಗಳಾದ ಶ್ರೀವಿಬುಧೇಂದ್ರತೀರ್ಥರ ಮೂಲ-ಬೃಂದಾವನ ಉಂಟು.

೬. ತಾಮ್ರಪರ್ಣೀ ನದೀ ಯತ್ರ ಕೃತಮಾಲಾ ಪಯಸ್ವಿನೀ..... ।
ಪ್ರಾಯೋ ಭಕ್ತಾ ಭಗವತಿ ವಾಸುದೇವೇಽಮಲಾಶಯಾಃ। – ಭಾಗವತ (೧೧/೫/೩೯-೪೧)

೭. ತಾಮ್ರಪರ್ಣೀಯು ಭೀಮರಥಿಗೆ ಸಮಾನ; ಇದರಲ್ಲಿ ಅನಂತನನ್ನು ಚಿಂತಿಸಬೇಕು.

೮. ತಾಮ್ರಪರ್ಣೀಜಲಜನ್ಯಾ ಶುಕ್ತಿರಪಿ ಪಾಪಿನಂ ಮೂರ್ಖಂ ಮುಕ್ತಿಕರೋತಿ ಕಿಮುತ ತತ್ತೋಯಂ।
ಅತೋ ಮುಮುಕ್ಷುಭಿಃ ಸೇವನೀಯಮಿತಿಧ್ವನಿಲಭ್ಯೋಽರ್ಥಃ। -ವ್ಯಾ
ತಾಮ್ರಪರ್ಣ್ಯರ್ಘ್ಯಮಂತ್ರಃ
ಮಲಯಾಚಲಸಂಭೂತೇ ಮುಕ್ತಾಹಾರವಿಭೂಷಿತೇ।
ತಾಮ್ರಪರ್ಣೀತಿ ವಿಖ್ಯಾತೇ ಗೃಹಾಣಾರ್ಘ್ಯಂ ನಮೋಽಸ್ತು ತೇ॥

೩. ಜಲವನ್ನು ಮುಕ್ತನ್ನಾಗಿಸುವ ಈ ನದಿಯ ನೀರು ಜಡವನ್ನು ಸಹ ಮುಕ್ತನನ್ನಾಗಿಸುತ್ತದೆ ಎಂದ ಮೇಲೆ ಚೇತನರನ್ನು ಮುಕ್ತರನ್ನಾಗಿಸುತ್ತದೆ ಎಂಬುದು ಕೈಮುತ್ತ್ಯಯಸಿದ್ಧ ಎಂಬಲ್ಲಿನ ಕಾವ್ಯಧ್ವನಿಯು ಅಪೂರ್ವವಾದುದು.

೪. ಇಲ್ಲಿ 'ಪತಿತಂ' ಎಂಬುದಕ್ಕೆ 'ಸದಾಚಾರಭ್ರಷ್ಟ' ಎಂದೂ 'ಜಲ' ಎಂಬುದಕ್ಕೆ 'ಜಡಂ' ಎಂದೂ 'ಮುಕ್ತೀಕರೋತಿ' ಎಂಬುದಕ್ಕೆ ಸಂಸಾರನ್ಮುಕ್ತಂ ಕರೋತಿ ಎಂದೂ 'ಧ್ವನಿ'.

## ಮಹೇಂದ್ರ ಪರ್ವತ

**ತರಣಿರಿವ ಹನೂಮಾನ್ ಪ್ರಾಪ ಲಂಕಾಂ ದಿದೃಕ್ಷು-**
**ರ್ಧರಣಿ ತವ ತನೂಜಾಂ ನೈವ ಭೇತವ್ಯಮಂಬ ।**
**ಇತಿ ಗದಿತುಮಿವಾಂತಃಪ್ರಾಪಿತೋ ಭಾತಿ ಭೂಮೇಃ**
**ಪವನಸುತಜವೇನಾಮಂದಮಾಹೇಂದ್ರಶೈಲಃ ॥ ೩೧ ॥**

**ಅ:** (ಹೇ) **ಧರಣಿ !** = ಎಲೈ ಭೂದೇವಿಯೇ !; **ತವ** = ನಿನ್ನ; **ತನೂಜಾಂ** = ಮಗಳಾದ ಸೀತೆಯನ್ನು; **ದಿದೃಕ್ಷುಃ** = ಕಾಣುವ ಅಪೇಕ್ಷೆಯುಳ್ಳವಳಾಗಿ; **ಹನೂಮಾನ್** = ಹನುಮಂತನು; **ತರಣಿಃ ಇವ** = ಸೂರ್ಯನಂತೆ; **ಲಂಕಾಂ** = ಲಂಕಾಪಟ್ಟಣವನ್ನು; **ಪ್ರಾಪ** = ತಲುಪಿದನು; (ಹೇ) **ಅಂಬ** = ಅಮ್ಮ ಭೂದೇವಿಯೇ !; (ಆದ್ದರಿಂದ **ತ್ವಯಾ** = ನಿನ್ನಿಂದ); **ನೈವ ಭೇತವ್ಯಂ** = ಭಯಪಡಬೇಕಾಗಿಲ್ಲ; **ಇತಿ** = ಎಂಬುದಾಗಿ; **ಗದಿತಂ ಇವ** = ತಿಳಿಸಲೋ ಎಂಬಂತೆ; **ಪವನಸುತಜವೇನ** = ವಾಯುಪುತ್ರನಾದ ಹನುಮಂತನ ವೇಗದಿಂದ; **ಭೂಮೇಃ** = ಭೂಮಿಯ; **ಅಂತಃ** = ಒಳಕ್ಕೆ; **ಪ್ರಾಪಿತಃ** = ಕಳುಹಿಸಲ್ಪಟ್ಟಿರುವ, **ಅಮಂದಮಾಹೇಂದ್ರಶೈಲಃ** = ಉನ್ನತವಾದ ಮಹೇಂದ್ರ ಪರ್ವತವು; **ಭಾತಿ** = ಕಂಗೊಳಿಸುತ್ತಿರುವುದು.

ಅಮ್ಮ ಭೂದೇವಿಯೇ ! ನಿನ್ನ ಪುತ್ರಿಯಾದ ಸೀತೆಯನ್ನು ಕಾಣಲೆಂದು ಹನುಮಂತನು ಸೂರ್ಯನಂತೆ ಲಂಕಾಪಟ್ಟಣಕ್ಕೆ ತೆರಳಿದ; ಆದ್ದರಿಂದ 'ನೀನು ಅಂಜಬೇಕಿಲ್ಲ' ಎಂದು ತಿಳಿಸಲೋ ಎಂಬಂತೆ ಆಂಜನೇಯನ ವೇಗದಿಂದ ಭೂಮಿಯ ಒಳಕ್ಕೆ ತುಳಿಯಲ್ಪಟ್ಟಿರುವ, ಉನ್ನತವಾದ ಮಹೇಂದ್ರಪರ್ವತವು ಶೋಭಿಸುತ್ತಿರುವುದು.

ವಿ: ೧. ಸುಂದರಕಾಂಡರಾಮಾಯಣದಲ್ಲಿ ಹನುಮಂತನು ಲಂಕೆಗೆ ಹಾರಲು ಏರಿನಿಂತ ಈ ಮಹೇಂದ್ರಪರ್ವತವನ್ನು ಬಹಳವಾಗಿ ವರ್ಣಿಸಿರುವರು; ಹನುಮಂತನು ತುಳಿದು ಮೇಲಕ್ಕೆ ಹಾರಿದ್ದ ರಭಸಕ್ಕೆ ಈ ಪರ್ವತದ ಬಹುಭಾಗ ಭೂಮಿಯೊಳಗೆ ಮುಚ್ಚಿ ಹೋಯಿತು ಎಂದು ಪ್ರತೀತಿ.

೨. 'ಅಮ್ಮಾ ! ಭೂಮಿ ! ನಿನ್ನ ಮಗಳಾದ ಜಾನಕಿಯ ಕ್ಷೇಮ ವಾರ್ತೆಯನ್ನು ತಿಳಿದು ಬರಲೆಂದು ಶ್ರೀಹನುಮಂತನು ಸೂರ್ಯನೋಪಾದಿಯಲ್ಲಿ ಸಾಗರವನ್ನ ದಾಟಿ ತೆರಳಿರುವನು.

ಆದ್ದರಿಂದ ನೀನು ಚಿಂತಿಸಬೇಕಿಲ್ಲ' ಎಂಬ ಸಂದೇಶವನ್ನು ಭೂಮಿಗೆ ನೀಡಲೋ ಎಂಬಂತೆ ಮಹೇಂದ್ರಪರ್ವತವು ಭೂಮಿಯೊಳಗೆ ಕಳುಹಿಸಲ್ಪಟ್ಟಿದೆ ಎಂದು ಶ್ರೀವಾದಿರಾಜರು ಉತ್ಪ್ರೇಕ್ಷಿಸಿರುವರು.

೩. ಮಹೇಂದ್ರಪರ್ವತವನ್ನು ಭೂಮಿಯೊಳಕ್ಕೆ ತುಳಿಯುವಲ್ಲೂ ಹನುಮಂತನು ಭೂಮಿಯನ್ನು ಸಾಂತ್ವನಪಡಿಸುವ ಉದಾತ್ತಧ್ಯೇಯವನ್ನೇ ಹೊಂದಿದ್ದನೆಂಬುದು ಇಲ್ಲಿಯ ಧ್ವನಿ.

೪. ಹನುಮಂತನು ಕೈಗೊಂಡ ಕೆಲಸ ಎಂದ ಮೇಲೆ ಅದಕ್ಕೆ ಯಶಸ್ಸು ಖಚಿತ ಎಂಬ ಇಲ್ಲಿಯ ಸೂಚನೆಯಲ್ಲಿ ಶ್ರೀವಾಯುದೇವರ ಜೀವೋತ್ತಮತ್ವವು ಸಹ ನಿರೂಪಿತವಾಗಿದೆ.

## ಕನ್ಯಾದೇವೀ ಮತ್ತು ಕನ್ಯಾತೀರ್ಥ(ಕನ್ಯಾಕುಮಾರೀಕ್ಷೇತ್ರ)

**ಯಾ ಸೂತೇ ಸೇವಮಾನಾನಾಂ ಭಾಗ್ಯಾರೋಗ್ಯಾಪುನರ್ಭವಾನ್ ।**
**ಕನ್ಯಾ ಕಿಲೇಯಂ ತೀರ್ಥಂ ಚ ಕನ್ಯಾತೀರ್ಥಮಿದಂ ಕಿಲ ॥ ೩೨ ॥**

ಅ: **ಯಾ** = ಯಾವಳು(ಮತ್ತು ಯಾವುದು); **ಸೇವಮಾನಾನಾಂ** = ತಮ್ಮನ್ನು ಸೇವಿಸುವವರಿಗೆ; **ಭಾಗ್ಯಾರೋಗ್ಯಾಪುನರ್ಭವಾನ್** = ಐಶ್ವರ್ಯ, ಆರೋಗ್ಯ ಮತ್ತು ಮೋಕ್ಷಗಳನ್ನು; **ಸೂತೇ** = ಪ್ರಸವಿಸಿ ಕೊಡುವಳೋ(ಪ್ರಸವಿಸಿಕೊಡುವುದೋ) (ಸಾ) ಇಯಂ = ಅಂತಹ ಈ; (ದೇವಿ) ಕನ್ಯಾಕುಮಾರಿಯು; **ಕನ್ಯಾ ಕಿಲ** = ಕನ್ಯೆಯಂತೆ !; **ಚ** = ಮತ್ತು; ಇದಂ=ಈ; **ತೀರ್ಥಂ** = ತೀರ್ಥವು; **ಕನ್ಯಾತೀರ್ಥಂ ಕಿಲ**[1] = ಕನ್ಯಾತೀರ್ಥವಂತೆ !

**ತಮ್ಮನ್ನು ಸೇವಿಸುವವರಿಗೆ ಐಶ್ವರ್ಯ, ಆರೋಗ್ಯ ಮತ್ತು ಮೋಕ್ಷಗಳನ್ನು ಪ್ರಸವಿಸಿಕೊಡುವ ಈ ದೇವಿ ಕನ್ಯಾಕುಮಾರಿಯು ಕನ್ಯೆಯಂತೆ ! ಮತ್ತು ಈ ತೀರ್ಥವು ಕನ್ಯಾತೀರ್ಥವಂತೆ !**

ವಿ: ೧. ಐಶ್ವರ್ಯಾದಿಗಳನ್ನು ತನ್ನ ಭಕ್ತರಿಗೆ ಕರುಣಿಸುವ ಈ ಕನ್ಯಾಕುಮಾರಿಯು ಕನ್ಯೆ ಹೇಗಾದಾಳು? ಎಂದಮೇಲೆ ಈ ತೀರ್ಥವು ಹೇಗೆ ಕನ್ಯಾತೀರ್ಥವಾದೀತು? ಎಂದು ಉಪಹಾಸಪೂರ್ವಕ ಸ್ತುತಿಸಿರುವರು. ಕನ್ಯಾಕುಮಾರಿ ಮತ್ತು ಕನ್ಯಾತೀರ್ಥಗಳನ್ನು ಸೇವಿಸುವವರಿಗೆ ಐಹಿಕಮುಷ್ಮಿಕ ಸಕಲವಿಧ ಪುರುಷಾರ್ಥಗಳೂ ಲಭಿಸುವವು ಎಂದು ಭಾವ.[2]

೨. ಬಂಗಾಳಕೊಲ್ಲಿ, ಅರಬ್ಬೀಸಮುದ್ರ ಮತ್ತು ಹಿಂದೂಮಹಾಸಾಗರಗಳೆಂಬ ಸಾಗರತ್ರಯಗಳ ಸಂಗಮ ಎಂಬುದು ಈ ಕನ್ಯಾಕುಮಾರಿ ಕ್ಷೇತ್ರದ ವೈಶಿಷ್ಟ್ಯ.; ಚೈತ್ರ ಶುದ್ಧ ಪೂರ್ಣಿಮೆಯಂದು ಸೂರ್ಯೋದಯ ಮತ್ತು ಚಂದ್ರಾಸ್ತಗಳನ್ನೂ ಇಲ್ಲಿ ನೋಡಬಹುದು ಎನ್ನುವರು. ಅಲ್ಲಿ ಸಾವಿತ್ರಿ, ಗಾಯತ್ರೀ, ಸರಸ್ವತೀ, ಪಾಪವಿನಾಶ ಮೊದಲಾದ ಅನೇಕ ತೀರ್ಥಗಳಿದ್ದು, ಅವುಗಳಲ್ಲಿ ಕನ್ಯಾತೀರ್ಥವು ಪ್ರಧಾನವಾಗಿದೆ. ಈ ಕನ್ಯಾತೀರ್ಥದ ವರ್ಣನೆಯು ಮಹಾಭಾರತದಲ್ಲಿ ಬಂದಿದೆ.

---

೧. ಕಿಲೇತ್ಯುಪಹಾಸಃ । -ವ್ಯಾ

೨. ಕನ್ಯಾಕುಮಾರೀಕನ್ಯಾತೀರ್ಥಸೇವಿನಾಂ ಐಹಿಕಾಮುಷ್ಮಿಕಪುರುಷಾರ್ಥೋ ಭವತೀತಿ ಭಾವಃ । -ವ್ಯಾ

೩. ಇಲ್ಲಿ ಕನ್ಯಾಕುಮಾರಿಯ ವಿಗ್ರಹವು ತುಂಬಾ ಮನೋಹರಾಗಿದ್ದು ನವರಾತ್ರಿಯಲ್ಲಿ ವಿಶೇಷ ಉತ್ಸವ ನಡೆಯುತ್ತದೆ. ಶಿವವರದಿಂದಾಗಿ ಕನ್ಯೆಯರಿಂದ ಹೊರತು ಬೇರೆಯವರಿಂದ ಅವಧ್ಯನಾಗಿದ್ದ 'ಬಾಣ'ನೆಂಬ ರಾಕ್ಷಸನ ಸಂಹಾರಕ್ಕಾಗಿ ಮಹಾವಿಷ್ಣುವಿನ ಆಜ್ಞೆಯಿಂದ ಅವತರಿಸಿದ ದುರ್ಗಾದೇವಿಯೇ ಈ 'ಕನ್ಯಾಕುಮಾರಿ' ಎಂದು ಸ್ಥಳ ಪುರಾಣದಲ್ಲಿದೆ.

೪. ಈ ಕನ್ಯಾಕುಮಾರಿಯ ವಜ್ರಮೂಗುತಿಯು ನಾವಿಕರಿಗೆ ದೀಪಗೃಹ (Light House)ಯಂತೆ ಮಾರ್ಗದರ್ಶಕವಾಗಿದ್ದಿತು ಎಂದು ಪ್ರತೀತಿ.

೫. ಅರ್ಜುನನು ತನ್ನ ತೀರ್ಥಯಾತ್ರಾಪ್ರಸಂಗದಲ್ಲಿ ಈ ಕನ್ಯಾತೀರ್ಥದಲ್ಲಿ ಮೊಸಳೆಯ ರೂಪದಲ್ಲಿದ್ದ 'ವರ್ಗಾ' ಮೊದಲಾದ ಐವರು ಅಪ್ಸರೆಯರನ್ನು ಒಂದೇ ಸಲಕ್ಕೆ ಮೇಲಕ್ಕೆ ಎಳೆದು ಶಾಪದಿಂದ ಮುಕ್ತರನ್ನಾಗಿ ಮಾಡಿದ ವಿಷಯವು, ಮಹಾಭಾರತದಲ್ಲೂ, ತಾತ್ಪರ್ಯ-ನಿರ್ಣಯದಲ್ಲೂ ಬಂದಿದೆ:

.......................... ಗಚ್ಛನ್ ಪ್ರಭಾಸಂ ಶಾಪತೋ ಗ್ರಾಹದೇಹಾಃ।
ಅಮೂಮುಚಚ್ಚಾಪ್ಸರಸಃ ಸ ಪಂಚ ತಾಭಿರ್ಗೃಹೀತಃ ಪ್ರವಿಕೃಷ್ಯ ತೀರಮ್।
ಏವಂ ತಾಸಾಂ ಶಾಪಮೋಕ್ಷಃ ಪ್ರದತ್ತಃ ಯದಾऽಖಿಲಾಪ್ಪೋ ಯುಗಪತ್ಸಂಪ್ರಕರ್ಷಯೇತ್।
ಏಕಸ್ತದಾ ನಿಜರೂಪಾಪ್ತಿರೇವೇತ್ಯಲಂ ತುಷ್ಟೇನ ಬ್ರಾಹ್ಮಣೇನಾನತಾನಾಮ್।
ವಿಪ್ರಾಪಹಾಸಾತ್ ಕುತ್ಸಿತಯೋನಿತಸ್ತಾಃ ಕನ್ಯಾತೀರ್ಥೇ ಪಾಂಡವಃ ಸಂಪ್ರಮೋಚ್ಯ॥

-ಮಹಾಭಾರತತಾತ್ಪರ್ಯನಿರ್ಣಯ (೨೧೬/೩-೫)

ಕನ್ಯಾತೀರ್ಥದ ಸ್ಪರ್ಶವು ಸಹ ಸಕಲಪಾಪಮೋಚಕ ಎಂಬುದಾಗಿ ಮಹಾಭಾರತದಲ್ಲಿದೆ:

ತತಸ್ತೀರೇ ಸಮುದ್ರಸ್ಯ ಕನ್ಯಾತೀರ್ಥಮುಪಸ್ಪೃಶೇತ್।
ತತ್ರೋಪಸ್ಪೃಶ್ಯ ರಾಜೇಂದ್ರ ಸರ್ವಪಾಪೈಃ ಪ್ರಮುಚ್ಯತೇ॥

– (ವನಪರ್ವ ಅ.೮೫, ಶ್ಲೋ.೨೩)

೬. ತನ್ನ ತೀರ್ಥಯಾತ್ರಾಪ್ರಸಂಗದಲ್ಲಿ ಬಲರಾಮನು ಈ ಕನ್ಯಾತೀರ್ಥವನ್ನು ಸಂದರ್ಶಿ-ಸಿದ್ದ ವಿವರವು ಭಾಗವತಪುರಾಣದಲ್ಲಿದೆ(೧೦/೭೭/೧೮).

೭. ಶ್ರೀಮಧ್ವಾಚಾರ್ಯರು ತಮ್ಮ ದಿಗ್ವಿಜಯ ಕಾಲದಲ್ಲಿ ಇದನ್ನು ಸಂದರ್ಶಿಸಿ ತಮ್ಮ ಸ್ನಾನದಿಂದ ಪಾವನಗೊಳಿಸಿದ ವಿವರವು ಸುಮಧ್ವವಿಜಯದಲ್ಲಿ ಬಂದಿದೆ(೫/೪೨)[1]:

---

೧. ಸ್ನಾತ್ವಾತ್ರ ತೀರ್ಥೇಷ್ವಚಿರೇಣ ಕನ್ಯಕಾತೀರ್ಥೇ ಸುತೀರ್ಥೇ ಸುಖತೀರ್ಥ ಆಪ್ಲುತಃ।
ಸಮುದ್ರಸೇತೌ ಚ ನಿಮಜ್ಯ ವಿಷ್ಣವೇ ಶ್ರೀರಾಮನಾಥಾಯ ನಮಶ್ಚಕಾರ ಸಃ॥
ಕನ್ಯಾದೇವೀ ಸ್ವವಿವಾಹಾಶಯಾऽऽಗತಸ್ಯ ಬಾಣಾಸುರಸ್ಯ ವಧಂ ತತ್ರ ಕೃತವತೀತಿ ಕಥಾ।
ಗೋಕರ್ಣಾತ್ ಪರಶುರಾಮಪ್ರಯುಕ್ತೋ ಬಾಣಃ ಕನ್ಯಾಕುಮಾರೀ ಪ್ರಾಂತೇ ಪತಿತಃ॥

ಇತಿ ಕಥಾ ಚ ಪುರಾಣಪ್ರಸಿದ್ಧಾ।

-ವ್ಯಾಖ್ಯಾನ

## ಕನ್ಯಾಕುಮಾರಿಯು ಮಹಾಲಕ್ಷ್ಮಿ

**ಸಹಧರ್ಮಂ ವಿದಧತೀಮಿವ ಬಾಣಾಂತಕಾರಿಣೀಮ್ ।**
**ವಾರ್ಧೌ ಸ್ನಿಗ್ಧಾಮಿಮಾಂ ರಮ್ಯಾಂ ಕನ್ಯಾಂ ಮನ್ಯಾಮಹೇ ರಮಾಮ್ ॥೩೩॥**

ಅ: **ಬಾಣಾಂತಕಾರಿಣೀಂ** = ಬಾಣನೆಂಬ ಅಸುರನನ್ನು ಸಂಹಾರಮಾಡಿರುವ; (ಶ್ರೀಪರಶುರಾಮದೇವರಿಂದ ಬಿಡಲ್ಪಟ್ಟ ಬಾಣಕ್ಕೆ ಕೊನೆಯಾಗಿರುವ); **ವಾರ್ಧೌ**= ಸಮುದ್ರದಲ್ಲಿ; **ಸ್ನಿಗ್ಧಾಂ** = ಸ್ನೇಹವನ್ನು ಹೊಂದಿರುವ; **ರಮ್ಯಾಂ** = ಮನೋಹರಳಾದ; **ಇಮಾಂ** = ಈ; **ಕನ್ಯಾಂ** = ಕನ್ಯಾಕುಮಾರಿಯನ್ನು; **ಸಹಧರ್ಮಂ** = ತನ್ನ ಪತಿಯಾದ ನಾರಾಯಣನಿಗೆ ಸದೃಶವಾದ ಧರ್ಮವನ್ನು; **ವಿದಧತೀಂ ಇವ** = ಅನುಷ್ಠಾನ ಮಾಡುತ್ತಿರುವಳೋ (ಎಂಬಂತೆ ಇರುವ); **ರಮಾಂ** = ಮಹಾಲಕ್ಷ್ಮಿಯೆಂದೇ; **ಮನ್ಯಾಮಹೇ** = ತಿಳಿಯುವೆವು.

ಬಾಣಾಸುರನಿಗೆ ಮೃತ್ಯುವಾದ ಕನ್ಯಾಕುಮಾರಿಯು, ಶ್ರೀಪರಶುರಾಮದೇವರ ಬಾಣಕ್ಕೆ ಕೊನೆ ಎನ್ನಿಸುವವಳಾಗಿ, ತನ್ನ ಪತಿ ನಾರಾಯಣನಿಗೆ ಸಮಾನಧರ್ಮವನ್ನು ಆಚರಿಸುವಂತಿರುವಳು; ಸಮುದ್ರದತ್ತ ಸ್ನೇಹಪೂರ್ಣ ನೋಟ ಹೊಂದಿರುವ ಮನೋಹರಳಾದ ಇವಳನ್ನು ಮಹಾಲಕ್ಷ್ಮಿಯೆಂದೇ ತಿಳಿಯುವೆವು.

ವಿ: ೧. ಶ್ರೀಪರಶುರಾಮದೇವರು ಶ್ರೀಕೃಷ್ಣರೂಪದಿಂದ ಬಾಣಾಸುರನನ್ನು ಸಂಹರಿಸಿರುವರು ಮತ್ತು ಅವರು ಬಿಟ್ಟ ಬಾಣವು ಕನ್ಯಾಕುಮಾರಿಯವರೆಗೂ ಧಾವಿಸಿ ಅಲ್ಲಿ ಕೊನೆಗೊಂಡಿತು.

೨. ಶ್ರೀಪರಶುರಾಮದೇವರು ಶ್ರೀನಾರಾಯಣನಾಗಿ ಸದಾಕಾಲ ಸಮುದ್ರಾಂತರ್ಯಾಮಿಯಾಗಿರುವರು; ಕನ್ಯಾಕುಮಾರಿಯು ಸಹ ಬಾಣನೆಂಬ ಅಸುರನ ನಾಶವನ್ನು ಉಂಟುಮಾಡಿರುವಳು; ಪರಶುರಾಮದೇವರು ಬಿಟ್ಟ ಬಾಣಕ್ಕೆ ಕೊನೆಯಾಗಿ ಈ ಕ್ಷೇತ್ರದಲ್ಲಿ ನೆಲೆಸಿರುವಳು.

೩. ಸಮುದ್ರತೀರದಲ್ಲಿ ಕನ್ಯಾಕುಮಾರಿಯು ಸಮುದ್ರದತ್ತ ಮುಖ ಮಾಡಿ ನಿಂತಿರು ವಳು ; ಹೀಗೆ 'ಬಾಣಾಂತಕಾರಿತ್ವ' ಮತ್ತು 'ವಾರ್ಧೌಸ್ನಿಗ್ಧತ್ವ' ಎಂಬ ಶ್ರೀನಾರಾಯಣನ ಧರ್ಮಗಳನ್ನು[೨] ಅನುಕರಣೆ ಮಾಡಿರುವುದರಿಂದ ಈ ಕನ್ಯಾಕುಮಾರಿಯು ನಾರಾಯಣನ ಪತ್ನಿಯಾದ ಮಹಾಲಕ್ಷ್ಮಿಯೇ ಸರಿ; ಇತರರು ತಿಳಿದಿರುವಂತೆ ಪಾರ್ವತಿಯ ರೂಪವಲ್ಲ.[೩]

---

೧. ನಾರಾಯಣಸ್ಯಾಪಿ ಬಾಣಾಸುರಾಂತಕಾರಿತ್ವಾತ್ । ಸಮುದ್ರಶಾಯಿತ್ವಾಚ್ಚೇತಿ ಭಾವಃ । -ವ್ಯಾ

೨. ಯಾಂ ಯಾಂ ಪರೇಶ ಉರುಧೈವ ಕರೋತಿ ಲೀಲಾಂ
ತಾಂ ತಾಂ ಕರೋತ್ಯನು ತಥೈವ ರಮಾಽಪಿ ದೇವೀ । — ಮ.ಭಾ.ತಾ.ನಿ. (೫/೩೫)

೩. 'ಸದಾ ಭರ್ತೃಸಾಧರ್ಮ್ಯವು ಪ್ರಮುಖ ಸ್ತ್ರೀಧರ್ಮ'ವೆಂದು ಶ್ರೀಮದಾಚಾರ್ಯರು ತಿಳಿಸಿರುವರು :
'ಭರ್ತೃಸಾಧರ್ಮ್ಯಂ ಸ್ತ್ರೀಣಾಂ ಧರ್ಮೋ ಯತಃ ಸದಾ' -ಮ.ಭಾ.ತಾ.ನಿ. (೨೩/೧೧)

**ಅಸಿ [೧]ಮನ್ಮಥಮಾತಾ ತ್ವಂ ಕನ್ಯೇ ಮಾನ್ಯತಮೇ ಸತಾಮ್ ।**
**ನ ಚೇತ್ ಸೌಂದರ್ಯಮಾಶ್ಚರ್ಯಂ ಕಥಮೇತತ್ ತನೌ ತವ ॥ ೩೪ ॥**

ಅ: ಸತಾಂ = ಸಜ್ಜನರಿಗೆ; ಮಾನ್ಯತಮೇ = ಅತ್ಯಂತ ಮಾನ್ಯಳದ; ಕನ್ಯೇ ! = ಎಲೈ ಕನ್ಯಾಕುಮಾರಿಯೇ ! ತ್ವಂ = ನೀನು; ಮನ್ಮಥಮಾತಾ ಅಸಿ = ಕಾಮಜನನಿಯಾದ ಮಹಾಲಕ್ಷ್ಮಿಯೇ ಆಗಿರುವಿ; ನ ಚೇತ್ = ಇಲ್ಲವಾದಲ್ಲಿ; ತವ = ನಿನ್ನ; ತನೌ = ಶರೀರದಲ್ಲಿ; ಆಶ್ಚರ್ಯಂ = ಅದ್ಭುತವಾದ; ಏತತ್ = ಈ; ಸೌಂದರ್ಯಂ = ಸೌಂದರ್ಯವು; ಕಥಂ (ಭವೇತ್)? = ಹೇಗೆ ತಾನೇ ಇರುತ್ತಿತ್ತು?

ಸಜ್ಜನರಿಗೆ ಪರಮಮಾನ್ಯಳಾದ ಎಲೈ ಕನ್ಯಾಕುಮಾರಿಯೇ ! ನೀನು ನಿಶ್ಚಿತವಾಗಿ ಮನ್ಮಥಮಾತೆಯಾದ ಮಹಾಲಕ್ಷ್ಮಿಯೇ ಸರಿ; ಇಲ್ಲವಾದಲ್ಲಿ ನಿನ್ನ ಶರೀರದಲ್ಲಿ ಅದ್ಭುತವಾದ ಈ ಸೌಂದರ್ಯವು ಹೇಗೆ ತಾನೇ ಇರುತ್ತಿತ್ತು?

ವಿ: ೧. ಕನ್ಯಾಕುಮಾರಿಯು ಮಹಾಲಕ್ಷ್ಮಿಯೇ ಸರಿ ಎಂಬುದನ್ನು ಇಲ್ಲಿ ಮತ್ತೊಂದು ತೆರನಾಗಿ ಸಮರ್ಥಿಸಿರುವರು; ಕನ್ಯಾಕುಮಾರಿಯು ಮಹಾಲಕ್ಷ್ಮಿ ಎನ್ನಲು ಆಕೆಯ ಅನುಪಮವಾದ ಸೌಂದರ್ಯವೇ ಸಾಕ್ಷಿ; ಇತರರಿಗೆ ಇಂತಹ ಅದ್ಭುತವಾದ ಸೌಂದರ್ಯವು ಹೇಗೆ ತಾನೇ ಇರಲು ಸಾಧ್ಯ? ಎಂದು ಭಾವ. ಮನ್ಮಥನು[೨] ಸಹ ತುಂಬಾ ಸುಂದರನೆನ್ನಿಸಿರುವುದು ಅಪ್ರತಿಮ-ಸುಂದರಿಯಾದ ಮಹಾಲಕ್ಷ್ಮಿಯ ಪುತ್ರನಾಗಿರುವುದರಿಂದಲೇ ಎಂಬ ಧ್ವನಿಯೂ ಇಲ್ಲಿದೆ.

ಕನ್ಯಾಕುಮಾರಿಯು ಮಹಾಲಕ್ಷ್ಮೀ ಎಂಬ ಮಾತು ಭಾಗವತದಲ್ಲೂ ಇದೆ:

ದಕ್ಷಿಣಂ ತತ್ರ ಕನ್ಯಾಖ್ಯಾಂ ದುರ್ಗಾಂ ದೇವೀಂ ದದರ್ಶ ಸಃ । -(೧೦/೭೯/೧೭)

೨. ಕುಂಭಕೋಣದ ಶಾರ್ಙ್ಗಪಾಣಿಯನ್ನು ಸಹ ಅನುಪಮ ಸುಂದರಮೂರ್ತಿ ಎಂಬ ಕಾರಣದಿಂದಲೇ ಜನರು ವಿಷ್ಣುವೆಂದು ತಿಳಿದು ಬಿಡುವರು ಎಂದು ವರ್ಣಿಸಿರುವುದನ್ನು ಇಲ್ಲಿ ಸ್ಮರಿಸಬಹುದು (೩/೪೨).

## ಅಗಸ್ತ್ಯಮುನಿ

**ಅಗಸ್ತ್ಯೋ ಮುನಿಶಾರ್ದೂಲೋ ಭವಾಬ್ಧೇರ್ನಃ ಸಮುದ್ಧರೇತ್ ।**
**[೩]ಚುಲಕೀಕೃತಗಂಭೀರಜೃಂಭಿತಾಂಭೋಧಿಡಂಬರಃ ॥ ೩೫ ॥**

ಅ: ಚುಲಕೀಕೃತಗಂಭೀರಜೃಂಭಿತಾಂಭೋಧಿಡಂಬರಃ = ಅಗಾಧವೂ, ಅಪಾರವೂ ಆದ ಸಾಗರದ ಅಬ್ಬರವನ್ನು ಏಕಾಪೋಶನವನ್ನಾಗಿ ಮಾಡಿದ; ಮುನಿಶಾರ್ದೂಲಃ =

---

೧. ಕನ್ಯಾಕುಮಾರ್ಯಾಃ ಸೌಂದರ್ಯಂ ವರ್ಣಯನ್ ಲಕ್ಷ್ಮೀತ್ವಂ ದೃಢಯತಿ । -ವ್ಯಾ

೨. ಮನ್ಮಥಸ್ಯಾಪಿ ಸೌಂದರ್ಯಂ ಅತಿಸುಂದರಲಕ್ಷ್ಮೀಕುಮಾರತ್ವಾದಿತಿ ಭಾವಃ । -ವ್ಯಾ
ಅಯಂ ತ್ರಿಲೋಕಸುಂದರೋಽನುರೂಪಿಣೀ ಚ ರುಕ್ಮಿಣೀ। -ಮ.ಭಾ.ತಾ..ನಿ(೧೭/೨೩)

೩. ಕುಂಚಿತಾಂಗುಲಿಹಸ್ತತಲಗತಜಲಂ ಚುಲಕಮಿತ್ಯುಚ್ಯತೇ । -ವ್ಯಾಖ್ಯಾನ

ಮುನಿಶ್ರೇಷ್ಠನಾದ; ಅಗಸ್ತ್ಯಃ = ಅಗಸ್ತ್ಯನು; ನಃ = ನಮ್ಮನ್ನು; ಭವಾಬ್ಧೇಃ = ಭವಸಾಗರದಿಂದ; ಸಮುದ್ಧರೇತ್ = ಉದ್ಧರಿಸಲಿ.

ಅಗಾಧವೂ, ಅಪಾರವೂ ಆದ ಸಾಗರದ ಅಬ್ಬರವನ್ನು ಏಕಾಪೋಶನವನ್ನಾಗಿ ಮಾಡಿದ ಮುನಿಶ್ರೇಷ್ಠನಾದ ಅಗಸ್ತ್ಯರು ನಮ್ಮನ್ನು ಭವಸಾಗರದಿಂದ ಉದ್ಧರಿಸಲಿ.

ವಿ: ೧. ಕನ್ಯಾತೀರ್ಥದ ಬಳಿಯಿರುವ [1]ವ್ಯಾಸಪರ್ವತವೆಂಬಲ್ಲಿರುವ ಅಗಸ್ತ್ಯಮುನಿಗಳನ್ನು ಈ ಶ್ಲೋಕದಿಂದ ಸ್ತುತಿಸಿರುವರು;

೨. ಅಗಸ್ತ್ಯರು ಒಮ್ಮೆ ರಾಕ್ಷಸರು ಸಮುದ್ರದಲ್ಲಿ ಅಡಗಿ ದೇವತೆಗಳನ್ನು ವರಬಲದಿಂದ ಪೀಡಿಸತೊಡಗಿದ್ದಾಗ, ದೇವತೆಗಳ ಅಪೇಕ್ಷೆಯಂತೆ ಸಮುದ್ರದ ನೀರನ್ನೆಲ್ಲ ಏಕಾಪೋಶನವನ್ನಾಗಿ ಮಾಡಿ ಕುಡಿದು ಬಿಟ್ಟರಂತೆ; ಆಗ ಅಲ್ಲಿಯ ರಾಕ್ಷಸರನ್ನು ದೇವತೆಗಳು ಸಂಹರಿಸಿದರೆಂದು ಪೌರಾಣಿಕ ಪ್ರಸಿದ್ಧಿವುಂಟು.

೩. ಹೀಗೆ ಅಪಾರವೂ, ಅಗಾಧವೂ ಆದ ಸಾಗರವನ್ನೇ ಏಕಾಪೋಶನ ಮಾಡಿದ ಮುನಿಶ್ರೇಷ್ಠ ಅಗಸ್ತ್ಯರು ನಮ್ಮನ್ನು ಸಂಸಾರಸಾಗರದಿಂದ ಉದ್ಧರಿಸಲಿ ಎಂದು ಇಲ್ಲಿ ಪ್ರಾರ್ಥಿಸಿರುವರು. ಸಮುದ್ರವನ್ನು ಏಕಾಪೋಶನ ಮಾಡಿಕೊಂಡ ಅಗಸ್ತ್ಯರಿಗೆ ನಮ್ಮನ್ನು ಭವಸಾಗರದಿಂದ ಎತ್ತುವುದು ಕಷ್ಟವಲ್ಲ ಎಂದು [2]ಭಾವ. ವ್ಯಾಸಪರ್ವತದಲ್ಲಿರುವ ಅಗಸ್ತ್ಯರು ವ್ಯಾಸಕೃತ ಭಾರತಾದಿಗಳನ್ನು ಅಧ್ಯಯನ ಮಾಡುವವರನ್ನು ಸಲಹಲಿ. ಅಗಸ್ತ್ಯರು ಶಯನಕಾಲದಲ್ಲಿ ಸ್ಮರಿಸಲ್ಪಡಬೇಕಾದ ಐವರು ಮಹನೀಯರಲ್ಲಿ ಒಬ್ಬರು.[3]

೪. ಅಗಸ್ತ್ಯರ ದರ್ಶನದಿಂದ ಅವರಿಗಿಂತ ಮಿಗಿಲಾದ, ಬುದ್ಧಿಸಾಗರ ಎಂಬ ವಾದಿಯನ್ನು ಪರಾಭವ ಗೊಳಿಸಿದ ಶ್ರೀಮದಾನಂದತೀರ್ಥರ ಸ್ಮರಣೆಯನ್ನು ತಂದುಕೊಳ್ಳಬೇಕು :

ಅಗಾಧಮಾತ್ಮನ್ಯತಿವೇಲಮುದ್ಧತಂ ತಿರಸ್ಕೃತಾಶೇಷಸರಸ್ವತೀತತಿಮ್।
ಕಾಮಂ ಮಹಾಮಾನಸಕುಂಭಸಂಭವೋ ಲಘೂಚಕಾರೇತ್ಯಪಿ ಬುದ್ಧಿಸಾಗರಮ್ ॥

– ಸುಮಧ್ವವಿಜಯ (೫/೧೪)

## ಶುಚೀಂದ್ರ (ಕ್ಷೇತ್ರ)

**ಇಂದ್ರಶೌಚವಿಧಾನಾತ್ ತೇ ನ ಶುಚೀಂದ್ರಾತಿಪೌರುಷಮ್ ।**
**ಅನಿಂದ್ರಸ್ಯ ಮನಃಶೌಚಂ ಮಮ ಕೃತ್ವಾ ತದಾರ್ಜಯಾ ॥ ೩೬ ॥**

ಅ: (ಹೇ) ಶುಚೀಂದ್ರ ! = ಎಲೈ ಶುಚೀಂದ್ರ ಕ್ಷೇತ್ರವೇ !; ಇಂದ್ರಶೌಚವಿಧಾನಾತ್ = ದೇವೇಂದ್ರನಿಗೆ ಶುದ್ಧಿಯನ್ನುಂಟು ಮಾಡಿದ್ದರಿಂದ; ತೇ = ನಿನಗೆ; ಅತಿಪೌರುಷಂ = ಹೆಚ್ಚಿನ

---

೧. ಕನ್ಯಾತೀರ್ಥಸಮೀಪೇ ವ್ಯಾಸಪರ್ವತವಾಸಿನಮಗಸ್ತ್ಯಂ ಸ್ತೌತಿ । -ವ್ಯಾ

೨. ಚುಲಕೀಕೃತಾಂಬುಧೇಃ ಸಮುದ್ರಾದುದ್ಧರಣಸ್ಯ ಸುಕರತ್ವಾದಿತಿ ಭಾವಃ । -ವ್ಯಾ

೩. ಅಗಸ್ತ್ಯೋ ಮಾಧವಶ್ಚೈವ ಮುಚುಕುಂದೋ ಮಹಾಮುನಿಃ ।
ಕಪಿಲೋ ಮುನಿರಾಸ್ತೀಕಃ ಪಂಚೈತೇ ಸುಖಶಾಯಿನಃ ॥

ಮಹಿಮೆಯೇನೂ; ನ (ಭವತಿ) = ಉಂಟಾಗಿಲ್ಲ; ಅನಿಂದ್ರಸ್ಯ = ಇಂದ್ರನಲ್ಲದ (ಅಸಮರ್ಥನಾದ); ಮಮ = ನನಗೆ; ಮನಃಶೌಚಂ = ಅಂತಃಕರಣಶುದ್ಧಿಯನ್ನು; ಕೃತ್ವಾ = ಉಂಟುಮಾಡಿ; ತತ್ = ಅಂತಹ ಅತಿಪೌರುಷವನ್ನು; ಅರ್ಜಯ = ಸಂಪಾದಿಸು.

ಎಲೈ ಶುಚೀಂದ್ರ ! ದೇವೇಂದ್ರನಿಗೆ ಶುದ್ಧಿಯನ್ನುಂಟು ಮಾಡಿದ್ದು ನಿನ್ನ ದೊಡ್ಡ ಸಾಧನೆಯೇನಲ್ಲ ! ಇಂದ್ರನಲ್ಲದ ಅಸಮರ್ಥನಾದ ನನಗೆ ಮನಃಶುದ್ಧಿ ಒದಗಿಸಿ ಅದನ್ನು ಸಂಪಾದಿಸು.

ವಿ: ೧. ಶುಚೀಂದ್ರ ಕ್ಷೇತ್ರವು ಕನ್ಯಾಕುಮಾರಿಯಿಂದ ೧೩ ಕಿ.ಮೀ. ದೂರದಲ್ಲಿದೆ. (ಅಹಲ್ಯಾಪ್ರಸಂಗದಲ್ಲಿ) ಗೌತಮರಿಂದ ಮಿಥ್ಯಾಶಪ್ತರಾದ ಇಂದ್ರದೇವರು ಈ ಕ್ಷೇತ್ರದಲ್ಲಿ ಮೇಷಮಾಸದಲ್ಲಿ ಮಧ್ಯಾಹ್ನಕಾಲದ ಸೂರ್ಯಕಿರಣಗಳ ಸ್ಪರ್ಶಮಾತ್ರದಿಂದ ಬಿಸಿಯಾದ ತುಪ್ಪದಲ್ಲಿ ಅಂಗುಲೀದಾನವನ್ನು ಮಾಡಿ ಪರಿಶುದ್ಧರಾದರೆಂದು [1] ಪ್ರತೀತಿಯುಂಟು.

೨. ಇಂದ್ರದೇವರು ಶುಚಿಯಾದ ಕ್ಷೇತ್ರವಾದ್ದರಿಂದ ಇದಕ್ಕೆ 'ಶುಚೀಂದ್ರ' ಎಂದೇ ಹೆಸರಾಗಿದೆ. ಅಶುಚಿಗಳನ್ನು ಶುಚಿಗೊಳಿಸುವ ಪಾವನ ಕ್ಷೇತ್ರಗಳಲ್ಲಿ ಪ್ರಮುಖವಾದುದು ಎಂಬ ಅರ್ಥದಲ್ಲೂ ಶುಚೀಂದ್ರ ಎಂಬ ಹೆಸರು ಇದಕ್ಕೆ ಸಾರ್ಥಕವಾಗಿದೆ.

೩. ಶ್ರೀವಾದಿರಾಜರು ಈ ಕ್ಷೇತ್ರದ ಅಭಿಮಾನಿ ದೇವತೆಯನ್ನು ಇಂದ್ರದೇವರಂತಹ ಸಮರ್ಥರಿಗೆ ಶುದ್ಧಿಯನ್ನುಂಟುಮಾಡಿದ್ದರಲ್ಲಿ ನಿನ್ನ ಹೆಗ್ಗಳಿಕೆ ಏನಿದೆ? ಇಂದ್ರನಲ್ಲದ ಒಬ್ಬ ಸಾಮಾನ್ಯವ್ಯಕ್ತಿಯಾದ ನನಗೆ ಮನಃಶುದ್ಧಿಯನ್ನುಂಟು ಮಾಡಿ ನಿನ್ನ ಸಾಮರ್ಥ್ಯ ದೊಡ್ಡದು ಎಂಬ ಕೀರ್ತಿಯನ್ನು ಗಳಿಸಿಕೋ ಎಂದು ಸ್ತುತಿಸಿರುವರು. ಸಮರ್ಥರನ್ನು ಕಾಯುವುದಕ್ಕಿಂತ ಅಸಮರ್ಥರನ್ನು ಪಾಲಿಸುವುದು ದೊಡ್ಡದು[2] ಎಂದು ಭಾವ.

೪. ಇಲ್ಲಿ 'ದೊಡ್ಡವರ ಕಾಯ್ವುದೇನರಿದು ಪರಮ ದಡ್ಡರನು ಕಾಯ್ವುದೇ ಹಿರಿದು' ಎಂಬ ದಾಸರ ಮಾತನ್ನು ಸ್ಮರಿಸಬಹುದು.

೫. ಈ ಶುಚೀಂದ್ರ ಕ್ಷೇತ್ರದಿಂದ ಸುಮಾರು ೪೦ ಕಿ.ಮೀ. ದೂರದಲ್ಲಿ ತೋತಾದ್ರಿ ಎಂಬ ಕ್ಷೇತ್ರವಿದೆ. ಅದು ಎಂಟು ಸ್ವಯಂವ್ಯಕ್ತ ಮಹಾಕ್ಷೇತ್ರಗಳಲ್ಲಿ ಒಂದು. ಶ್ರೀವಾದಿರಾಜರು ಅದನ್ನು ಇಲ್ಲಿ ವರ್ಣಿಸಿಲ್ಲ.

## ಆದ್ಯನಂತಶಯನ (ಆದಿಕೇಶವಕ್ಷೇತ್ರ)

**ಶೇಷೇ ಶಯಾನ ಶರದಿಂದುಸಮಾನವಕ್ತ್ರ**
**ಶ್ರೀಶಾದಿಕೇಶವ ಸಿತೋದಕಜಾತನೇತ್ರ ।**

---

೧. ಮಿಥ್ಯಾಪವಾದಶಂಕಿತೋ ದೇವೇಂದ್ರಃ ಶುಚೀಂದ್ರಕ್ಷೇತ್ರೇ ಮೇಷಮಾಸೇ ಮಧ್ಯಾಹ್ನಕಾಲೀನ-ಸೂರ್ಯಕಿರಣಮಾತ್ರಸ್ಪರ್ಶೇನ ತಪ್ತಘೃತೇ ಅಂಗುಲಿದಾನಾಖ್ಯದಿವ್ಯೇನ ಕರ್ಮಣಾ ಶುದ್ಧೋಽಭೂದಿತಿ ತತ್ರತ್ಯಾ ಕಥಾ । -ವ್ಯಾ

೨. ಸಮರ್ಥರಕ್ಷಣಾದಪ್ಯಸಮರ್ಥರಕ್ಷಣಸ್ಯ ಶ್ರೇಯಸ್ಕರತ್ವಾದಿತಿ ಭಾವಃ। -ವ್ಯಾ

**ದೋಷಾತಿದೂರ ಗತಪಾರ ಗುಣಾಂಬುರಾಶೇ**
**ದಾಸೇ ದಯಾಂ ಕುರು ಮಯೀಶ ಗತೇತರಾಶೇ ॥ ೩೭ ॥**

ಅ: **ಶೇಷೇ** = ಶೇಷನ ಮೇಲೆ; **ಶಯಾನ** = ಮಲಗಿರುವ; **ಶರದಿಂದು-ಸಮಾನವಕ್ತ್ರ** = ಶರಚ್ಚಂದ್ರನಿಗೆ ಸಮಾನವಾದ ಮುಖವುಳ್ಳ; **ಶ್ರೀಶ** = ಲಕ್ಷ್ಮೀಪತಿಯಾದ; **ಸಿತೋದಕಜಾತನೇತ್ರ** = ಪುಂಡರೀಕಾಕ್ಷನಾದ; **ದೋಷಾತಿದೂರ**[1] = (ಪಾರತಂತ್ರ್ಯ, ಅಪೂರ್ಣತಾ ಮೊದಲಾದ) ದೋಷಗಳಿಂದ ಅತ್ಯಂತ ದೂರನಾದ (ಸಕಲದೋಷರಹಿತನಾದ); **ಗತಪಾರ** = ಪಾರವಿಲ್ಲದ; **ಗುಣಾಂಬುರಾಶೇ** = ಗುಣಾರ್ಣವ (ಪೂರ್ಣ)ನಾದ; **ಈಶ** = (ಸರ್ವ)ಸಮರ್ಥನಾದ; (ಹೇ) **ಆದಿಕೇಶವ** = ಆದ್ಯನಂತಶಯನನೇ (ಆದಿಕೇಶವನೇ !); (**ತ್ವಂ** = ನೀನು); **ಗತೇತರಾಶೇ** = ಇತರ ಆಸೆಗಳನ್ನು ತೊರೆದಿರುವ; **ದಾಸೇ** = ದಾಸನಾದ; **ಮಯಿ** = ನನ್ನಲ್ಲಿ; **ದಯಾಂ** = ದಯೆಯನ್ನು; **ಕುರು** = ಮಾಡು.

**ಶೇಷಶಾಯಿಯೇ, ಶರಚ್ಚಂದ್ರನಿಗೆ ಸಮನಾದ ಮುಖವುಳ್ಳವನೇ, ಲಕ್ಷ್ಮೀಪತಿಯೇ, ಪುಂಡರೀಕಾಕ್ಷನೇ, ಸಕಲದೋಷದೂರನೇ, ಗುಣಸಾಗರನೇ, ಎಣೆಯಿಲ್ಲದವನೇ, ಆದಿಕೇಶವನೇ ! ಇತರ ಆಸೆಗಳನ್ನು ತೊರೆದ ದಾಸನಾದ ನನ್ನ ಮೇಲೆ ದಯೆತೋರು.**

ವಿ: ೧. ಶೇಷಶಾಯಿಯೂ, ಶರಚ್ಚಂದ್ರನಂತಹ ಮುಖವುಳ್ಳವನೂ, ಲಕ್ಷ್ಮೀಪತಿಯೂ, ಪುಂಡರೀಕಾಕ್ಷನೂ, ದೋಷದೂರನೂ, ಪಾರರಹಿತನೂ, ಗುಣಪೂರ್ಣನೂ, ಸರ್ವ-ಸಮರ್ಥನೂ ಆದ ಆದಿಕೇಶವನನ್ನು, ದಾಸನಾದ ನನ್ನಲ್ಲಿ ದಯಮಾಡು ಎಂಬುದಾಗಿ ಶ್ರೀವಾದಿರಾಜರು ಈ ಶ್ಲೋಕದಲ್ಲಿ ಪ್ರಾರ್ಥಿಸಿರುವರು.

೨. ಅನಂತಶಯನಕ್ಷೇತ್ರದಿಂದ ಸುಮಾರು ೧೮ ಕಿ.ಮೀ. ದೂರದಲ್ಲಿರುವ ತಿರುವಟ್ಟಾರ್ ಎಂಬಲ್ಲಿರುವ ಆದಿಕೇಶವನ ವರ್ಣನೆ ಇದು. ಇಲ್ಲಿಯ ವಿಗ್ರಹವು ೧೬ ಅಡಿ ಉದ್ದದ ಶೇಷಶಾಯಿಮೂರ್ತಿಯಾಗಿದ್ದು, ಮೂರುದ್ವಾರಗಳಿಂದ ಮುಖ, ಉದರ ಮತ್ತು ಪಾದಗಳು ಗೋಚರಿಸುತ್ತವೆ; ಶೇಷನ ಕೆಳಗೆ ಭಕ್ತನಾದ ಒಬ್ಬ ರಾಕ್ಷಸನು ಹತನಾಗಿ ಬಿದ್ದಿರುವನು.

## ಘೃತಮಾಲಾ (ನದೀ)

**ರೂಕ್ಷಪಾಪಾಟವೀದಾಹದಕ್ಷಜ್ಞಾನಾನಲೋನ್ನತೇಃ ।**
**ಸತತಂ ಹೇತುಭೂತೇಯಂ ಘೃತಮಾಲಾ ವಿರಾಜತೇ ॥ ೩೮ ॥**

ಅ : **ರೂಕ್ಷಪಾಪಾಟವೀದಾಹದಕ್ಷಜ್ಞಾನಾನಲೋನ್ನತೇಃ** = ಕ್ರೂರವಾದ ಪಾಪಗಳೆಂಬ ಕಾಡನ್ನು ಸುಟ್ಟು ಹಾಕುವಲ್ಲಿ ನಿಪುಣವಾದ ಜ್ಞಾನವೆಂಬ ಅಗ್ನಿಯ ಪ್ರಜ್ವಲಿಸುವಿಕೆಗೆ; **ಸತತಂ** =

---

೧. ಚಿಂತಾಸಂತಾಪಲೇಪೋದ್ಭವಮೃತಿಮುಖರಾಶೇಷದೋಷಾತಿದೂರಂ। -ತತ್ತ್ವಪ್ರಕಾಶಿಕಾ

ಸದಾ; ಹೇತುಭೂತಾ = ಕಾರಣೀಭೂತವಾಗಿರುವ; ಇಯಂ = ಈ; ಘೃತಮಾಲಾ = ಘೃತಮಾಲಾ ನದಿಯು; ವಿರಾಜತೇ = ಕಂಗೊಳಿಸುತ್ತಿದೆ.

**ಕ್ರೂರಪಾಪಗಳೆಂಬ ಕಾಡನ್ನು ಸುಟ್ಟುಹಾಕಬಲ್ಲ ಜ್ಞಾನಾಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವ ಈ ಘೃತಮಾಲಾ ನದಿಯು ಕಂಗೊಳಿಸುತ್ತಿದೆ.**

ವಿ: ೧. ಕಾಡನ್ನು ಸುಟ್ಟು ಹಾಕಲು ಅಗ್ನಿಯು ಅತ್ಯಗತ್ಯವಾಗಿರುವಂತೆ, ಕ್ರೂರವಾದ ಪಾಪಾರಣ್ಯಗಳನ್ನು ನಾಶಮಾಡಲು ಜ್ಞಾನಾಗ್ನಿಯು ಅತ್ಯಗತ್ಯವಾಗಿದೆ[1]. ಅಗ್ನಿಯು ಪ್ರಜ್ವಲಿಸಲು ಘೃತ(ಧಾರೆಯು) ಅತ್ಯವಶ್ಯವಿರುವಂತೆ, ಜ್ಞಾನಾಗ್ನಿಯು ಅಭಿವೃದ್ಧಿಗೆ ಈ ಘೃತಮಾಲಾ ನದಿಯು ಕಾರಣವಾಗಿದೆ ಎಂದು [2]ಭಾವ. 'ಘೃತಮಾಲಾ' ಎಂಬ ಹೆಸರು ಆ ನದಿಗೆ ಜ್ಞಾನಾಗ್ನಿಯನ್ನು ಹೆಚ್ಚಿಸುವ ಈ ಸಾಮರ್ಥ್ಯದಿಂದಾಗಿ ಸಾರ್ಥಕವಾಗಿದೆ ಎಂಬ ಸೂಚನೆಯೂ ಇಲ್ಲಿದೆ. ಘೃತಮಾಲಾನದಿಯಲ್ಲಿ ಸ್ನಾನಪಾನಾದಿರೂಪ ಸೇವನೆಯಿಂದ ಜ್ಞಾನವು ಅಭಿವೃದ್ಧಿಯಾಗುವುದು ಎಂದು ತಾತ್ಪರ್ಯ.

೨. ಆದಿಕೇಶವ ಕ್ಷೇತ್ರ (ತಿರುವೆಟ್ಟಾರ್) ದಿಂದ ತಿರುವನಂತಪುರದ ದಾರಿಯಲ್ಲಿ ಸುಮಾರು ೩೫ ಕಿ.ಮೀ. ದೂರದಲ್ಲಿರುವ ತಾಮ್ರಪರ್ಣೀ ನದಿಯೇ 'ಘೃತಮಾಲಾ' ಎಂದೂ ಪ್ರಸಿದ್ಧವಾಗಿದೆ.

## ತಿರುವನಂತಪುರ (ಕ್ಷೇತ್ರ)

**ಶ್ರೀಭೂಭ್ಯಾಂ ಕೃತಪಾದಸೇವನಮನರ್ಘ್ಯೋರುಸ್ಫುರದ್ಭೂಷಣಂ**
**ಶೇಷಾಂಗೇ ಸತತಂ ಶಯಾನಮುದರಪ್ರೋದ್ಭಾಸಿಪದ್ಮಂ ಪ್ರಭುಮ್ ।**
**ಧಾತ್ರಾ ಸ್ತೋತ್ರಚಯೈಃ ಸ್ತುತಂ ಫಣಿಫಣೈಶ್ಛತ್ರೋಪಮೈರ್ಮಂಡಿತಂ**
**ಸೇವೇಽನಂತಪುರೇಶ್ವರಂ ಮುನಿವರಪ್ರೇಮಾಕರಂ ಶ್ರೀಕರಮ್ ॥ ೩೯ ॥**

ಅ: **ಶ್ರೀಭೂಭ್ಯಾಂ** = ಶ್ರೀದೇವಿ ಮತ್ತು ಭೂದೇವಿಯರಿಂದ (ಲಕ್ಷ್ಮೀಧರೆಯರಿಂದ); **ಕೃತಪಾದಸೇವನಂ** = ಪಾದಗಳು ಪೂಜಿಸಲ್ಪಡುತ್ತಿರುವ; **ಅನರ್ಘ್ಯೋರುಸ್ಫುರದ್ಭೂಷಣಂ** = ಅನರ್ಘ್ಯವೂ, ತುಂಬಾ ಉಜ್ವಲವೂ ಆದ ಭೂಷಣಗಳನ್ನು ಹೊಂದಿರುವ; **ಶೇಷಾಂಗೇ** = ಶೇಷನ ಶರೀರದ ಮೇಲೆ; **ಸತತಂ** = ಸದಾಕಾಲ; **ಶಯಾನಂ** = ಪವಡಿಸಿರುವ; **ಉದರಪ್ರೋದ್ಭಾಸಿಪದ್ಮಂ** = ಉದರದಲ್ಲಿ ಶೋಭಿಸುತ್ತಿರುವ ಪದ್ಮವುಳ್ಳ (ಪದ್ಮನಾಭನಾದ); **ಪ್ರಭುಂ** = (ಸರ್ವ)ಸಮರ್ಥನಾದ; **ಧಾತ್ರಾ** = (ನಾಭಿಕಮಲದಲ್ಲಿರುವ) ಬ್ರಹ್ಮನಿಂದ; **ಸ್ತೋತ್ರಚಯೈಃ** = ಸ್ತುತಿಸಮೂಹಗಳಿಂದ; **ಸ್ತುತಂ** = ಸ್ತುತಿಸಲ್ಪಡುವ; **ಛತ್ರೋಪಮೈಃ** = (ಶ್ವೇತ) ಛತ್ರದಂತಿರುವ; **ಫಣಿಫಣೈಃ** = ಶೇಷನ ಹೆಡೆಗಳಿಂದ; **ಮಂಡಿತಂ** = ಶೋಭಿತನಾದ;

---

೧. ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ । -ಗೀತಾ(೪/೩೭)

೨. ಯಥಾ ಘೃತಧಾರಾ ಅಗ್ನೇರಭಿವೃದ್ಧಿಂ ಕರೋತಿ ತಥೇಯಂ ನದೀ ಸ್ವಸ್ನಾನಪಾನಾದಿನಾ ಜ್ಞಾನಾಗ್ನೇಃ ಅಭಿವೃದ್ಧಿಂ ಕರೋತಿ । ಅತ ಏವ ಘೃತಮಾಲೇತಿ ನಾಮಾಭೂದಿತಿ ಭಾವಃ । -ವ್ಯಾ

ಮುನಿವರಪ್ರೇಮಾಕರಂ = ಕೌಂಡಿನ್ಯ ಮೊದಲಾದ ಋಷಿಶ್ರೇಷ್ಠರ ಭಕ್ತಿಗೆ ವಿಷಯನಾದ; ಶ್ರೀಕರಂ = (ತನ್ನ ಭಕ್ತಜನರಿಗೆ) ಸಂಪತ್ತನ್ನು ಕರುಣಿಸುವ; [೧]ಅನಂತಪುರೇಶ್ವರಂ = ತಿರುವನಂತಪುರಕ್ಕೆ ಒಡೆಯನಾದ; ಶ್ರೀಹರಿಯನ್ನು; ಸೇವೇ = ಸೇವಿಸುವೆನು.

**'ಶ್ರೀದೇವಿ ಭೂದೇವಿಯರಿಂದ ಪಾದಪೂಜೆ; ಅನರ್ಘ್ಯವೂ, ಉಜ್ಜ್ವಲವೂ ಆದ ಭೂಷಣಗಳು; ಶೇಷನ ಮೇಲೆ ಶಯನ; ಉದರದಲ್ಲಿ ಶೋಭಿಸುವ ಕಮಲ; ನಾಭಿಕಮಲದಲ್ಲಿ ಸ್ತುತಿರಾಶಿಯಿಂದ ಕೊಂಡಾಡುವ ಬ್ರಹ್ಮ; ಶ್ವೇತಛತ್ರದಂತಹ ಶೇಷನ ಹೆಡೆಗಳ ಶೋಭೆ; ಇಂತಹ ಸರ್ವಸಮರ್ಥನಾದ, ಋಷಿಶ್ರೇಷ್ಠರ ಭಕ್ತಿಗೆ ಒಲಿಯುವ, ಭಕ್ತಜನರಿಗೆ ಸಂಪತ್ತನ್ನು ಕರುಣಿಸುವ, ತಿರುವನಂತಪುರಕ್ಕೆ ಒಡೆಯನಾದ ಶ್ರೀಹರಿಯನ್ನು ಸೇವಿಸುವೆನು.**

ವಿ: ೧. ಈ ಅನಂತಶಯನವು ಇಂದು ತಿರುವನಂತಪುರ (ತ್ರಿವೇಂದ್ರಮ್). ಕನ್ಯಾಕುಮಾರಿಯಿಂದ ಸುಮಾರು ೮೫ ಕಿ.ಮೀ. ದೂರದಲ್ಲಿದೆ. ಇದರ ಮಾಹಾತ್ಮ್ಯವು ಮಹಾಭಾರತದಲ್ಲೂ, ಬ್ರಹ್ಮಾಂಡ ಮೊದಲಾದ ಪುರಾಣಗಳಲ್ಲೂ ಉಕ್ತವಾಗಿದೆ. ಅನಂತವ್ರತ ಕಥೆಯಲ್ಲಿ ಬರುವ ಅನಂತಪದ್ಮನಾಭಮೂರ್ತಿಯೂ ಇದೇ ಆಗಿದೆ. ದೇವಸ್ಥಾನದ ಮಹಾದ್ವಾರಕ್ಕೆ ಸಮೀಪದಲ್ಲಿ ಹೊರವಲಯದಲ್ಲಿ ವಿಶಾಲವಾದ ಸರೋವರವೂ ಇದೆ. ಶೇಷಶಾಯಿಯಾದ ಈ ಮೂರ್ತಿಯು ಸಹ ತುಂಬಾ ದೊಡ್ಡದಾಗಿದ್ದು ಇದನ್ನು ಸಹ ಮೂರು ದ್ವಾರಗಳಿಂದ ದರ್ಶನಮಾಡಬೇಕು. ವಿಗ್ರಹದಿಂದ ಚಿಮ್ಮುತ್ತಿರುವ ಕಮಲದ ಮೇಲೆ ಬ್ರಹ್ಮದೇವರು ಕುಳಿತಿರುವರು. ಶ್ರೀಮದಾಚಾರ್ಯರು ತಮ್ಮ ದಿಗ್ವಿಜಯಕಾಲದಲ್ಲಿ ಈ ಕ್ಷೇತ್ರವನ್ನು ಸಂದರ್ಶಿಸಿದ್ದ ಉಲ್ಲೇಖವು [೨]ಸುಮಧ್ವವಿಜಯದಲ್ಲಿದೆ.(೫/೩೬)

೨. ಶೇಷಶಾಯಿಯಾದ ಅನಂತಪದ್ಮನಾಭನ ಪಾದಕಮಲವನ್ನು ಶ್ರೀದೇವಿ ಭೂದೇವಿಯರು ಸೇವಿಸುತ್ತಿರುವರು; ಮೂರ್ತಿಯು ಅನರ್ಘ್ಯವೂ, ತುಂಬಾ ಉಜ್ವಲವೂ ಆದ ಆಭರಣಗಳಿಂದ ಅಲಂಕೃತವಾಗಿದೆ; ವಿಗ್ರಹದ ನಾಭಿಕಮಲದಿಂದ ಚಿಮ್ಮುತ್ತಿರುವ ಕಮಲದ ಮೇಲೆ ಕಂಗೊಳಿಸುತ್ತಿರುವ ಬ್ರಹ್ಮದೇವರು ವಿವಿಧ ಸ್ತೋತ್ರಗಳಿಂದ ಶ್ರೀಹರಿಯನ್ನು ಸ್ತುತಿಸುತ್ತಿರುವರು; ಛತ್ರದಂತಿರುವ ಶೇಷನ ಮೇಲೆ ಹೆಡೆಗಳಿಂದ ಮೂರ್ತಿಯು ಭೂಷಿತವಾಗಿದೆ; ಕೌಂಡಿಣ್ಯಾದಿಮುನಿಶ್ರೇಷ್ಠರ ಭಕ್ತಿಗೆ ವಿಷಯನಾದ ಸಂಪತ್ಕರನಾದ ಈ ಶ್ರೀಹರಿಯನ್ನು ಸೇವಿಸುವೆನು ಎಂಬುದಾಗಿ ಶ್ರೀವಾದಿರಾಜರು ಇಲ್ಲಿ ಸ್ತುತಿಸಿರುವರು.

೩. ತಿರುವನಂತಪುರದಿಂದ ೪೫ ಕಿ.ಮೀ. ದೂರದಲ್ಲಿ 'ವಲ್ಕಲ' (ವರ್ಕ್ಕಾಲ) ಎಂಬ ಕ್ಷೇತ್ರವಿದ್ದು ಅಲ್ಲಿ ಜನಾರ್ದನನ ಸುಂದರವಾದ ಚತುರ್ಭುಜಮೂರ್ತಿ ಇರುವುದು; ಈ ಮೂರ್ತಿಯಿಂದಾಗಿ ಆ ಕ್ಷೇತ್ರವೂ ಜನಾರ್ದನ ಎಂದೇ ಪ್ರಸಿದ್ಧವಾಗಿದೆ.

---

೧. ಅನಂತಪುರಾಖ್ಯಕ್ಷೇತ್ರಸ್ಯ ಸ್ವಾಮಿನಂ ಪ್ರಭುಂ ಸಮರ್ಥಂ ಅನಂತಶಯನಾಖ್ಯಪದ್ಮನಾಭಂ । -ವ್ಯಾ

೨. ತತಃ ಕ್ರಮೇಣ ಪ್ರಚಲನ್ನುಪೇಯಿವಾನವಂದತೇಂದೀವರಸುಂದರಚ್ಛವಿಮ್ ।
ಅಂಭೋಜನಾಭಂ ಸ ಭುಜಂಗಶಾಯಿನಂ ಶ್ರೀವಲ್ಲಭಂ ಶ್ರೀಮದನಂತಸತ್ಪುರೇ ॥

ಕಿಂ ಲೋಕಾತ್ಮಕಪದ್ಮಕಂಪನಭಿಯಾ ಪುತ್ರಪ್ರಿಯೇಣಾಥವಾ
ನಾಗಾಗ್ರೇಸರಭೋಗಸೌಭಗಕೃತಸ್ನೇಹೇನ ವಾಽಹರ್ನಿಶಮ್ ।
ಕಿಂ ವಾ ಶ್ರೀಶ ನಿಜಾರ್ಪಿತೋರುವಿಧಸುಸ್ವಾದ್ವೋದನಾಸ್ವಾದನಾ -
ಚ್ಛೇಷೇಽನಂತಪುರೇಶ ಶೇಷವಪುಷಿ ಶ್ರೀಸೇವಯಾ ವಾಽಗ್ರ್ಯಯಾ ॥೪೦॥

ಅ: (ಹೇ) ಶ್ರೀಶ = ಎಲೈ ಲಕ್ಷ್ಮೀಪತಿಯಾದ; ಅನಂತಪುರೇಶ = ಅನಂತಶಯನನೇ; (ತ್ವಂ = ನೀನು); ಅಹರ್ನಿಶಂ = ಹಗಲಿರುಳೂ (ಸರ್ವದಾ); ಶೇಷವಪುಷಿ = ಶೇಷನ ಶರೀರದ ಮೇಲೆ; ಲೋಕಾತ್ಮಕಪದ್ಮಕಂಪನಭಿಯಾ = (ಚತುರ್ದಶ) ಲೋಕಾತ್ಮಕವಾದ ಕಮಲವು ಚಲಿಸೀತು ಎಂಬ ಭಯದಿಂದಾಗಿ; (ಶೇಷೇ ಕಿಂ? = ಮಲಗಿರುವೆಯಾ?) ವಾ = ಅಥವಾ; ಪುತ್ರಪ್ರಿಯೇಣ = ನಾಭಿಕಮಲದಲ್ಲಿ ಕುಳಿತಿರುವ ಬ್ರಹ್ಮದೇವರ ಮೇಲಿನ ಪ್ರೀತಿಯಿಂದಾಗಿ; (ಶೇಷೇ ಕಿಂ = ಮಲಗಿರುವೆಯಾ?); ಅಥವಾ = ಅಥವಾ; ನಾಗಾಗ್ರೇಸರ-ಭೋಗಸೌಭಗಕೃತಸ್ನೇಹೇನ = ಸರ್ಪರಾಜನಾದ ಶೇಷನ ಶರೀರದ ಸೌಕುಮಾರ್ಯದ ಮೇಲಿನ ಸ್ನೇಹದಿಂದ; (ಶೇಷೇ ಕಿಂ? = ಮಲಗಿರುವೆಯಾ?) ವಾ = ಅಥವಾ; ನಿಜಾ-ರ್ಪಿತೋರುವಿಧಸುಸ್ವಾದ್ವೋದನಾಸ್ವಾದನಾತ್ = ನಿನ್ನ ಭಕ್ತರು ಸಮರ್ಪಿಸಿರುವ ಹೆಚ್ಚಿನ ಅನೇಕ ತೆರನಾದ ರುಚಿರುಚಿಯಾದ ಅನ್ನವನ್ನು ಭುಂಜಿಸಿದ್ದರಿಂದಾಗಿ; (ಶೇಷೇ ಕಿಂ? = ಮಲಗಿರುವಿಯೇನು?); ವಾ = ಅಥವಾ ಅಗ್ರ್ಯಯಾ = ಶ್ರೇಷ್ಠವಾದ; ಶ್ರೀಸೇವಯಾ = ಮಹಾಲಕ್ಷ್ಮಿಯ ಸೇವೆಯ ಕಾರಣದಿಂದಾಗಿ (ಶೇಷೇ ಕಿಂ? = ಮಲಗಿರುವಿಯೇನು) (ಉತ್ಪ್ರೇಕ್ಷಾಲಂಕಾರಃ)

ಎಲೈ ಲಕ್ಷ್ಮೀಪತಿಯಾದ ತಿರುವನಂತಪುರದ ಸ್ವಾಮಿಯೇ ! ನೀನು ಹಗಲಿರುಳು ಶೇಷನ ಶರೀರದ ಮಲಗಿರುವುದೇತಕ್ಕೆ? ಚತುರ್ದಶಲೋಕಾತ್ಮಕವಾದ ಕಮಲವು ಚಲಿಸೀತು ಎಂಬ ಭಯದಿಂದಲೋ? ನಾಭಿಕಮಲದಲ್ಲಿನ ಬ್ರಹ್ಮದೇವರ ಮೇಲಿನ ಪ್ರೀತಿಯಿಂದಲೋ? ನಾಗರಾಜನಾದ ಶೇಷನ ಶರೀರದ ಸೌಕುಮಾರ್ಯದ ಮೇಲಿನ ಸ್ನೇಹದಿಂದಲೋ? ಅಥವಾ ನಿನ್ನ ಭಕ್ತರು ಸಮರ್ಪಿಸಿರುವ ಹೆಚ್ಚಿನ ಬಗೆ ಬಗೆಯ ಸವಿಯಾದ ಅನ್ನದ ಭೋಜನದಿಂದಲೋ? ಅಥವಾ ಶ್ರೇಷ್ಠವಾದ ಮಹಾಲಕ್ಷ್ಮಿಯ ಸೇವೆಯ ಕಾರಣದಿಂದಲೋ?

ವಿ: ೧. ನಿದ್ರಾದಿಸಕಲ ದೋಷರಹಿತನಾದ ಶ್ರೀಹರಿಯು ಅನಂತಶಯನನಾಗಿ ಮಲಗಿ-ರಲು ವಿವಿಧ ಕಾರಣಗಳನ್ನು ಇಲ್ಲಿ ಶ್ರೀವಾದಿರಾಜರು ತುಂಬಾ ಸುಂದರವಾಗಿ ಉತ್ಪ್ರೇಕ್ಷಿಸಿರುವರು.[೧]

೨. ಎಲೈ ಅನಂತಶಯನನೇ! ನೀನು ಹಗಲಿರುಳೂ ಹೀಗೆ ಶೇಷನ ಮೇಲೆ ಮಲಗಿರುವುದು ನಿನ್ನ ಕಮಲರೂಪದಲ್ಲಿ ನಿನ್ನ ನಾಭಿಯಲ್ಲಿರುವ ಲೋಕಗಳು ನಡುಗಿ ಕಂಪಿಸಿಯಾವು ಎಂದೋ,

---

೧. ನಿತ್ಯ ಪ್ರಬುದ್ಧಸ್ಯ ಅನಂತಶಯನನನು ಸದಾ ಶಯನೇ ಕಾರಣಾನ್ಯುತ್ಪ್ರೇಕ್ಷತೇ । -ವ್ಯಾ

[1]ನಾಭಿಕಮಲದಲ್ಲಿ ಕುಳಿತಿರುವ ಪುತ್ರರಾದ ಬ್ರಹ್ಮದೇವರ ಮೇಲಿನ ಪ್ರೀತಿಯಿಂದಲೋ? ಅಥವಾ ಸರ್ಪರಾಜನಾದ ಶೇಷನ ಶರೀರದ ಸೌಕುಮಾರ್ಯದ ಮೇಲಿನ ಸ್ನೇಹದಿಂದಲೋ? ಅಥವಾ ನಿನ್ನ ಭಕ್ತರು ನಿವೇದಿಸಿರುವ ಉತ್ತಮವಾದ ನಾನಾತೆರನಾದ ಸವಿಯಾದ ಅನ್ನವನ್ನು ಭೋಜನ ಮಾಡಿರುವುದರಿಂದಲೋ? ಅಥವಾ ಮಹಾಲಕ್ಷ್ಮಿಯು ಮಾಡುತ್ತಿರುವ ಉನ್ನತವಾದ ಸೇವೆಯಿಂದಲೋ?

೩. ಶ್ರೀಹರಿಯ ನಾಭಿಯನ್ನು ಆಶ್ರಯಿಸಿ ಕಮಲರೂಪದಳದಲ್ಲಿ ಹದಿನಾಲ್ಕು ಲೋಕಗಳಿವೆ; ನಾಭಿಕಮಲದಲ್ಲಿ ಲೋಕಸೃಷ್ಟಿಕರ್ತೃಗಳಾದ ಬ್ರಹ್ಮದೇವರಿರುವರು, ಹಾಸಿಗೆಯ ರೂಪದಲ್ಲಿ ಸರ್ಪರಾಜನಾದ ಶೇಷದೇವರು ಇರುವರು; ಬ್ರಹ್ಮದೇವರೇ ಮೊದಲಾದವರು ಸಕಲವಿಧವಾದ ಚಿತ್ರವಿಚಿತ್ರವಾದ ಅನ್ನವನ್ನು ನೈವೇದ್ಯ ಮಾಡುವರು; ಮಹಾಲಕ್ಷ್ಮಿಯು ಸತತವೂ ಉತ್ತಮ ರೀತಿಯಲ್ಲಿ ಪಾದಸೇವಾದಿಗಳನ್ನು ಸಲ್ಲಿಸುತ್ತಿರುವರು; ಹೀಗೆ ಬ್ರಹ್ಮರುದ್ರಾದಿ ಸೇವಿತನೂ, ಸಕಲಲೋಕಾಶ್ರಯನೂ ಆಗಿರುವ ಶ್ರೀಹರಿಯು ಸರ್ವೋತ್ತಮನೆಂದು ಭಾವ.

೪. ಲೋಕದಲ್ಲಿ ನಿದ್ರಿಸಲು ಇರುವ ಕಾರಣಗಳನ್ನು ಹೀಗೆ ಶ್ರೀಹರಿಯಲ್ಲಿ ಉತ್ಪ್ರೇಕ್ಷಿಸುತ್ತ ಅವೆಲ್ಲವೂ ವಾಸ್ತವವಾಗಿ ಶ್ರೀಹರಿಯ ನಿದ್ರಾಭಾವಕ್ಕೆ ದ್ಯೋತಕವಾಗಿವೆಯಾದ್ದರಿಂದ ಅವನು ಸದಾ ನಿದ್ರಾರಹಿತನೆಂದೂ, ಯೋಗನಿದ್ರಾರತನೆಂದೂ ಸಿದ್ಧವಾಗುತ್ತದೆ ಎಂಬ ಸೂಚನೆಯೂ ಇಲ್ಲಿದೆ.

೫. ಲೋಕವಾತ್ಸಲ್ಯ, ಪುತ್ರಪ್ರೇಮ, ಉತ್ತಮಶಯನ, ಸವಿಯಾದ ಭೋಜನ, ಪತ್ನಿಯ ಉಪಚಾರಗಳು ಎಂಬುದಾಗಿ ಲೋಕದಲ್ಲಿ ಪ್ರಸಿದ್ಧವಾಗಿರುವ ನಿದ್ರೆಯ ಸಕಲ ಕಾರಣಗಳೂ ಶ್ರೀಹರಿಯ ಸರ್ವೋತ್ತಮತ್ವಕ್ಕೆ ಸಾಧಕ ಎಂದರ್ಥ.

೬. ನಾಭಿಕಮಲರೂಪದ ಲೋಕಗಳು, ಕಮಲದ ಮೇಲೆ ಕುಳಿತಿರುವ ಬ್ರಹ್ಮದೇವರು ಹಾಸಿಗೆಯಾಗಿರುವ ಶೇಷದೇವರು, ಭಕ್ತರು ಸಮರ್ಪಿಸಿರುವ ವಿವಿಧ [2]ಮೃಷ್ಟಾನ್ನಗಳು ಮತ್ತು ಪತ್ನಿಯಾದ ಮಹಾಲಕ್ಷ್ಮಿ ಮೊದಲಾದ ಸಕಲವೂ ಶ್ರೀಹರಿಯ ನಿದ್ರಾರಾಹಿತ್ಯಕ್ಕೂ ಅದರಿಂದ ಉಪಲಕ್ಷಿತವಾದ ಸಕಲದೋಷಗಳ ಅಭಾವಕ್ಕೂ ದ್ಯೋತಕ. ಶ್ರೀಹರಿಯು ನಿದ್ರಾದಿ ಸಕಲದೋಷರಹಿತನು ಎಂಬುದು ಇದರ ಮುಖ್ಯತಾತ್ಪರ್ಯ.[3]

ತ್ರೀಣಿ ತ್ರಯೀ ಪರಿಜಗಾದ ಯದಾತ್ಮದೃಷ್ಟಿ-
ದ್ವಾರಾಣಿ ಚಾರುತರಶೀಲನರೋಚಿತಾನಿ ।
ಪ್ರತ್ಯಕ್ಷಮೇತದನುಭಾವಯತಿ ಪ್ರಮೇಯಂ
ಪ್ರೌಢಪ್ರಜಾಃ ಪ್ರಭುರನಂತಪುರೇಽಬ್ಜನಾಭಃ ॥ ೪೧ ॥

---

೧. ಅಜಸ್ಯ ನಾಭಾವಿತಿ ಯಸ್ಯ ನಾಭೇರಭೂತ್ ಶ್ರುತೇಃ ಪುಷ್ಕರಂ ಲೋಕಸಾರಂ ।
-ಬ್ರಹ್ಮಸೂತ್ರಭಾಷ್ಯೋದ್ಧೃತ ಸ್ಕಂದಪುರಾಣವಚನ(೧/೧೧)

೨. ಬಹ್ವನ್ನಪೋಣೋದರಾಣಾಂ ಲೋಕೇ ಶಯನದರ್ಶನಾದಿತಿ ಭಾವಃ । -ವ್ಯಾ

೩. ಅಶ್ರಮಸ್ಯ ನಿತ್ಯಪ್ರಬುದ್ಧಸ್ಯ ಚ ತವ ಶಯನಮನ್ಯಥಾಽನುಪಪನ್ನಮಿತಿ ಭಾವಃ । -ವ್ಯಾ

ಅ: ತ್ರಯೀ = 'ಆತ್ಮಾ ವಾऽರೇ ದ್ರಷ್ಟವ್ಯಃ ಶ್ರೋತವ್ಯೋ ಮಂತ್ರವ್ಯೋ ನಿದಿಧ್ಯಾಸಿತವ್ಯಃ' ಇತ್ಯಾದಿ (ಬೃಹದಾರಣ್ಯಕ)ಉಪನಿಷದ್ರೂಪವಾದ ಶ್ರುತಿಯು; ಚಾರುತರಶೀಲನರೋಚಿತಾನಿ = ಅತ್ಯಂತ ಮನೋಹರವಾದ ಸ್ವಭಾವವನ್ನು ಹೊಂದಿರುವ ಸುಜೀವಿಗಳಿಗೆ ಯೋಗ್ಯವಾದ; ಆತ್ಮದೃಷ್ಟಿದ್ವಾರಾಣಿ = ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಾಧನಗಳನ್ನಾಗಿ; ತ್ರೀಣಿ = (ಶ್ರವಣ, ಮನನ ಮತ್ತು ಧ್ಯಾನ ಎಂಬ) ಮೂರನ್ನು; ಪರಿಜ-ಗಾದ = ಪ್ರತಿಪಾದಿಸಿದೆ ಇತಿ = ಎಂಬ; ಯತ್ = ಯಾವ; ಏತತ್ = ಈ; ಪ್ರಮೇಯಂ = ತತ್ತ್ವವನ್ನು; ಪ್ರಭುಃ = (ಸರ್ವ)ಸಮರ್ಥನಾದ; ಅಬ್ಜನಾಭಃ = ಅನಂತಪದ್ಮನಾಭನು; ಅನಂತಪುರೇ = ತಿರುವನಂತಪುರಕ್ಷೇತ್ರದಲ್ಲಿ; ಪ್ರೌಢಪ್ರಜಾಃ = ಪ್ರೌಢರಾದ ಜನಗಳಿಗೆ; ಪ್ರತ್ಯಕ್ಷಂ = ಪ್ರತ್ಯಕ್ಷವಾಗಿ; ಅನುಭಾವಯತಿ = ತಿಳಿಸಿಕೊಡುತ್ತಿರುವನು (ಅನುಭವಕ್ಕೆ ತಂದು-ಕೊಡುತ್ತಿರುವನು).

ಶ್ರುತಿಯು ಸಾತ್ವಿಕ ಸ್ವಭಾವದ ಜೀವನಿಗೆ ಶ್ರೀಹರಿಯ ದರ್ಶನದ ಮಾರ್ಗ ಎಂಬುದಾಗಿ ಮೂರನ್ನು ತಿಳಿಸಿದೆ; ಆ ಪ್ರಮೇಯವನ್ನು ತಿರುವನಂತಪುರದ ಪ್ರಭುವಾದ ಪದ್ಮನಾಭನು ಪ್ರೌಢಜನರಿಗೆ ಪ್ರತ್ಯಕ್ಷವಾಗಿ ಅನುಭವಕ್ಕೆ ತಂದುಕೊಡುತ್ತಿರುವನು.

ವಿ: ೧. ತಿರುವನಂತಪುರದಲ್ಲಿ ಅನಂತಪದ್ಮನಾಭಮೂರ್ತಿಯು ತುಂಬಾ ದೊಡ್ಡದಾಗಿದ್ದು ಗರ್ಭಗುಡಿಯಲ್ಲಿರುವ ಮೂರು ಬಾಗಿಲುಗಳಿಂದ ಕ್ರಮವಾಗಿ ಮೂರ್ತಿಯ ಮುಖ, ಮಧ್ಯ ಮತ್ತು ಪಾದಗಳನ್ನು ದರ್ಶನಮಾಡಬೇಕು. ಅನಂತಶಯನಮೂರ್ತಿಯನ್ನು ದ್ವಾರತ್ರಯಗಳಿಂದ ದರ್ಶನಮಾಡುವಾಗ 'ಆತ್ಮಾ ವಾऽರೇ ದ್ರಷ್ಟವ್ಯಃ ಶ್ರೋತ್ಯವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ಶ್ರುತಿ ವಾಕ್ಯವು ಜ್ಞಾಪಕಕ್ಕೆ ಬಂದು ಶ್ರವಣ, ಮನನ, ಧ್ಯಾನಗಳು ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಾಧನ (ದ್ವಾರ)ತ್ರಯವಾಗಿವೆ ಎಂಬ ಅದರ ಅರ್ಥವು ಯೋಗ್ಯರ ಅನುಭವಕ್ಕೆ ಬರುತ್ತದೆ ಎಂದರ್ಥ.[೧]

೨. ತೀರ್ಥಯಾತ್ರೆ, ಮೂರ್ತಿದರ್ಶನ ಕಾಲದಲ್ಲಿ ಇಂತಹ ತತ್ತ್ವಗಳ ಚಿಂತನೆಯನ್ನು ಮನಸ್ಸಿಗೆ ತಂದುಕೊಳ್ಳಬೇಕು ಎಂಬ ಶಿಕ್ಷಣವನ್ನು ಈ ತೆರನಾಗಿ ಉಪದೇಶಿಸುವ ಮೂಲಕವಾಗಿ ಶ್ರೀವಾದಿರಾಜರ ತೀರ್ಥಪ್ರಬಂಧ ಕೃತಿಯು ಸಾಧಕರ ಪಾಲಿಗೆ ನೀಡುವ ಬೆಳಕು ಅಪಾರವಾದುದು.

ಯಾ ತೈತ್ತಿರೀಯನಿಗಮಾಂತಗಕಿಂವದಂತೀ
ಸೇವಾತ್ರಯೋಚಿತಫಲತ್ರಿತಯಂ ವದಂತೀ ।

---

೧. ಅನಂತಶಯನೇ 'ದೇವಸ್ಯ ಪಾದಸಮೀಪೇ ಏಕಂ ದ್ವಾರಂ । ಉದರ ಸಮೀಪೇ ಏಕಂ ದ್ವಾರಂ । ಮುಖಸಮೀಪೇ ಏಕಂ ।' ಇತಿ ದ್ವಾರತ್ರಯೇಣ ಆಪಾದಮಸ್ತಕಂ ದೇವದರ್ಶನಂ ಭವತೀತಿ ಸರ್ವಾನುಭವಸಿದ್ಧಮ್ । ಏವಂ ಚ 'ಶ್ರೋತವ್ಯೋ ಮಂತ್ರವ್ಯೋ ನಿದಿಧ್ಯಾಸಿತವ್ಯಃ' ಇತ್ಯಾದಿ ಶ್ರುತ್ಯುಕ್ತದ್ವಾರತ್ರಯಂ ಭಗವದ್ದರ್ಶನಸಾಧ್ಯಮಿತ್ಯೇತತ್ ಪ್ರತ್ಯಕ್ಷಮನುಭೂಯತ ಇತಿ ಭಾವಃ ।

-ವ್ಯಾಖ್ಯಾನ

ತತ್ರತ್ಯ ಸಂಶಯಮಪಾಕುರುತೇಽಂಘ್ರಿಮಧ್ಯ -
ವಕ್ತ್ರಂ ಕ್ರಮೇಣ ಘಟಯನ್ ದೃಶಿ ಪದ್ಮನಾಭಃ ॥ ೪೨ ॥

ಅ: ಸೇವಾತ್ರಯೋಚಿತಫಲತ್ರಿತಯಂ = ಪಾದ, ಮಧ್ಯ ಮತ್ತು ಮುಖಗಳೆಂಬ ಮೂರು ಅವಯವಗಳ ಉಪಾಸನಾರೂಪವಾದ ಮೂರು ಸೇವೆಗಳಿಗೆ ಯೋಗ್ಯವಾದ ಫಲಗಳನ್ನಾಗಿ ಆಯಾ ಅವಯವ ದರ್ಶನರೂಪ ಮೂರು ಫಲಗಳನ್ನು; ವದಂತೀ = ಪ್ರತಿಪಾದಿಸುವ; ತೈತ್ತರೀಯನಿಗಮಾಂತಗಕಿಂವದಂತೀ = ತೈತ್ತಿರೀಯ ಶ್ರುತಿಯಲ್ಲಿರುವ ದೃಷ್ಟಾಂತವು; (ಯಾ ಅಸ್ತಿ = ಏನು ಇರುವುದೋ); ತತ್ರತ್ಯ ಸಂಶಯಂ = ಆ ವಿಷಯದಲ್ಲಿರುವ ಸಂದೇಹವನ್ನು; ಪದ್ಮನಾಭಃ = [1](ಅನಂತ)ಪದ್ಮನಾಭನು; ಅಂಘ್ರಿಮಧ್ಯವಕ್ತ್ರಂ = ಪಾದ, ಮಧ್ಯ ಮತ್ತು ಮುಖಗಳೆಂಬ ಅವಯವಗಳನ್ನು; ಕ್ರಮೇಣ = ಆಯಾ ದ್ವಾರಗಳ ಕ್ರಮದಲ್ಲಿ; ದೃಶಿ = (ದರ್ಶನಮಾಡುವಾಗ) ಕಣ್ಣಿಗೆ; ಘಟಯನ್ = ತೋರಿಸಿಕೊಡುತ್ತ; ಅಪಾಕುರುತೇ = ಪರಿಹರಿಸುತ್ತಿರುವರು.

ಪಾದ, ಮಧ್ಯ ಮತ್ತು ಮುಖಗಳೆಂಬ ಮೂರು ಅವಯವಗಳ ಉಪಾಸನಾರೂಪವಾದ ಮೂರು ಸೇವೆಗಳಿಗೆ ಉಚಿತ ಫಲಗಳನ್ನಾಗಿ ಆಯಾ ಅವಯವ ದರ್ಶನರೂಪ ಮೂರು ಫಲಗಳನ್ನು ಪ್ರತಿಪಾದಿಸುವ 'ತೈತ್ತಿರೀಯ' ವಚನದ ಬಗೆಗಿನ ಸಂದೇಹ-ವನ್ನು ಅನಂತಪದ್ಮನಾಭನು ಪಾದ, ಮಧ್ಯ ಮತ್ತು ಮುಖಗಳೆಂಬ ಅವಯವಗಳನ್ನು ಆಯಾ ದ್ವಾರಗಳ ಕ್ರಮದಲ್ಲಿ ದರ್ಶನಮಾಡುವಾಗ ಕಣ್ಣಿಗೆ ತೋರಿಸಿಕೊಡುತ್ತ ಪರಿಹರಿಸುತ್ತಿರುವರು.

ವಿ: ೧. [2]ತೈತ್ತರೀಯಶ್ರುತಿಯಲ್ಲಿ ಪರಮಾತ್ಮನ ಪಾದ, ಮಧ್ಯ ಮತ್ತು ಮುಖಗಳನ್ನು ಉಪಾಸನೆ ಮಾಡುವವರಿಗೆ ಮೋಕ್ಷದಲ್ಲಿ ಪಾದಾದಿಗಳ ದರ್ಶನವೇ ಫಲ ಎಂಬುದಾಗಿ ಉಕ್ತವಾಗಿದೆ.[3] ತಿರುವನಂತಪುರದಲ್ಲಿ ಪಾದಾದಿಗಳನ್ನು ತೋರುವ ದ್ವಾರಗಳಲ್ಲಿ ನಿಂತವರಿಗೆ ಪಾದಾದಿಗಳು ಮಾತ್ರವೇ ಕಾಣುತ್ತವೆ; ಯಾವ ದ್ವಾರದಿಂದಲೂ ಸಮಗ್ರಮೂರ್ತಿಯು ಗೋಚರಿಸುವುದಿಲ್ಲ; ಹೀಗೆ ಅನಂತಪದ್ಮನಾಭನ ಪಾದಾದಿಗಳನ್ನು ದರ್ಶನಮಾಡುವಾಗ ತೈತ್ತರೀಯ ಶ್ರುತಿಯಲ್ಲಿ ಹೇಳಿದ ಆಯಾ ಅವಯವ ಉಪಾಸಕನಿಗೆ[4] ಆಯಾ ಅವಯವಗಳ

---

೧. 'ಅನಂತ' ಎಂಬುದಕ್ಕೆ ದೇಶತಃ ಕಾಲತಃ ಗುಣತಃ ಅನಂತ ಎಂದರ್ಥ.

೨. ಪಾದೋಪಾಸಕಸ್ಯ ಮೋಕ್ಷೇ ಪಾದದರ್ಶನಮೇವ ಫಲಂ। ಮಧ್ಯೋಪಾಸಕಸ್ಯ ಮಧ್ಯದರ್ಶನಮೇವ ಫಲಂ । ಮುಖೋಪಾಸಕಸ್ಯ ಮುಖದರ್ಶನಮೇವ ಫಲಂ ಭವತೀತಿ ತೈತ್ತಿರೀಯೋಪ- ನಿಷದ್ಗತಪ್ರಮೇಯಂ ಯುಕ್ತಂ ವಾ ನ ವೇತಿಸಂದೇಹಃ । ಅನಂತಶಯನೇ ಪಾದಾದಿಗತದ್ವಾರೇ ಗತಸ್ಯ ಪಾದಾದಿಮಾತ್ರದರ್ಶನೇನ ನಿವರ್ತತೇ ಇತಿ ಭಾವಃ। -ವ್ಯಾ

೩. 'ಏತದ್ವೈ ಮುಖತೋಽನ್ನಂ ರಾದ್ಧಂ ಮುಖತೋಽನ್ನಂ ರಾಧ್ಯತೇ' ಇತ್ಯಾದಿ ರೂಪಾಽಸ್ತೀತಿ ಶೇಷಃ। -ವ್ಯಾ

೪. 'ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ॥' - ಎಂಬ ಗೀತಾ ವಾಕ್ಯ(೪।೧೧) ವನ್ನೂ ಇಲ್ಲಿ ಸ್ಮರಿಸಬಹುದು.

ದರ್ಶನ ಮಾತ್ರವೇ ಫಲ ಎಂಬ ವಿಷಯದಲ್ಲಿ ಹುಟ್ಟುವ ಆ ಸಂಶಯವು ಪರಿಹಾರವಾಗಿಬಿಡುತ್ತದೆ ಎಂದು ಭಾವ.

೨. ವೇದಾದಿ ಶಾಸ್ತ್ರಗಳ ವಿಚಾರದಲ್ಲಿ ಸಾಧಕರಿಗೆ ಹುಟ್ಟುವ ಈ ತೆರನಾದ ಸಂಶಯಗಳು ಶಾಸ್ತ್ರೋಕ್ತರೀತಿಯಲ್ಲಿ ತೀರ್ಥಯಾತ್ರೆ ಮಾಡುವ ಜನರಿಗೆ ಪರಿಹಾರವಾಗುತ್ತವೆ ಎಂಬ ತತ್ತ್ವವೂ ಸಹ ಇಲ್ಲಿ ಧ್ವನಿತವಾಗಿದೆ. ಇಂತಹ ದೃಷ್ಟಿಕೋನದಿಂದ ಮಾಡಿದಾಗ ಮಾತ್ರವೇ ತೀರ್ಥಯತ್ರೆಯು ಸಾರ್ಥಕ ಎಂಬ ಸೂಚನೆಯೂ ಇಲ್ಲಿದೆ.

೩. ಪದ್ಮನಾಭನು 'ಅನುಭವಕ್ಕೆ ತಂದುಕೊಡುವನು' ಪ್ರಮೇಯಂ ಅನುಭಾವಯತಿ = (ಶ್ಲೋಕ. ೪೧) ಮತ್ತು 'ಸಂಶಯಂ ಅಪಾಕುರುತೇ' (ಶ್ಲೋ.೪೨); ಸಂಶಯವನ್ನು ಹೋಗಲಾಡಿಸುವನು' ಎಂಬ ಇಲ್ಲಿಯ ಮಾತುಗಳು ಶ್ರೀಹರಿಯು ತತ್ತ್ವಬೋಧಕ, ಸಂಶಯಾದಿ ನಿವರ್ತಕ ಎಂಬ ಪ್ರಮೇಯವನ್ನು ಸಹ ಧ್ವನಿಸುತ್ತವೆ.

**ಪಾಸ್ಯನಂತಪುರೇಶ ತ್ವಮಶೇಷಂ ಶೇಷಶಾಯ್ಯಪಿ ।**
**ತಥಾ ಹಿ ಕರುಣಾವಂತಃ ಪರಕಾರ್ಯಧುರಂಧರಾಃ ॥ ೪೩ ॥**

ಅ: (ಹೇ) ಅನಂತಪುರೇಶ = ಎಲೈ ತಿರುವನಂತಪುರದ ಸ್ವಾಮಿಯೇ !; ತ್ವಂ = ನೀನು; ಶೇಷಶಾಯೀ ಅಪಿ = ಶೇಷನ ಮೇಲೆ ಮಲಗಿದವನಾಗಿದ್ದರೂ; ಅಶೇಷಂ = ಸಕಲವನ್ನೂ; ಪಾಸಿ = ಪಾಲಿಸುತ್ತಿರುವಿ; ತಥಾ ಹಿ = ಅದು ಯುಕ್ತವೇ ಸರಿ; (ಏಕೆಂದರೆ); ಕರುಣಾ- ವಂತಃ = ಕರುಣಾಳುಗಳು; ಪರಕಾರ್ಯಧುರಂಧರಾಃ = ಇತರರಕಾರ್ಯಗಳನ್ನು ಸದಾ ನಿರ್ವಹಿಸುವವರು; ಹಿ = ಅಲ್ಲವೆ?

ಎಲೈ ತಿರುವನಂತಪುರದ ಸ್ವಾಮಿಯೇ ! ನೀನು ಶೇಷನ ಮೇಲೆ ಮಲಗಿದವ- ನಾಗಿದ್ದರೂ ಸಕಲವನ್ನೂ ಪಾಲಿಸುತ್ತಿರುವಿ; ಅದು ಯುಕ್ತವೇ ಸರಿ. ಏಕೆಂದರೆ ಕರುಣಾಳುಗಳು ಇತರರ ಕಾರ್ಯಗಳನ್ನೇ ಸದಾ ನಿರ್ವಹಿಸುವವರಲ್ಲವೇ?

ವಿ: ೧. ಮಲಗುವುದು ಅನುತ್ಸಾಹದ ಸಂಕೇತ; ಆದರೆ ಶ್ರೀಹರಿ ಶೇಷನ ಮೇಲೆ ಮಲಗಿಯೂ ಅಶೇಷ ಜಗತ್ತನ್ನು ಪಾಲಿಸುತ್ತಿರುವನು. ಹೀಗೆ ಪರಕಾರ್ಯವನ್ನು ಸದಾ ಮಾಡುವುದು ಕರುಣಾಳುಗಳಾದವರ ಸ್ವಭಾವವೇ ಆಗಿದೆ; ಶ್ರೀಹರಿಗೆ ನಿದ್ರಾದಿ ದೋಷಗಳಿಲ್ಲ; ಅವನು ಸದಾಕಾಲವೂ ಸಕಲಸುಜೀವಿಗಳ ರಕ್ಷಣೆಯನ್ನೇ ಮಾಡುತ್ತಿರುವನು ಎಂದು ಭಾವ. [೧]ಶೇಷನ ಮೇಲೆ ಮಲಗಿದ್ದು, ಅವನನ್ನು ಮಾತ್ರವಲ್ಲದೆ ಅಶೇಷ (ಶೇಷವಾದ) ಜಗತ್ತನ್ನು ಪಾಲಿಸುವವನು ಎಂಬುದು ಶ್ರೀಹರಿಯ ಅಪಾರಕಾರುಣ್ಯಕ್ಕೆ ದ್ಯೋತಕವಾಗಿದೆ ಎಂಬ ಧ್ವನಿಯೂ ಇಲ್ಲಿದೆ.

---

೧. ಕೃತಕೃತ್ಯತ್ವೇನ ಸದಾ ಶೇಷೇ ಶಯಾನಸ್ಯಾಪಿ ತವ ಶೇಷಪಾಲನಂ ವಿನಾ ಅಶೇಷಪಾಲನಂ ಸ್ವಕೀಯಕಾರ್ಯಾದಪಿ ಪರಕಾರ್ಯೇ ಆದರೇಣೋಪಪದ್ಯತೇ ಇತಿ ಧ್ವನಿತೋಽರ್ಥಃ । ಅಶೇಷಪದಸ್ಯ ಶೇಷವ್ಯತಿರಿಕ್ತ ಇತ್ಯರ್ಥಸ್ಯ ಗಮಕತ್ವಾತ್ । -ವ್ಯಾಖ್ಯಾನ

೨. ಶ್ರೀಹರಿಯು ಸದಾ ಇತರರ ಕಾರ್ಯವನ್ನು ಮಾಡುವುದು ಅವನಿಗೆ ತನ್ನದೇ ಆದ ಕಾರ್ಯ ಎಂದೂ ಇಲ್ಲ ಎಂಬುದಕ್ಕೂ ಗಮಕವಾಗಿದೆ.[೧]

**ಯಥಾ ಗುಹಾಮುಖೇ ನಾಥ ಶೇಷೇ ಶೇಷೇ ರಮಾಪತೇ ।**

**ತಥಾ ಹಾರ್ದಗುಹಾಮಧ್ಯಮಧ್ಯಾಸೀನೋ ರಮಸ್ವ ಮೇ ॥ ೪೪ ॥**

ಅ: **ರಮಾಪತೇ** = ಲಕ್ಷ್ಮೀಪತಿಯಾದ; (**ಹೇ**) **ನಾಥ** = ಎಲ್ಲೈ (ಅನಂತಶಯನ) ಸ್ವಾಮಿಯೇ; **ತ್ವಂ** = ನೀನು; **ಗುಹಾಮುಖೇ** = ಗುಹಾದ್ವಾರದಲ್ಲಿ; **ಶೇಷೇ** = ಶೇಷನ ಮೇಲೆ **ಯಥಾ** = ಹೇಗೆ; **ಶೇಷೇ** = ಮಲಗಿರುವೆಯೋ; **ತಥಾ** = ಹಾಗೆಯೇ; **ಮೇ** = ನನ್ನ; **ಹಾರ್ದಗುಹಾಮಧ್ಯಂ** = ಹೃದಯಗುಹೆಯಮಧ್ಯದಲ್ಲಿ; **ಅಧ್ಯಾಸೀನಃ** = ನೆಲೆಸುವವನಾಗಿ; **ರಮಸ್ವ** = ಕ್ರೀಡಿಸು.

**ಲಕ್ಷ್ಮೀಪತಿಯಾದ ಎಲ್ಲೈ (ಅನಂತಶಯನ) ಸ್ವಾಮಿಯೇ ! ನೀನು ಗುಹಾದ್ವಾರದಲ್ಲಿ ಶೇಷನ ಮೇಲೆ ಹೇಗೆ ಮಲಗಿರುವೆಯೋ ಹಾಗೆಯೇ ನನ್ನ ಹೃದಯಗುಹೆಯ ಮಧ್ಯದಲ್ಲಿ ನೆಲೆಸಿ ವಿಹರಿಸು.**

ವಿ: ೧. ಎಲ್ಲೈ ಅನಂತಶಯನನೇ? ನೀನು ಗುಹೆಯ ದ್ವಾರದಲ್ಲಿ ಶೇಷನ ಮೇಲೆ ನೆಲೆಸಿರುವಂತೆ, ಸದಾ ನನ್ನ ಗುಹೆಯಲ್ಲಿ ನೆಲೆಸಿ [೨]ಕ್ರೀಡಿಸು; ಅನಂತಶಯನನು ಗುಹಾದ್ವಾರದಲ್ಲಿ ನೆಲೆಸಿರುವನು ಎಂಬ ಪುರಾಣ [೩]ಪ್ರಸಿದ್ಧಿಯನ್ನು ಅನುಸರಿಸಿ ಶ್ರೀವಾದಿರಾಜರು ಹೀಗೆ ಪ್ರಾರ್ಥಿಸಿರುವರು. ತೀರ್ಥಪ್ರಬಂಧದಲ್ಲಿ ಕ್ಷೇತ್ರವರ್ಣನಪರವಾದ ಈ ಕೊನೆಯ ಶ್ಲೋಕದಲ್ಲಿನ ಪ್ರಾರ್ಥನೆಯು ಇತರ ಸಕಲತೀರ್ಥಕ್ಷೇತ್ರಗಳಲ್ಲೂ ಭಗವಂತನನ್ನು ಪ್ರಾರ್ಥಿಸಿಕೊಳ್ಳಬೇಕಾದ ರೀತಿಗೆ ಮಾರ್ಗದರ್ಶಕವೂ ಆಗಿದೆ.

೨. ಶ್ರೀವಾದಿರಾಜರು ತಮ್ಮ ಸರಸಭಾರತೀವಿಲಾಸದಲ್ಲೂ ಅನಂತಪದ್ಮನಾಭನನ್ನು ವರ್ಣಿಸಿದ್ದು, ಆ ಶ್ಲೋಕವು ಹೀಗಿದೆ(೧/೪೮) :

ಅನಂತಪುರನಾಥ ತೇ ಪದಸುಪದ್ಮಸೇವೀ ಜನೋ
ಭವೇದ್ವಿಜಿತದುರ್ಜನೋ ದುರಿತತರ್ಜನಃ ಸಜ್ಜನಃ ।
ಉಪೈತಿ ಚ ಪರಾಂ ಗತಿಂ ಸತತಮುನ್ನತಿಂ ಸನ್ನತಿಂ
ಭವಘ್ನ ಸ ಪುನರ್ಭವೀ ಪರಿಭವೀ ಕಥಂ ಸ್ಯಾದ್ ಭವಾನ್ ॥

---

೧. 'ನ ಪ್ರಯೋಜನವತ್ತ್ವಾತ್ ।' -ಬ್ರಹ್ಮಸೂತ್ರ(೨/೧/೩೩)
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ । -(ಗೀತಾ೩/೨೨)
ಆಪ್ತಕಾಮಸ್ಯ ಕಾ ಸ್ಪೃಹಾ । -ಶ್ರುತಿ
ಈಶ್ವರಪ್ರವೃತ್ತೇಃ ಸರ್ವತ್ರಸ್ವಪ್ರಯೋಜನಹೀನತ್ವಾತ್ । -(ತತ್ತ್ವನಿರ್ಣಯ ಟೀಕಾ)
೨. ಹೃದಯಗುಹಾಯಾಂ ರಮಣಸ್ಯ ಉಚಿತತ್ವಾದಿತಿ ಭಾವಃ ।
೩. ಅನಂತಶಯನಃ ಗುಹಾದ್ವಾರೇ ವಸತೀತಿ ಪುರಾಣಪ್ರಸಿದ್ಧಿಃ । -ವ್ಯಾ

ಸುರಗಣಪರಿವಾರಃ ಶೋಭಮಾನೋರುಹಾರಃ
ಕರಿಕರಸಮಹಸ್ತಃ ಕಾಂಚನೋದ್ದೀಪ್ತವಸ್ತ್ರಃ।
ಶುಭಜನಕೃತಗಾನಃ ಶೇಷಭೋಗೇ ಶಯಾನಃ
ಪ್ರಭುರಯಮವಿನಾಶಃ ಪ್ರೀಯತಾಮಿಂದಿರೇಶಃ ॥೪೫ ॥

ಅ: ಸುರಗಣಪರಿವಾರಃ = [1](ಶ್ರೀ, ಭೂ ಮೊದಲಾದ) ಸುರಸಮುದಾಯವನ್ನು ಪರಿವಾರವಾಗಿ ಉಳ್ಳ; ಶೋಭಮಾನೋರುಹಾರಃ = ಶೋಭಿಸುತ್ತಿರುವ ಬಹುವಿಧಹಾರಗಳುಳ್ಳ; ಕರಿಕರಸಮಹಸ್ತಃ = ಆನೆಯ ಸೊಂಡಿಲಿನಂತಹ ಕೈಗಳುಳ್ಳ; ಕಾಂಚನೋದ್ದೀಪ್ತವಸ್ತ್ರಃ = ಚಿನ್ನದಂತೆ ಹೊಳೆಯುವ ವಸ್ತ್ರವುಳ್ಳ (ಪೀತಾಂಬರಧಾರಿಯಾದ); ಶುಭಜನಕೃತಗಾನಃ = ಸಜ್ಜನರಿಂದ ಸ್ತುತಿಸಲ್ಪಡುವ; ಶೇಷಭೋಗೇ = ಶೇಷನ ಶರೀರದ ಮೇಲೆ; ಶಯಾನಃ = ಮಲಗಿರುವ; ಪ್ರಭುಃ = (ಸರ್ವ)ಸಮರ್ಥನಾದ ಅವಿನಾಶಃ = (ಚತುರ್ವಿಧ[2])ವಿನಾಶರಹಿತನಾದ; ಇಂದಿರೇಶಃ = ಲಕ್ಷ್ಮೀಪತಿಯಾದ; ಅಯಂ = ಶ್ರೀಮದನಂತಪದ್ಮನಾಭನು[3]; ಪ್ರೀಯತಾಂ = ಪ್ರೀತನಾಗಲಿ.

ಸುರಸಮುದಾಯವೇ ಪರಿವಾರ, ವಕ್ಷಸ್ಥಳದಲ್ಲಿ ಬಹುಬಗೆಯ ಹಾರಗಳು, ಆನೆಯ ಸೊಂಡಿಲಿನಂತಹ ಕೈಗಳು, ಚಿನ್ನದಂತೆ ಹೊಳೆಯುವ ಪೀತಾಂಬರ, ಸಾತ್ವಿಕಜನರು ಮಾಡುವ ಸ್ತೋತ್ರಗಳು; ಶೇಷನ ಮೇಲೆ ಶಯನ; ಇಂತಹ ಅವಿನಾಶನಾದ, ಲಕ್ಷ್ಮೀಪತಿಯಾದ ಈ ಅನಂತಪದ್ಮನಾಭನು ಪ್ರಸನ್ನನಾಗಲಿ.

ವಿ: ೧. ತಾವು ರಚಿಸಿದ 'ತೀರ್ಥಪ್ರಬಂಧ' ಕೃತಿಯನ್ನು ಶ್ರೀವಾದಿರಾಜರು ಈ ಶ್ಲೋಕದಿಂದ ಶ್ರೀಮದನಂತಪದ್ಮನಾಭರೂಪೀ ಶ್ರೀಹರಿಗೆ ಸಮರ್ಪಿಸಿರುವರು.

೨. 'ಸುರಗಣಪರಿವಾರಃ' ಮೊದಲಾದ ಇಲ್ಲಿನ ವಿಶೇಷಣಗಳಿಂದ ಶ್ರೀಹರಿಯ ಸರ್ವೋತ್ತಮತ್ವ, ಸಕಲಾಭರಣಭೂಷಿತತ್ವ, ಸಕಲಸಲ್ಲಕ್ಷಣೋಪೇತತ್ವ, ದಿವ್ಯವಸ್ತ್ರಧಾರಿತ್ವ, ಸಜ್ಜನವಂದ್ಯತ್ವ, ಶೇಷಶಾಯಿತ್ವ, ಚತುರ್ವಿಧನಾಶರರಹಿತತ್ವ ಮತ್ತು ಲಕ್ಷ್ಮೀಪತಿತ್ವ ಎಂಬ ಹಿರಿಮೆಗಳು ಪ್ರತಿಪಾದಿತವಾಗಿವೆ. ಇಂತಹ ಮಹಾಮಹಿಮೋಪೇತನಾಗಿರುವುದರಿಂದಲೇ ಸರ್ವೋತ್ತಮನಾಗಿರುವ ಶ್ರೀಹರಿಯು ಈ ಕೃತಿಯಿಂದ ಪ್ರೀತನಾಗಲಿ ಎಂದು ಭಾವ.

---

೧. ''ಶ್ರೀಭೂಮಿನಾರದದಿವಾಕರಚಂದ್ರತಾರ್ಕ್ಯೈಃ
ಪಂಚಾಯುಧೈರ್ಗರುಡತುಂಬುರುಪರ್ವತಾದ್ಯೈಃ'' ಇತ್ಯುಕ್ತಾ ದೇವಾಃ

-ವ್ಯಾಖ್ಯಾನ

೨. ಅನಿತ್ಯತ್ವಂ ದೇಹಹಾನಿರ್ದುಃಖಪ್ರಾಪ್ತಿರಪೂರ್ಣತಾ।
ನಾಶಶ್ಚತುರ್ವಿಧಃ ಪ್ರೋಕ್ತಸ್ತದಭಾವೋ ಹರೇಃ ಸದಾ ॥

-ಇತಿ ಮಹಾವಾರಾಹೇ(ಗೀತಾತಾತ್ಪರ್ಯ ೨/೧೬)

೩. ಅನೇನ ಪ್ರಬಂಧನಿರ್ಮಾಣೇನ ಅನಂತಶಯನಃ ಪ್ರೀಣಾತ್ವಿತಿ ಭಾವಃ। -ವ್ಯಾ

## ಗ್ರಂಥದ ಉಪಸಂಹಾರ

**ನಾನಾವೃತ್ತಂ[೧] ಸ್ವಯಾತ್ರಾಕ್ರಮಪರಿಚಿತಸುಕ್ಷೇತ್ರಮಾಹಾತ್ಮ್ಯಯುಕ್ತಂ**
**ಶಬ್ದಾಲಂಕಾರಬದ್ಧಂ ಶಮಲಕುಲಹರಶ್ಲಾಘನೀಯಾರ್ಥಹೃದ್ಯಮ್ ।**
**ಶ್ರೀನಾಥಪ್ರೀತಿಹೇತೋರ್ಹಯವದನಕೃಪಾಂಭೋಧಿಸಂಭೂತರತ್ನಂ**
**ಚಕ್ರೇ ತೀರ್ಥಪ್ರಬಂಧಂ ಬಹುಗುಣಭರಿತಂ ವಾದಿರಾಜೋ ಯತೀಂದ್ರಃ ॥**

**ಅ: ಯತೀಂದ್ರಃ** = ಪರಮಶ್ರೇಷ್ಠರಾದ; **ವಾದಿರಾಜಃ** =ವಾದಿರಾಜರೆಂಬ ಕವಿಗಳು; **ನಾನವೃತ್ತಂ** = ಪಥ್ಯಾವಕ್ತ್ರ ಉಪೇಂದ್ರವಜ್ರಾ ಮೊದಲಾದ ಅನೇಕ ವೃತ್ತಗಳಿಂದ ಕೂಡಿದ; **ಸ್ವಯಾತ್ರಾಕ್ರಮಪರಿಚಿತಸುಕ್ಷೇತ್ರಮಾಹಾತ್ಮ್ಯಯುಕ್ತಂ** = ತಮ್ಮ ತೀರ್ಥಯಾತ್ರೆಯ ಸಂಚಾರಕ್ರಮದಿಂದ ಪರಿಚಿತವಾದ ಶ್ರೀಪರಶುರಾಮಕ್ಷೇತ್ರಾದಿಮಂಗಲಕರ ಕ್ಷೇತ್ರಗಳ ಮಾಹಾತ್ಮ್ಯದಿಂದ ಕೂಡಿರುವ; **ಶಬ್ದಾಲಂಕಾರಬದ್ಧಂ** = ಶ್ಲೇಷ ಅನುಪ್ರಾಸಾದಿ ಶಬ್ದಾಲಂಕಾರಗಳಿಂದ ಯುಕ್ತವಾದ; **ಶಮಲಕುಲಹರಶ್ಲಾಘನೀಯಾರ್ಥಹೃದ್ಯಂ** = ಪಾಪ ಸಮುದಾಯವನ್ನು ಪರಿಹರಿಸುವ ಪ್ರಶಸ್ತವಾದ ಅರ್ಥಗಳಿಂದ ಮನೋಹರವಾಗಿರುವ; **ಹಯವದನಕೃಪಾಂಭೋಧಿಸಂಭೂತರತ್ನಂ** = ಹಯಗ್ರೀವದೇವರ ಕೃಪೆ ಎಂಬ ಸಾಗರದಿಂದ ಸಂಜಾತವಾದ ರತ್ನದಂತಿರುವ; **ಬಹುಗುಣಭರಿತಂ** = ಕಾವ್ಯೋಚಿತವಾದ ಅನೇಕ ಗುಣಗಳಿಂದ ತುಂಬಿರುವ; **ತೀರ್ಥಪ್ರಬಂಧಂ** = ತೀರ್ಥಪ್ರಬಂಧವೆಂಬ ಕಾವ್ಯವನ್ನು **ಶ್ರೀನಾಥಪ್ರೀತಿಹೇತೋಃ** = ಶ್ರೀನಾಥಪ್ರೀತಿಗೋಸ್ಕರ; **ಚಕ್ರೇ** = ರಚಿಸಿದರು.

**ಅನೇಕಬಗೆಯ ವೃತ್ತಗಳು, ಸಂಚಾರಕ್ರಮದಲ್ಲಿ ಪರಿಚಿತವಾದ ತೀರ್ಥಕ್ಷೇತ್ರಗಳ ಮಹಿಮೆಗಳು, ಶಬ್ದಾಲಂಕಾರಗಳ ರಚನೆ, ಪಾಪನಾಶಕವಾದ ಪ್ರಶಸ್ತ ಅರ್ಥ-ಗಳಿಂದಾಗಿ ರಮ್ಯತೆ, ಬಹುಗುಣಭರಿತವಾದ ಹಯಗ್ರೀವದೇವರ ಕೃಪಾಸಾಗರದಿಂದ ಉದ್ಭವಿಸಿದ ರತ್ನದಂತಿರುವ ಈ ತೀರ್ಥಪ್ರಬಂಧವನ್ನು ಜ್ಞಾನಿವರೇಣ್ಯರಾದ ಶ್ರೀವಾದಿರಾಜರು ಲಕ್ಷ್ಮೀಪತಿಯಾದ ಶ್ರೀಹರಿಯ ಪ್ರೀತಿಗೋಸ್ಕರವಾಗಿ ರಚಿಸಿದರು.**

ವಿ. ೧. ತೀರ್ಥಪ್ರಬಂಧವೆಂಬ[೨] ಈ ಕಾವ್ಯದಲ್ಲಿ ಉಪೇಂದ್ರವಜ್ರಾ ಮೊದಲಾದ ಅನೇಕ ವೃತ್ತಗಳಿವೆ; ನಾನಾವಿಧವಾದ ತೀರ್ಥಕ್ಷೇತ್ರಗಳ ಮಹಿಮೆಗಳಿವೆ; ಶ್ಲೇಷ, ಅನುಪ್ರಾಸಾದಿ ಶಬ್ದಾಲಂಕಾರಗಳಿವೆ; ಪಾಪಸಮೂಹವನ್ನೇ ತೊಡೆದು ಹಾಕುವ ಪ್ರಶಸ್ತವಾದ ಮನೋಹರ ಅರ್ಥಗಳಿವೆ. ಹಯಗ್ರೀವದೇವರ ಕರುಣಾಸಾಗರದಿಂದ ಜನಿಸಿ ಬಂದಿರುವ ದಿವ್ಯರತ್ನವಾಗಿರುವ ಇದು ಕಾವ್ಯೋಚಿತವಾದ ಅನೇಕ ಗುಣಗಳನ್ನು ಹೊಂದಿದೆ; ಇಂತಹ ಕಾವ್ಯರತ್ನವನ್ನು ತಾವು ರಚಿಸಿದ್ದು ಲಕ್ಷ್ಮೀಪತಿಯಾದ ಶ್ರೀಹರಿಯ ಪ್ರೀತಿಗೆಂದು ಮಾತ್ರ. ಹೀಗೆ ವೃತ್ತ ವೈವಿಧ್ಯ,

---

೧. ಕವಿಃ ಸ್ವನಾಮಗ್ರಂಥನಾಮಕೀರ್ತನಪುರಃಸರಂ ಸ್ವಕೃತಗ್ರಂಥಸ್ಯ ಹಯಗ್ರೀವಪ್ರಸಾದಲಬ್ಧತ್ವೇನಾತು್ಯಪಾದೇಯತಾಂ ಸೂಚಯನ್ ಪ್ರಬಂಧಂ ಶ್ರೀಪತೇರರ್ಪಯತಿ । -ವ್ಯಾ

೨. ತೀರ್ಥಾನಾಂ ಪ್ರಬಂಧಃ ಪ್ರತಿಪಾದ್ಯತಯಾಬಂಧನಂ, ಯಸ್ಮಿನ್ ಕಾವ್ಯೇ ತತ್ತೀರ್ಥಪ್ರಬಂಧಾಖ್ಯಂ ಕಾವ್ಯಂ ತತ್ । -ವ್ಯಾ

ಕ್ಷೇತ್ರಮಾಹಾತ್ಮ್ಯ, ಶಬ್ದಾಲಂಕಾರಗಳು, ಅರ್ಥರಮ್ಯತೆ, ಬಹುಗುಣಭರಿತತ್ವದಿಂದಾಗಿ ಅಪೂರ್ವರತ್ನದಂತಿರುವ ಈ ಕೃತಿ ಶ್ರೀಹರಿಗೆ ಪ್ರೀತಿಕರವಾಗಲಿ ಎಂದು ಅರ್ಥ.

೨. ಈ ಕೃತಿರಚನೆ ಶ್ರೀಹಯಗ್ರೀವದೇವರಿಗೆ ತಾವು ಸಲ್ಲಿಸಿರುವ ರತ್ನಕಾಣಿಕೆ ಎಂದು ಭಾವ. ಹಯಗ್ರೀವದಯಾಸಮುದ್ರಜನ್ಯವಾದ ಈ ರತ್ನವನ್ನು ಗುಣಸಮುದ್ರನಾದ ಅವನಿಗೇ ಸಮರ್ಪಿಸುವ ಈ ಕಾರ್ಯವು ''ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣಿರೋ। ಹರಿಯ ಕರುಣದೊಳಾದಭಾಗ್ಯವ ಹರಿಸಮರ್ಪಣೆ ಮಾಡಿ ಬದುಕಿರೋ।'' ಎಂಬ ಶಾಸ್ತ್ರ ತತ್ತ್ವಕ್ಕೂ ನಿದರ್ಶನವಾಗಿದೆ.

೩. ಶ್ರೀವಾದಿರಾಜರು ತಮ್ಮ ಮಹಾಕಾವ್ಯವಾದ ಶ್ರೀರುಕ್ಮಿಣೀಶವಿಜಯವನ್ನು ಸಹ 'ಪ್ರಬಂಧ' ಎಂದು ಕರೆದಿರುವುದರನ್ನು ಇಲ್ಲಿ ಗಮನಿಸಬಹುದು :

'ಪ್ರಬಂಧಜಲಜಂ ಪಾದೇಽರ್ಪಿತಂ ಸ್ಯಾದ್ಧರೇಃ' -೧೯/೪೦

## ಫಲಶ್ರುತಿ

**ಪದ್ಯಾನಿ ಪ್ರಥಿತಾಪಗಾಚ್ಯುತಯಶೋಹೃದ್ಯಾನಿ ತತ್ಖಂಡಿತಾ -**
**ವದ್ಯೇನಾಮಲವಾದಿರಾಜಯತಿನಾ ಮಧ್ವೋಕ್ತಿಶುದ್ಧಾತ್ಮನಾ ।**
**ಬದ್ಧಾನ್ಯಧ್ವರಸಿದ್ಧಸತ್ಕ್ರತುಚಯೋದ್ರಿಕ್ತೋರುಪುಣ್ಯಪ್ರದಾ -**
**ನ್ಯದ್ಧಾ ಯಃ ಪಠತೇ ಶೃಣೋತಿ ಸ ಭವೇದುದ್ದಾಮಧಾಮಾ ಶ್ರಿಯಃ ॥೪೭॥**

**॥ ಇತಿ ಶ್ರೀವಾದಿರಾಜಶ್ರೀಪಾದ ಕೃತ ತೀರ್ಥಪ್ರಬಂಧೇ ದಕ್ಷಿಣಪ್ರಬಂಧಃ ॥ ೪ ॥**

**॥ ಇತಿ ಶ್ರೀವಾದಿರಾಜಶ್ರೀಪಾದಕೃತತೀರ್ಥಪ್ರಬಂಧಃ ॥**

**ಅ:** **ಪ್ರಥಿತಾಪಗಾಚ್ಯುತಯಶೋಹೃದ್ಯಾನಿ** = (ಪುರಾಣಾದಿ) ಪ್ರಸಿದ್ಧವಾದ ಗಂಗಾದಿ ನದಿಗಳ ಮತ್ತು ಅಚ್ಯುತನಾದ ಶ್ರೀನಾರಾಯಣನ ಕೀರ್ತಿಯಿಂದಾಗಿ ಮನೋಹರವಾಗಿರುವ; **ಮಧ್ವೋಕ್ತಿಶುದ್ಧಾತ್ಮನಾ** = ಮಧ್ವಾಚಾರ್ಯರ ವಚನರೂಪವಾದ ಶಾಸ್ತ್ರದಲ್ಲಿ (ಆಸಕ್ತವಾದ ಶುದ್ಧ) ಮನಸ್ಸುಳ್ಳ; **ತತ್ಖಂಡಿತಾವದ್ಯೇನ** = ಆ ನದಿಗಳಿಂದಲೂ ಶ್ರೀನಾರಾಯಣನಿಂದಲೂ ಪಾಪಗಳನ್ನು ನಾಶಪಡಿಸಿಕೊಂಡಿರುವ; **ಅಮಲವಾದಿರಾಜಯತಿನಾ** = ನಿರ್ದೋಷರಾದ ವಾದಿರಾಜರೆಂಬ ಯತಿಗಳಿಂದ; **ಬದ್ಧಾನಿ** = ರಚಿತವಾದ; **ಅಧ್ವರಸಿದ್ಧಸತ್ಕ್ರತುಚಯೋದ್ರಿಕ್ತೋರುಪುಣ್ಯಪ್ರದಾನಿ** = ಅಶ್ವಮೇಧಾದಿ ಯಜ್ಞಗಳಿಂದ ಲಭಿಸುವ ಉತ್ತಮ ಪುಣ್ಯರಾಶಿಗಳಿಗಿಂತಲೂ ಮಿಗಿಲಾದ ಬಹು ಪುಣ್ಯವನ್ನು ನೀಡುವಂತಹ; **ಪದ್ಯಾನಿ** = ಇಲ್ಲಿಯ ಶ್ಲೋಕಗಳನ್ನು; **ಯಃ** = ಯಾವನು; **ಅದ್ಧಾ** = ಭಕ್ತಿಪೂರ್ವಕವಾಗಿ ಚೆನ್ನಾಗಿ; **ಪಠತೇ** = ಪಠಿಸುವನೋ; **ಶೃಣೋತಿ** = ಅಥವಾ ಇತರರಿಂದ ಪಠಿಸಲ್ಪಡುವಾಗ ಕೇಳುವನೋ; **ಸಃ** = ಅವನು; **ಶ್ರಿಯಃ** = ಐಹಿಕಾಮುಷ್ಮಿಕ ಸಂಪತ್ತುಗಳಿಗೆ; **ಉದ್ದಾಮಧಾಮ** = ಉತ್ಕೃಷ್ಟ ನೆಲೆಯಾಗಿ; **ಭವೇತ್** = ಆಗುವನು.

ಶ್ರೀಮಧ್ವಶಾಸ್ತ್ರದಲ್ಲಿ ಶುದ್ಧಮನಸ್ಸನ್ನಿರಿಸಿದ, ಅದರಿಂದ ದೋಷರಹಿತರಾದ, ನಿರ್ಮಲರಾದ ಶ್ರೀವಾದಿರಾಜಯತಿಗಳಿಂದ ರಚಿತವಾದ ವಿಖ್ಯಾತನದಿಗಳ ಹಾಗೂ ಅಚ್ಯುತನಾದ ಶ್ರೀಹರಿಯ ಮಹಿಮೆಗಳ ವರ್ಣನೆಯಿಂದಾಗಿ ಅತ್ಯಂತ ಹೃದಯಂಗ-ಮವಾದ, ಯಾಗಗಳಿಂದ ಲಭಿಸುವ ಪುಣ್ಯರಾಶಿಗಳಿಗಿಂತ ಮಿಗಿಲಾದ ಸುಕೃತ-ರಾಶಿಯನ್ನು ನೀಡುವ ಈ ಪದ್ಯಗಳನ್ನು ಭಕ್ತಿಪೂರ್ವಕವಾಗಿ ಯಾವನು ಪಠಿಸುವನೋ, ಕೇಳುವನೋ, ಅವನು ಅಪಾರ ಸಂಪತ್ತಿಗೆ ಉತ್ಕೃಷ್ಟ ನೆಲೆಯೆನ್ನಿಸುವನು.

ವಿ: ೧. ಈ ತೀರ್ಥಪ್ರಬಂಧದಲ್ಲಿನ ಪದ್ಯಗಳು[೧] ಗಂಗಾದಿಪುರಾಣ ಪ್ರಸಿದ್ಧನದಿಗಳ ಹಾಗೂ ತೀರ್ಥಕ್ಷೇತ್ರಗಳ ಸ್ವಾಮಿಯಾದ ನಾರಾಯಣನ ವೈಭವವನ್ನು ನಿರೂಪಿಸುತ್ತವೆ.

೨. ಇದನ್ನು ಬರೆದ ಶ್ರೀವಾದಿರಾಜರು ನದಿಗಳಿಂದಲೂ ಮತ್ತು ಶ್ರೀನಾರಾಯಣನಿಂದಲೂ ದೋಷಗಳನ್ನು ಪರಿಹರಿಸಿಕೊಂಡು[೨] ನಿರ್ಮಲರೂ, ಮಧ್ವಶಾಸ್ತ್ರದಲ್ಲಿ ಆಸಕ್ತವಾದ ಮನಸ್ಸುಳ್ಳವರೂ ಆದವರು.

೩. ಇವುಗಳು ಅಶ್ವಮೇಧಾದಿಯಜ್ಞಗಳಿಂದ ಲಭಿಸುವ ಸಮೀಚೀನಪುಣ್ಯಕರ್ಮಗಳ ಸಮುದಾಯಕ್ಕಿಂತ ಮಿಗಿಲಾದ ಪುಣ್ಯವನ್ನು ತಂದುಕೊಡುವಂತಹವು; ಇವುಗಳನ್ನು ಭಕ್ತ್ಯಾದಿಪೂರ್ವಕವಾಗಿ ಪಠಿಸುವ ಹಾಗೂ ಕೇಳುವ ಪುರುಷನು ಸಕಲ ಐಹಿಕ ಹಾಗೂ ಪಾರತ್ರಿಕ ಸಂಪತ್ತುಗಳಿಗೆ[೩] ನೆಲೆ ಎನ್ನಿಸಿಬಿಡುವನು. ತೀರ್ಥಕ್ಷೇತ್ರಗಳಿಂದ ಮನಸ್ಸು ನಿರ್ಮಲವಾಗುವುದು; ಮತ್ತು ಶ್ರೀಮಧ್ವಾಚಾರ್ಯರ ಶಾಸ್ತ್ರದಲ್ಲಿ ಆಸಕ್ತ ಮನಸ್ಸೇ ಶುದ್ಧವಾದ ಮನಸ್ಸು; ಎಂಬ ಪ್ರಮೇಯಗಳನ್ನು ತಿಳಿಸಿ, ಈ ಶ್ಲೋಕಗಳ ಪಠನೆಯಿಂದ ಸಕಲಸಂಪತ್ತುಗಳು ಲಭಿಸುವುವು ಎಂಬ ಫಲಶ್ರುತಿಯೊಂದಿಗೆ ಶ್ರೀವಾದಿರಾಜರು ತಮ್ಮ ಈ ತೀರ್ಥಪ್ರಬಂಧಗ್ರಂಥವನ್ನು ಉಪ-ಸಂಹರಿಸಿರುವರು.

೪. ಶ್ರೀವಾದಿರಾಜರು 'ಅನಂತ'ನ ವರ್ಣನೆಯೊಂದಿಗೆ ಗ್ರಂಥೋಪಸಂಹಾರ ಮಾಡಿರುವುದು ಶ್ರೀಮದಾಚಾರ್ಯರ 'ಸಂತತಂ ಚಿಂತಯೇಽನಂತಮಂತಕಾಲೇ ವಿಶೇಷತಃ' ಎಂಬ ದ್ವಾದಶಸ್ತೋತ್ರದ ಮಾತಿಗೆ (೧/೧೨) ಸ್ಮಾರಕವೂ ಆಗಿದೆ.

ಸಮರ್ಪಿತಂ ಮಯಾ ಭವೇತ್ತುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥

★★★★★

---

೧. ಏತತ್ಪ್ರಬಂಧಗತಶ್ಲೋಕಾನಾಂ ಪ್ರತ್ಯೇಕಂ ಮಹಾಫಲಪ್ರದತ್ವಮಾಹ । -ವ್ಯಾಖ್ಯಾನ

೨. ಮಧ್ವಶಾಸ್ತ್ರಾಸಕ್ತಮನಸಾ ಇತ್ಯರ್ಥಃ । -ವ್ಯಾಖ್ಯಾನ

೩. ತಸ್ಮಿನ್ ಸರ್ವಸಂಪದಃ ಸನ್ನಿಹಿತಾ ಭವಂತೀತಿ ಭಾವಃ । -ವ್ಯಾಖ್ಯಾನ

# ವಿವಿಧ ತೀರ್ಥಗಳಲ್ಲಿ ಸ್ಮರಣೆಗೆ ವಿಹಿತವಾದ ಭಗವದ್ರೂಪಗಳು

ರಾಜೋವಾಚ

ನದೀಷು ಮೇ ವದ ಬ್ರಹ್ಮನ್ ಸ್ಮರ್ತವ್ಯಾ ಮೂರ್ತಯೋ ಹರೇಃ।
ಕಾ ಧ್ಯೇಯಾ ವಿಸ್ತರೇಣೈವ ಕೃಪಯಾ ಮಯಿ ಭೋ ಗುರೋ ॥೧॥

ವಸಿಷ್ಠ ಉವಾಚ-

ಗಂಗಾಯಾಂ ಮಾಧವೋ ದೇವಃ ಶಂಖಚಕ್ರಗದಾಧರಃ।
ಲಸತ್ಪದ್ಮಧರೋ ಧ್ಯೇಯಸ್ತತ್ರ ಸ್ನಾನಂ ನರೇಶ್ವರ ॥ ೨ ॥

ಗೋದಾವರ್ಯಾಂ ಮಹಾನದ್ಯಾಂ ವೀರನಾರಾಯಣೋ ನೃಪ।
ಗದಾಪದ್ಮಾರಿಶಂಖೈಶ್ಚ ಶೋಭಿತೋ ಧ್ಯೇಯ ಏವ ಹಿ ॥ ೩ ॥

ಕೃಷ್ಣವೇಣ್ಯಾಂ ನೃಪಶ್ರೇಷ್ಠ ಕೃಷ್ಣಃ ಸಾಕ್ಷಾಜ್ಜನಾರ್ದನಃ।
ಚತುರ್ಬಾಹುರ್ಮಹಾತೇಜಾಃ ಶಂಖಚಕ್ರಾಸಿಶಾರ್ಙ್ಗಧೃಕ್ ॥ ೪ ॥

ಕಾಲಿಂದ್ಯಾಂ ಧರ್ಮಜಾತಾಯಾಂ ಕೃಷ್ಣನಾಮಾ ಹರಿರ್ನೃಪ।
ಚತುರ್ಬಾಹುಃ ಸದಾ ಧ್ಯೇಯೋ ದಂಡಶಂಖಾಸಿಶಾರ್ಙ್ಗಧೃಕ್ ॥ ೫ ॥

ಸರಸ್ವತ್ಯಾಂ ಮಹಾಭಾಗ ಪದ್ಮನಾಭಂ ಸ್ಮರೇನ್ನೃಪ।
ಕಾವೇರ್ಯಾಂ ರಂಗನಾಥಂ ತು ಸರಯ್ವಾಂ ರಾಮಮೇವ ಚ ॥ ೬ ॥

ಯಮುನಾಯಾಂ ಮಹಾನದ್ಯಾಂ ಕೃಷ್ಣಂ ಕಾಲಿಯಮರ್ದನಮ್।
ನರ್ಮದಾಯಾಂ ಮಹಾವಿಷ್ಣುಂ ಚತುರ್ಬಾಹುಂ ನೃಪೋತ್ತಮ ॥ ೭॥

ವರಾಹಂ ತುಂಗಭದ್ರಾಯಾಂ ಸಿಂಧೌ ಕ್ಷೀರಾಬ್ಧಿಶಾಯಿನಮ್।
ನೃಸಿಂಹಂ ಭವನಾಶಿನ್ಯಾಂ ಕುಮುದ್ವತ್ಯಾಂ ತ್ರಿವಿಕ್ರಮಮ್। ॥ ೮ ॥

ವಂಜುಲಾಯಾಂ ಹಯಗ್ರೀವಂ ಭೀಮರಥ್ಯಾಂ ತು ಶ್ರೀಧರಮ್।
ಅನಂತಂ ತಾಮ್ರಪರ್ಣ್ಯಾಂ ವೈ ಮಲಹಾರ್ಯಾಂ ಜನಾರ್ದನಮ್ ॥ ೯ ॥

ಪಿನಾಕಿನ್ಯಾಂ ಮಹಾಭಾಗ ಕೇಶವಂ ಕ್ಲೇಶನಾಶನಮ್।
ಪದ್ಮಶಂಖಾರಿಯುಕ್ತಂ ಚ ಗದಾಪರಿಘಶೋಭಿತಮ್। ॥ ೧೦ ॥

ಪೃಥಕ್ ಸಾಗರಗಾಮಿನ್ಯೋ ಯಾ ನದ್ಯಃ ಸಂತಿ ಭೂತಲೇ।
ತಾಸು ಸರ್ವಾಸು ರಾಜೇಂದ್ರ ದತ್ತಾತ್ರೇಯಂ ಸ್ಮರೇತ್ ಸದಾ ॥ ೧೧ ॥

ಸ್ವಾಮಿಪುಷ್ಕರಿಣೀತೀರ್ಥೇ ಶ್ರೀಭೂಮಿಸಹಿತಂ ವಿಭುಮ್।
ಕಟಿಸ್ಥವಾಮಬಾಹುಂ ತಂ ವರದೇನ ಕರೇಣ ಚ ॥ ೧೨ ॥

ಯುತಂ ಶಂಖಾರಿಯುಕ್ತಂ ಚ ಪ್ರಸನ್ನಾಧೋಕ್ಷಜಂ ಸ್ಮರೇತ್।
ವಾಮನಂ ಸಂಸ್ಮರೇದ್ರಾಜನ್ ಚಂದ್ರಪುಷ್ಕರಿಣೀಜಲೇ ॥ ೧೩ ॥

ಸಂಸ್ಮರೇನ್ನೃಪತಿಶ್ರೇಷ್ಠ ಮಾನಸೇ ಮಧುಸೂದನಮ್।
ದೇವಖಾತೇಷು ರಾಜೇಂದ್ರ ಸಂಸ್ಮರೇತ್ ತು ಗದಾಧರಮ್ ॥ ೧೪ ॥

ಕ್ಷುದ್ರಾಪಗಾಸು ರಾಜೇಂದ್ರ ಲಕ್ಷ್ಮೀನಾರಾಯಣಂ ಸ್ಮರೇತ್ ।
ತಟಾಕೇ ಸಂಸ್ಮರೇದ್ರಾಜನ್ ಶೇಷಶಾಯಿನಮಚ್ಯುತಮ್ ॥ ೧೫ ॥

ವಾಪೀಷು ಸಂಸ್ಮರೇನ್ನಿತ್ಯಂ ಚಕ್ರಪಾಣಿಂ ಮಹಾವಿಭುಮ್ ।
ಸರೋವರೇಷು ರಾಜೇಂದ್ರ ಕೇಶವಾದೀಂಶ್ಚ ಸಂಸ್ಮರೇತ್ ॥ ೧೬ ॥

ಏವಮಾದ್ಯಾ ಹರೇರ್ಮೂರ್ತೀಃ ಪೂರ್ಣಧರ್ಮಫಲೇಪ್ಸುಭಿಃ ।
ಸ್ಮರ್ತವ್ಯಾಃ ಸತತಂ ಭೂಪ ನಾತ್ರ ಕಾರ್ಯಾ ವಿಚಾರಣಾ ॥ ೧೭ ॥

॥ ಇತಿ ಬ್ರಹ್ಮಾಂಡಪುರಾಣೇ ತೀರ್ಥದೇವತಾಸ್ಮರಣಮ್ ॥

*****

| | |
|---|---|
| ಗಂಗಾ | ಮಾಧವ |
| ಗೋದಾವರೀ | ವೀರನಾರಾಯಣ |
| ಕೃಷ್ಣವೇಣೀ | ಕೃಷ್ಣ |
| ಕಾಲಿಂದೀ | ಯಮಪುತ್ರ ಕೃಷ್ಣ |
| ಸರಸ್ವತೀ | ಪದ್ಮನಾಭ |
| ಕಾವೇರೀ | ರಂಗನಾಥ |
| ಸರಯೂ | ರಾಮ |
| ನರ್ಮದಾ | ಮಹಾವಿಷ್ಣು |
| ತುಂಗಭದ್ರಾ | ವರಾಹ |
| ಸಿಂಧು | ಕ್ಷೀರಾಬ್ಧಿಶಾಯೀ |
| ಭವನಾಶಿನೀ | ನೃಸಿಂಹ |
| ಕುಮುದ್ವತೀ | ತ್ರಿವಿಕ್ರಮ |
| ವಂಜುಲಾ | ಹಯಗ್ರೀವ |
| ಭೀಮರಥೀ | ಶ್ರೀಧರ |
| ತಾಮ್ರಪರ್ಣೀ | ಅನಂತ |
| ಮಲಾಪಹಾರೀ | ಜನಾರ್ದನ |
| ಪಿನಾಕಿನೀ | ಕೇಶವ |
| ಮಹಾನದಿಗಳಲ್ಲಿ | ಕೇಶವಾದಿರೂಪಗಳು |
| ಉಪನದಿಗಳಲ್ಲಿ | ಲಕ್ಷ್ಮೀನಾರಾಯಣ |
| ಸರೋವರಗಳಲ್ಲಿ | ದತ್ತಾತ್ರೇಯ |
| ಸ್ವಾಮಿಪುಷ್ಕರಣೀ | ಅಧೋಕ್ಷಜ |
| ಚಂದ್ರಪುಷ್ಕರಣೀ | ವಾಮನ |
| ಮಾನಸಸರೋವರ | ಮಧುಸೂದನ |
| ದೇವಖಾತಗಳಲ್ಲಿ | ಗದಾಧರ |
| ತಟಾಕಗಳಲ್ಲಿ | ಶೇಷಶಾಯೀ ಅಚ್ಯುತ |
| ವಾಪಿ(ಬಾವಿ)ಗಳಲ್ಲಿ | ಚಕ್ರಪಾಣಿ |

*****

ಪರಿಶಿಷ್ಟ - ೨

## ಶ್ರೀರಾಘವೇಂದ್ರಯತಿಕೃತ ನದೀತಾರತಮ್ಯಸ್ತೋತ್ರಮ್[೧]

ವಿಷ್ಣುಪಾದಾಬ್ಜಸಂಭೂತಾ ಗಂಗಾ ಸರ್ವಾಧಿಕಾ ಮತಾ ।
ತತೋ ಗೋದಾವರೀ ನ್ಯೂನಾ ಕೃಷ್ಣವೇಣೀ ತತೋಽಧಮಾ ॥ ೧ ॥

ಸ್ವಾಮಿಚಂದ್ರಾಪುಷ್ಕರಿಣ್ಯೌ ಮಾನಸಂ ಚ ಸರೋವರಮ್ ।
ಕೃಷ್ಣವೇಣ್ಯಾಃ ಸಮಾಸ್ತಾಭ್ಯಃ ಕಾವೇರೀ ಚ ಸರಸ್ವತೀ ॥ ೨ ॥

ಹೀನೇಽನ್ಯೋನ್ಯಸಮೇ ತಾಭ್ಯಾಮೂನಾ ಚ ಸರಯೂ ತಥಾ ।
ತುಂಗಭದ್ರಾ ಸಮಾ ತಸ್ಯಾಃ ಕಾಲಿಂದ್ಯೂನಾ ತತೋಽಧಮಾ ॥ ೩ ॥

ನರ್ಮದಾ ಸಿಂಧುಸರಿತೌ ತತ್ಸಮಾ ಭವನಾಶಿನೀ ।
ತತಃ ಕುಮುದ್ವತೀ ನೀಚಾ ತತೋ ನೀಚಾ ಮಲಾಪಹಾ ॥ ೪ ॥

ತಾಮ್ರಪರ್ಣೀ ಭೀಮರಥೀ ವಂಜುಲಾ ಚ ಪಿನಾಕಿನೀ ।
ಪೃಥಕ್ ಸಾಗರಗಾಮಿನ್ಯೋ ನದ್ಯೋ ಭೀಮರಥೀಸಮಾಃ ॥ ೫ ॥

ತತೋಽನ್ಯಾ ಸರಿತೋ ನೀಚಾಸ್ತಟಾಕಾಶ್ಚ ತತೋಽಧಮಾಃ ।
ತತೋ ನೀಚಾಃ ಪುಷ್ಕರಿಣ್ಯೋ ದೇವಖಾತಾಶ್ಚ ತತ್ಸಮಾಃ ॥ ೬ ॥

ತತೋ ವಾಪ್ಯೋಽಧಮಾಸ್ತಾಭ್ಯಃ ಕೂಪಾಃ ಸರ್ವಾಧಮಾ ಮತಾಃ ।
ಸ್ವೋತ್ತಮಾರ್ಘ್ಯಂ ಪ್ರದಾತವ್ಯಮವರಾಸು ನ ಚಾನ್ಯಥಾ ॥ ೭ ॥

ರಾಘವೇಂದ್ರೇಣ ಯತಿನಾ ಬ್ರಹ್ಮಾಂಡಾಖ್ಯಪುರಾಣಗಃ ।
ಇತ್ಯುದ್ಧೃತಃ ಸಾರಭಾಗೋ ನದೀನೀಚೋಚ್ಚಸೂಚಕಃ ॥ ೮ ॥

॥ ಇತಿ ಶ್ರೀರಾಘವೇಂದ್ರಯತಿಕೃತ ನದೀತಾರತಮ್ಯಸ್ತೋತ್ರಮ್ ॥

★★★★★

---

೧. ದೇವತಾತಾರತಮ್ಯ ಗುರುತಾರತಮ್ಯಗಳಂತೆ ನದೀತಾರತಮ್ಯವೂ ಅತ್ಯವಶ್ಯಜ್ಞೇಯ ಎಂಬುದಾಗಿ ಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿದೆ. ಶ್ರೀಮದಾಚಾರ್ಯರು ತಮ್ಮ ಕೃಷ್ಣಾಮೃತಮಹಾರ್ಣವ ಗ್ರಂಥದಲ್ಲಿ 'ತ್ರಿರಾತ್ರಫಲದಾ ನದ್ಯಃ'(೧೦೮) ಎಂಬುದಾಗಿ ಸಂಕ್ಷೇಪವಾಗಿ ತಿಳಿಸಿರುವ ನದೀತಾರತಮ್ಯವನ್ನು ಬ್ರಹ್ಮಾಂಡಪುರಾಣದ ಆಧಾರದಿಂದ ವಿವರವಾಗಿ ತಿಳಿಸಿರುವುದು ಶ್ರೀರಾಘವೇಂದ್ರರ ಈ ಕೃತಿಯ ವೈಶಿಷ್ಟ್ಯ. ಯಾವುದೇ ನದಿಯಲ್ಲಿ ಸ್ನಾನಮಾಡುವಾಗ ಅದಕ್ಕಿಂತ ಉತ್ತಮವಾದ ನದಿಗಳಿಗೆ ಮಾತ್ರ ಅರ್ಘ್ಯವನ್ನೀಯಬೇಕು ಎಂಬ ವಿಶೇಷಾಂಶವೂ ಸಹ ಇದರಲ್ಲಿ ನಿರೂಪಿತಾಗಿದೆ.

ಶ್ರೀವಿಜಯದಾಸಕೃತ

# ತೀರ್ಥಾಭಿಮಾನಿದೇವತಾಸ್ತೋತ್ರ(ಸುಳಾದಿ)

ಧ್ರುವತಾಳ

ತೀರ್ಥಾಭಿಮಾನಿಗಳಿರಾ ವಂದಿಸುವೆನು ನಿಮಗೆ।
ಸ್ವಾರ್ಥಕಮತಿ ಬಿಡಿಸಿ ನಿತ್ಯ ಪಾರ।
ಮಾರ್ಥಿಕ ಜ್ಞಾನವ ಕೊಟ್ಟು ಕರುಣದಿಂದ।
ಸಾರ್ಥಕಮಾಡಿಸುವುದು ಸಕಲ ಪುಣ್ಯ।
ತೀರ್ಥಕ್ಷೇತ್ರಮೂರ್ತಿಯಲ್ಲಿದ್ದ ಭಗವಂತ।
ಸಾರ್ಥಿಯಾಗಲಿ ಎನಗೆ ದಿನಪ್ರತಿದಿನ।
ಸಾರ್ಥಿಕನಂತೆ ಮಾಡಿದ ಕರ್ಮ ಕೆಲಕಾಲ।
ವ್ಯರ್ಥವಾಗುವ ಪರಿ ಮಾಡದಿರಿ।
ಅರ್ಥ ಆತುರ ಬಿಡಿಸಿ ಭಗವದ್ಗೋಸುಗ ಅ।
ನರ್ಥಾಂತರ ಜ್ಞಾನ ಪಾಲಿಸಬೇಕು।
ಪ್ರಾರ್ಥನೆ ಮಾಡುವೆ ಪ್ರಯಾಸವಾಗದಂತೀ।
ಪಾರ್ಥಿವದೊಳಗಿದ್ದು ಧನ್ಯನ ಮಾಡೀ।
ಅರ್ಥಪಂಚ ಮಿಕ್ಕಮಾನಿಗಳು ಯ।
ಥಾರ್ಥಜ್ಞಾನವ ಕೊಡಲಿ ನಿಮ್ಮಿಂದಲಿ ಮು।
ಹೂರ್ತವಾದರು ಕಾಲ ಬರಿದಾಗದಂತೆ ಕೃ।
ತಾರ್ಥನ್ನ ಮಾಡುವುದು ಎಲ್ಲಿದ್ದರು।
ತೀರ್ಥಪಾದ ನಮ್ಮ ವಿಜಯವಿಠಲ ಸ।
ರ್ವಾರ್ಥಪ್ರದಾತನೆಂಬೊ ಮುಖ್ಯ ಜ್ಞಾನವೆ ಇರಲಿ ॥ ೧ ॥

ಮಟ್ಟತಾಳ

ಆವಾವ ತೀರ್ಥದಲಿ ವಾಸವಾಗಿದ್ದ।
ದೇವತತಿಗಳಿರಾ ಧೈರ್ಯವನೆ ಇತ್ತು।
ಪಾವನಮಾಡುವುದು ಸ್ನಾನಾದಿಯಲಿಂದ।
ದೈವವಶದಿಂದ ಬೇಡಿಕೊಂಬೆನೊ ನಿಮ್ಮ ನಾ।
ಸಾವಂಶರಾಗಿ ಸಂಚರಿಸುವ ಯೋಗ।
ಆವಾವ ಕಾಲಕ್ಕೆ ಅಪ್ರತಿಯಾಗಿದೆ।
ದೇವದೇವೇಶ ಸಿರಿವಿಜಯವಿಠಲನ್ನ।
ಭಾವದಲ್ಲಿ ಭಜಿಪ ಭಾಗ್ಯವಂತರೆ ಸತತ ॥ ೨ ॥

ತ್ರಿಪುಟತಾಳ

ದಶ ಇಂದ್ರಿಯಂಗಳಲ್ಲಿ ಬಲುಬಗೆಬಗೆಯಿಂದ।
ದಶದಿಕ್ಕುಗಳ ತಿರುಗಿ ಮರಿಯಾದೆಯಿಲ್ಲದೆ।
ಅಶನ ಉದಕ ದ್ರವ್ಯ ವಸ್ತ್ರಮುಂತಾದಾಘ।

ಪ್ರಸರಕೋಟಿಯೊಳಗೆ ಮುಣುಗಿ ತೇಲಿ ।
ಕುಶಲಮತಿಯ ಮರೆದು ಕೈಕೊಂಡು ದೇಹ ಪಾ ।
ಲಿಸಿಕೊಂಡೆ ನಾನು ನನ್ನದು ಎನುತ್ತಲಿ ।
ಬೆಸನೆ ಕೇಳಿ ಸರ್ವತೀರ್ಥವಾಸಿಗಳೆ ಮೋಹ ।
ಪುಸಿ ಮೊದಲಾದ ಪಾಪ ಪ್ರವರ್ತಕ ।
ತ್ರಸರೇಣು ಕಾಲವಾದರು ಪುಣ್ಯಮಾಡದ ।
ಪಶು ಮನುಜನು ನಾನು ಎನ್ನ ನೋಡಿ।
ಉಸುರಲೇನು ಇನ್ನು ನಾಲಿಗೆಂಬೋದಿಲ್ಲ ।
ಯಶಸು ನಿಮ್ಮದು ಮುಂದೆ ಪೊರೆವ ಭಾರ ।
ವಸುಧೆಯೊಳಗೆ ಆವ ಪರಿಯುಂಟೋ ತಿಳಿಯೆ ವಂ ।
ದಿಸುವೆನೊ ತಲೆವಾಗಿ ತವಕದಿಂದ।
ಋಷಿ ಛಂದಸ್ಸು ದೇವತಾಗೋಳಕ ಚಿಂ ।
ತಿಸುವ ಮತಿ ಕಾಣೆನೊ ತೀರ್ಥದಲ್ಲಿ ।
ಹಸಿವೆಗೋಸುಗ ಅನ್ನ ಉಂಡಂತೆ ಅಲ್ಲದೆ ।
ಬೆಸಸೂವೆ ಎನ್ನ ಕರ್ಮಾಚರಣೆ ।
ದಶಮೂರ್ತಿ ವಿಜಯವಿಠಲರೇಯನ ಪಾದ ।
ವಶಮಾಡಿಕೊಂಡಿಪ್ಪ ಜ್ಞಾನಯೋಗಿಗಳೆ ॥ ೩ ॥

ಅಟತಾಳ

ಮುಗ್ಧಜನರೊಳಗಿದ್ದು ಮಾಡಿದ ಕರ್ಮವ ।
ದಗ್ಧ ಮಾಡುವುದು ದಯದೃಷ್ಟಿಯಲ್ಲಿ ನೋಡಿ ।
ದಿಗ್ದೇಶದೊಳು ನಿಮ್ಮ ಮಹಿಮೆಗೆ ಎಣೆಗಾಣೆ ।
ದಿಗ್ದಂತಿಗೆ ಅಂಕುಶ ಒಂದು ಸಾಲದೆ ।
ದಿಗ್ದಂಡ ಮಾಡುವ ಅತಿಪ್ರತಾಪರಿಗೆ ಈ ।
ಳುಗ್ಧಳ ಹಿಂದು ಮಾಡುವುದು ಅರಿದೆ ।
ದುಗ್ಧಾಬ್ಧಿಶಯನ ವಿಜಯವಿಠಲನಂಘ್ರಿ ।
ದೃಗ್ದಣಿಯೆ ನೋಡುವ ದೇವದಾಸರೇ ನಮೋ ॥ ೪ ॥

ಆದಿತಾಳ

ಪ್ರತಿಪ್ರತಿ ತೀರ್ಥದಲ್ಲಿ ಪ್ರತಿಪ್ರತಿ ದಿವಸದಲ್ಲಿ ।
ಪ್ರತಿಪ್ರತಿ ಸ್ನಾನಂಗಳು ಮಾಡುವಜಲಂಗಳು ।
ಪ್ರತೀಕವೆ ನಿಮಗೆಂದು ತಿಳಿದು ಆಮೇಲೆ ಮಿ ।
ಳಿತ ಚತುರ್ಬಗೆ ಗ್ರಹಿಸಿ ಮತ್ತೆ ತೇಜೋಮಯ ।
ಗತಿ ತಪ್ಪದಂತೆ ನೋಡಿ ಆ ತರುವಾಯ ಮ ।
ರುತದೇವ ತದ್ಗತ ಲಕ್ಷ್ಮೀನಾರಾಯಣ ।
ಇತರಾಲೋಚನೆ ಸಲ್ಲ ದ್ರವರೂಪ ಸರ್ವವೆಂದು ।

ಮತಿಯಿಂದ ತಿಳಿವಂತೆ ಭ।
ಕುತಿಯ ಕೊಡುವುದು ಮಜ್ಜನಾದಿ ಕಾಲಕ್ಕೆ।
ನುತಿಸುವೆ ಎನ್ನ ಮನದ ಕಲಿಕಲ್ಮಷವ ಕಳೆದು।
ಹಿತವಾಗಿ ಕಾವುದೆಲ್ಲ ಸಾರ್ಧತ್ರಿಕೋಟಿದೇವ।
ರತಿಪತಿಪಿತ ನಮ್ಮ ವಿಜಯವಿಠಲರೇಯ।
ಪ್ರತೀಕದಲ್ಲಿ ಪೊಳೆವಂತೆ ಕಾರುಣ್ಯಮಾಳ್ಪುದು ॥ ೫ ॥

ಜತೆ

ಎಲ್ಲೆಲ್ಲಿ ಎನಗೆ ಬೆಂಬಲವಾಗಿ ಇದ್ದು ಭೂ।
ವಲ್ಲಭ ವಿಜಯವಿಠಲನ ತೋರಿಸುವುದು ॥ ೬ ॥

★★★★★

ಪರಿಶಿಷ್ಟ - ೪

ಶ್ರೀವಿಜಯದಾಸಕೃತ

## ಪುಣ್ಯಕ್ಷೇತ್ರಸ್ಮರಣೆ(ಕೀರ್ತನೆ)

ರಾಗ - ಭೂಪಾಳಿ ಝಂಪೆತಾಳ

ಪುಣ್ಯಕ್ಷೇತ್ರವ ಸ್ಮರಿಸಿರೋ ॥ ಪಲ್ಲವಿ ॥

ಪುಣ್ಯಕ್ಷೇತ್ರವ ಸ್ಮರಿಸಿ ಧನ್ಯರಾಗಿರೊ ನಿಮ್ಮ।
ಮನ್ಯುಮಿಕ್ಕಾದ ಮಹದನ್ಯಾಯ ಮರೆದು।
ಅನುಗುಣ್ಯದಲ್ಲಿರೆ ಭವದಾರಣ್ಯ ದಹಿಸುವುದು ಕಾರುಣ್ಯದಲಿ ಹರಿವೊಲಿವ ॥ ಅ.ಪ. ॥
ಶೇಷಪರ್ವತ ಗರುಡಾದ್ರಿ ಶ್ರೀಶೈಲ ಪ್ರ।
ಭಾಸಕ್ಷೇತ್ರ ಮಧುರಿ ಗೋಕುಲ ವೃಂದಾವನ।
ನಾಸಿಕ ತ್ರಯಂಬಕ ಮೌದ್ಗಲಕ್ಷೇತ್ರ ಪರಾಶರನ ಮಗನಾಶ್ರಮಾ॥
ತೋಷದಲಿ ತೋತಾದ್ರಿ ಕುಂಭಕೋಣ ವಾರ।
ಣಾಸಿ ಭಾರದ್ವಾಜಕ್ಷೇತ್ರ ಅರುಣಾಚಲಾ।
ದೋಷವರ್ಜಿತ ಝುಲ್ಲಿಕಾರಣ್ಯ ಸೇತು ದರ್ಭಶಯನ ಮದ್ಧ್ಯಾರ್ಜುನ ॥ ೧ ॥
ಸುಂದರ ಶಿಲಜ(ಚ)ಯ ಜಂಬುಕೇಶ್ವರ ಮಹಾ।
ನಂದಿ(ಸಿ)ನಿ ಚಿದಂಬರ ವೀರರಾಘವದೇವ।
ಸಂದಿನಿಪ್ಪಸ್ವಾಮಿ ಕಾರ್ತಿಕ ಭೂಶೇಷ ನಂದ ಏಕಾಂಬರೀಶ॥
ಅಂದವಾದ ಛಾಯ ಅಲಕಾಪುರಿಕ್ಷೇತ್ರ।
ಮಂದಾಕಿನಿಯಿಪ್ಪ ಸಗರಾ ಯಯಾತಿ ಗಿರಿ।
ಮಂದಮತಿ ಕಳೆವಂಥ ಘನಗಿರಿಕ್ಷೇತ್ರ ಧರ್ಮಪುರಿ ಒಂದೊಂದು ಕೋಟೀಶ್ವರ ॥ ೨ ॥

ಶ್ರೀರಂಗ ಹಸ್ತಿಗಿರಿ ಪಾಂಡುರಂಗಕ್ಷೇತ್ರ ।
ದ್ವಾರಕಾ ಸಹ್ಯಾದ್ರಿ ನೀಲಕಂಠಾನಗರಿ ।
ಚಾರು ಗಯ ಚಂಪಕಾರಣ್ಯ ಪಂಪಾಕ್ಷೇತ್ರ ವೀರನಾರಾಯಣಾ ಓಂ ॥
ಕಾರುಣ್ಯಮಾಳ್ಪ ರಾಮನಗಿರಿ ಮಾಯಾ ಕೇ ।
ದಾರ ಕುರುಕ್ಷೇತ್ರ ಉತ್ತರ ಕುರಂಗನಿಧಿ ।
ಸಾರಿದರೆ ಬರುವ ಪುರುಷೋತ್ತಮ ಪುಷ್ಕರಕ್ಷೇತ್ರ ಮಾರಕಾಪುರಿ ಚನ್ನನ ॥ ೩ ॥

(ಉದಯಗಿರಿ) ಯದುಗಿರೀ ರಾಮನಾಥಪುರಾ ಕಾವೇರಿ ।
ಉದುಭವಾ ಆದಿ ಅನಂತ ವಲ್ಕಲಕ್ಷೇತ್ರ ।
ಪದುಮನಾಭ ಪುಂಡರೀಕಾಕ್ಷ ವಿಂಧ್ಯಾದ್ರಿ ಶುಚಿಯೀಂದ್ರ ಕನ್ಯಾಕುಮಾರೀ।
ಮಧುರಿ ಅಳಗಿರಿತಿಮ್ಮ ಬೇಲೂರ ಚೆನ್ನಿಗ ।
ಮುದದಿಂ ಮಹಂಕಾಳಿ ಹಸ್ತಿ ಪರಳೀನಾಥ ।
ಕದರಿ ಮಂಗಳಗಿರಿ ತೊರವಿನರಸಿಂಹ ಪದಮುರಳಿ ತ್ರಿವಿಕ್ರಮಾ ॥ ೪ ॥

ಹರಿಹರಾ ಗಂಗಾಸಾಗರ ಕಪಿಲಕ್ಷೇತ್ರ ।
ನಿರುಪಮಾದೀ ಕೂರ್ಮ ನೆಲ್ಲಿ ನವತಿರುಪತಿ ।
ಶೂರ್ಪಾಲಿ ಮಹಬಳೇಶ್ವರ ಭದ್ರಾಚಲ ಧರಣಿಧರ ಚಾಪಪಾಣಿ ॥
ಪರಿಶುದ್ಧ ಭಕ್ತವತ್ಸಲ ಗೌರಿವಯ್ಯಾರ (ಮೈಯೂಖಿ) ।
ವರಸಾರ ಕ್ಷೇತ್ರವು ಶ್ರೀನಿವಾಸನ ನಿಧಿಯು ।
ಪರಮ ಮಂಗಳವೀವ ಮನ್ನಾರಸ್ವಾಮಿ ಘನಶ್ಯಾಮ ವರಗೌರಿ ಮನೋಹರ ॥ ೫ ॥

ಶಂಕರನಾರೇಯಣಾ ಉಮತೋರು ಗೋಕರಣ ।
ಸಂಕರುಷಣಕ್ಷೇತ್ರ ಗೋರಂಟ್ಲ ಸೇತುವನ ।
ಶಂಖಮುಖಿ ಗಜೇಂದ್ರಮೋಕ್ಷ ಗಜಾರಣ್ಯ ಓಂಕಾರನಾಥ ದೇವ ॥
ಪಂಕಜಾಸನ ಸದನ ಸಿಂಹಾಳಿ ವೈದ್ಯನಾಥ ।
(ಟೆಂಕಾಶಿ ಅಂತರಾ)(ಶಂಕಾಳಾಂತರ) ವೇದಿ ಗೋಪಾಲನಿಧಿ ।
ಬಿಂಕದಲಿ ಇಪ್ಪ ಚಿಂತಾಮಣಿ ನರಸಿಂಹಾಲಂಕಾರ ಮೌಕ್ತಿಕ್ಷೇತ್ರ ॥ ೬ ॥

ಸಂತಾನಗೋಪಾಲ ತ್ರಿಶಿಖಿ ನಾರಾಯಣ ಅ ।
ನಂತಗಿರಿ ಮಳೂರುಅಪ್ರಮೇಯಾ ಶಿವ ।
ಅಂತಕನ ಗೆದ್ದಪುರ ತೀರ್ಥಗಿರಿ ನಿವೃತ್ತಿ ಅಂತು ಆದೀ ಶ್ರೀರಂಗ ॥
ಇಂತು ಪಾವನಕ್ಷೇತ್ರ ಪ್ರೇತಗಿರಿ ನೀಲಾದ್ರಿ ।
ಸಂತವೇದಾರಣ್ಯ ರಾಜವನ ನೈಮಿಷಾ ।
ಕಾಂತಾರ ದಕ್ಷವನ ಶುದ್ಧವಾಟ್ ಪುಷ್ಪಗಿರಿ ಕಂತುಹರ ನಂಜುಭೋಕ್ತ ॥ ೭ ॥

ಕೋಲಪರ್ವತ ಕಣ್ವಮುನಿಕ್ಷೇತ್ರ ಪಿನಾಕಿನೀ ।
ಮಾಲೆಯಂದದಲಿಪ್ಪ ನಿಧಿ ಮಾಧವಸ್ವಾಮಿ ।
ಮೇಲು ಘಟಿಕಾಚಲಾ ಬದರಿನರಸಿಂಹ ರವಿಶೈಲ ಮುಕುತೀಶ್ವರ ॥

ಕಾಲದೂತರಗೆದ್ದ ಕ್ಷೇತ್ರ ಭವಾನಿಗುಡಿ।
ವ್ಯಾಳನಿಧಿ ಮಹಲಕುಮಿ ರಘುನಾಥ ಶಿವಗಂಗೆ।
ಬಾಳಕೃಷ್ಣಾಕ್ಷೇತ್ರ ಕರವೀರ ಪುರವೋ ವಿಶಾಲವಿಹಂಗಕ್ಷೇತ್ರ ॥ ೮ ॥
ದೇಶದೊಳಗುಳ್ಳ ಪುಣ್ಯಕ್ಷೇತ್ರಗಳ ಮಹಿಮೆ।
ಏಸುಪೇಳಲಿ ಎನಗೆ ವಶವಲ್ಲವೈಯ್ಯ ಪ್ರ।
ದೋಷಕಾಲದಲಿ ಪ್ರಭಾತ ಕಾಲದಲೆದ್ದು ನೆನೆಸುವುದು ಮಾನವರು ॥
ಮೀಸಲಾಮನದಲ್ಲಿ ಅನಂತ ಜನುಮದಾ।
ದೋಷವಿನಾಶ ಅನಂತ ವಿಜಯವಿಠಲವೊಲಿದು।
ಲೇಸಾಗಿ ಪಾಲಿಸುವ ಕುಲಕೋಟಿ ಉದ್ಧರಿಸಿ ಮೀಸಲಾಪದವೀವನೂ ॥ ೯ ॥

*****

ಪರಿಶಿಷ್ಟ - ೫

ಶ್ರೀವಿಜಯದಾಸಕೃತ

# ನದನದೀಸ್ಮರಣೆ(ಕೀರ್ತನೆ)

ಉದಯರಾಗ ಝಂಪೆತಾಳ

ನದನದಿಗಳನು ಸ್ಮರಿಸಿರೋ ॥ ಪಲ್ಲವಿ ॥

ನದನದಿಗಳನು ಸ್ಮರಿಸಿ ಹೃದಯನಿರ್ಮಲರಾಗಿ
ಮುದದಿಂದ ನಿಮ್ಮ ಮನದಧಮತನ ಬಿಟ್ಟು ಸಂ
ಪದವಿಗೆ ಸೋಪಾನದಂತಾಗುವದು ಶ್ರೀಪದುಮನಾಭನು ಒಲಿವನು ॥ ಅ.ಪ.॥

ಸುರತರಂಗಿಣಿ ಸಿಂಧು ಕುಶವರ್ತಳೇ ಸೀತ
ಮರಧೃತೀ ಹೇಮವತಿ ನೇಮಿನೇತ್ರವತಿ
ತರಣಿಸುತೆ ನರ್ಮದಾ ಗಾಯತ್ರೀ ಗೋಮತಿ ಗರುಡ ಸಾಧರ್ಮಾ ॥
ಸರಸ್ವತೀಮಣಿ ಮುಕ್ತ ಮುಕ್ತ ನದಿಯೂ ಪ್ರಣತ
ವರದ ಕಾಗಿಣಿ ಕೃಷ್ಣವೇಣಿ ವೇದವತಿ
ಹರಿಧೃತಿ ಇಂದ್ರಾಣಿ ಪುನಃ ಪುನಃ ವಾಣಿ ವಂಝುರಘಣಿ ಭೀಮರಥಿನೀ ॥ ೧ ॥

ವಾರುಣೀ ವರುಣ ಅಸಿ ಭವನಾಶಿ ಕುಮಾರ
ಧಾರಿ ತುಂಗಾಭದ್ರಿ ಗಣಪತಿ ಶತಭಾಗ
ನಾರದೀ ಉಭಯಪಿನಾಕಿ ಚಿತ್ರವತಿ ಮೂರು ಲೋಕೋದ್ಭವೆ ಭವಾನೀ ॥
ಚಾರುಗಂಡಿಕೆ ಸರಯು ಶ್ರೋಣಿ ಭದ್ರಾ ನೀಲ
ಕ್ಷೀರನದಿ ಪಾಪಘ್ನ ಮಹಾನದಿ ಅಘನಾಶಿ
ವಾರಿಜಾಪ್ತಾವತಿ ಸುವರ್ಣಮುಖರೀ ವಿಸ್ತಾರಹಾಟಕ ತ್ರಿವೇಣೀ ॥ ೨ ॥

ಮಲಾಪಹಾರಿ ತಪತಿ ಪೂರ್ಣ ಕುಮುದ್ವತಿ
ಸುಲಭ ಮಂದಾಕಿನಿ ಕೌಮೋದಕೀ ಶಾಂತಿ
ಫಲ್ಗುಣೀ ವೇಗವತಿ ಅರ್ಜುನ ಮಹೇಶ್ವರೀ ಕಪಿಲ ಚಂದ್ರಭಾಗಾ ಅರುಣೀ ||
ಪೊಳೆವ ಕಾಳಾವತಿ ತ್ರಿಪಥಿ ಗೌರೀ ಕುಂತಿ
ಅಳಕನಂದನೆ ಅಮಲವತಿ ಭೀಮಸಂಭವೆ
ಸಿತಾಮ್ರಪರ್ಣಿಯು ಜಯಮಂಗಳೀ ಸತಿ ಸತ್ಯವತಿ ವೈಷ್ಣವೀ || ೩ ||

ಕನಿಕಾ ಶುಕ್ಲವತೀ ಬಾಹುನದಿ ಗೋವಿಂದ
............ಸುತಿ ಕಲ್ಯಾಣ ಕೌಶಿಕೀ
ಮಿನುಗುವ ಭೋಗವತಿ ಕಾಶ್ಯಪೀ ಕಾಳಿಂದಿ ಅನುಸಿಂಧು ಐರಾವತೀ ||
ಋಣವಿಮೋಚನೆ ಮಯೂರಸಂಭವೆ
ಘನಸ್ವಾಮಿ ಚಂದಿರಾ ನಿತ್ಯಪುಷ್ಕರಣಿ ಪಯೋ
ಶ್ವಿನಿ ಮಹಾಪಗಾ ಭದ್ರಭೈರವಿ ವಿಚಿತ್ರನದಿಗಳನೂ || ೪ ||

ಅರುಣೋದಯದಲೆದ್ದು ಧರೆಯೊಳಗೆ ಉಳ್ಳ
ಬಲು ಸರಿತಗಳ ನೆನೆದು ಪುಳಕೋತ್ಸಹದಲಿ
ಪರಮಧನ್ಯರಾಗಿ ಪಾಪಗಳ ಪೋಗಾಡಿ ನಿರುತ ಮಾರುತ ಮತದಲೀ ||
ಚರಿಸಿ ನಿಜಭಕುತಿಯಲಿ ಹಗಲು ಇರಳು ಇನಿತು
ಸಿರಿಯರಸ ವಿಜಯವಿಠಲನ ಚರಣಾಂಬುಜವ
ಸರಸದಿಂದಲಿ ಧ್ಯಾನಗೈದು ಈ ನದಿಗಳಲಿ ಕರುಣದಲಿ ತಿಳಿದು ನಿತ್ಯಾ || ೫ ||

*****

ಪರಿಶಿಷ್ಟ - ೬

ಶ್ರೀಜಗನ್ನಾಥದಾಸಕೃತ

## ತೀರ್ಥಕ್ಷೇತ್ರಸ್ಮರಣೆ(ಕೀರ್ತನೆ)

ರಾಗ: ದೇವಗಾಂಧಾರೀ (ವೃತ್ತ : ವಾರ್ಧಕ) ಝಂಪೆತಾಳ

ಸ್ಮರಿಸಿ ತೀರ್ಥಕ್ಷೇತ್ರವ ||ಪಲ್ಲವಿ||

ಸ್ಮರಿಸಿ ತೀರ್ಥಕ್ಷೇತ್ರ ಸಜ್ಜನರು ನಿತ್ಯದಲಿ।
ಅರುಣೋದಯದಲೆದ್ದು ಭಕ್ತಿಪೂರ್ವಕವಾಗಿ।
ಕರಣತ್ರಯದಿ ಮಾಳ್ಪ ಪಾಪರಾಶಿಗಳ ಪರಿಹರಿಸಿ ಸಂತೈಸುವ ||ಅ. ಪ.||

ಭಾಗೀರಥೀ ಸರಸ್ವತಿ ಯಮುನೆ ವಾರಣಾ।
ಸೀ ಗೋದ ಫಲ್ಗುಣೀ ಶೋಣ ಭದ್ರಾ ನರ್ಮ।
ದಾ ಗಂಡಕೀ ಭೀಮರಥಿ ತುಂಗಭದ್ರಾ ಪ್ರಯಾಗ ತ್ರಿವೇಣಿ ಹೇಮಾ ||

ವೇಗವತೀ ಗಾಯತ್ರಿ ಕೌಶಿಕೀ ಮಣಿಕರಣಿ।
ಕಾ ಗೌತಮೀ ವಿಯದ್ಗಂಗಾ ಕುಮುದ್ವತೀ।
ಕಾಗಿನೀ ನೇತ್ರಾವತಿ ಹೈಮವತಿ ಸಿಂಧು ಪಾಪೌಘನಾಶೀ ॥ ೧ ॥

ಸರಯು ಜಯಮಂಗಳಾ ಜಮದಗ್ನಿ ವರತಾಮ್ರ।
ಪರಣಿ ಯೋಗಾನಂದ ಕೃತಮಾಲಾ ಕುಹು ಮಹೇ।
ಶ್ವರಿ ಶಂಖಚಕ್ರವತೀ ಭವನಾಶಿನೀ ಗದಾಧರ ಮೇನಕಾಘನಾಶೀ॥
ಗರುಡ ಮದಿರಾ ಮರುದ್ವತಿ ಸ್ವರ್ಣಮುಖರಿ ವಂ।
ಝರ ತಾಪಿನೀ ಕಾಳಿ ಸೌಪರಣಿ ದಕ್ಷಿಣೋ।
ತ್ತರಪಿನಾಕಿನೀ ಕಪಿಲ ಸೀತಾಲಕಾನಂದ ತುರಗಮುಖಿ ಪ್ರಣವಸಿದ್ಧಾ ॥ ೨ ॥

ಕಾವೇರಿ ಸಿಂಧು ಮಾಲಿನೀ ಗಾರ್ಗಿಣೀ ಹರಿ।
ದ್ರಾವತೀ ಇಂದ್ರಾಣಿ ಕುಂದ ಕುಂದಿನಿ ಶೈವ।
ದೇವವತೀ ಪಾತಾಳಗಂಗಾ ಪುನಃ ಪುನಃ ನೀರಾ ಕುಮಾರಧಾರಾ॥
ಸಾವಿತ್ರಿ ಧಾನ್ಯಮಾಲಾ ಪುಷ್ಪವತಿ ಲೋಕ।
ಪಾವನೀ ಮೌಳಿ ಮೌಕ್ತಿಕ ಸಿಂಧು ಧರ್ಮಾ ಕು।
ಶಾವರ್ತಿನೀ ಚಕ್ರತೀರ್ಥ ಭವನಾಶಿನೀ ವರದಾ ಮಲಾಪಹಾರೀ ॥ ೩ ॥

ಸ್ವಾಮಿಪುಷ್ಕರಣೀ ಮಾನಸ ಚಂದ್ರಪುಷ್ಕರಣಿ।
ಭೂಮಂಡಲದೊಳುತ್ತಮೋತ್ತಮ ತ್ರಿಪುಷ್ಕರಣಿ।
ಶ್ರೀಮಧ್ವನಿತ್ಯಪುಷ್ಕರಣಿ ಸೀತಾ ಪದ್ಮಸರ ಚಂದ್ರಭಾಗತೀರ್ಥ॥
ವಾಮನ ಮಯೂರ ಪಂಪಾಸರೋವರ ಪುಣ್ಯ।
ಧಾಮ ವ್ಯಾಸಸಮುದ್ರ ಧವಳಗಂಗಾ ಸುಸಾ।
ಧ್ಯಾಮೃತ ಸಮುದ್ರ ಗುರುಭೀಮಸೇನತಟಾಕ ರೋಮಹರ್ಷಣತೀರ್ಥವಾ ॥ ೪ ॥

ದ್ವಾರಕಾನಗರ ಸಾಲಗ್ರಾಮ ಬದರಿ ನರ।
ನಾರಾಯಣಾಶ್ರಮ ಜಗನ್ನಾಥ ಶ್ರೀಮುಷ್ಣ।
ಮೇರು ಪಾರ್ಶ್ವಮಂದರ ಸುಪಾರ್ಶ್ವ ಮೈನಾಕ ಕೈಲಾಸ ಕಾಂಚೀ॥
ಶ್ರೀರಂಗನಾಥ ನೈಮಿಷ ದ್ವೈತವನ ಚಂಪ।
ಕಾರಣ್ಯ ಕಾಶೀ ಪಂಪಾವಂತಿಕಾ ಪುರೀ।
ಗೌರೀ ಮಯೂರ ಸಿಂಹಾದ್ರಿ ಪಾಟಲಿ ಹರಿದ್ವಾರ ಛಾಯಾ ಪಿಪ್ಪಲಾ ॥ ೫ ॥

ಕೇದಾರ[1] ಸಗರ ಮಂದಾಕಿನೀ ಕುಸುಮಾವತಿ।
ಸ್ವಾದಿ ಸುಬ್ರಹ್ಮಣ್ಯ ಕೋಟೇಶ್ವರ ನಂದಿ।
ಪಾದ ಕ್ರೌಂಚಾದ್ರಿ ಮಹಾನಂದಿ ಶಂಕರನಾಮ ನಾರಾಯಣಾದಿವರ್ತಿ

---

೧. ಕೇದಾರವು ವೈದಿಕರಿಗೆ ಅಗಮ್ಯವಾಗುವಂತೆ ಶ್ರೀರುದ್ರದೇವರ ಶಾಪವನ್ನು ಹೊಂದಿರುವುದರಿಂದ ಅದನ್ನು ಶ್ರೀವಾದರಾಜರು ತಮ್ಮ ತೀರ್ಥಪ್ರಬಂಧದಲ್ಲಿ ವರ್ಣಿಸಿಲ್ಲ ಎಂದು ತಿಳಿಯಬಹುದು (ಮಹಾಭಾರತತಾತ್ಪರ್ಯನಿರ್ಣಯ ೨೦-೨೪); ಆದರೆ ಕೇದಾರದ ಸ್ಮರಣೆ ವಿಹಿತ ಎಂಬ ಕಾರಣದಿಂದ ಅದರ ಉಲ್ಲೇಖ ಇಲ್ಲಿ ಬಂದಿದೆ ಎಂದು ತಿಳಿಯಬಹುದು.

ವೇದಪಾದ ಯಯಾತಗಿರಿ ಕಾಳಹಸ್ತಿ ಕೌ ।
ಮೋದಕೀ ಪಾಂಡುರಂಗಕ್ಷೇತ್ರ ಶ್ರೀವಿಷ್ಣು ।
ಪಾದ ಗಯಾ ಕಾಳೀಶ್ವರೀ ಹಸ್ತಿನಾಪುರಿ ಪಾಟಲೀ ಮಂತ್ರಾಲಯ ॥ ೬ ॥

ಗೋವರ್ಧನಾದ್ರಿ ಮೈನಾಕ ಮಂದರ ಮಲಯ ।
ಕೈವಲ್ಯನಾಥ ಕಾಶ್ಮೀರ ಜಾಂಬವತಿ ವೃಂ ।
ದಾವನ ಧನುಷ್ಕೋಟಿ ವಾತಪುರಿ ಕನ್ಯಾಕುಮಾರಿ ಶ್ವೇತಾದ್ರಿ ವೃಷಭಾ ॥
ಶ್ರೀವಿರೂಪಾಕ್ಷ ಕುಂದರ ನಂದಪುರಿ ಮಾಯಾ ।
ಶ್ರೀವತ್ಸ ಗಂಧಮಾದನ ಚಿತ್ರಕೂಟ ದ್ವಾ ।
ರಾವತಿ ವ್ಯಾಘ್ರಪುರಿ ಗೋಕುಲ ನಾರಾಚಲಾ ಸೌಭರೀ ಆದಿನಾಥ ॥ ೭ ॥

ಈ ಮಹೀಮಂಡಲದೊಳಿಪ್ಪ ತೀರ್ಥಕ್ಷೇತ್ರ ।
ನಾಮಗಳ ಕಾಲತ್ರಯಗಳಲ್ಲಿ ಸ್ಮರಿಸುತಿಹ ।
ಧೀಮಂತರಾಗಾಮಿ ಸಂಚಿತಾಘೌಘ ಪರಿಹರಿಸಿದಾನಂತರದಲಿ ॥
ಸೋಮಾರ್ಕರುಳ್ಳನಕ ಸಕಲಭೋಗಗಳ ಸು ।
ತ್ರಾಮ ಲೋಕದೊಳುಣಿಸಿ ಕರುಣಾಳು ಪ್ರಾಂತಕೆ ಸ್ವ ।
ಧಾಮವೈದಿಸಿ ಮುಕ್ತರನ ಮಾಳ್ಪನಹುದೆಂದು ಸೂತ ಶೌನಕಗೆ ಪೇಳ್ದ ॥ ೮ ॥

ಈ ಭರತಖಂಡದೊಳಗುಳ್ಳ ತೀರ್ಥಕ್ಷೇತ್ರ ।
ವೈಭವಾಬ್ಜಭವಾಂಡಪೌರಾಣದೊಳಗೆ ಹರಿ ।
ನಾಭಿಸಂಭವ ಪೇಳ್ದ ನಾರದನಿಗಿನಿತೆಂದು ಪರಮಕಾರುಣ್ಯದಿಂದ ॥
ಸ್ತ್ರೀ ಬಾಲ ಗೋ ವಿಪ್ರ ಮಾತಾಪಿತೃಗಳ ಧನ ।
ಲೋಭದಿಂದಲಿ ಕೊಂದ ಪಾತಕವ ಪರಿಹರಿಸಿ ।
ಶ್ರೀಭೂರಮಣ ಜಗನ್ನಾಥವಿಠಲ ಪೊರೆವ ಬೇಡಿದಿಷ್ಟಾರ್ಥವಿತ್ತು ॥ ೯ ॥

*****

ಪರಿಶಿಷ್ಟ - ೭

ಶ್ರೀಜಗನ್ನಾಥದಾಸಕೃತ

## ನದೀತಾರತಮ್ಯ(ಕೀರ್ತನೆ)

ರಾಗ: ಭೂಪಾಳಿ ಝಂಪೆತಾಳ

ಭಾಗಿರಥ್ಯಾದಿನದಿಗಳ ತಾರತಮ್ಯ ನಿಜ
ಭಾಗವತತಿಲಕನಿಮಿರಾಜಗೊಲಿದು ವಸಿಷ್ಠ
ಯೋಗೀಶ ಪೇಳ್ದ ಸುಕಥಾಕುತೂಹಲವ ಅನುರಾಗದಲಿ ಕೇಳಿ ಜನರೂ ॥ ಪ ॥

ಒಂದುದಿನ ಗೋದಾವರಿಯ ತಟದಿ ನಿಮಿರಾಜ
ನಿಂದು ಯಜ್ಞವ ಮಾಡುತಿರಲಾಗ ಪರಮೇಷ್ಠಿ
ನಂದನನೆನಿಪ ವಸಿಷ್ಠಮಹಮುನಿ ನಡೆತಂದ ಮೇಧಾಗಾರಕೇ ।
ಬಂದ ಯತಿವರನ ಮಣಿಪೀಠದಲಿ ಕುಳ್ಳಿರಿಸಿ
ಗಂಧಪುಷ್ಪಾಕ್ಷತಿಸುಭೋಜನದಿ ಸತ್ಕರಿಸಿ
ಮಂದಹಾಸದಿ ತನ್ನ ಮನೋವಾಂಛಿತ ವಸುಂದರಾಧಿಪ ಬೆಸಸಿದ ॥ ೧ ॥

ವ್ರತಿಪತಿವಸಿಷ್ಠವೈಷ್ಣವಕುಲಶಿರೋರತುನ
ಶ್ರುತಿಶಾಸ್ತ್ರಸರ್ವಜ್ಞ ಗಂಗಾದಿಪುಣ್ಯತೀ
ರುಥತಾರತಮ್ಯ ಎನಗರುಪು ಕರುಣದಲೀ ಮತ್ಪಿತನೆನುತ ಪದಕೆರಗಿದಾ ।
ಕ್ಷಿತಿಪನೋಕ್ತಿಯ ಕೇಳುತಾನಂದಶರಧಿಯೊಳು
ಗತನಾಗಿ ರೋಮಲಕ್ಷಣ ಕಳೇವರದಿ ಪುಳ
ಕಿತವಾದವಾಗ ಕಾರುಣ್ಯದಲಿ ಯತಿವರ ನತನೃಪತಿಗಿಂತೆಂದನೂ ॥ ೨ ॥

ಕೇಳು ಜನನಾಥ ಮಹಭಾಗ ನಿನ್ನಯ ಪ್ರಶ್ನ
ದೇಳಿಗೆಗೆ ಎನ್ನ ಸಂತೋಷ ಕಲ್ಪತರು ತ
ತ್ಕಾಲದಲುದಿಸಿ ಫಲೋನ್ಮುಖವಾಯಿತು ಶಿಷ್ಯರೊಳು ಮೌಳಿಮಣಿ ನೀನಹುದಲಾ।
ಮಾಲತಿ ಮೊದಲ್ಗೊಂಡು ನಿಖಿಳ ನದಿಗಳೊಳಿಪ್ಪ
ಶ್ರೀಲೋಲನ ಸುಮೂರ್ತಿಗಳ ತಾರತಮ್ಯ ವಿ
ಶಾಲದಲಿ ನಿನಗೊರೆವೆ ಮನವ ಚಂಚಲಿಸದೆ ಇದನಾಲಿಪುದು ನೀನೆಂದನೂ ॥ ೩ ॥

ಹರಿಪಾದನಖದ ಸಂಸ್ಪರ್ಶಮಾತ್ರದಿಂದಲಿ
ಸುರತರಂಗಿಣಿಶ್ರೇಷ್ಠಳೆನಿಸುವಳು ನದಿಗಳೊಳು
ದರರಥಾಂಗಗದಾವಿಧೃತಪಾಣಿಮಾಧವನು ದೊರೆಯೆನಿಪನಾ ತೀರ್ಥಕೇ ।
ಸರಿತಾಗ್ರಗಣ್ಯ ಗೋದಾವರಿ ನಳಿನಿಗಿಂ
ಕೊರತೆಯೆಂದೆನಿಪಳೈವತ್ತು ಗುಣದಲಿ ಶಂಖ
ಚರಣಸುಗದಾಬ್ಜಶೋಭಿತ ವೀರನಾರಾಯಣರಸೆನಿಪನಾ ಸಲಿಲಕೆ ॥ ೪ ॥

ಹರಜಟೋದ್ಭವ ಕುಶಾವರ್ತಿಗೆ ಸಹಸ್ರಗುಣ
ಕೊರತೆಯೆನಿಪ ಕೃಷ್ಣಾಖ್ಯಾ ಸ್ಯಂದನದಿ ಚಾರುಕಂ
ಬುರವಿವಾರಿಜಧನುರ್ಧಾರಿಯಮನಂದನ ವಿಹರಿಸುತಿಹನಾಜಲದೊಳು
ತುರುಗಾಯಿದದೇವನಂಗಜನದಿಗೆ ಈರೈದು
ನೆರೆಗುಣವಿಹೀನವಾಗ್ದೇವಿ ಶರಧಿಯೊಳು ಪು
ಷ್ಕರನಾಭ ಆ ಸರಸ್ವತೀಸಮಳು ಕಾವೇರಿಗೊರ ರಂಗನಾಥನೆನಿಪಾ ॥ ೫ ॥

ಆ ಯಮಳನದಿಗಳಿಗೆರಡು ಗುಣಾಧಮ ಸರಯು
ತೋಯಾಧಿಪತಿ ರಾಮ ಸರಯುಗೀರೊಂದು ಗುಣ
ದಿ ಯಮುನೆ ಕಡಿಮೆನಿಪಳಲ್ಲಿ ದಾಮೋದರ ವಿಹಾಯಸಮಣಿತನಯಳ್ಗೇ ।

ಹೇಯವೆಂದೆಂಬೊರೊಂದೆರಡು ಗುಣ ನರ್ಮದಾ
ಸ್ಥಾಯಿಕಚತುರ್ಬಾಹು ವಿಷ್ಣು ಕಾವೇರಿಗೇ
ರಾಯಕೇಳ್ವಾರಾಹಿಗೀರೊಂದುಗುಣ ಕಡಿಮೆ ನಾಯಕ ವರಾಹದೇವಾ ॥ ೬ ॥

ಸಿಂಧು ಭವನಾಶಿನೀರ್ವರು ಸಮರು ಕ್ಷೀರಾಬ್ಧಿ
ಮಂದಿರ ನೃಸಿಂಹರಲ್ಲಿಹರು ಭವನಾಶಿನಿಗೆ
ಸುಂದರ ಕುಮುದ್ವತಿಯು ಕಿಂಚಿದ್ಗುಣಾಧಮಳು ತಂದೆಯೆನಿಪ ತ್ರಿವಿಕ್ರಮಾ ।
ಒಂದೆನಿಸುವುವು ನಾಲ್ಕುನದಿಗಳು ಗುಣಗಳಿಂದ
ಮುಂದಿಹ ಪದದಿ ಪೇಳ್ವೆ ಪೆಸರು ಹರಿರೂಪ ನಲ
ವಿಂದಾಲಿಸೀಮಾತನೆನುತ ಕರುಣದಲಿ ಕರ್ಮಂದೀಶನಿಂತೆಂದನು ॥ ೭ ॥

ವಾಜಿವದನನು ವಂಝುರಾನದಿಯೊಳಿಹನು ನವ
ರಾಜೀವನಯನ ಶ್ರೀಧರ ಭೀಮರಥಿಯೊಳಹಿ
ರಾಜಶಯನಾನಂತತಾಮ್ರಪರ್ಣಿಯೊಳಗೆ ವಿರಾಜಿಪ ಮಲಾಪಹಾರೀ।
ಭಾಜನದೊಳಿಪ್ಪ ದುಷ್ಟಜನರನು ಮರ್ದಿಸುವ
ಶ್ರೀಜನಾರ್ದನ ನಾಲ್ಕುನದಿಗಳು ದ್ವಿಗುಣದಿಂದ
ಈ ಜಗತಿಯೊಳಗಧಮರೆನಿಸುತಿಪ್ಪರು ನಿತ್ಯನೈಜಭಕ್ತಿಜ್ಞಾನದೀ ॥ ೮ ॥

ಭೀಮರಥಿಸಮ ಪಿನಾಕಿನಿಯೊಳಗೆ ಕೇಶವನು
ಭೂಮಿಯೊಳು ಪೃಥಕುಪೃಥಕು ಸಾಗರವ ಕೂಡ್ದನದಿ
ಸಾಮಾನ್ಯವೆನಿಪವು ಪಿನಾಕಿನಿಗೆ ತಮ್ಮೊಳು ಸಮಾಮಿತಸುಖಜ್ಞಾನದೀ ।
ಶ್ರೀಮನೋರಮ ಕೇಶವಾದಿರೂಪಗಳಿಂದ
ಸ್ವಾಮಿಯೆನಿಸುವನಲ್ಲಿ ಸ್ನಾನಾದಿಸತ್ಕರ್ಮ
ಧೀಮಂತರಾಚರಿಸೆ ಪ್ರತಿದಿನದಿ ಧರ್ಮಾರ್ಥಕಾಮಮೋಕ್ಷಗಳೀವನೂ ॥ ೯ ॥

ಈ ನದಿಗಳೆರಡು ಗುಣ ಪುಷ್ಕರಣೀನಿಚಯ
ಹೀನವೆನಿಪವು ಮೂರ್ತಿ ದತ್ತಾತ್ರೇಯನು ಕೃಷ್ಣ
ವೇಣಿಗೆ ಸಮಾನ ಚಂದ್ರಸ್ವಾಮಿಪುಷ್ಕರಣಿ ಮಾನಸಸರೋವರದೊಳೂ ।
ಜ್ಞಾನಾತ್ಮವಾಮನನು ಶ್ರೀಭೂಸಹಿತ ಪ್ರಸ
ನ್ನಾನನಾಬ್ಜಾರಿದರ ಜಘನಸ್ಥಿತಾಭಯ ಸು
ಪಾಣಿವೆಂಕಟನ ಮಧುಸೂದನನ ತ್ರಿಸ್ಥಳದಿ ಧೇನಿಪುದು ನೃಪತಿ ಎಂದಾ ॥೧೦॥

ದೇವಖಾತಗಳು ಶತಗುಣಕಡಿಮೆ ಮಾನಸ ಸ
ರೋವರಕೆ ಇತರ ಪುಷ್ಕರಣಿಗಳಿಗಲ್ಪಗುಣ
ಭಾವಿಸುವುದಲ್ಲಿ ಸುಗದಾಧರನ ಪಾಪಿಗಳ ಪಾವನವ ಗೈವ ಕ್ಷುದ್ರಾ ।
ಪ್ರಾವಹಿಗಳೀರೈದು ಗುಣದಿಂ ಕಡಿಮೆ ಲಕ್ಷ್ಮೀ
ದೇವಿಪತಿ ನಾರಾಯಣನ ಚಿಂತಿಸೆಂದು ನೃಪ
ಗಾ ವಸಿಷ್ಠಮುನೀಶ ಪೇಳ್ದ ಶೀಘ್ರದಲಿ ಭವನೋವ ಪರಿಹರಿಪುದೆಂದು ॥೧೧॥

ಈ ಸಲಿಲವರ್ತಿಗಳಿಗೆರಡು ಗುಣದಿ ತಟಾಕ
ಶೇಷಪರಿಯಂಕ ಅಚ್ಯುತನಿಹನು ಸಜ್ಜನರ
ದೋಷಗಳ ಕಳೆವ ವಾಪಿಗಳೆರಡು ಗುಣ ಕಡಿಮೆ ವಾಸವಾಗಿಹನು ಚಕ್ರೀ।
ಘೋಷಗೈವ ದರಾಂಕ ಕೂಪಗಳೊಳಿರುತಿಹ ನೃ
ಪೇಶ ನದಿಗಳ ತಾರತಮ್ಯರೂಪಗಳನುಪ
ದೇಶಿಸಿದೆ ಸರ್ವವು ನಿನಗೆ ಮಹಾರಹಸ್ಯವಿದುಪಾಸನೆಯ ಗೈವುದೆಂದೂ ॥೧೨॥

ಈ ತೆರದಿ ನಿಮಿರಾಜಗೋಸುಗ ವಸಿಷ್ಠಮುನಿ
ತಾ ತಿಳಿಸಿದ ಕಥಾತಿಶಯವರಿತು ಪರಮವಿಬುಧರು ಧ
ರಾತಳದೊಳಿಪ್ಪ ತೀರ್ಥಗಳಲ್ಲಿ ಸ್ನಾನಜಪ ಪ್ರೀತಿಯಿಂದಾಚರಿಸಲೂ।
ಶೀತಾಂಶುಕಮಲಾಪ್ತರುಳ್ಳನಕ ಸುರಪತಿ ನಿ
ಕೇತನದಿ ವಿವಿಧಭೋಗಗಳಿತ್ತು ಶ್ರೀಜಗ
ನ್ನಾಥವಿಠಲ ಪಾಲಿಸುವನು ತನ್ನವರ ಸಂಪ್ರೀತಿಯಿಂದನುದಿನದಲೀ ॥೧३॥

*****

ಪರಿಶಿಷ್ಟ - ೮

ಶ್ರೀಪ್ರಾಣೇಶದಾಸಕೃತ

## ನದೀತಾರತಮ್ಯ(ಕೀರ್ತನೆ)

ಸ್ಮರಿಸುವೆನನುದಿನ ಮುದದಿಂದ ಈ
ಧರೆಯ ಮ್ಯಾಲ್ಯುಳ್ಳ ಮಹನದಿಗಳ ॥ಪಲ್ಲವಿ॥

ಗೌತಮನಘ ಪರಿಹಾರ ಮಾಡಿದ ಗೋದ
ಮಾತೆ ಶ್ರೀಕೃಷ್ಣವೇಣಿ ಸರಸ್ವತೀ
ಆ ತರುವಾಯ ಶ್ರೀ ಕಾವೇರಿ ಸರಯು ಶ್ರೀಯಮುನಾ
ಧೂತಪಾತಕೆ ಶ್ರೀನರ್ಮದ ತುಂಗಾ ॥ ೧ ॥

ಸಿಂಧು ಭವನಾಶನಿ ಕುಮುದ್ವತಿ ಶ್ರೀವಂಝೂರ
ಸುಂದರ ಭೀಮ ತಾಮ್ರಪರ್ಣಿ ಮಲಹಾ
ಮಿಂದರೆ ಪಾವನ ಮಾಡುವ ಬಹುನದಿಗಳ
ಒಂದೇ ಮನಸಿನಿಂದಲಿ ಪೊಗಳುವೆ ॥ ೨ ॥

ವಾರುಣೀ ಫಲ್ಗುಣೀ ಶ್ರೋಣ ಭದ್ರ ಗಂಡಿಕಿ ಹೇಮ
ಮೂರುವೇಣಿ ಗಾಯತ್ರೀ ವೇಗವತಿ

ಸೂರಿಗಮ್ಯ ಕೌಶಿಕಿ ಮಣಿಕರಣಿಕ ಗೌತಮಿ ಭಾ
ಗೀರಥಿ ಕಾಗಿನಿ ಶ್ರೀವೇತ್ರವತಿ ॥ ೩ ॥

ಹೇಮವತಿ ನೇತ್ರವತಿ ಪಾಪನಾಶೀ ಶ್ರೀ ಸೀತಾ
ಆ ಮಹಾಳಕನಂದಾ ಹಯಗ್ರೀವ
ಹೇಮ ಮುಖರ ತಾಪಿನಿ ಕಾಳಿ ಸೌಪರಣಿ ಪಿನಾಕೀ
ಶ್ರೀಮತ್ಕಪಿಲ ಜಮದಗ್ನಿ ಪ್ರಣವಸಿದ್ಧ ॥ ೪ ॥

ಮರುದ್ವತೀ ಮದಿರ ಮೇನಕಾ ಸುನಾಸಿ ಚಕ್ರವತಿ
ಗರುಡ ಶಂಖವತೀ ಕುಹು ಮಹೇಶ್ವರಿ
ಸರಯು ಜಯಮಂಗಳ ಯೋಗ ಕೃತಮಾಲಾ
ಗದಧರಿ ಮಾಲಿನಿ ಗಾರ್ಗಿಣೀ ದೇವವತಿ ॥ ೫ ॥

ಸಾವಿತ್ರಿ ಧನ್ಯಮಾಲ ಧರ್ಮ ಚಕ್ರತೀರ್ಥ ಹರಿ
ದ್ರಾವತ್ರಿ ಇಂದ್ರಾಣಿ ಪಾತಾಳಗಂಗಾ
ಶೈವ ಕುಂದುಕುಂಡಿನಿ ನೀರ ಕುಮಾರಧಾರಿ ಕು
ಶಾವರ್ತಿ ಮೌಳಿ ಲೋಕಪಾವನೀ ॥ ೬ ॥

ಸ್ವಾಮಿ ಪುಷ್ಕರಿಣಿ ಚಂದ್ರ ಪುಷ್ಕರಿಣಿ ಮಾನಸ ಪುಷ್ಕರಿಣೀ
ಶ್ರೀಮಧ್ವಸರೋವರ ಪದ್ಮಸರಾ
ಸೋಮಭಾಗ ವ್ಯಾಸಸಿಂಧು ಶ್ರಿಪಂಪಾಸರೋವರ
ವಾಮನ ಶ್ರೀಮಯೂರ ಸರೋವರ ॥ ೭ ॥

ರೋಮಹರ್ಷಣತೀರ್ಥ ಸೀತಾ ಸರೋವರ ಪುಣ್ಯ
ಧಾಮಾಶ್ರೀಕಪಿಲತೀರ್ಥಧವಳಗಂಗಾ
ಭೀಮಸೇನ ತಟಾಕ ಬ್ರಹ್ಮಜ್ಞಾನ ಕನ್ಯಹೃದಯ
ಶ್ರೀಮದ್ವಿಶಿಷ್ಟತೀರ್ಥ ತಾರಾತೀರ್ಥ ॥ ೮ ॥

ಈ ತೀರ್ಥಗಳ ದಿವ್ಯನಾಮ ನಿತ್ಯ ಪಠಿಸಲು
ಯಾತಕ್ಕಾದರು ವಿಘ್ನ ಬಾರದು
ಮಾತರಿಶ್ವಪ್ರಿಯ ಪ್ರಾಣೇಶವಿಠಲನು ಬಹು
ಪ್ರೀತನಾಗಿ ಬಿಡದೆ ಪೊರೆವನು ॥ ೯ ॥

★★★★★

ಶ್ರೀಜಗನ್ನಾಥದಾಸಕೃತ

## ಶ್ರೀವಾದಿರಾಜಸ್ತುತಿ(ಕೀರ್ತನೆ)

ವಾದಿರಾಜ ॥ ಪ ॥

ವಾದಿರಾಜ ಪ್ರತಿವಾದಿಗಜೇಂದ್ರ ಮೃ- ।
ಗಾಧಿರಾಜ ವಿಬುಧೋದಿತಚಂದ್ರ ॥ ಅ. ಪ. ॥

ಕಲಿಬಾಧೆಯು ವೆಗ್ಗಳವಾಗಿದೆಯೆಂ- ।
ದಿಳೆಯೊಳಿಳಿದ ಯತಿತಿಲಕ ಕೃಪಾಳೋ ॥ ೧ ॥

ದೇಶಿಕಾರ್ಯವಾಗೀಶಕುವರ ತವ ।
ದಾಸಸಮೂಹವ ನೀ ಸಲಹೊ ಸದಾ ॥ ೨ ॥

ಜನ್ಮಾಧಿವ್ಯಾಧ್ಯುನ್ಮಾದಭ್ರಮ ।
ನಿಮ್ಮೊರೆಹೊಕ್ಕರಿಗಿನ್ನೊದಲುಂಟೆ ॥ ೩ ॥

ನೀ ಗತೀಯೆಂದನುರಾಗದಿ ನಂಬಿದ ।
ಭೋಗಿಪುರೀಶನ ರೋಗವ ಕಳೆದೆ ॥ ೪ ॥

ಯಲರುಣಿಭಯಕಂಜಿಲಿ ನಿಮ್ಮಾಸನ ।
ಕೆಳಗಿರೆ ಕಂಡದನುಳುಹಿದ ಕರುಣಿ ॥ ೫ ॥

ಗರಮಿಶ್ರಿತ ನರಹರಿನೈವೇದ್ಯವ ।
ಅರಿತು ಉಂಡು ಅದನರಗಿಸಿಕೊಂಡೆ ॥ ೬ ॥

ಹಯವದನನ ಪದದ್ವಯಭಜಕಾಗ್ರಣಿ ।
ದಯದಿ ವಿಪ್ರನಿಗೆ ನಯನವನಿತ್ತೆ ॥ ೭ ॥

ವೋದಮುನಿಮತಮಹೋದಧಿಪೂರ್ಣ ।
ವಿಧೂದಯ ಶರಣ ಕಾದುಕೊ ದೊರೆಯೆ ॥ ೮ ॥

ಅರ್ಥಿಗಳಿಗೆ ಪರಮಾರ್ಥವ ತೋರುವ ।
ತೀರ್ಥಪ್ರಬಂಧವ ಕೀರ್ತನೆಗೈದೆ ॥ ೯ ॥

ಯತಿವರನೆ ತ್ರಿವಿಕ್ರಮನ ರಥೋತ್ಸವ-
ಸಮಯವಿದೆಂದುತ್ತಮಣವ ತೊರೆದೆ ॥ ೧೦ ॥

ಬಂದು ಕರೆಯೆ ಪುರಂದರನಾಳ್ಗಳು
ಹಿಂದಟ್ಟಿದ ಕರ್ಮಂದಿಗಳರಸೆ ॥ ೧೧ ॥

ಭೂಮಿಪರುಪಟಳಕಾ ಮಹಿನಾಥನು
ತಾ ಮೈಮರೆದಿರೆ ನೀ ಮುದವಿತ್ತೆ ॥ ೧೨ ॥

ನಿನ್ನೊಳಿಶನಾದ ಜಗನ್ನಾಥವಿಠಲನ[೧]
ಉನ್ನಾಹದಿ ತೋರೆನ್ನ ಮನದಲಿ ॥ ೧೩ ॥

---

೧. ಶ್ರೀ ಜಗನ್ನಾಥದಾಸರ ಈ ಕೃತಿಯ ಪಾಠ ಅವರ ಪುತ್ರ ಶ್ರೀದಾಮೋದರದಾಸರಿಂದ ಲಿಖಿತವೆಂದು ಪ್ರತೀತಿಯಿರುವ ಮಾನ್ವಿಯ ಮೂಲಪ್ರತಿಯನ್ನು ಆಧರಿಸಿದೆ.

ಪರಿಶಿಷ್ಟ - ೧೦

# ಶ್ರೀವಾದಿರಾಜಪ್ರಶಸ್ತಿಃ

ವಾದಿರಾಜಮುಖಾಂಭೋಜನಿಃಸೃತಾ ವಾಕ್ಸರಸ್ವತೀ ।
ಅಶ್ವಗ್ರೀವಯಶೋಗಂಗಾಸಂಗಾऽಸ್ಮಾನ್ ಪಾವಯತ್ವಲಮ್॥

ನಮೋऽಸ್ತು ವಾರಾಜಾಯ ಗುರವೇ ಪರವೇದಿನೇ ।
ಯೋ ವಾಜಿವಕ್ತ್ರದಯಯಾ ಶ್ರಾವ್ಯಂ ಕಾವ್ಯಮಚೀಕ್ಲೃಪತ್ ॥

- ಸುರೋತ್ತಮತೀರ್ಥರು (ಯುಕ್ತಿಮಲ್ಲಿಕಾವ್ಯಾಖ್ಯಾನ)

ಅಶೇಷವಿದ್ಯಾಂಬುಧಿವಾಜಿರಾಜಗ್ರೀವಾಜಿರಾಜಸ್ವನಿಷೇವಯಾ ಯಃ ।
ಸಮುಲ್ಲಸದ್ವಾಗ್ವಿಭವಾಜಿರಾಜಃ ಸ ನಃ ಪ್ರಸನ್ನೋ ಯತಿವಾದಿರಾಜಃ ॥

- ವೈಶ್ವನಾಥಿನಾರಾಯಣಾಚಾರ್ಯರು (ಅದ್ವೈತಕಾಲಾನಲ)

ಹರಿಚತುರಕಥಾಖ್ಯಾಂ ಪಾವನೀಂ ಪಾನತೋऽಲಂ
ಹರಿಚರಣಸಮೀಪಂ ಪ್ರಾಪಯಂತೀಂ ಜನೌಘಮ್ ।
ಬುಧಸದಸಿ ಸುಧಾಂ ಸ್ವಾನ್ ಪಾಯಯಂತಂ ಪವಿತ್ರಂ
ಬುಧವರಮಿಮಾರ್ಯಂ ವರ್ಣಯೇತ್ ಕೋ ನು ಮಾದೃಕ್॥

- ವೃತ್ತರತ್ನಸಂಗ್ರಹ

ತಪೋವಿದ್ಯಾವಿರಕ್ತ್ಯಾದಿಸದ್ಗುಣೌಘಾಕರಾನಹಮ್ ।
ವಾದಿರಾಜಗುರೂನ್ ವಂದೇ ಹಯಗ್ರೀವದಯಾಶ್ರಯಾನ್ ॥

- ತೀರ್ಥಪ್ರಬಂಧವ್ಯಾಖ್ಯಾನ

ಚಿತ್ರಾಲಂಕಾರರಮ್ಯಾ ಮೃದುಪದವಿಲಸನ್ನರ್ಮಗಂಭೀರಭಾವಾ
ಸತ್ಸರ್ಗಾಶ್ಚರ್ಯಬಂಧಾ ನವರಸಭರಿತಾ ಸ್ತುತ್ಯಸಂಸ್ಥಾನಯುಕ್ತಾ ।
ಕಾವ್ಯಶ್ರೀರಾವಿರಾಸೀದ್ ಯದಮಲಹೃದಯಾಚ್ಛ್ರೀಪತೇರ್ಯತ್ರವಾಸಃ
ಸೋऽವ್ಯಾಚ್ಛ್ರೀವಾದಿರಾಜಾಮೃತಮಯಜಲಧಿರ್ಯುಕ್ತಿರತ್ನಾಕರೋ ನಃ ॥

- ರುಕ್ಮಿಣೀಶವಿಜಯವ್ಯಾಖ್ಯಾನ

ಕಾಮಧೇನುರ್ಯಥಾಪೂರ್ವಂ ಸರ್ವಾಭೀಷ್ಟಫಲಪ್ರದಾ ।
ತಥಾ ಕಲೌ ವಾದಿರಾಜಶ್ರೀಪಾದೋऽಭೀಷ್ಟದಸ್ಸತಾಮ್ ॥

-ವಾದಿರಾಜಕವಚ

ಮಾತಾ ರಾಜಾ ಮತ್ಪಿತಾ ವಾದಿರಾಜೋ ಭ್ರಾತಾ ರಾಜಾ ಮತ್ಸಖಾ ವಾದಿರಾಜಃ ।
ಸರ್ವಸ್ವಂ ಮೇ ವಾದಿರಾಜೋ ದಯಾಲುರ್ನಾನ್ಯದ್ದೈವಂ ನೈವ ಜಾನೇ ನ ಜಾ ನೇ ॥

- ಶ್ರೀವೇದನಿಧಿತೀರ್ಥರು

*****

# ತೀರ್ಥಲಕ್ಷಣ

(ಸಾಲಿಗ್ರಾಮಕ್ಕೆ ಅಭಿಷೇಕ ಮಾಡಿದ ಜಲ ತೀರ್ಥ ಎಂಬುದು ಸರ್ವವಿಧಿತ. ಅದರಂತೆ ತೀರ್ಥಕ್ಷೇತ್ರಗಳು, ಜ್ಞಾನಿಗಳು, ಶಾಸ್ತ್ರಗ್ರಂಥಗಳು ತೀರ್ಥ ಎಂಬುದೂ ಸಹ. ಅದರೊಂದಿಗೆ ಪಾವನವೆಂಬ ಕಾರಣದಿಂದ ತೀರ್ಥವೆನ್ನಿಸುವ ಕೆಲವು ಅಪೂರ್ವ ವಿವರಗಳನ್ನು ಬೃಹದ್ಧರ್ಮಪುರಾಣದ ಇಲ್ಲಿಯ ಶ್ಲೋಕಗಳು ತಿಳಿಸುತತಿವೆ. ಇದರ ಪರಿಜ್ಞಾನ ಸಾಧನೆಗೆ ಅತ್ಯಗತ್ಯ.)

ವಿಪ್ರಾಣಾಂ ಚರಣೌ ತೀರ್ಥಂ ಗವಾಂ ಪೃಷ್ಠಂ ತಥಾ ಮತಮ್ ।
ಏತೇ ಯತ್ರೈವ ತಿಷ್ಠಂತಿ ತಚ್ಚ ತೀರ್ಥಮುದಾಹೃತಮ್ ॥೧॥

ವಿಪ್ರರ ಚರಣಗಳು ತೀರ್ಥ; ಹಾಗೆಯೇ ಗೋವುಗಳ ಹಿಂಭಾಗ ಸಹ; ಅದರಂತೆ ಗೋವುಗಳು ಬ್ರಾಹ್ಮಣರು ನೆಲೆಸಿರುವ ಸ್ಥಳಗಳೂ ಸಹ ತೀರ್ಥವೆನ್ನಿಸುತತಿವೆ.

ಬಾಲಾನಾಂ ಚ ಶಿರಸಿತೀರ್ಥಂ ಸ್ವಂ ತೀರ್ಥ ಚಕ್ಷುರುಚ್ಯತೇ ।
ತಥೈವ ದಕ್ಷಿಣಃ ಕರ್ಣಸಿತೀರ್ಥಂ ಸ್ವಂಪರಿಗಣ್ಯತೇ ॥೨॥

ಮಕ್ಕಳ ತಲೆಯೂ ಪವಿತ್ರ; ತನ್ನ ಕಣ್ಣೂ ಸಹ ತೀರ್ಥವೆನ್ನಿಸುವುದು. ಅದರಂತೆ ತನ್ನ ಬಲಗಿವಿಯೂ ಸಹ ಪ್ರತಿಯೊಬ್ಬರ ಪಾಲಿಗೂ ತೀರ್ಥವೆಂದು ಪರಿಗಣಿತವಾಗಿದೆ.

ಸತ್ಯವಾಕ್ಯಂ ತು ವಾಕಿತೀರ್ಥಂ ಪುರಾಣಪಠಣಂ ತಥಾ ।
ದೇವಲಿಂಗಧರಂ ಚಿತತಿಂ ತೀರ್ಥಮಿತ್ಯುಚ್ಯತೇ ಬುಧೈಃ ॥೩॥

ಸತ್ಯವಚನವು ವಾಙ್ಮಯತೀರ್ಥ; ಅದರಂತೆ ಪುರಾಣಪಠನವೂ ಸಹ; ದೇವತಾಪ್ರತಿಮೆಗಳನ್ನು ಚಿಂತಿಸುವ ಮನಸ್ಸೂ ಸಹ ತೀರ್ಥವೆಂದೇ ಜ್ಞಾನಿಗಳು ಕರೆಯುವರು.

ಅಸಚ್ಚಿಂತಾವಿರಹಿತಂ ಮಾನಸಂ ತೀರ್ಥಮುಚ್ಯತೇ ।
ದಾತೄಣಾಂ ಚ ಕರೌ ತೀರ್ಥಂ ದೇವಪೂಜಾಕರೌ ತಥಾ ॥೪॥

ದುರಾಲೋಚನೆಗಳನ್ನು ತೊರೆದ ಮನಸ್ಸು ಸಹ ತೀರ್ಥವೆನ್ನಿಸುವುದು. ದಾನಶೀಲರ ಕೈಗಳೂ; ಅದರಂತೆ ದೇವಪೂಜೆ ಮಾಡುವವರ ಕೈಗಳೂ ಸಹ ತೀರ್ಥವೇ ಆಗಿವೆ.

ಅಂತಸಿತೀರ್ಥಂ ಭೂತಶುದ್ಧ್ಯಾ ಪ್ರಾಣಾಯಾಮಾಚ್ಚ ನಾಸಿಕೇ ।
ಮಂತ್ರಿತಂ ಚಾಸನಂ ತೀರ್ಥಂ ಪೈತೃಕೀ ವಸತಿಸತಿಥಾ ॥೫॥

ಶುದ್ಧವಾದ ದೇಹವೂ ತೀರ್ಥ; ಪ್ರಾಣಾಯಾಮವೂ ತೀರ್ಥ; ಮಂತ್ರಪೂರ್ವಕವಾಗಿ ಹಾಕಿಕೊಳ್ಳುವ ಆಸನವೂ ತೀರ್ಥ; ಅದರಂತೆ ತಂದೆತಾಯಿಗಳ ಸನ್ನಿಧಾನವೂ ತೀರ್ಥವೇ.

ತತ್ರಾಷಾಢಂ ಕಾರ್ತಿಕಶ್ಚ ಮಾಘೌ ವೈಶಾಖ ಏವ ಚ ।
ತೀರ್ಥಾನ್ಯುಕಾತಿನಿ ಮಾಸಾ ವೈ ಚತ್ವಾರೋಽಭೀಷ್ಟದಾಯಕಾಃ ॥೬॥

ಆಷಾಢ, ಕಾರ್ತಿಕ, ಮಾಘ ಹಾಗೂ ವೈಶಾಖ - ಈ ನಾಲ್ಕು ಮಾಸಗಳು ಸಹ ತೀರ್ಥಗಳೆನ್ನಿಸಿ ಅಭೀಷ್ಟಪ್ರದವೆನ್ನಿಸಿವೆ(ಆದ್ದರಿಂದ ಈ ನಾಲ್ಕು ತಿಂಗಳ ಪ್ರಾತಃಸ್ನಾನಕ್ಕೆ ವಿಶೇಷ ಮಹತ್ವ).

ಪುರಾಣಪಠಣಂ ಯತ್ರ ಯತ್ರ ಪದ್ಮವನಾನಿ ಚ ।
ತತ್ರ ತೀರ್ಥಂ ಸಮಾಖ್ಯಾತಂ ಗುರುದೇವಗೃಹಂ ತಥಾ ।
ಶಾಲಗ್ರಾಮಶಿಲಾ ಯತ್ರ ತೀರ್ಥಂ ತತ್ಕ್ರೋಶಯುಗ್ಮಕಮ್ ॥೭॥

॥ ಇತಿ ಶ್ರೀಬೃಹದ್ಧರ್ಮಪುರಾಣೇ ತೀರ್ಥಲಕ್ಷಣಮ್॥

ಪುರಾಣಪ್ರವಚನದ ಸ್ಥಳ, ಕಮಲ ಪುಷ್ಪಗಳ ತಾಣ, ಗುರುಗಳು ಹಿರಿಯರು ದೇವತೆಗಳು ನೆಲೆಸಿರುವ ಸ್ಥಳಗಳೂ ಸಹ ತೀರ್ಥ; ಸಾಲಿಗ್ರಾಮವಿರುವ ಸ್ಥಳದ ಸುತತಿಲಿನ ಎರಡು ಕ್ರೋಶಪ್ರದೇಶವೂ ಸಹ ತೀರ್ಥವೇ ಆಗಿದೆ.

★★★★★

